ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

## ಬ್ರಹ್ಮಖಂಡ

೧

## ಶ್ರೀಸೇತುಮಾಹಾತ್ಮ್ಯ

ಪೂರ್ವಭಾಗ

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ




ಬೆಂಗಳೂರು ಪ್ರೆಸ್
...ರು ರೋಡು, ಬೆಂಗಳೂರು ಸಿಟಿ
೧೯೪೭

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

## ಬ್ರಹ್ಮಖಂಡ

## ೧

## ಶ್ರೀ ಸೇತುಮಾಹಾತ್ಮ್ಯ

### ಪೂರ್ವಭಾಗ

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
ನೋಟಿಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ



ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೪೭

# ಅರಿಕೆ

ಈ ಹತ್ತನೆಯ ಸಂಪುಟದಲ್ಲಿ ಶ್ರೀ ಸ್ಕಾಂದಮಹಾಪುರಾಣದ ತೃತೀಯ ಮೂಲಖಂಡವಾದ ಬ್ರಹ್ಮಖಂಡವು ಪ್ರಾರಂಭವಾಗಿ ಅದರ ಮೊದಲನೆಯ ಭಾಗವಾದ ಶ್ರೀ ಸೇತುಮಾಹಾತ್ಮ್ಯದ ಪೂರ್ವಭಾಗವು ಮುಗಿದಿರುತ್ತದೆ.

ಬ್ರಹ್ಮಖಂಡದಲ್ಲಿ ಮೂರು ಭಾಗಗಳು: ಶ್ರೀ ಸೇತು (ರಾಮೇಶ್ವರ) ಮಾಹಾತ್ಮ್ಯ, ಧರ್ಮಾರಣ್ಯಖಂಡ ಮತ್ತು ಬ್ರಹ್ಮೋತ್ತರಖಂಡ. ಶ್ರೀ ಸೇತು (ರಾಮೇಶ್ವರ) ಮಾಹಾತ್ಮ್ಯದಲ್ಲಿ ದಕ್ಷಿಣಭಾರತದ ಸುಪ್ರಸಿದ್ಧ ಯಾತ್ರಾಸ್ಥಳವಾದ ಶ್ರೀ ರಾಮೇಶ್ವರಕ್ಷೇತ್ರ ಮಾಹಾತ್ಮ್ಯವೇ ಅಲ್ಲದೆ, ಧನುಷ್ಕೋಟ (ಸೇತು) ಮಾಹಾತ್ಮ್ಯವೂ ಸಮಗ್ರವಾಗಿ ವರ್ಣಿತವಾಗಿರುತ್ತದೆ. ಈ ಮಾಹಾತ್ಮ್ಯದ ಪಠನಪಾರಾಯಣಗಳಿಂದ ಮಾನವರಿಗೆ ಶ್ರೀ ಸೇತು (ರಾಮೇಶ್ವರ) ಯಾತ್ರಾಫಲವು ದೊರಕುವುದರಲ್ಲಿ ಸಂಶಯವಿಲ್ಲವೆಂದು ಈ ಗ್ರಂಥದಲ್ಲಿಯೇ ಹೇಳಿದೆ; ಅಲ್ಲದೆ ಈ ಕ್ಷೇತ್ರದ ಯಾತ್ರಾವಿಧಾನವೆಲ್ಲವೂ ಬಹು ಸುಲಭವಾಗಿ ಮನದಟ್ಟಾಗುವುದು.

ಈ ಬ್ರಹ್ಮಖಂಡದ ಅನುವಾದಕಾರ್ಯದಲ್ಲಿ ನನ್ನ ಮಾನ್ಯಮಿತ್ರರಾದ ಸಾಹಿತ್ಯವಿದ್ವಾನ್ ಶ್ರೀ॥ ಕೆ. ನರಸಿಂಹಾಚಾರ್ಯರವರೂ, ವಿದ್ವಾನ್ ಶ್ರೀ॥ ಸಾಧು ನಂಜುಂಡಶಾಸ್ತ್ರಿಗಳವರೂ ಸಹಭಾಗಿಗಳು; ಅದಕ್ಕಾಗಿ ಅವರಿಗೆ ನನ್ನ ಕೃತಜ್ಞತೆಯ ವಂದನೆಗಳು.

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನಿಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯೆಪಾಲಿಸಿ ಸಂರಕ್ಷಿಸಲೆಂದು ಸಂಪ್ರಾರ್ಥಿಸುತ್ತೇನೆ.

ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ

# ವಿಷಯಾನುಕ್ರಮಣಿಕೆ

ಪುಟ ಸಂಖ್ಯೆ

॥ ಶ್ರೀಃ ॥

ಅಥ ಮಂಗಳಾಚರಣಶ್ಲೋಕಃ

ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

ತಾತ್ಪರ್ಯ

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಅಥ ಸೇತುಮಾಹಾತ್ಮ್ಯಂ ಪ್ರಾರಭ್ಯತೇ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

## ಅಥ ಪ್ರಥಮೋಽಧ್ಯಾಯಃ

### ಸೇತುಗಮನಫಲಾದಿವರ್ಣನಂ

ನೈಮಿಷಾರಣ್ಯನಿಲಯಾ ಋಷಯಃ ಶೌನಕಾದಯಃ ।
ಅಷ್ಟಾಂಗಯೋಗನಿರತಾ ಬ್ರಹ್ಮಜ್ಞಾನೈಕತತ್ಪರಾಃ ॥ ೧ ॥
ಮುಮುಕ್ಷವೋ ಮಹಾತ್ಮಾನೋ ನಿರ್ಮಮಾ ಬ್ರಹ್ಮವಾದಿನಃ ।
ಧರ್ಮಜ್ಞಾ ಅನಸೂಯಾಶ್ಚ ಸತ್ಯವ್ರತಪರಾಯಣಾಃ ॥ ೨ ॥
ಜಿತೇಂದ್ರಿಯಾ ಜಿತಕ್ರೋಧಾಃ ಸರ್ವಭೂತದಯಾಲವಃ ।
ಭಕ್ತ್ಯಾ ಪರಮಯಾ ವಿಷ್ಣುಮರ್ಚಯಂತಃ ಸನಾತನಂ ॥ ೩ ॥

---

## ಕನ್ನಡದ ಅನುವಾದ

### ಸೇತುಗಮನಫಲಾದಿವರ್ಣನ

೧-೪. ನೈಮಿಷಾರಣ್ಯನಿವಾಸಿಗಳಾದ ಶೌನಕಾದಿಮಹರ್ಷಿಗಳು ಅಷ್ಟಾಂಗಯೋಗನಿರತರೂ, ಬ್ರಹ್ಮಜ್ಞಾನತತ್ಪರರೂ ಆಗಿ, ಮೋಕ್ಷವನ್ನು ಪಡೆಯಬಯಸಿ, ಮಮತೆಯನ್ನು ತೊರೆದ ಮಹಾತ್ಮರೂ, ಬ್ರಹ್ಮವಿಚಾರಪರರೂ, ಧರ್ಮಜ್ಞರೂ, ಅಸೂಯೆಯಿಲ್ಲದವರೂ, ಸತ್ಯವನ್ನೇ ನುಡಿಯತಕ್ಕವರೂ, ಇಂದ್ರಿಯಗಳನ್ನು ಜಯಿಸಿ, ಕೋಪವನ್ನು ತ್ಯಜಿಸಿ, ಸರ್ವಪ್ರಾಣಿಗಳಲ್ಲಿಯೂ ದಯೆಯುಳ್ಳವರೂ ಆಗಿ ಸನಾತನನಾದ ಶ್ರೀಮನ್ಮಹಾವಿಷ್ಣುವನ್ನು ಪರಮಭಕ್ತಿಯಿಂದ ಪೂಜಿಸುತ್ತ,

ತಪಸ್ತೇಪುರ್ಮಹಾಪುಣ್ಯೇ ನೈಮಿಷೇ ಮುಕ್ತಿದಾಯಿನಿ ॥ ೪ ॥
ಏಕದಾ ತೇ ಮಹಾತ್ಮಾನಃ ಸಮಾಜಂ ಚಕ್ರುರುತ್ತಮಂ ।
ಕಥಯಂತೋ ಮಹಾಪುಣ್ಯಾಃ ಕಥಾಃ ಪಾಪಪ್ರಣಾಶಿನೀಃ ।
ಭುಕ್ತಿಮುಕ್ತ್ಯೋರುಪಾಯಂ ಚ ಜಿಜ್ಞಾಸಂತಃ ಪರಸ್ಪರಂ ॥ ೫ ॥
ಷಡ್ವಿಂಶತಿಸಹಸ್ರಾಣಾಮೃಷೀಣಾಂ ಭಾವಿತಾತ್ಮನಾಂ ।
ತೇಷಾಂ ಶಿಷ್ಯಪ್ರಶಿಷ್ಯಾಣಾಂ ಸಂಖ್ಯಾ ಕರ್ತುಂ ನ ಶಕ್ಯತೇ ॥ ೬ ॥
ಅತ್ರಾಂತರೇ ಮಹಾವಿದ್ವಾನ್ ವ್ಯಾಸಶಿಷ್ಯೋ ಮಹಾಮುನಿಃ ।
ಆಗಮನ್ನೈಮಿಷಾರಣ್ಯಂ ಸೂತಃ ಪೌರಾಣಿಕೋತ್ತಮಃ ॥ ೭ ॥
ತಮಾಗತಂ ಮುನಿಂ ದೃಷ್ಟ್ವಾ ಜ್ವಲಂತಮಿವ ಪಾವಕಂ ।
ಅರ್ಘ್ಯಾದ್ಯೈಃ ಪೂಜಯಾಮಾಸುರ್ಮುನಯಃ ಶೌನಕಾದಯಃ ॥ ೮ ॥
ಸುಖೋಪವಿಷ್ಟಂ ತಂ ಸೂತಮಾಸನೇ ಪರಮೇ ಶುಭೇ ।
ಪಪ್ರಚ್ಛುಃ ಪರಮಂ ಗುಹ್ಯಂ ಲೋಕಾನುಗ್ರಹಕಾಂಕ್ಷಯಾ ॥ ೯ ॥
ಸೂತ ಧರ್ಮಾರ್ಥತತ್ವಜ್ಞ ಸ್ವಾಗತಂ ಮುನಿಪುಂಗವ ।
ಶ್ರುತವಾಂಸ್ತ್ವಂ ಪುರಾಣಾನಿ ವ್ಯಾಸಾತ್ಸತ್ಯವತೀಸುತಾತ್ ॥ ೧೦ ॥

---

ಪುಣ್ಯತಮವೂ ಮುಕ್ತಿದಾಯಕವೂ ಆದ ಆ ನೈಮಿಷಾರಣ್ಯದಲ್ಲಿಯೇ ತಪವಂಗೈಯುತ್ತಿದ್ದರು.

೫. ಅವರೆಲ್ಲರೂ ಒಂದಾನೊಂದು ಸಲ ಸಭೆಗೂಡಿದರು. ಆ ಸಭೆಯಲ್ಲಿ ಅವರು ಪರಸ್ಪರವಾಗಿ ಪಾಪಸಂಹಾರಕಗಳಾದ ಪುಣ್ಯಕಥೆಗಳನ್ನು ಹೇಳಿಕೊಳ್ಳುತ್ತಲೂ, ಭುಕ್ತಿಮುಕ್ತ್ಯುಪಾಯಗಳನ್ನು ಪರಸ್ಪರವಾಗಿ ಚರ್ಚಿಸಿಕೊಳ್ಳುತ್ತಲೂ ಇದ್ದರು.

೬. ಅಲ್ಲಿ ಸೇರಿದ್ದ ಮಹಾತ್ಮರಾದ ಆ ಇಪ್ಪತ್ತಾರುಸಾವಿರ ಮಂದಿ ಮಹರ್ಷಿಗಳ ಶಿಷ್ಯಪ್ರಶಿಷ್ಯರ ಸಂಖ್ಯೆಯು ಎಣಿಸಲಸಾಧ್ಯವಾಗಿದ್ದಿತು.

೭. ಆ ಸಮಯದಲ್ಲಿ ಮಹಾವಿದ್ವಾಂಸನೂ, ವ್ಯಾಸಶಿಷ್ಯನೂ, ಪೌರಾಣಿಕೋತ್ತಮನೂ ಆದ ಸೂತಮಹಾಮುನಿಯು ಅಲ್ಲಿಗೈತಂದನು.

೮. ಆಗ ಶೌನಕಾದಿಮಹರ್ಷಿಗಳು ಪಾವಕನಂತೆ ತೇಜಶ್ಶಾಲಿಯಾದ ಆತನನ್ನು ಅರ್ಘ್ಯಾದಿಗಳಿಂದ ಪೂಜಿಸಿದರು.

೯. ತರುವಾಯ ಆ ಮುನಿಯು ಶ್ರೇಷ್ಠವಾದ ಭದ್ರಾಸನವನ್ನು ಮಂಡಿಸಲು ಆತನನ್ನು ಕುರಿತು, ಲೋಕಾನುಗ್ರಹಾರ್ಥವಾಗಿ ಅತಿ ರಹಸ್ಯಗಳಾದ ವಿಚಾರಗಳನ್ನು ಕುರಿತು ಇಂತು ಪ್ರಶ್ನಿಸಿದರು:—

೧೦–೧೪. "ಧರ್ಮಾರ್ಥಗಳ ತಿರುಳನ್ನರಿತವನೂ, ಮುನಿಪುಂಗವನೂ ಆದ ಎಲೈ ಸೂತನೇ! ನಿನಗೆ ಸುಖಾಗಮನವನ್ನು ಬಯಸುವೆವು. ಸತ್ಯವತಿಯ

ಅತಃ ಸರ್ವಪುರಾಣಾನಾಮರ್ಥಜ್ಞೋಽಸಿ ಮಹಾಮುನೇ ।
ಕಾನಿ ಕ್ಷೇತ್ರಾಣಿ ಪುಣ್ಯಾನಿ ಕಾನಿ ತೀರ್ಥಾನಿ ಭೂತಲೇ ॥ ೧೧ ॥
ಕಥಂ ವಾ ಲಪ್ಸ್ಯತೇ ಮುಕ್ತಿರ್ಜೀವಾನಾಂ ಭವಸಾಗರಾತ್ ।
ಕಥಂ ಹರೇ ಹರೌ ವಾಽಪಿ ನೃಣಾಂ ಭಕ್ತಿಃ ಪ್ರಜಾಯತೇ ॥ ೧೨ ॥
ಕೇನ ಸಿಧ್ಯೇತ ಚ ಫಲಂ ಕರ್ಮಣಸ್ತ್ರಿವಿಧಾತ್ಮನಃ ।
ಏತಚ್ಚಾಽನ್ಯಚ್ಚ ತತ್ಸರ್ವಂ ಕೃಪಯಾ ವದ ಸೂತಜ ॥ ೧೩ ॥
ಬ್ರೂಯುಃ ಸ್ನಿಗ್ಧಾಯ ಶಿಷ್ಯಾಯ ಗುರವೋ ಗುಹ್ಯಮಪ್ಯುತ ।
ಇತಿ ಪೃಷ್ಟಸ್ತದಾ ಸೂತೋ ನೈಮಿಷಾರಣ್ಯವಾಸಿಭಿಃ ।
ವಕ್ತುಂ ಪ್ರಚಕ್ರಮೇ ನತ್ವಾ ವ್ಯಾಸಂ ಸ್ವಗುರುಮಾದಿತಃ ॥ ೧೪ ॥

ಶ್ರೀ ಸೂತ ಉವಾಚ :—

ಸಮ್ಯಕ್ಪೃಷ್ಟಮಿದಂ ವಿಪ್ರಾ ಯುಷ್ಮಾಭಿರ್ಜಗತೋ ಹಿತಂ ।
ರಹಸ್ಯಮೇತದ್ಯುಷ್ಮಾಕಂ ವಕ್ಷ್ಯಾಮಿ ಶೃಣುತಾಽಽದರಾತ್ ॥ ೧೫ ॥
ಮಯಾ ನೋಕ್ತಮಿದಂ ಪೂರ್ವಂ ಕಸ್ಯಾಽಪಿ ಮುನಿಪುಂಗವಾಃ ।
ಮನೋ ನಿಯಮ್ಯ ವಿಪ್ರೇಂದ್ರಾಃ ಶೃಣುಧ್ವಂ ಭಕ್ತಿಪೂರ್ವಕಂ ॥ ೧೬ ॥
ಅಸ್ತಿ ರಾಮೇಶ್ವರಂ ನಾಮ ರಾಮಸೇತೌ ಪವಿತ್ರಕಂ ॥ ೧೭ ॥

---

ಸುತನಾದ ವ್ಯಾಸಮುನಿಯ ದೆಸೆಯಿಂದ ನೀನು ಪುರಾಣಗಳೆಲ್ಲವನ್ನೂ ಕೇಳಿರುವೆ. ಆದುದರಿಂದ ಅವುಗಳ ಅರ್ಥವನ್ನು ಚೆನ್ನಾಗಿ ಬಲ್ಲೆ. ಆದುದರಿಂದೆಲೈ ಸೂತಾತ್ಮಜನೇ! ಭೂಲೋಕದಲ್ಲಿ ಪುಣ್ಯತಮಗಳಾದ ಕ್ಷೇತ್ರಗಳೂ, ತೀರ್ಥಗಳೂ ಯಾವುವು? ಜೀವರುಗಳಿಗೆ ಸಂಸಾರಸಾಗರದಿಂದ ಮುಕ್ತಿಯು ದೊರಕುವುದೆಂತು? ಮಾನವರಿಗೆ ಹರಿಹರರಲ್ಲಿ ಭಕ್ತಿಯುಂಟಾಗುವ ಬಗೆ ಹೇಗೆ? ಕಾಯಿಕ, ವಾಚಿಕ, ಮಾನಸಿಕಗಳೆಂಬ ತ್ರಿವಿಧಗಳಾದ ಕರ್ಮಗಳಿಗೆ ಯಾವುದರಿಂದ ಫಲವು ಲಭಿಸುವುದು? ಈ ಎಲ್ಲ ವಿಚಾರಗಳನ್ನೂ ನಮಗೆ ಅರುಹು. ಗುರುಗಳು ಪ್ರೀತಿಪಾತ್ರನಾದ ಶಿಷ್ಯನಿಗೆ ಅತಿ ರಹಸ್ಯವಾದುದನ್ನಾದರೂ ತಿಳಿಸುವರಲ್ಲವೆ?'' ಇಂತು ಪ್ರಶ್ನಿಸಿದ ನೈಮಿಷಾರಣ್ಯವಾಸಿಗಳಾದ ಆ ಮಹರ್ಷಿಗಳಿಗೆ ಸೂತಪುರಾಣಿಕನು, ಮೊದಲು ತನ್ನ ಗುರುವಾದ ವ್ಯಾಸನಿಗೆರಗಿ ಹೇಳತೊಡಗಿದನು :—

೧೫–೧೬. ಸೂತನು ಹೇಳುತ್ತಾನೆ :—'' ಎಲೈ ಬ್ರಾಹ್ಮಣರೇ ? ಪ್ರಪಂಚಕ್ಕೆ ಹಿತವನ್ನು ಬಯಸುವ ನೀವು ಒಳ್ಳೆಯ ಪ್ರಶ್ನೆಯನ್ನೇ ಕೇಳಿದಿರಿ. ಈ ವಿಷಯವು ಬಹಳ ರಹಸ್ಯವಾದುದು. ಮುನ್ನಾರಿಗೂ ನಾನಿದನ್ನು ಹೇಳಿಲ್ಲವಾದರೂ ಇದೀಗ ನಿಮಗೆ ಹೇಳುವೆನು. ಸಾವಧಾನಚಿತ್ತರಾಗಿ ಭಕ್ತಿಯಿಂದ ಕೇಳಿರಿ.

೧೭–೧೮. ಶ್ರೀರಾಮನಿರ್ಮಿತವಾದ ಸೇತುವಿನ ಬಳಿ ಪವಿತ್ರವಾದ ರಾಮೇಶ್ವರವೆಂಬ ಕ್ಷೇತ್ರವೊಂದುಂಟು. ಅದು ಸಕಲ ತೀರ್ಥಕ್ಷೇತ್ರಗಳಲ್ಲಿಯೂ

ಕ್ಷೇತ್ರಾಣಾಮಪಿ ಸರ್ವೇಷಾಂ ತೀರ್ಥಾನಾಮಪಿ ಚೋತ್ತಮಂ ।
ದೃಷ್ಟಮಾತ್ರೇ ರಾಮಸೇತೌ ಮುಕ್ತಿಃ ಸಂಸಾರಸಾಗರಾತ್ ॥ ೧೮ ॥
ಹರೇ ಹರೌಚ ಭಕ್ತಿಃ ಸ್ಯಾತ್ತಥಾ ಪುಣ್ಯಸಮೃದ್ಧಿತಾ ।
ಕರ್ಮಣಸ್ತ್ರಿವಿಧಸ್ಯಾಽಪಿ ಸಿದ್ಧಿಃ ಸ್ಯಾನ್ನಾಽತ್ರ ಸಂಶಯಃ ॥ ೧೯ ॥
ಯೋ ನರೋ ಜನ್ಮಮಧ್ಯೇ ತು ಸೇತುಂ ಭಕ್ತ್ಯಾಽವಲೋಕಯೇತ್ ।
ತಸ್ಯ ಪುಣ್ಯಫಲಂ ವಕ್ಷ್ಯೇ ಶೃಣುಧ್ವಂ ಮುನಿಪುಂಗವಾಃ ॥ ೨೦ ॥
ಮಾತೃತಃ ಪಿತೃತಶ್ಚೈವ ದ್ವಿಕೋಟಿಕುಲಸಂಯುತಃ ।
ನಿರ್ವಿಶ್ಯ ಶಂಭುನಾ ಕಲ್ಪಂ ತತೋ ಮೋಕ್ಷಂ ಸಮಶ್ನುತೇ ॥ ೨೧ ॥
ಗಣ್ಯಂತೇ ಪಾಂಸವೋ ಭೂಮೇರ್ಗಣ್ಯಂತೇ ದಿವಿ ತಾರಕಾಃ ।
ಸೇತುದರ್ಶನಜಂ ಪುಣ್ಯಂ ಶೇಷೇಣಾಽಪಿ ನ ಗಣ್ಯತೇ ॥ ೨೨ ॥
ಸಮಸ್ತದೇವತಾರೂಪಃ ಸೇತುಬಂಧಃ ಪ್ರಕೀರ್ತಿತಃ ।
ತದ್ದರ್ಶನವತಃ ಪುಂಸಃ ಕಃ ಪುಣ್ಯಂ ಗಣಿತುಂ ಕ್ಷಮಃ ॥ ೨೩ ॥
ಸೇತುಂ ದೃಷ್ಟ್ವಾ ನರೋ ವಿಪ್ರಾಃ ಸರ್ವಯಾಗಕರಃ ಸ್ಮೃತಃ ।
ಸ್ನಾತಶ್ಚ ಸರ್ವತೀರ್ಥೇಷು ತಪೋಽತಪ್ಯತ ಚಾಽಖಿಲಂ ॥ ೨೪ ॥

---

ಉತ್ತಮವಾದುದು. ಆ ರಾಮಸೇತುವಿನ ದರ್ಶನಮಾತ್ರದಿಂದಲೇ ಸಂಸಾರ ಸಾಗರದಿಂದ ಬಿಡುಗಡೆಯಾಗುವುದು.

೧೯–೨೦. ಹರಿಹರರಲ್ಲಿ ವಿಶೇಷವಾದ ಭಕ್ತಿಯುಂಟಾಗುವುದು. ಅಂತೆಯೇ ತ್ರಿವಿಧವಾದ ಕರ್ಮಾಚರಣೆಯೂ ಸಿದ್ಧಿಸುವುದರಲ್ಲಿ ಸಂದೇಹವಿಲ್ಲವು. ಯಾವನು ತನ್ನ ಜೀವಿತಾವಧಿಯಲ್ಲೊಮ್ಮೆಯಾದರೂ ಭಕ್ತಿಯಿಂದ ರಾಮಸೇತುವನ್ನು ನೋಡುವನೋ, ಅವನಿಗೆ ಲಭಿಸುವ ಪುಣ್ಯವನ್ನು ಹೇಳುವೆನು; ಕೇಳಿರಿ.

೨೧. ತಾಯಿ ತಂದೆಗಳಿಬ್ಬರ ಕಡೆಯಲ್ಲಿಯೂ, ಎರಡುಕೋಟಿ ತಲೆಮಾರುಗಳಿಂದ ಕೂಡಿದವನಾಗಿ ಒಂದುಕಲ್ಪದವರೆಗೂ, ಶಂಕರನೊಡನೆ ಕೈಲಾಸದಲ್ಲಿ ನೆಲಸಿದ್ದು ಆ ಬಳಿಕ ಮೋಕ್ಷವನ್ನು ಪಡೆಯುತ್ತಾನೆ.

೨೨. ಭೂಮಿಯ ಧೂಳಿಯ ಕಣಗಳನ್ನಾದರೂ ಲೆಕ್ಕಿಸಬಹುದು; ನಕ್ಷತ್ರಗಳನ್ನಾದರೂ ಎಣಿಸಬಹುದು; ಸೇತುದರ್ಶನದಿಂದುಂಟಾಗುವ ಫಲಗಳನ್ನು ಆದಿಶೇಷನಿಗೂ ಲೆಕ್ಕಿಸಲಸಾಧ್ಯವು.

೨೩. ಸೇತುನಿರ್ಮಾಣವು ಸಮಸ್ತದೇವತಾತ್ಮಕವೆಂದು ಹೇಳಲಾಗಿದೆ. ಅದನ್ನು ಕಂಡವನಿಗೆ ಲಭಿಸುವ ಪುಣ್ಯವನ್ನಾವನು ತಾನೆ ಲೆಕ್ಕಿಸಲು ಶಕ್ತನಾಗುವನು?

೨೪. ಎಲೈ ವಿಪ್ರರೇ! ಮಾನವನು ಸೇತುದರ್ಶನಮಾತ್ರದಿಂದಲೇ ಸಕಲ ಯಾಗಗಳನ್ನೂ ಮಾಡಿದಂತೆಯೆ; ಸರ್ವತೀರ್ಥಗಳಲ್ಲಿ ಮಿಂದಂತೆಯೆ; ಸಮಸ್ತ ತಪಸ್ಸುಗಳನ್ನೂ ಮಾಡಿದಂತೆಯೆ ಎಂದು ತಿಳಿಯಲ್ಪಡುವನು.

ಸೇತುಂ ಗಚ್ಛೇತಿ ಯೋ ಬ್ರೂಯಾದ್ಯಂ ಕಂ ವಾಽಪಿ ನರಂ ದ್ವಿಜಾಃ ।
ಸೋಽಪಿ ತತ್ಫಲಮಾಪ್ನೋತಿ ಕಿಮನ್ಯೈರ್ಬಹುಭಾಷಣೈಃ ॥ ೨೫ ॥
ಸೇತುಸ್ನಾನಕರೋ ಮರ್ತ್ಯಃ ಸಪ್ತಕೋಟಿಕುಲಾನ್ವಿತಃ ।
ಸಂಪ್ರಾಪ್ಯ ವಿಷ್ಣುಭವನಂ ತತ್ರೈವ ಪರಿಮುಚ್ಯತೇ ॥ ೨೬ ॥
ಸೇತುಂ ರಾಮೇಶ್ವರಂ ಲಿಂಗಂ ಗಂಧಮಾದನಪರ್ವತಂ ।
ಚಿಂತಯನ್ಮನುಜಃ ಸತ್ಯಂ ಸರ್ವಪಾಪೈಃ ಪ್ರಮುಚ್ಯತೇ ॥ ೨೭ ॥
ಮಾತೃತಃ ಪಿತೃತಶ್ಚೈವ ಲಕ್ಷಕೋಟಿಕುಲಾನ್ವಿತಃ ।
ಸಂಪ್ರಾಪ್ಯ ವಿಷ್ಣುಭವನಂ ತತ್ರೈವ ಪರಿಮುಚ್ಯತೇ ।
ಕಲ್ಪತ್ರಯಂ ಶಂಭುಪದೇ ಸ್ಥಿತ್ವಾ ತತ್ರೈವ ಮುಚ್ಯತೇ ॥ ೨೮ ॥
ಮೂಷಾವಸ್ಥಾಂ ವಸಾಕೂಪಂ ತಥಾ ವೈತರಣೀಂ ನದೀಂ ।
ಶ್ವಭಕ್ಷ್ಯಂ ಮೂತ್ರಪಾನಂ ಚ ಸೇತುಸ್ನಾಯೀ ನ ಪಶ್ಯತಿ ॥ ೨೯ ॥
ತಪ್ತಶೂಲಂ ತಪ್ತಶಿಲಾಂ ಪುರೀಷಹ್ರದಮೇವ ಚ ।
ತಥಾ ಶೋಣಿತಕೂಪಂ ಚ ಸೇತುಸ್ನಾಯೀ ನ ಪಶ್ಯತಿ ॥ ೩೦ ॥
ಶಾಲ್ಮಲ್ಯಾರೋಹಣಂ ರಕ್ತಭೋಜನಂ ಕೃಮಿಭೋಜನಂ ।
ಸ್ವಮಾಂಸಭೋಜನಂ ಚೈವ ವಹ್ನಿಜ್ವಾಲಾಪ್ರವೇಶನಂ ॥ ೩೧ ॥

---

೨೫. "ಸೇತುವಿಗೆ ಹೋಗು" ಎಂದು ಯಾವನನ್ನಾದರೂ ಪ್ರೇರಿಸಿದವನೂ ಕೂಡ ಆ ಸೇತುದರ್ಶನದ ಫಲವನ್ನೇ ಪಡೆಯುತ್ತಾನೆ.

೨೬. ಸೇತುಸ್ನಾನ ಮಾಡುವವನು ಏಳುಕೋಟಿ ಕುಲಗಳಿಂದ ಕೂಡಿದವನಾಗಿ ವಿಷ್ಣುಲೋಕವನ್ನು ಪಡೆದು ಅಲ್ಲಿಯೇ ಮೋಕ್ಷವನ್ನು ಪಡೆಯುತ್ತಾನೆ.

೨೭–೨೮. ಸೇತುವನ್ನೂ, ರಾಮೇಶ್ವರ ಲಿಂಗವನ್ನೂ, ಗಂಧಮಾದನ ಪರ್ವತವನ್ನೂ ಸ್ಮರಿಸತಕ್ಕವನು ಸತ್ಯವಾಗಿಯೂ ಸಮಸ್ತ ಪಾಪಗಳಿಂದಲೂ ಬಿಡುಗಡೆಹೊಂದುವನು. ಅವನು ತಾಯ್ತಂದೆಗಳೀರ್ವರ ಲಕ್ಷಕೋಟಿ ಕುಲಗಳೊಡನೆ ವಿಷ್ಣುಲೋಕವನ್ನು ಹೊಂದಿ ಅಲ್ಲಿಯೂ ಪುನರಾವೃತ್ತಿರಹಿತವಾದ ಮೋಕ್ಷವನ್ನೇ ಹೊಂದುತ್ತಾನೆಯಲ್ಲದೆ ಮೂರುಕಲ್ಪಗಳಕಾಲ ಶಿವಲೋಕದಲ್ಲಿದ್ದು ಮುಕ್ತನಾಗುವನು.

೨೯. ಸೇತುಸ್ನಾಯಿಯಾದವನು ಮೂಸೆಯಲ್ಲಿ ನೆಲಸುವ ಸ್ಥಿತಿ, ವಸೆಯ ಕೊಳದಲ್ಲಿ ಮೀಯುವುದು, ವೈತರಣೀನದಿಯ ದರ್ಶನ, ಮಾಂಸಭಕ್ಷಣ, ಮೂತ್ರಪಾನ ಮೊದಲಾದ ನರಕಗಳನ್ನು ನೋಡುವಂತೆಯೇ ಇಲ್ಲವು.

೩೦. ತಪ್ತಶೂಲ, ತಪ್ತಶಿಲೆ, ಅಮೇಧ್ಯದ ಹೊಂಡ, ಶೋಣಿತಕೂಪ ಇವುಗಳನ್ನು ಸೇತುಸ್ನಾನಮಾಡಿದವನು ಕಾಣುವುದೇ ಇಲ್ಲವು.

೩೧–೩೨. ಸೇತುವನ್ನು ದರ್ಶಿಸುವವನು ಶಾಲ್ಮಲೀವೃಕ್ಷಾರೋಹಣ

ಶಿಲಾವೃಷ್ಟಿಂ ವಹ್ನಿವೃಷ್ಟಿಂ ನರಕಂ ಕಾಲಸೂತ್ರಕಂ ।
ಕ್ಷಾರೋದಕಂ ಚೋಷ್ಣತೋಯಂ ನೇಯಾತ್ಸೇತ್ವವಲೋಕಕಃ ॥ ೩೨ ॥
ಸೇತುಸ್ನಾಯೀ ನರೋ ವಿಪ್ರಾಃ ಪಂಚಪಾತಕವಾನಪಿ ।
ಮಾತೃತಃ ಪಿತೃತಶ್ಚೈವ ಶತಕೋಟಿಕುಲಾನ್ವಿತಃ ।
ಕಲ್ಪತ್ರಯಂ ವಿಷ್ಣುಪದೇ ಸ್ಥಿತ್ವಾ ತತ್ರೈವ ಮುಚ್ಯತೇ ॥ ೩೩ ॥
ಅಧಃಶಿರಃ ಶೋಷಣಂ ಚ ನರಕಂ ಕ್ಷಾರಸೇವನಂ ।
ಪಾಷಾಣಯಂತ್ರಪೀಡಾಂ ಚ ಮರುತ್ಪ್ರಪತನಂ ತಥಾ ॥ ೩೪ ॥
ಪುರೀಷಲೇಪನಂ ಚೈವ ತಥಾ ಕ್ರಕಚದಾರಣಂ ।
ಪುರೀಷಭೋಜನಂ ರೇತಃಪಾನಂ ಸಂಧಿಷು ದಾಹನಂ ॥ ೩೫ ॥
ಅಂಗಾರಶಯ್ಯಾಭ್ರಮಣಂ ತಥಾ ಮುಸಲಮರ್ದನಂ ।
ಏತಾನಿ ನರಕಾಣ್ಯದ್ಧಾ ಸೇತುಸ್ನಾಯೀ ನ ಪಶ್ಯತಿ ॥ ೩೬ ॥
ಸೇತುಸ್ನಾನಂ ಕರಿಷ್ಯೇಽಹಮಿತಿ ಬುದ್ಧ್ಯಾ ವಿಚಿಂತಯನ್ ।
ಗಚ್ಛೇಚ್ಛತಪದಂ ಯಸ್ತು ಸ ಮಹಾಪಾತಕೋಽಪಿ ಸನ್ ॥ ೩೭ ॥
ಬಹೂನಾಂ ಕಾಷ್ಠಯಂತ್ರಾಣಾಂ ಕರ್ಷಣಂ ಶಸ್ತ್ರಭೇದನಂ ॥ ೩೮ ॥
ಪತನೋತ್ಪತನಂ ಚೈವ ಗದಾದಂಡನಿಪೀಡನಂ ।
ಗಜದಂತೈಶ್ಚ ಹನನಂ ನಾನಾಭುಜಗದಂಶನಂ ॥ ೩೯ ॥

---

ವನ್ನೂ, ರಕ್ತಪಾನವನ್ನೂ, ಕ್ರಿಮಿಭೋಜನವನ್ನೂ, ತನ್ನ ಮಾಂಸವನ್ನು ತಾನೆ ಕಿತ್ತುತಿನ್ನುವುದು, ಅಗ್ನಿಜ್ವಾಲಾಪ್ರವೇಶ, ಕಲ್ಲುಮಳೆ, ಕೆಂಡದಮಳೆ, ಕಾಲಸೂತ್ರ, ಕಾರದ ಮತ್ತು ಕುದಿಯುವ ನೀರಿನಲ್ಲಿ ಮುಳುಗುವಿಕೆ ಇವೆ ಮೊದಲಾದ ನರಕಗಳನ್ನು ಅನುಭವಿಸುವುದಿಲ್ಲವು.

೩೩. ಸೇತುಸ್ನಾಯಿಯು ಬ್ರಹ್ಮಹತ್ಯಾದಿ ಪಂಚಪಾತಕಗಳನ್ನು ಮಾಡಿದ್ದರೂ, ಮಾತಾಪಿತೃಗಳ ಕಡೆಯ ನೂರುಕೋಟಿ ಕುಲಗಳಿಂದ ಕೂಡಿದವನಾಗಿ ಮೂರುಕಲ್ಪಗಳಕಾಲ ವಿಷ್ಣುಲೋಕದಲ್ಲಿದ್ದು ಆ ಬಳಿಕ ಅಲ್ಲಿಯೇ ಮೋಕ್ಷವನ್ನು ಹೊಂದುತ್ತಾನೆ.

೩೪–೩೬. ಅಧಶ್ಶಿರ, ಶೋಷಣ, ಕಾರದ ನೀರಿನ ಪಾನ, ಕಲ್ಗಾಣದ ಅರೆತ, ಮರುತ್ಪ್ರಪಾತ, ಅಮೇಧ್ಯಲೇಪನ, ಗರಗಸದ ಕುಯ್ಲು, ಅಮೇಧ್ಯಭಕ್ಷಣ, ರೇತಃಪಾನ, ಕೀಲ್ಬರಿ, ಕೆಂಡದ ಹಾಸಿಗೆಯಲ್ಲಿ ಹೊರಳಾಟ, ಒನಕೆಯ ಏಟು ಮುಂತಾದ ನರಕಗಳನ್ನು ಸೇತುಸ್ನಾಯಿಯು ಕಾಣುವಂತೆಯೇ ಇಲ್ಲವು.

೩೭–೪೧. ಸೇತುಸ್ನಾನ ಮಾಡುವೆನೆಂಬ ಮನಸ್ಸಿನಿಂದ ನೂರುಹೆಜ್ಜೆಗಳನ್ನಿಟ್ಟವನೂ ಮಹಾಪಾತಕಗಳಿಂದ ಬಿಡುಗಡೆಹೊಂದಿ, ಬಗೆಬಗೆಯ ಕಾಷ್ಠಯಂತ್ರಗಳ ಎಳೆತ, ಶಸ್ತ್ರಭೇದನ, ಸಿಡಿತದ ತಳ್ಳುವಿಕೆ, ಗದಾಪ್ರಹಾರ,

ಧೂಮಪಾನಂ ಪಾಶಬಂಧಂ ನಾನಾಶೂಲನಿಪೀಡನಂ ।
ಮುಖೇ ಚ ನಾಸಿಕಾಯಾಂ ಚ ಕ್ಷಾರೋದಕನಿಷೇಚನಂ ॥ ೪೦ ॥
ಕ್ಷಾರಾಂಬುಪಾನಂ ನರಕಃ ತಪ್ತಾಯಃಸೂಚಿಭಕ್ಷಣಂ ।
ಏತಾನಿ ನರಕಾನ್ಯದ್ಧಾ ನ ಯಾತಿ ಗತಪಾತಕಃ ॥ ೪೧ ॥
ಕ್ಷಾರಾಂಬುಪೂರ್ಣರಂಧ್ರಾಣಾಂ ಪ್ರವೇಶಂ ಮಲಭೋಜನಂ ।
ಸ್ನಾಯುಚ್ಛೇದಂ ಸ್ನಾಯುದಾಹಮಸ್ಥಿಭೇದನಮೇವ ಚ ॥ ೪೨ ॥
ಶ್ಲೇಷ್ಮಾಽದನಂ ಪಿತ್ತಪಾನಂ ಮಹಾತಿಕ್ತನಿಷೇವಣಂ ।
ಅತ್ಯುಷ್ಣತೈಲಪಾನಂ ಚ ಪಾನಂ ಕ್ಷಾರೋದಕಸ್ಯ ಚ ॥ ೪೩ ॥
ಕಷಾಯೋದಕಪಾನಂ ಚ ತಪ್ತಪಾಷಾಣಭೋಜನಂ ।
ಅತ್ಯುಷ್ಣಸಿಕತಾಸ್ನಾನಂ ತಥಾ ದಶನಮರ್ದನಂ ॥ ೪೪ ॥
ತಪ್ತಾಽಯಃಶಯನಂ ಚೈವ ಸಂತಪ್ತಾಂಬುನಿಷೇಚನಂ ।
ಸೂಚಿಪ್ರಕ್ಷೇಪಣಂ ಚೈವ ನೇತ್ರಯೋರ್ಮುಖಸಂಧಿಷು ॥ ೪೫ ॥
ಶಿಶ್ನೇ ಸವೃಷಣೇ ಚೈವ ಹ್ಯಯೋಭಾರಸ್ಯ ಬಂಧನಂ ।
ವೃಕ್ಷಾಗ್ರಾತ್ಪತನಂ ಚೈವ ದುರ್ಗಂಧಪರಿಪೂರಿತೇ ॥ ೪೬ ॥
ತೀಕ್ಷ್ಣಧಾರಾಸ್ತ್ರಶಯ್ಯಾಂ ಚ ರೇತಃಪಾನಾದಿಕಂ ತಥಾ ।
ಇತ್ಯಾದಿನರಕಾನ್ ಘೋರಾನ್ ಸೇತುಸ್ನಾಯೀ ನ ಪಶ್ಯತಿ ॥ ೪೭ ॥

---

ಆನೆಯ ದಂತಗಳ ಏಟುಗಳು, ಅನೇಕ ಬಗೆಯ ಹಾವುಗಳ ಕಡಿತ, ಧೂಮಪಾನ, ಪಾಶಬಂಧನ, ಹಲವಾರು ಶೂಲಗಳ ಇರಿತ, ಕಿವಿ ಬಾಯಿಗಳಲ್ಲಿ ಕಾರದ ನೀರಿನ ಸೇಚನ ಮತ್ತು ಪಾನ, ಕಾಯಿಸಿದ ಸೂಜಿಗಳ ಭಕ್ಷಣೆ ಮುಂತಾದ ನರಕಗಳನ್ನು ಅನುಭವಿಸುವುದಿಲ್ಲವು.

೪೨–೪೭. ಕಾರದ ನೀರು ತುಂಬಿದ ಹಳ್ಳಗಳಲ್ಲಿ ಮುಳುಗುವಿಕೆ, ಮಲ ಭೋಜನ, ಮಾಂಸಖಂಡಗಳ ಛೇದನ, ಮಾಂಸಖಂಡಗಳ ಸುಡುವಿಕೆ, ಮೂಳೆ ಗಳ ಮುರಿತ, ಶ್ಲೇಷ್ಮಭಕ್ಷಣ, ವಾಂತಿಯನ್ನು ಕುಡಿಯುವುದು, ಅತಿ ಕಹಿ ಯನ್ನುಣ್ಣುವುದು, ಹೆಚ್ಚಾಗಿ ಕಾದ ಎಣ್ಣೆಯ ಮತ್ತು ಅತಿ ಕಾರದ ಮತ್ತು ಒಗರಿನ ನೀರಿನ ಪಾನ, ಕಾದ ಕಲ್ಲನ್ನು ನುಂಗುವುದು, ಬಹಳವಾಗಿ ಕಾದ ಮರಳನ್ನು ಮೇಲೆ ಸುರಿಯುವುದು, ಹಲ್ಲಿನ ಮುರಿತ, ಕಾದ ಕಬ್ಬಿಣದಮೇಲೆ ಮಲಗುವುದು, ಚೆನ್ನಾಗಿ ಕುದಿದ ನೀರನ್ನೆರಚುವುದು, ಕಣ್ಣು ಬಾಯಿಗಳನ್ನು ಸೂಜಿಗಳಿಂದ ಚುಚ್ಚುವುದು, ವೃಷಣಸಮೇತವಾಗಿ ಶಿಶ್ನಕ್ಕೆ ಕಬ್ಬಿಣದ ಭಾರ ವನ್ನು ಕಟ್ಟುವುದು, ಮರದ ತುದಿಯಿಂದ ದುರ್ಗಂಧದ ಹೊಂಡದಲ್ಲಿಯೂ, ಹರಿತವಾದ ಶಸ್ತ್ರಗಳ ಸಜ್ಜೆಯ ಮೇಲೆಯೂ ಬೀಳಿಸುವುದು, ರೇತಃಪಾನ—ಇವೇ ಮೊದಲಾದ ಘೋರಗಳಾದ ನರಕಗಳನ್ನೂ ಸೇತುಸ್ನಾಯಿಯಾದವನು ಕಾಣು ವುದೇ ಇಲ್ಲವು.

ಸೇತುಸೈಕತಮಧ್ಯೇ ಯಃ ಶೇತೇ ತತ್ಪಾಂಸುಕುಂಠಿತಃ ।
ಯಾವಂತಃ ಪಾಂಸವೋ ಲಗ್ನಾಃ ತಸ್ಯಾಂಗೇ ವಿಪ್ರಸತ್ತಮಾಃ ।
ತಾವತಾಂ ಬ್ರಹ್ಮಹತ್ಯಾನಾಂ ನಾಶಃ ಸ್ಯಾನ್ನಾತ್ರ ಸಂಶಯಃ ॥ ೪೮ ॥
ಸೇತುಮಧ್ಯಸ್ಥವಾತೇನ ಯಸ್ಯಾಂಗಂ ಸ್ಪೃಶ್ಯತೇಽಖಿಲಂ ।
ಸುರಾಪಾನಾಽಯುತಂ ತಸ್ಯ ತತ್ಕ್ಷಣಾದೇವ ನಶ್ಯತಿ ॥ ೪೯ ॥
ವರ್ತಂತೇ ಯಸ್ಯ ಕೇಶಾಸ್ತು ವಪನಾತ್ಸೇತುಮಧ್ಯತಃ ।
ಗುರುತಲ್ಪಾಽಯುತಂ ತಸ್ಯ ತತ್ಕ್ಷಣಾದೇವ ನಶ್ಯತಿ ॥ ೫೦ ॥
ಯಸ್ಯಾಽಸ್ಥಿ ಸೇತುಮಧ್ಯೇ ತು ಸ್ಥಾಪಿತಂ ಪುತ್ರಪೌತ್ರಕೈಃ ।
ಸ್ವರ್ಣಸ್ತೇಯಾಽಯುತಂ ತಸ್ಯ ತತ್ಕ್ಷಣಾದೇವ ನಶ್ಯತಿ ॥ ೫೧ ॥
ಸ್ಮೃತ್ವಾ ಯಂ ಸೇತುಮಧ್ಯೇ ತು ಸ್ನಾನಂ ಕುರ್ಯಾದ್ದ್ವಿಜೋತ್ತಮಾಃ ।
ಮಹಾಪಾತಕಿಸಂಸರ್ಗದೋಷಸ್ತಸ್ಯ ಲಯಂ ವ್ರಜೇತ್ ॥ ೫೨ ॥
ಮಾರ್ಗಭೇದೀ ಸ್ವಾರ್ಥಪಾಕೀ ಯತಿಬ್ರಾಹ್ಮಣದೂಷಕಃ ।
ಅತ್ಯಾಶೀ ವೇದವಿಕ್ರೇತಾ ಪಂಚೈತೇ ಬ್ರಹ್ಮಘಾತಕಾಃ ॥ ೫೩ ॥

---

೪೮. ಎಲೈ ಬ್ರಾಹ್ಮಣಶ್ರೇಷ್ಠರೇ! ಸೇತುವಿನ ಮರಳಿನಲ್ಲಿ ಹೊರಳಾಡಿದವನ ಮೈಗೆ ಎಷ್ಟು ಕಣಗಳಂಟಿರುವುವೋ ಅಷ್ಟು ಸಂಖ್ಯೆಯ ಬ್ರಹ್ಮಹತ್ಯಾಪಾತಕಗಳು ತೊಲಗಿಹೋಗುವುವು. ಇದರಲ್ಲಿ ಸಂಶಯವಿಲ್ಲ.

೪೯. ಸೇತುವಿನ ಮೇಲಿನ ಗಾಳಿಯು ಸೋಕಿದವನಿಗೆ ಹತ್ತುಸಾವಿರ ಸುರಾಪಾನಗಳ ಪಾಪಗಳೂ ಕೂಡಲೇ ನಶಿಸುವುವು.

೫೦. ಯಾವನು ಸೇತುವಿನಬಳಿ ಕ್ಷೌರಕರ್ಮವನ್ನು ಮಾಡಿಸಿಕೊಳ್ಳುವನೋ, ಅವನು ಕೂಡಲೇ ಸಾವಿರ ಗುರುತಲ್ಪಗಮನಪಾತಕಗಳಿಂದ ಬಿಡುಗಡೆ ಹೊಂದುವನು.

೫೧. ಪುತ್ರಪೌತ್ರಾದಿಗಳು ಯಾವನ ಅಸ್ಥಿಗಳನ್ನು ಸೇತುಮಧ್ಯದಲ್ಲಿ ಹೂತಿಡುವರೋ, ಅವನಿಗೆ ಹತ್ತುಸಾವಿರ ಸ್ವರ್ಣಸ್ತೇಯ ಪಾತಕಗಳು ತೊಲಗಿಹೋಗುವುವು.

೫೨. ಸೇತುವಿನ ಬಳಿ ಸ್ನಾನಮಾಡುವಾಗ ಯಾವನನ್ನಾದರೂ ನೆನದುದಾದರೆ, ಅವನು ಮಹಾಪಾತಕಿಗಳ ಸಂಗದಿಂದುಂಟಾದ ಪಾಪದಿಂದ ಬಿಡುಗಡೆ ಹೊಂದುವನು.

೫೩. ದಾರಿಯನ್ನು ಕಡಿದುಹಾಕುವವನು, ತನಗಾಗಿಯೇ ಅಡಿಗೆಮಾಡಿಕೊಳ್ಳುವವನು, ಯತಿಬ್ರಾಹ್ಮಣದೂಷಕನು, ಮಿತವಿಲ್ಲದೆ ಯದ್ವಾತದ್ವಾ ಊಟಮಾಡುವವನು, ವೇದಗಳನ್ನು ಮಾರಿಕೊಳ್ಳುವವನು — ಈ ಐವರೂ ಬ್ರಹ್ಮಘಾತುಕರು.

ಬ್ರಾಹ್ಮಣಾನ್ ಯಃ ಸಮಾಹೂಯ ದಾಸ್ಯಾಮೀತಿ ಧನಾದಿಕಂ ।
ಪಶ್ಚಾನ್ನಾಸ್ತೀತಿ ಯೋ ಬ್ರೂತೇ ಬ್ರಹ್ಮಹಾ ಸೋಽಪಿ ಕೀರ್ತಿತಃ ॥ ೫೪ ॥
ಪರಿಜ್ಞಾಯ ಯತೋ ಧರ್ಮಾಂಸ್ತಸ್ಮೈ ಯೋ ದ್ವೇಷಮಾಚರೇತ್ ।
ಅವಜಾನಾತಿ ವಾ ವಿಪ್ರಾನ್ ಬ್ರಹ್ಮಹಾ ಸೋಽಪಿ ಕೀರ್ತಿತಃ ॥ ೫೫ ॥
ಜಲಪಾನಾರ್ಥಮಾಯಾತಂ ಗೋವೃಂದಂ ತು ಜಲಾಶಯೇ ।
ನಿವಾರಯತಿ ಯೋ ವಿಪ್ರಾಃ ಬ್ರಹ್ಮಹಾ ಸೋಽಪಿ ಕೀರ್ತಿತಃ ॥ ೫೬ ॥
ಸೇತುಮೇತ್ಯ ತು ತೇ ಸರ್ವೇ ಮುಚ್ಯಂತೇ ದೋಷಸಂಚಯೈಃ ।
ಬ್ರಹ್ಮಘಾತಕತುಲ್ಯಾ ಯೇ ಸಂತಿ ಚಾಽನ್ಯೇ ದ್ವಿಜೋತ್ತಮಾಃ ॥ ೫೭ ॥
ತೇ ಸರ್ವೇ ಸೇತುಮಾಗತ್ಯ ಮುಚ್ಯಂತೇ ನಾಽತ್ರಸಂಶಯಃ ।
ಔಪಾಸನಪರಿತ್ಯಾಗೀ ದೇವತಾಽನ್ನಸ್ಯ ಭೋಜಕಃ ॥ ೫೮ ॥
ಸುರಾಪಯೋಷಿತ್ಸಂಸರ್ಗೀ ಗಣಿಕಾಽನ್ನಾಽಶನಸ್ತಥಾ ।
ಗಣಾಽನ್ನಭೋಜಕಶ್ಚೈವ ಪತಿತಾಽನ್ನರತಶ್ಚ ಯಃ ॥ ೫೯ ॥
ಏತೇ ಸುರಾಪಿನಃ ಪ್ರೋಕ್ತಾಃ ಸರ್ವಕರ್ಮಬಹಿಷ್ಕೃತಾಃ ।
ಸೇತುಸ್ನಾನೇನ ಮುಚ್ಯಂತೇ ತೇ ಸರ್ವೇ ಹತಕಿಲ್ಬಿಷಾಃ ।
ಸುರಾಪತುಲ್ಯಾ ಯೇ ಚಾಽನ್ಯೇ ಮುಚ್ಯಂತೇ ಸೇತುಮಜ್ಜನಾತ್ ॥ ೬೦ ॥
ಕಂದಮೂಲಫಲಾನಾಂ ಚ ಕಸ್ತೂರೀಪಟ್ಟವಾಸಸಾಂ ॥ ೬೧ ॥

---

೫೪–೫೬. ಧನಾದಿಗಳನ್ನು ದಾನಕೊಡುವೆನೆಂದು ಬ್ರಾಹ್ಮಣರನ್ನು ಕರೆದು ಆ ಬಳಿಕ ಇಲ್ಲವೆಂದು ನುಡಿಯುವವನೂ, ಒಬ್ಬನಿಂದ ಧರ್ಮಗಳನ್ನು ಕಲಿತು ಬೋಧಕನಾದ ಅವನನ್ನೇ ಜರಿಯುವವನೂ, ಬ್ರಾಹ್ಮಣರನ್ನು ಅವಮಾನ-ಪಡಿಸುವವನೂ, ನೀರು ಕುಡಿಯಲು ಬಂದ ದನಗಳನ್ನು (ಗೋವೃಂದವನ್ನು) ಜಲಾಶಯದಿಂದಟ್ಟುವವನೂ ಬ್ರಹ್ಮಹತ್ಯಾ ಪಾತಕಿಗಳೆಂದು ಗಣಿಸಲಾಗುವರು.

೫೭–೬೦. ಇವರೂ ಅಲ್ಲದೆ ಇವರಿಗೆ ಸಮಾನರಾದ ಪಾತಕಿಗಳೂ ಕೂಡ, ಸೇತುವಿನ ಬಳಿಗೆ ಬಂದ ಮಾತ್ರದಿಂದಲೇ, ನಿಸ್ಸಂಶಯವಾಗಿಯೂ ಪಾಪದಿಂದ ಮುಕ್ತರಾಗುವರು. ಔಪಾಸನವನ್ನುಬಿಟ್ಟವನೂ, ದೈವಸ್ವದಿಂದ ಜೀವಿಸುವವನೂ, ಹೆಂಡಕುಡುಕಿಯ ಸಂಗಮಾಡುವವನೂ, ಸೂಳೆಯ ಸೊತ್ತಿನಿಂದ ಬದುಕುವವನೂ, ಸಂಘಾನ್ನಭೋಜಿಯೂ, ಪತಿತಾನ್ನನಿರತನೂ, ಸುರಾಪಾಯಿಗಳೆಂದೂ, ಸರ್ವಕರ್ಮಗಳಿಗೂ ಬಾಹ್ಯರೆಂದೂ ಹೇಳಲ್ಪಟ್ಟಿರುವರು; ಇವರೂ ಮತ್ತು ಇವರಿಗೆ ಸಮಾನರಾದವರೂ, ಸೇತುವನ್ನು ಸೇರಿ ಸ್ನಾನಮಾಡಿದಲ್ಲಿ, ಪಾಪಗಳಿಂದ ಬಿಡುಗಡೆಹೊಂದುತ್ತಾರೆ.

೬೧–೬೩. ಕಂದಮೂಲಫಲಗಳನ್ನೂ, ಕಸ್ತೂರಿಯನ್ನೂ, ರೇಷ್ಮೆಯ ಬಟ್ಟೆಗಳನ್ನೂ, ಹಾಲು, ಗಂಧ, ಕರ್ಪೂರ, ಅಡಿಕೆ, ಜೇನುತುಪ್ಪ, ತುಪ್ಪ, ತಾಮ್ರ,

ಪಯಶ್ಚಂದನಕರ್ಪೂರಕ್ರಮುಕಾಣಾಂ ತಥೈವ ಚ ।
ಮಧ್ವಾಜ್ಯತಾಮ್ರಕಾಂಸ್ಯಾನಾಂ ರುದ್ರಾಕ್ಷಾಣಾಂ ತಥೈವ ಚ ॥ ೩೨ ॥
ಚೋರಕಾಸ್ತು ಪರಿಜ್ಞೇಯಾ ಸುವರ್ಣಸ್ತೇಯಿನಃ ಸಮಾಃ ।
ತೇ ಸೇತುಕ್ಷೇತ್ರಮಾಗತ್ಯ ಮುಚ್ಯಂತೇ ನಾಽತ್ರ ಸಂಶಯಃ ॥ ೩೩ ॥
ಅನ್ಯೇ ಚ ಸ್ತೇಯಿನಃ ಸರ್ವೇ ಸೇತುಸ್ನಾನೇನ ವೈ ದ್ವಿಜಾಃ ।
ಮುಚ್ಯಂತೇ ಸರ್ವಪಾಪೇಭ್ಯೋ ನಾಽತ್ರ ಕಾರ್ಯಾ ವಿಚಾರಣಾ ॥ ೩೪ ॥
ಭಗಿನೀಂ ಪುತ್ರಭಾರ್ಯಾಂ ಚ ತಥೈವ ಚ ರಜಸ್ವಲಾಂ ।
ಭ್ರಾತೃಭಾರ್ಯಾಂ ಮಿತ್ರಭಾರ್ಯಾಂ ಮದ್ಯಪಾಂ ಚ ಪರಸ್ತ್ರಿಯಂ ॥ ೩೫ ॥
ಹೀನಸ್ತ್ರಿಯಂ ಚ ವಿಶ್ವಸ್ತಾಂ ಯೋಽಭಿಗಚ್ಛತಿ ರಾಗತಃ ।
ಗುರುತಲ್ಪೀ ಸ ವಿಜ್ಞೇಯಃ ಸರ್ವಕರ್ಮಬಹಿಷ್ಕೃತಃ ॥ ೩೬ ॥
ಏತೇ ಚಾಽನ್ಯೇ ಚ ಯೇ ಸಂತಿ ಗುರುತಲ್ಪಗತುಲ್ಯಕಾಃ ।
ತೇ ಸರ್ವೇ ಪ್ರವಿಮುಚ್ಯಂತೇ ಸೇತುಸ್ನಾನೇನ ವೈ ದ್ವಿಜಾಃ ॥ ೩೭ ॥
ಏತೈಃ ಸಂಸರ್ಗಿಣೋ ವಿಪ್ರಾಃ ಯೇ ಚಾಽನ್ಯೇ ಸಂತಿ ಪಾಪಿನಃ ।
ಸೇತುಸ್ನಾನೇನ ಮಹತಾ ತೇಽಪಿ ಮೋಕ್ಷಮವಾಪ್ನುಯುಃ ॥ ೩೮ ॥
ಯಾಗಂ ವಿನಾ ದೇವಲೋಕೇ ಘೃತಾಚೀಮೇನಕಾದಿಭಿಃ ।
ಸಂಭೋಗಕಾಮಿನೋ ವಿಪ್ರಾಃ ಸ್ನಾತುಂ ಸೇತಾವಘಾಪಹೇ ॥ ೩೯ ॥

---

ಕಂಚು, ರುದ್ರಾಕ್ಷಿಗಳು, ಮುಂತಾದುವುಗಳನ್ನೂ ಕದಿಯುವವರು ಸ್ವರ್ಣಸ್ತೇಯಿಗಳೆಂದು ಗಣಿಸಲ್ಪಡುವರು; ಇವರು ಸೇತುವಿಗೆ ಬಂದು ಪಾಪದಿಂದ ಮುಕ್ತಿಯನ್ನು ಪಡೆಯುತ್ತಾರೆ. ಸಂಶಯವಿಲ್ಲ.

೩೪. ಉಳಿದ ಎಲ್ಲ ಬಗೆಯ ಕಳ್ಳರೂ, ದ್ರೋಹಿಗಳೂ ಸೇತುಸ್ನಾನದಿಂದ ಮೋಕ್ಷವನ್ನು ಪಡೆಯುತ್ತಾರೆ. ಇದು ನಿರ್ವಿಚಾರವಾದುದು.

೩೫–೩೮. ಸೋದರಿಯನ್ನೂ, ಸೊಸೆಯನ್ನೂ, ರಜಸ್ವಲೆಯನ್ನೂ, ಅತ್ತಿಗೆ ನಾದಿನಿಯರನ್ನೂ, ಸ್ನೇಹಿತನ ಮಡದಿಯನ್ನೂ, ಮದ್ಯಪಾನಮಾಡುವಂತಹವಳನ್ನೂ, ನೀಚಸ್ತ್ರೀಯನ್ನೂ, ವಿಧವೆಯನ್ನೂ, ಕಾಮದಿಂದ ಸಂಗಮಮಾಡಿದವನನ್ನು ಗುರುತಲ್ಪ (ಪತ್ನೀ) ಗಾಮಿಯೆಂದೂ, ಸರ್ವಕರ್ಮಬಹಿಷ್ಕೃತನೆಂದೂ ತಿಳಿಯಬೇಕು. ಎಲೈ ಬ್ರಾಹ್ಮಣರಿರಾ! ಇಂತಹವರೂ, ಇವರಿಗೆ ಸಮಾನರಾದವರೂ ಸೇತುಸ್ನಾನ ಮಾಡಿದುದಾದರೆ ಪಾಪದಿಂದ ಬಿಡುಗಡೆಹೊಂದುವರಲ್ಲದೆ ಇವರೊಡನೆ ಸೇರಿದ ಇತರ ಮಹಾಪಾತಕಿಗಳೂ ಮೋಕ್ಷವನ್ನು ಪಡೆಯುತ್ತಾರೆ.

೩೯–೪೦. ಯಾಗವಿಲ್ಲದೆಯೆ ಘೃತಾಚಿ, ಮೇನಕೆ ಮೊದಲಾದ ಸುರಸ್ತ್ರೀಯರ ಸಂಗವನ್ನು ಬಯಸುವವನು ಪಾಪಾಪನೋದಕವಾದ ಸೇತುಸ್ನಾನವನ್ನು

ಅನಿಷೇವ್ಯ ರವಿಂ ವಹ್ನಿಂ ಅನುಪಾಸ್ಯ ಪರಾನ್ ಸುರಾನ್ ।
ಶುಭಕಾಮಿೂ ಜನಃ ಸೇತೌ ಕುರ್ಯಾತ್ಸ್ನಾನಂ ಸಭಕ್ತಿಕಂ ॥ ೨೦ ॥
ತಿಲಾನ್ ಭೂಮಿಂ ಸುವರ್ಣಂ ಚ ಧಾನ್ಯಂ ತಂಡುಲಮೇವ ಚ ।
ಅದತ್ವೇಚ್ಛಂತಿ ಯೇ ಸ್ವರ್ಗಂ ಸ್ನಾಂತು ಸೇತೌ ತು ತೇ ದ್ವಿಜಾಃ ॥ ೨೧ ॥
ಉಪವಾಸೈರ್ವ್ರತೈಃ ಕೃಚ್ಛ್ರೈಃ ಅಸಂತಾಪ್ಯ ನಿಜಾಂ ತನುಂ ।
ಸ್ವರ್ಗಾಽಭಿಲಾಷಿಣಃ ಪುಂಸಃ ಸ್ನಾತುಂ ಸೇತೌ ವಿಮುಕ್ತಿದೇ ॥ ೨೨ ॥
ಸೇತುಸ್ನಾನಂ ಮೋಕ್ಷದಂ ಹಿ ಮನಃಶುದ್ಧಿಪ್ರದಂ ತಥಾ ।
ಜಪಾದ್ಧೋಮಾತ್ತಥಾ ದಾನಾದ್ಯಾಗಾಚ್ಚ ತಪಸೋಽಪಿ ಚ ॥ ೨೩ ॥
ಸೇತುಸ್ನಾನಂ ವಿಶಿಷ್ಟಂ ಹಿ ಪುರಾಣೇ ಪರಿಪಠ್ಯತೇ ॥ ೨೪ ॥
ಅಕಾಮನಾಕೃತಂ ಸ್ನಾನಂ ಸೇತೌ ಪಾಪವಿನಾಶನೇ ।
ಅಪುನರ್ಭವದಂ ಪ್ರೋಕ್ತಂ ಸತ್ಯಮುಕ್ತಂ ದ್ವಿಜೋತ್ತಮಾಃ ॥ ೨೫ ॥
ಯಃ ಸಂಪದಂ ಸಮುದ್ದಿಶ್ಯ ಸ್ನಾತಿ ಸೇತೌ ನರೋ ಮುದಾ ।
ಸ ಸಂಪದಮವಾಪ್ನೋತಿ ವಿಪುಲಾಂ ದ್ವಿಜಪುಂಗವಾಃ ।
ಶುದ್ಧ್ಯರ್ಥಂ ಸ್ನಾತಿ ಚೇತ್ಸೇತೌ ತದಾ ಶುದ್ಧಿಮವಾಪ್ನುಯಾತ್ ॥ ೨೬ ॥
ರತ್ಯರ್ಥಂ ಯದಿ ಚ ಸ್ನಾಯಾದಪ್ಸರೋಭಿರ್ನರೋ ದಿವಿ ।
ತದಾ ರತಿಮವಾಪ್ನೋತಿ ಸ್ವರ್ಗಲೋಕೇಽಮರೀಜನೈಃ ॥ ೨೭ ॥

---

ಮಾಡಿ ಆ ಬಯಕೆಯನ್ನು ಬೇಡಬೇಕು. ಸೂರ್ಯಾಗ್ನ್ಯುಪಾಸನೆಯಿಲ್ಲದೆಯೂ, ಇತರ ದೇವತಾರಾಧನೆಯನ್ನು ಮಾಡದೆಯೂ, ಶುಭವನ್ನು ಪಡೆಯಲಿಚ್ಛಿಸುವವನು ಸೇತುವಿನಲ್ಲಿ ಭಕ್ತಿಯಿಂದ ಮುಳುಗಬೇಕು.

೨೧. ತಿಲ, ಭೂಮಿ, ಸುವರ್ಣ, ಧಾನ್ಯ, ತಂಡುಲಾದಿಗಳನ್ನು ದಾನ ಮಾಡದೇ ಸ್ವರ್ಗವನ್ನು ಪಡೆಯಲಪೇಕ್ಷಿಸುವವನು ಸೇತುಸ್ನಾನ ಮಾಡಬೇಕು.

೨೨. ಕಷ್ಟಕರವಾದ ಉಪವಾಸಾದಿ ವ್ರತಾದಿಗಳಿಂದ ಮೈಬಳಲಿಕೆಯಿಲ್ಲದೆ ಸ್ವರ್ಗವನ್ನಪೇಕ್ಷಿಸುವವನು ಮುಕ್ತಿದಾಯಕವಾದ ಸೇತುವಿನಲ್ಲಿ ಸ್ನಾನಮಾಡಬೇಕು.

೨೩–೨೪. ಸೇತುಸ್ನಾನವು ಮೋಕ್ಷಪ್ರದವೂ, ಮನಶ್ಶುದ್ಧಿಕರವೂ, ಜಪ, ಹೋಮ, ದಾನ, ಯಜ್ಞಗಳಿಗಿಂತಲೂ ವಿಶೇಷವೂ ಆದುದೆಂದೂ ಪುರಾಣಗಳು ಸಾರುತ್ತವೆ.

೨೫. ಎಲೈ ದ್ವಿಜಶ್ರೇಷ್ಠರೇ! ಪಾಪಾಪನೋದಕವಾದ ಸೇತುವಿನಲ್ಲಿ ಅಕಾಮನೆಯಿಂದ ಮಾಡಿದ ಸ್ನಾನವು ಸತ್ಯವಾಗಿಯೂ, ಪುನರಾವೃತ್ತಿರಹಿತವಾದ ಮೋಕ್ಷವನ್ನೇ ಕೊಡುತ್ತದೆ.

೨೬–೨೮. ಸೇತುಸ್ನಾನವು ಐಶ್ವರ್ಯಕಾಮನಿಗೆ ಸಮೃದ್ಧವಾದ ಐಶ್ವರ್ಯ

ಮುಕ್ತ್ಯರ್ಥಂ ಯದಿ ಚ ಸ್ನಾಯಾತ್ಸೇತೌ ಮುಕ್ತಿಪ್ರದಾಯಿನಿ ।
ತದಾ ಮುಕ್ತಿಮವಾಪ್ನೋತಿ ಪುನರಾವೃತ್ತಿವರ್ಜಿತಾಂ ॥ ೭೮ ॥
ಸೇತುಸ್ನಾನೇನ ಧರ್ಮಃ ಸ್ಯಾತ್ಸೇತುಸ್ನಾನಾದಘಕ್ಷಯಃ ।
ಸೇತುಸ್ನಾನಂ ದ್ವಿಜಶ್ರೇಷ್ಠಾಃ ಸರ್ವಕಾಮಫಲಪ್ರದಂ ॥ ೭೯ ॥
ಸರ್ವವ್ರತಾಧಿಕಂ ಪುಣ್ಯಂ ಸರ್ವಯಜ್ಞೋತ್ತರಂ ಸ್ಮೃತಂ ।
ಸರ್ವಯೋಗಾಧಿಕಂ ಪ್ರೋಕ್ತಂ ಸರ್ವತೀರ್ಥಾಧಿಕಂ ಸ್ಮೃತಂ ॥ ೮೦ ॥
ಇಂದ್ರಾದಿಲೋಕಭೋಗೇಷು ರಾಗೋ ಯೇಷಾಂ ಪ್ರವರ್ತತೇ ।
ಸ್ನಾತವ್ಯಂ ತೈರ್ದ್ವಿಜಶ್ರೇಷ್ಠಾಃ ಸೇತೌ ರಾಮಕೃತೇ ಸಕೃತ್ ॥ ೮೧ ॥
ಬ್ರಹ್ಮಲೋಕೇ ಚ ವೈಕುಂಠೇ ಕೈಲಾಸೇಽಪಿ ಶಿವಾಲಯೇ ।
ರಂತುಮಿಚ್ಛಾ ಭವೇದ್ಯೇಷಾಂ ತೇ ಸೇತೌ ಸ್ನಾಂತು ಸಾದರಂ ॥ ೮೨ ॥
ಆಯುರಾರೋಗ್ಯಸಂಪತ್ತಿಮತಿರೂಪಗುಣಾಢ್ಯತಾಂ ।
ಚತುರ್ಣಾಮಪಿ ವೇದಾನಾಂ ಸಾಂಗಾನಾಂ ಪಾರಗಾಮಿನಾಂ ॥ ೮೩ ॥
ಸರ್ವಶಾಸ್ತ್ರಾರ್ಥಗಂತೃತ್ವಂ ಸರ್ವಮಂತ್ರೇಷ್ವಭಿಜ್ಞತಾಂ ।
ಸಮುದ್ದಿಶ್ಯ ತು ಯಃ ಸ್ನಾಯಾತ್ಸೇತೌ ಸರ್ವಾರ್ಥಸಿದ್ಧಿದೇ ।
ತತ್ತತ್ಸಿದ್ಧಿಮವಾಪ್ನೋತಿ ಸತ್ಯಂ ಸ್ಯಾನ್ನಾತ್ರ ಸಂಶಯಃ ॥ ೮೪ ॥

---

ವನ್ನೂ, ಚಿತ್ತಶುದ್ಧಿಯನ್ನು ಬಯಸುವವನಿಗೆ ಚಿತ್ತಶುದ್ಧಿಯನ್ನೂ, ಅಪ್ಸರಸ್ಸಂಗವನ್ನಪೇಕ್ಷಿಸುವವನಿಗೆ ಅದನ್ನೂ, ಮೋಕ್ಷಾಪೇಕ್ಷಿಗೆ ಜನ್ಮರಹಿತವಾದ ಮೋಕ್ಷವನ್ನೂ ಕೊಡುತ್ತದೆ.

೭೯. ಸೇತುಸ್ನಾನದಿಂದ ಧರ್ಮವೂ, ಪಾಪಕ್ಷಯವೂ, ಸಮಸ್ತ ಇಷ್ಟಾರ್ಥ ಸಿದ್ಧಿಯೂ ದೊರಕುವುದು.

೮೦. ಸೇತುಸ್ನಾನವು ಸಮಸ್ತ ವ್ರತ, ಯಜ್ಞ, ಯೋಗಗಳಿಗಿಂತಲೂ ಅಧಿಕವಾದುದೆಂದು ಉಕ್ತವಾಗಿದೆ.

೮೧. ಇಂದ್ರಾದಿಲೋಕಗಳ ಭೋಗಗಳಲ್ಲಿ ಅನುರಕ್ತರಾದವರು ಅವಶ್ಯವಾಗಿ ಸೇತುವಿನಲ್ಲಿ ಸ್ನಾನಮಾಡತಕ್ಕುದು.

೮೨. ಬ್ರಹ್ಮಲೋಕ, ವೈಕುಂಠ, ಕೈಲಾಸಲೋಕಗಳಲ್ಲಿ ನಲಿಯಲಿಚ್ಛಿಸುವವರೂ ಅಂತೆಯೇ ಸೇತುಸ್ನಾನ ಮಾಡಬೇಕು.

೮೩–೮೪. ಆಯುರಾರೋಗ್ಯಗಳನ್ನೂ, ಲೋಕೋತ್ತರವಾದ ರೂಪವನ್ನೂ, ಸಾಂಗಗಳಾದ ಚತುರ್ವೇದಗಳಲ್ಲಿಯೂ, ಸಕಲಶಾಸ್ತ್ರಗಳಲ್ಲಿಯೂ, ಸರ್ವಮಂತ್ರಗಳಲ್ಲಿಯೂ, ಪಾರಂಗತತ್ವವನ್ನೂ ಬಯಸಿ ಸರ್ವಫಲಪ್ರದವಾದ ಸೇತುವಿನಲ್ಲಿ ಸ್ನಾನಮಾಡಿದಲ್ಲಿ ಸತ್ಯವಾಗಿಯೂ ಅವೆಲ್ಲವೂ ಸಿದ್ಧಿಸುವುವು.

ದಾರಿದ್ರ್ಯಾನ್ನರಕಾದ್ಭೀ ಚ ಮನುಜಾ ಭುವಿ ಬಿಭ್ಯತಿ ।
ಸ್ನಾನಂ ಕುರ್ವಂತು ತೇ ಸರ್ವೇ ರಾಮಸೇತೌ ವಿಮುಕ್ತಿದೇ ॥ ೮೫ ॥
ಶ್ರದ್ಧಯಾ ಸಹಿತೋ ಮರ್ತ್ಯಃ ಶ್ರದ್ಧಯಾ ರಹಿತೋಽಪಿ ವಾ ।
ಇಹ ಲೋಕೇ ಪರತ್ರಾಽಪಿ ಸೇತುಸ್ನಾಯೀ ನ ದುಃಖಭಾಕ್ ॥ ೮೬ ॥
ಸೇತುಸ್ನಾನೇನ ಸರ್ವೇಷಾಂ ನಶ್ಯತೇ ಪಾಪಸಂಚಯಃ ।
ವರ್ಧತೇ ಧರ್ಮರಾಶಿಶ್ಚ ಶುಕ್ಲಪಕ್ಷೇ ಯಥಾ ಶಶೀ ॥ ೮೭ ॥
ಯಥಾ ರತ್ನಾನಿ ವರ್ಧಂತೇ ಸಮುದ್ರೇ ವಿವಿಧಾನ್ಯಪಿ ।
ತಥಾ ಪುಣ್ಯಾನಿ ವರ್ಧಂತೇ ಸೇತುಸ್ನಾನೇನ ವೈ ದ್ವಿಜಾಃ ॥ ೮೮ ॥
ಕಾಮಧೇನುರ್ಯಥಾ ಲೋಕೇ ಸರ್ವಾನ್ ಕಾಮಾನ್ ಪ್ರಯಚ್ಛತಿ ।
ಚಿಂತಾಮಣಿರ್ಯಥಾ ದದ್ಯಾತ್ಪುರುಷಾಣಾಂ ಮನೋರಥಾನ್ ॥ ೮೯ ॥
ಯಥಾಽಮರತರುರ್ದದ್ಯಾತ್ಪುರುಷಾಣಾಮಭೀಪ್ಸಿತಂ ।
ಸೇತುಸ್ನಾನಂ ತಥಾ ನೃಣಾಂ ಸರ್ವಾಽಭೀಷ್ಟಾನ್ ಪ್ರದಾಸ್ಯತಿ ॥ ೯೦ ॥
ಅಶಕ್ತಃ ಸೇತುಯಾತ್ರಾಯಾಂ ದಾರಿದ್ರ್ಯೇಣ ಚ ಮಾನವಃ ।
ಯಾಚಿತ್ವಾ ಸ ಧನಂ ಶಿಷ್ಟಾತ್ಸೇತೌ ಸ್ನಾನಂ ಸಮಾಚರೇತ್ ॥ ೯೧ ॥
ಸೇತುಸ್ನಾನಸಮಂ ಪುಣ್ಯಂ ತತ್ರ ದಾತಾ ಸಮಶ್ನುತೇ ।
ತಥಾ ಪ್ರತಿಗೃಹೀತಾಽಪಿ ಪ್ರಾಪ್ನೋತ್ಯವಿಕಲಂ ಫಲಂ ॥ ೯೨ ॥

---

೮೫. ಬಡತನಕ್ಕೂ, ನರಕಕ್ಕೂ ಹೆದರುವವರು ಮುಕ್ತಿದಾಯಕವಾದ ರಾಮಸೇತುವಿನಲ್ಲಿ ಸ್ನಾನಮಾಡಲಿ.

೮೬. ಶ್ರದ್ಧೆಯಿಂದಾಗಲಿ, ಅಶ್ರದ್ಧೆಯಿಂದಾಗಲಿ, ಸೇತುವಿನಲ್ಲಿ ಮಿಂದವನು ಇಹಪರಗಳೆರಡು ಕಡೆಗಳಲ್ಲಿಯೂ ದುಃಖಭಾಗಿಯಾಗಲಾರನು.

೮೭–೯೦. ಸೇತುಸ್ನಾನ ಮಾಡಿದವರೆಲ್ಲರಿಗೂ ಪಾಪರಾಶಿಯು ತೂರಿ ಹೋಗುವುದಲ್ಲದೆ ಶುಕ್ಲಪಕ್ಷದಲ್ಲಿನ ಚಂದ್ರನಂತೆಯೂ, ಸಮುದ್ರದಲ್ಲಿನ ವಿವಿಧ ರತ್ನಗಳಂತೆಯೂ, ಧರ್ಮರಾಶಿಯು ವೃದ್ಧಿಯಾಗುತ್ತದೆ. ಸೇತುಸ್ನಾನವು ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿಗಳಂತೆಯೆ ಸ್ನಾತಕರಿಗೆ ಸಕಲ ಇಷ್ಟಾರ್ಥಗಳನ್ನೂ ಕೊಡುತ್ತದೆ.

೯೧. ಸೇತುಯಾತ್ರೆಯನ್ನು ಮಾಡಲಶಕ್ತನಾದವನು ಶಿಷ್ಟನಿಂದ ಧನವನ್ನು ಬೇಡಿಯಾದರೂ ಸೇತುಸ್ನಾನವನ್ನು ಮಾಡತಕ್ಕದ್ದು.

೯೨. ಸೇತುಸ್ನಾನಕ್ಕೆ ಸಮಾನವಾದ ಪುಣ್ಯವನ್ನೇ ಅಲ್ಲಿ ದಾನಮಾಡುವವನೂ, ದಾನಪಡೆಯುವವನೂ ಕೂಡ ಸ್ವಲ್ಪವೂ ಲೋಪವಿಲ್ಲದೆ ಪಡೆಯುತ್ತಾರೆ.

ಸೇತುಯಾತ್ರಾಂ ಸಮುದ್ದಿಶ್ಯ ಗೃಹ್ಣೀಯಾದ್ಬ್ರಾಹ್ಮಣಾದ್ಧನಂ ।
ಕ್ಷತ್ರಿಯಾದಪಿ ಗೃಹ್ಣೀಯಾನ್ನ ದದ್ಯುರ್ಬ್ರಾಹ್ಮಣಾ ಯದಿ ॥ ೯೩ ॥
ವೈಶ್ಯಾದ್ವಾ ಪ್ರತಿಗೃಹ್ಣೀಯಾನ್ನ ಪ್ರಯಚ್ಛಂತಿ ಚೇನ್ನೃಪಾಃ ।
ಶೂದ್ರಾನ್ನ ಪ್ರತಿಗೃಹ್ಣೀಯಾತ್ಕಥಂಚಿದಪಿ ಮಾನವಃ ॥ ೯೪ ॥
ಯಃ ಸೇತುಂ ಗಚ್ಛತಃ ಪುಂಸಃ ಧನಂ ವಾ ಧಾನ್ಯಮೇವ ವಾ ॥ ೯೫ ॥
ದತ್ವಾ ವಸ್ತ್ರಾದಿಕಂ ವಾಽಪಿ ಪ್ರವರ್ತಯತಿ ಮಾನವಃ ।
ಸೋಽಶ್ವಮೇಧಾದಿಯಜ್ಞಾನಾಂ ಫಲಮಾಪ್ನೋತ್ಯನುತ್ತಮಂ ॥ ೯೬ ॥
ಚತುರ್ಣಾಮಪಿ ವೇದಾನಾಂ ಪಾರಾಯಣಫಲಂ ಲಭೇತ್ ।
ತುಲಾಪುರುಷಮುಖ್ಯಾನಾಂ ದಾನಾನಾಂ ಫಲಮಶ್ನುತೇ ॥ ೯೭ ॥
ಬ್ರಹ್ಮಹತ್ಯಾದಿಪಾಪಾನಾಂ ನಾಶಃ ಸ್ಯಾನ್ನಾಽತ್ರ ಸಂಶಯಃ ।
ಬಹುನಾ ಕಿಂ ಪ್ರಲಾಪೇನ ಸರ್ವಾನ್ ಕಾಮಾನ್ ಸಮಶ್ನುತೇ ॥ ೯೮ ॥
ಏವಂ ಪ್ರತಿಗೃಹೀತಾಽಪಿ ತತ್ತುಲ್ಯಫಲಮಶ್ನುತೇ ।
ಯಾಚತಃ ಸೇತುಯಾತ್ರಾರ್ಥಂ ನ ಪ್ರತಿಗ್ರಹಕಲ್ಮಷಂ ॥ ೯೯ ॥
ಸೇತುಂ ಗಚ್ಛ ಧನಂ ತೇಽಹಂ ದಾಸ್ಯಾಮೀತಿ ಪ್ರಲೋಭ್ಯ ಯಃ ।
ಪಶ್ಚಾನ್ನಾಸ್ತೀತಿ ಚ ಬ್ರೂಯಾತ್ತಮಾಹುರ್ಬ್ರಹ್ಮಘಾತಕಂ ॥ ೧೦೦ ॥
ಲೋಭೇನ ಸೇತುಯಾತ್ರಾರ್ಥಂ ಸಂಪನ್ನೋಽಪಿ ದರಿದ್ರವತ್ ।
ಮಾನವೋ ಯದಿ ಯಾಚೇತ ತಮಾಹುಃ ಸ್ತೇಯಿನಂ ಬುಧಾಃ ॥ ೧೦೧ ॥

---

೯೩–೯೪. ಸೇತುಯಾತ್ರೆಯ ಸಲುವಾಗಿ ಬ್ರಾಹ್ಮಣರಿಂದಲೂ, ಅವರು ಕೊಡದಿದ್ದಲ್ಲಿ ಕ್ಷತ್ರಿಯರಿಂದಲೂ, ಅವರೂ ಕೊಡದಿದ್ದಲ್ಲಿ ವೈಶ್ಯರಿಂದಲಾದರೂ ಹಣವನ್ನು ಪಡೆಯಬಹುದು. ಶೂದ್ರನಿಂದ ಮಾತ್ರ ಹೇಗಾದರೂ ಹಣವನ್ನು ಬೇಡಿ ಪಡೆಯಬಾರದು.

೯೫–೯೭. ಸೇತುಯಾತ್ರೆ ಮಾಡುವವನಿಗೆ ಧನಧಾನ್ಯವಸ್ತ್ರಾದಿಗಳನ್ನು ಕೊಡುವವನು ಅಶ್ವಮೇಧಾದಿಯಾಗಗಳ, ಚತುರ್ವೇದಪಾರಾಯಣದ, ತುಲಾಪುರುಷಾದಿ ದಾನಗಳ ಫಲವನ್ನು ಪಡೆಯುತ್ತಾನೆ.

೯೮–೧೦೦. ಹೆಚ್ಚೇನು; ಸೇತುಸ್ನಾನದಿಂದ ಬ್ರಹ್ಮಹತ್ಯಾದಿ ಪಾಪಗಳು ನಶಿಸುವುವಲ್ಲದೆ ಎಲ್ಲ ಕೋರಿಕೆಗಳೂ ಸಿದ್ಧಿಸುವುವು. ಅಂತೆಯೇ ಪ್ರತಿಗ್ರಹಿಯೂ ಈ ಎಲ್ಲ ಫಲಗಳನ್ನೂ ಪಡೆಯುವನು. ಪ್ರತಿಗ್ರಹದ ಪಾಪವು ಆತನಿಗೆ ಬರುವುದಿಲ್ಲವು. "ಹಣ ಕೊಡುವೆನು; ಸೇತುವಿಗೆ ಹೋಗು" ಎಂದು ಹೇಳಿ, ಬಳಿಕ ಕೊಡದೆ ಮೋಸಮಾಡುವವನು ಬ್ರಹ್ಮಘ್ನನೆಂದೆಣಿಸಲ್ಪಡುವನು.

೧೦೧. ಹಣವಂತನಾದರೂ, ಬಡವನಹಾಗೆ ಸೇತುಯಾತ್ರೆಗಾಗಿ ಆಸೆಯಿಂದ ಬೇಡಿದಲ್ಲಿ ಚೋರನೆನಿಸಿಕೊಳ್ಳುವನು.

ಗಮಿಷ್ಯೇ ಸೇತುಮಿತಿ ವೈ ಯೋ ಗೃಹೀತ್ವಾ ನರೋ ಧನಂ ।
ನ ಯಾತಿ ಸೇತುಂ ಲೋಭೇನ ತಮಾಹುರ್ಬ್ರಹ್ಮಘಾತಕಂ ॥ ೧೦೨ ॥
ಯೇನ ಕೇನಾಽಪ್ಯುಪಾಯೇನ ಸೇತುಂ ಗಚ್ಛೇನ್ನರೋ ಮುದಾ ।
ಅಶಕ್ತೋ ದಕ್ಷಿಣಾಂ ದತ್ವಾ ಗಮಯೇದ್ವಾ ದ್ವಿಜೋತ್ತಮಂ ॥ ೧೦೩ ॥
ಯಾಚಿತ್ವಾ ಯಜ್ಞಕರಣೇ ಯಥಾ ದೋಷೋ ನ ವಿದ್ಯತೇ ।
ಯಾಚಿತ್ವಾ ಸೇತುಯಾತ್ರಾಯಾಂ ತಥಾ ದೋಷೋ ನ ವಿದ್ಯತೇ ॥೧೦೪॥
ಯಾಚಿತ್ವಾಪ್ಯನ್ಯತೋ ದ್ರವ್ಯಂ ಸೇತುಸ್ನಾನೇ ಪ್ರವರ್ತಯೇತ್ ।
ಸೋಽಪಿ ತತ್ಫಲಮಾಪ್ನೋತಿ ಸೇತುಸ್ನಾಯೀ ನರೋ ಯಥಾ ॥ ೧೦೫ ॥
ಜ್ಞಾನೇನ ಮೋಕ್ಷಮಭಿಯಾಂತಿ ಕೃತೇ ಯುಗೇ ತು
ತ್ರೇತಾಯುಗೇ ಯಜನಮೇವ ವಿಮುಕ್ತಿದಾಯಿ ।
ಶ್ರೇಷ್ಠಂ ತಥಾಽನ್ಯಯುಗಯೋರಪಿ ದಾನಮಾಹುಃ
ಸರ್ವತ್ರ ಸೇತ್ವಭಿಷವೋ ಹಿ ವರೋ ನರಾಣಾಂ ॥ ೧೦೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಸೇತುಗಮನಫಲಾದಿವರ್ಣನಂ" ನಾಮ ಪ್ರಥಮೋಽಧ್ಯಾಯಃ

---

೧೦೨. ಸೇತುಯಾತ್ರೆಗೆಂದು ಹಣವನ್ನು ಗಳಿಸಿ ಲೋಭದಿಂದ ಯಾತ್ರೆ ಮಾಡದಿದ್ದರೂ ಬ್ರಹ್ಮಘ್ನನೆನಿಸುವನು.

೧೦೩. ಮಾನವನೆಂತಾದರೂ ಮಾಡಿ ಸಂತೋಷದಿಂದ ಸೇತುಯಾತ್ರೆ ಮಾಡಬೇಕು. ಹಾಗೆ ಶಕ್ತನಾಗದಿದ್ದಲ್ಲಿ ಬ್ರಾಹ್ಮಣನಿಗೆ ದಕ್ಷಿಣೆಯನ್ನಿತ್ತಾದರೂ ಸೇತುವಿಗೆ ಕಳುಹಬೇಕು.

೧೦೪. ಬೇಡಿ ಯಾಗಮಾಡುವವನಂತೆ, ಬೇಡಿ ಸೇತುಯಾತ್ರೆಮಾಡುವವನಿಗೂ ದೋಷವು ಬರಲಾರದು.

೧೦೫. ಕೊಡಲಾರದವನು ಮತ್ತೊಬ್ಬನಿಂದ ಬೇಡಿಯಾದರೂ, ಸೇತುಯಾತ್ರಿಕನನ್ನು ಪ್ರೋತ್ಸಾಹಿಸಬೇಕು. ಆಂತಹವನೂ ಕೂಡ ಸೇತುಸ್ನಾಯಿಯಂತೆ ಫಲಭಾಗಿಯಾಗುವನು.

೧೦೬. ಕೃತಯುಗದಲ್ಲಿ ಜ್ಞಾನವೂ, ತ್ರೇತಾಯುಗದಲ್ಲಿ ಯಾಗವೂ, ದ್ವಾಪರ ಕಲಿಯುಗಗಳಲ್ಲಿ ದಾನವೂ, ಪ್ರಶಸ್ತಗಳೇ ಅಲ್ಲದೆ ಮೋಕ್ಷಪ್ರದಗಳೂ ಆಗಿರುತ್ತವೆ. ಸೇತುಸ್ನಾನವು ಮಾತ್ರ ಎಲ್ಲ ಯುಗಗಳಲ್ಲಿಯೂ, ಮಾನವರಿಗೆ ಶ್ರೇಷ್ಠತಮವಾದುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಸೇತುಗಮನಫಲಾದಿವರ್ಣನ"ವೆಂಬ ಮೊದಲನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿತೀಯೋಽಧ್ಯಾಯಃ

ವಿಭೀಷಣ ಸಮಾಗಮಪರಿಯಂತ ರಾಮಾಯಣವೃತ್ತಾಂತವರ್ಣನಂ—ಸೇತುಬಂಧಃ—ಸೇತುಸ್ಥಿತ ಚಕ್ರತೀರ್ಥಾದಿ ಚತುರ್ವಿಂಶತಿ ತೀರ್ಥಮಾಹಾತ್ಮ್ಯವರ್ಣನಂ

ಋಷಯ ಊಚುಃ:—

ಕಥಂ ಸೂತ ಮಹಾಭಾಗ ರಾಮೇಣಾಕ್ಲಿಷ್ಟಕರ್ಮಣಾ ।
ಸೇತುರ್ಬದ್ಧೋ ನದೀನಾಥೇ ಹ್ಯಗಾಧೇ ವರುಣಾಲಯೇ ॥ ೧ ॥
ಸೇತೌ ಚ ಕತಿ ತೀರ್ಥಾನಿ ಗಂಧಮಾದನಪರ್ವತೇ ।
ಏತನ್ನಃ ಶ್ರದ್ದಧಾನಾನಾಂ ಬ್ರೂಹಿ ಪೌರಾಣಿಕೋತ್ತಮ ॥ ೨ ॥

ಶ್ರೀ ಸೂತ ಉವಾಚ:—

ರಾಮೇಣ ಹಿ ಯಥಾ ಸೇತುರ್ನಿಬದ್ಧೋ ವರುಣಾಲಯೇ ।
ತದಹಂ ಸಂಪ್ರವಕ್ಷ್ಯಾಮಿ ಯುಷ್ಮಾಕಂ ಮುನಿಪುಂಗವಾಃ ॥ ೩ ॥
ಆಜ್ಞಯಾ ಹಿ ಪಿತೂ ರಾಮೋ ನ್ಯವಸದ್ದಂಡಕಾವನೇ ।
ಸೀತಾಲಕ್ಷ್ಮಣಸಂಯುಕ್ತಃ ಪಂಚವಟ್ಯಾಂ ಸಮಾಹಿತಃ ॥ ೪ ॥

---

### ಕನ್ನಡದ ಅನುವಾದ

ವಿಭೀಷಣ ಸಮಾಗಮಪರಿಯಂತ ರಾಮಾಯಣವೃತ್ತಾಂತವರ್ಣನ—ಸೇತುಬಂಧ—ಸೇತುಸ್ಥಿತ ಚಕ್ರತೀರ್ಥಾದಿ ಚತುರ್ವಿಂಶತಿ ತೀರ್ಥಮಾಹಾತ್ಮ್ಯವರ್ಣನ

೧–೨. ಋಷಿಗಳು ಪ್ರಶ್ನಿಸುತ್ತಾರೆ:—“ಪೌರಾಣಿಕೋತ್ತಮನಾದ ಎಲೈ ಸೂತಮುನಿಯೇ! ಪುಣ್ಯಕರ್ಮಿಯಾದ ಶ್ರೀರಾಮನು ಅಗಾಧವೂ, ನದನದೀ ಪತಿಯೂ ಆದ ಸಮುದ್ರದ ಮೇಲೆ ಸೇತುವನ್ನು ಕಟ್ಟಿದುದೆಂತು? ಸೇತುವಿನಲ್ಲಿಯೂ, ಗಂಧಮಾದನದಲ್ಲಿಯೂ, ಎಷ್ಟು ತೀರ್ಥಗಳು ನೆಲಸಿರುತ್ತವೆ? ಸಾವಧಾನಚಿತ್ತರಾಗಿ ಕೇಳಲು ಕುತೂಹಲಿಗಳಾಗಿರುವ ನಮಗೆ ಈ ವಿಚಾರವನ್ನರುಹು.”

೩. ಸೂತಪುರಾಣಿಕನು ಹೇಳುತ್ತಾನೆ:—“ಎಲೈ ಮುನಿವರ್ಯರೇ! ವರುಣಾಲಯವೆನಿಸಿದ ಸಮುದ್ರದ ಮೇಲೆ ಶ್ರೀರಾಮನು ಸೇತುವನ್ನು ಹೇಗೆ ನಿರ್ಮಿಸಿದನೆಂಬುದನ್ನು ಹೇಳುವೆನು; ಕೇಳಿರಿ.

೪. ತಂದೆಯಾದ ದಶರಥ ಮಹಾರಾಜನ ಅಪ್ಪಣೆಯಂತೆ ಶ್ರೀರಾಮನು ಸೀತಾಲಕ್ಷ್ಮಣ ಸಮೇತನಾಗಿ ದಂಡಕಾರಣ್ಯದಲ್ಲಿಯ ಪಂಚವಟಿಯಲ್ಲಿ ನೆಮ್ಮದಿಯಾಗಿ ನೆಲಸಿದ್ದನು.

ತಸ್ಮಿನ್ನಿವಸತಸ್ತಸ್ಯ ರಾಘವಸ್ಯ ಮಹಾತ್ಮನಃ ।
ರಾವಣೇನ ಹೃತಾ ಭಾರ್ಯಾ ಮಾರೀಚಛದ್ಮನಾ ದ್ವಿಜಾಃ ॥ ೫ ॥
ಮಾರ್ಗಮಾಣೋ ವನೇ ಭಾರ್ಯಾಂ ರಾಮೋ ದಶರಥಾತ್ಮಜಃ ।
ಪಂಪಾತೀರೇ ಜಗಾಮಾಽಸೌ ಶೋಕಮೋಹಸಮನ್ವಿತಃ ॥ ೬ ॥
ದೃಷ್ಟವಾನ್ವಾನರಂ ತತ್ರ ಕಂಚಿದ್ದಶರಥಾತ್ಮಜಃ ।
ವಾನರೇಣಾಽಥ ಪೃಷ್ಟೋಽಯಂ ಕೋ ಭವಾನಿತಿ ರಾಘವಃ ॥ ೭ ॥
ಆದಿತಃ ಸ್ವಸ್ಯ ವೃತ್ತಾಂತಂ ತಸ್ಮೈಪ್ರೋವಾಚ ತತ್ವತಃ ।
ಅಥ ರಾಘವಸಂಪೃಷ್ಟೋ ವಾನರಃ ಕೋ ಭವಾನಿತಿ ॥ ೮ ॥
ಸೋಽಪಿ ವಿಜ್ಞಾಪಯಾಮಾಸ ರಾಘವಾಯ ಮಹಾತ್ಮನೇ ।
ಅಹಂ ಸುಗ್ರೀವಸಚಿವೋ ಹನೂಮಾನ್ನಾಮ ವಾನರಃ ॥ ೯ ॥
ತೇನ ಚ ಪ್ರೇರಿತೋಽಭ್ಯಾಗಾಂ ಯುವಾಭ್ಯಾಂ ಸಖ್ಯಮಿಚ್ಛತಾ ।
ಆಗಚ್ಛತಂ ತದ್ಭದ್ರಂ ವಾಂ ಸುಗ್ರಿವಾಂತಿಕಮಾಶು ವೈ ॥ ೧೦ ॥
ತಥಾಽಸ್ತ್ವಿತಿ ಸ ರಾಮೋಽಪಿ ತೇನ ಸಾಕಂ ಮುನೀಶ್ವರಾಃ ।
ಸುಗ್ರೀವಾಂತಿಕಮಾಗತ್ಯ ಸಖ್ಯಂ ಚಕ್ರೇಽಗ್ನಿಸಾಕ್ಷಿಕಂ ॥ ೧೧ ॥
ಪ್ರತಿಜಜ್ಞೇಽಥ ರಾಮೋಽಪಿ ತಸ್ಮೈ ವಾಲಿವಧಂ ಪ್ರತಿ ।
ಸುಗ್ರೀವಶ್ಚಾಽಪಿ ವೈದೇಹ್ಯಾಃ ಪುನರಾನಯನಂ ದ್ವಿಜಾಃ ॥ ೧೨ ॥

---

೫. ಮಹಾತ್ಮನಾದ ಆ ರಾಘವನು ಅಲ್ಲಿ ನೆಲಸಿರಲು, ಆತನ ಭಾರ್ಯೆಯಾದ ಜಾನಕಿಯನ್ನು ಮಾರೀಚನ ಕಪಟೋಪಾಯದಿಂದ ರಾವಣನು ಅಪಹರಿಸಿದನು.

೬. ದಶರಥಾತ್ಮಜನಾದ ಶ್ರೀರಾಮನು ಶೋಕಮೋಹಗಳಿಂದ ಪೀಡಿತನಾಗಿ ಕಾಡು ಕಾಡುಗಳಲ್ಲಿಯೂ ಆಕೆಯನ್ನು ಹುಡುಕುತ್ತ ಪಂಪಾಸರೋವರದ ಬಳಿಗೆ ಬಂದನು.

೭. ಅಲ್ಲಿ ಒಬ್ಬ ವಾನರನನ್ನು ಕಂಡು ಅವನಿಂದ ತಾನಾರೆಂದು ಪ್ರಶ್ನಿಸಲ್ಪಟ್ಟು; ಮೊದಲಿನಿಂದಲೂ ತನ್ನ ವಿಚಾರವನ್ನೆಲ್ಲ ಆತನಿಗೆ ತಿಳಿಸಿದನು.

೮–೧೦. ತರುವಾಯ ರಾಘವನು ಆ ವಾನರನನ್ನು ನೀನಾರೆಂದು ಪ್ರಶ್ನಿಸಿದನು. ಆತನು "ನಾನು ಸುಗ್ರೀವನ ಮಂತ್ರಿ; ನನ್ನನ್ನು ಹನುಮಂತನೆನ್ನುವರು. ಸುಗ್ರೀವನು ನಿಮ್ಮ ಸ್ನೇಹವನ್ನಪೇಕ್ಷಿಸಿ ನನ್ನನ್ನು ನಿಮ್ಮ ಬಳಿಗೆ ಕಳುಹಿಸಿದನು. ನಿಮಗೆ ಶುಭವಾಗಲಿ. ತಾವು ಆತನ ಬಳಿಗೆ ಬೇಗನೆ ದಯಮಾಡಿರಿ" ಎಂದು ಶ್ರೀರಾಮನಿಗೆ ಬಿನ್ನವಿಸಿದನು.

೧೧. ಶ್ರೀರಾಮನದಕ್ಕೆ ಒಪ್ಪಿ ಆತನೊಡನೆ ಸುಗ್ರೀವನ ಬಳಿಗೆ ಬಂದು ಅಗ್ನಿಸಾಕ್ಷಿಕವಾಗಿ ಅವನೊಡನೆ ಸ್ನೇಹವನ್ನು ಬೆಳೆಸಿದನು.

೧೨–೧೩. ವಾಲಿಯನ್ನು ವಧಿಸುವೆನೆಂದು ಮನುಜೇಶ್ವರನಾದ

ಇತ್ಯೇವಂ ಸಮಯಂ ಕೃತ್ವಾ ವಿಶ್ವಾಸ್ಯಚ ಪರಸ್ಪರಂ ।
ಮುದಾ ಪರಮಯಾ ಯುಕ್ತೌ ನರೇಶ್ವರಕಪೀಶ್ವರೌ ॥ ೧೩ ॥
ಆಸಾತೇ ಬ್ರಾಹ್ಮಣಶ್ರೇಷ್ಠಾ ಋಷ್ಯಮೂಕಗಿರೌ ತಥಾ ।
ಸುಗ್ರೀವಪ್ರತ್ಯಯಾರ್ಥಂ ಚ ದುಂದುಭೇಃ ಕಾಯಮಾಶು ವೈ ॥ ೧೪ ॥
ಪಾದಾಂಗುಷ್ಠೇನ ಚಿಕ್ಷೇಪ ರಾಘವೋ ಬಹುಯೋಜನಂ ।
ಸಪ್ತತಾಲಾ ವಿನಿರ್ಭಿನ್ನಾ ರಾಘವೇಣ ಮಹಾತ್ಮನಾ ॥ ೧೫ ॥
ತತಃ ಪ್ರೀತಮನಾ ವೀರಃ ಸುಗ್ರೀವೋ ರಾಮಮಬ್ರವೀತ್ ।
ಇಂದ್ರಾದಿದೇವತಾಭ್ಯೋಽಪಿ ನಾಽಸ್ತಿ ರಾಘವ ಮೇ ಭಯಂ ॥ ೧೬ ॥
ಭವಾನ್ಮಿತ್ರಂ ಮಯಾ ಲಬ್ಧೋ ಯಸ್ಮಾದತಿಪರಾಕ್ರಮಃ ।
ಅಹಂ ಲಂಕೇಶ್ವರಂ ಹತ್ವಾ ಭಾರ್ಯಾಮಾನಯಿತಾಽಸ್ಮಿ ತೇ ॥ ೧೭ ॥
ತತಃ ಸುಗ್ರೀವ ಸಹಿತೋ ರಾಮಚಂದ್ರೋ ಮಹಾಬಲಃ ।
ಸ ಲಕ್ಷ್ಮಣೋ ಯಯೌ ತೂರ್ಣಂ ಕಿಷ್ಕಿಂಧಾಂ ವಾಲಿಪಾಲಿತಾಂ॥ ೧೮ ॥
ತತೋ ಜಗರ್ಜ ಸುಗ್ರೀವೋ ವಾಲ್ಯಾಗಮನ ಕಾಂಕ್ಷಯಾ ।
ಅಮೃಷ್ಯಮಾಣೋ ವಾಲೀ ಚ ಗರ್ಜಿತಂ ಸ್ವಾಽನುಜಸ್ಯ ವೈ ॥ ೧೯ ॥

---

ಶ್ರೀರಾಮನೂ, ವೈದೇಹಿಯನ್ನು ಕರೆತರಿಸುವೆನೆಂದು ಕಪೀಶ್ವರನೂ, ಪರಸ್ಪರವಾಗಿ ಪ್ರತಿಜ್ಞೆಗಳನ್ನು ಮಾಡಿಕೊಂಡು, ವಿಶ್ವಾಸದಿಂದಲೂ, ಸಂತೋಷದಿಂದಲೂ ಇರುತ್ತಿದ್ದರು.

೧೪–೧೫. ಶ್ರೀರಾಮನೂ ಸುಗ್ರೀವನೂ ಹೀಗೆ ಸಮಯವನ್ನುಮಾಡಿ ಋಷ್ಯಮೂಕದಲ್ಲಿರುವಾಗ, ಸುಗ್ರೀವನಿಗೆ ನಂಬಿಕೆ ಹುಟ್ಟಿಸಲು ಶ್ರೀರಾಮನು ದುಂದುಭಿ ಎಂಬ ಅಸುರನ ಮಹತ್ತರವಾದ ಕಳೇಬರವನ್ನು ಕಾಲಿನ ಹೆಬ್ಬೆಟ್ಟಿನಿಂದ ಅನೇಕ ಗಾವುದಗಳ ದೂರಕ್ಕೆ ಚಿಮ್ಮಿದನು; ಅಲ್ಲಿಯೇ ಇದ್ದ ಸಪ್ತಸಾಲಗಳನ್ನೂ ಒಂದೇ ಏಟಿಗೆ ಬಾಣದಿಂದ ಕತ್ತರಿಸಿದನು.

೧೬–೧೭. ಬಳಿಕ ಸಂತುಷ್ಟನಾದ ಸುಗ್ರೀವನು: "ಎಲೈ ರಾಘವನೇ! ಮಹಾ ಬಲಶಾಲಿಯಾದ ನೀನು ನನಗೆ ಸ್ನೇಹಿತನಾಗಿ ದೊರೆತುದರಿಂದ ಇಂದ್ರಾದಿದೇವತೆಗಳಿಗಾದರೂ ನಾನು ಹೆದರುವಂತಿಲ್ಲ. ನಾನು ಲಂಕೇಶ್ವರನನ್ನು ಕೊಂದು ನಿನ್ನ ಹೆಂಡತಿಯನ್ನು ಕರೆತರುವೆನು" ಎಂದು ನುಡಿದನು.

೧೮. ಬಳಿಕ ಮಹಾಬಲನಾದ ರಾಮಚಂದ್ರನು ಲಕ್ಷ್ಮಣ ಸುಗ್ರೀವರೊಡಗೂಡಿ ವಾಲಿಪಾಲಿತವಾದ ಕಿಷ್ಕಿಂಧೆಯ ಬಳಿಗೆ ಬಹು ಜಾಗ್ರತೆಯಾಗಿ ಬಂದನು.

೧೯–೨೦. ಆಗ ಸುಗ್ರೀವನು ವಾಲಿಯ ಬರುವಿಕೆಗಾಗಿ ಗರ್ಜಿಸಲು, ವಾಲಿಯೂ ಅದನ್ನು ಕೇಳಿ ಸಹಿಸದೆ ಪಟ್ಟಣದಿಂದ ಹೊರನುಗ್ಗಿಬಂದು ತಮ್ಮನೊಡನೆ ಕಾಳಗಮಾಡಿದನು. ಆಗ ಸುಗ್ರೀವನು ಆತನ ಮುಷ್ಟಿಪ್ರಹಾರದಿಂದ

ಅಂತಃಪುರಾದ್ವಿನಿಷ್ಕ್ರಮ್ಯ ಯುಯುಧೇಽವರಜೇನ ಸಃ ।
ವಾಲಿಮುಷ್ಟಿಪ್ರಹಾರೇಣ ತಾಡಿತೋ ಭೃಶವಿಹ್ವಲಃ ।
ಸುಗ್ರೀವೋ ನಿರ್ಗತಸ್ತೂರ್ಣಂ ಯತ್ರ ರಾಮೋ ಮಹಾಬಲಃ ॥ ೨೦ ॥
ತತೋ ರಾಮೋ ಮಹಾಬಾಹುಃ ಸುಗ್ರೀವಸ್ಯ ಶಿರೋಧರೇ ।
ಲತಾಮಾಬಧ್ಯ ಚಿಹ್ನಂತು ಯುದ್ಧಾಯಾಽಚೋದಯತ್ತದಾ ॥ ೨೧ ॥
ಗರ್ಜಿತೇನ ಸಮಾಹೂಯ ಸುಗ್ರೀವೋ ವಾಲಿನಂ ಪುನಃ ।
ರಾಮಪ್ರೇರಣಯಾ ತೇನ ಬಾಹುಯುದ್ಧಮಥಾಽಕರೋತ್ ॥ ೨೨ ॥
ತತೋ ವಾಲಿನಮಾಜಘ್ನೇ ಶರೇಣೈಕೇನ ರಾಘವಃ ।
ಹತೇ ವಾಲಿನಿ ಸುಗ್ರೀವಃ ಕಿಷ್ಕಿಂಧಾಂ ಪ್ರತ್ಯಪದ್ಯತ ॥ ೨೩ ॥
ತತೋ ವರ್ಷಾಸ್ವತೀತಾಸು ಸುಗ್ರೀವೋ ವಾನರಾಽಧಿಪಃ ।
ಸೀತಾಮಾನಯಿತುಂ ತೂರ್ಣಂ ವಾನರಾಣಾಂ ಮಹಾಚಮೂಂ ।
ಸಮಾದಾಯ ಸಮಾಗಚ್ಛದಂತಿಕಂ ನೃಪಪುತ್ರಯೋಃ ॥ ೨೪ ॥
ಪ್ರಸ್ಥಾಪಯಾಮಾಸ ಕಪೀನ್ ಸೀತಾಽನ್ವೇಷಣ ಕಾಂಕ್ಷಯಾ ॥ ೨೫ ॥
ವಿದಿತಾಯಾಂ ತು ವೈದೇಹ್ಯಾಂ ಲಂಕಾಯಾಂ ವಾಯುಸೂನುನಾ ।
ದತ್ತೇ ಚೂಡಾಮಣೌ ಚಾಽಪಿ ರಾಘವೋ ಹರ್ಷಶೋಕವಾನ್ ॥ ೨೬ ॥
ಸುಗ್ರೀವೇಣಾಽನುಜೇನಾಽಪಿ ವಾಯುಪುತ್ರೇಣ ಧೀಮತಾ ।
ತಥಾಽನ್ಯೈಃ ಕಪಿಭಿಶ್ಚೈವ ಜಾಂಬವನ್ನಲಮುಖ್ಯಕೈಃ ॥ ೨೭ ॥

---

ಬಹಳವಾಗಿ ಕಳವಳಗೊಂಡು ಬಲಶಾಲಿಯಾದ ರಾಮನ ಬಳಿಗೆ ಬೇಗನೆ ಓಡಿ ಬಂದನು.

೨೧–೨೩. ಬಳಿಕ ಮಹಾಭುಜಬಲನಾದ ರಾಮನು ಗುರ್ತಿಗಾಗಿ ಆತನ ಕೊರಳಿಗೊಂದು ಬಳ್ಳಿಯನ್ನು ಸುತ್ತಿ ಯುದ್ಧಕ್ಕೆ ಆತನನ್ನು ಹುರಿದುಂಬಿಸಿ ಕಳುಹಿಸಿದನು. ರಾಮನ ಪ್ರೇರಣೆಯಂತೆ ಮತ್ತೆ ಸುಗ್ರೀವನು ಗರ್ಜನೆಯಿಂದಲೆ ವಾಲಿಯನ್ನು ಬರಮಾಡಿ ಆತನೊಡನೆ ಬಾಹುಯುದ್ಧವನ್ನು ಮಾಡತೊಡಗಿದನು. ಆಗ ಶ್ರೀರಾಮನು ವಾಲಿಯನ್ನೊಂದೇಬಾಣದಿಂದ ಕೊಂದನು. ವಾಲಿಯ ವಧೆಯಾದಮೇಲೆ ಸುಗ್ರೀವನು ಕಿಷ್ಕಿಂಧೆಯನ್ನು ಪ್ರವೇಶಿಸಿದನು.

೨೪. ಬಳಿಕ ಮಳೆಗಾಲವು ಕಳೆದಮೇಲೆ ವಾನರೇಶ್ವರನಾದ ಸುಗ್ರೀವನು ರಾಮಪತ್ನಿಯಾದ ಸೀತೆಯನ್ನು ಕರೆತರಲು ಕಪಿಸೇನೆಯೊಡನೆ ರಾಮಲಕ್ಷ್ಮಣರ ಬಳಿಗೆ ಬಂದನು.

೨೫–೨೯. ಸೀತಾನ್ವೇಷಣಕ್ಕಾಗಿ ಕಪಿಸೇನೆಯನ್ನು ಎಲ್ಲೆಡೆಗಳಿಗೂ ಕಳುಹಿಸಿದನು. ಹನುಮಂತನಿಂದ ಚೂಡಾಮಣಿಯ ಮೂಲಕ ಲಂಕೆಯಲ್ಲಿ ಸೀತಾ ವೃತ್ತಾಂತವು ತಿಳಿದಬಳಿಕ ತಮ್ಮನೊಡಗೂಡಿದ ಶ್ರೀರಾಮನು ಹನುಮಂತ

ಅನ್ವೀಯಮಾನೋ ರಾಮೋಽಸೌ ಮುಹೂರ್ತೇಽಭಿಜಿತಿ ದ್ವಿಜಾಃ ।
ವಿಲಂಘ್ಯ ವಿವಿಧಾನ್ದೇಶಾನ್ಮಹೇಂದ್ರಂ ಪರ್ವತಂ ಯಯೌ ॥ ೨೮ ॥
ಚಕ್ರತೀರ್ಥಂ ತತೋಗತ್ವಾ ನಿವಾಸಮಕರೋತ್ತದಾ ॥ ೨೯ ॥
ತತ್ರೈವ ತು ಸ ಧರ್ಮಾತ್ಮಾ ಸಮಾಗಚ್ಛದ್ವಿಭೀಷಣಃ ।
ಭ್ರಾತಾ ವೈ ರಾಕ್ಷಸೇಂದ್ರಸ್ಯ ಚತುರ್ಭಿಃ ಸಚಿವೈಃ ಸಹ ॥ ೩೦ ॥
ಪ್ರತಿಜಗ್ರಾಹ ರಾಮಸ್ತಂ ಸ್ವಾಗತೇನ ಮಹಾತ್ಮನಾ ।
ಸುಗ್ರೀವಸ್ಯ ತು ಶಂಕಾಽಭೂತ್ಪ್ರಣಿಧಿಃ ಸ್ಯಾದಯಂ ತ್ವಿತಿ ॥ ೩೧ ॥
ರಾಘವಸ್ತಸ್ಯ ಚೇಷ್ಟಾಭಿಃ ಸಮ್ಯಕ್ಸ್ವಚರಿತೈರ್ಹಿತೈಃ ।
ಅದುಷ್ಟಮೇನಂ ದೃಷ್ಟ್ವೈವ ತತ ಏನಮಪೂಜಯತ್ ॥ ೩೨ ॥
ಸರ್ವರಾಕ್ಷಸರಾಜ್ಯೇ ತಮಭ್ಯಷಿಂಚದ್ವಿಭೀಷಣಂ ।
ಚಕ್ರೇ ಚ ಮಂತ್ರಿಪ್ರವರಂ ಸದೃಶಂ ರವಿಸೂನುನಾ ॥ ೩೩ ॥
ಚಕ್ರತೀರ್ಥಂ ಸಮಾಸಾದ್ಯ ನಿವಸದ್ರಘುನಂದನಃ ।
ಚಿಂತಯನ್ ರಾಘವಃ ಶ್ರೀಮಾನ್ ಸುಗ್ರೀವಾದೀನಭಾಷತ ।
ಮಧ್ಯೇ ವಾನರಮುಖ್ಯಾನಾಂ ಪ್ರಾಪ್ತಕಾಲಮಿದಂ ವಚಃ ॥ ೩೪ ॥
ಉಪಾಯಃ ಕೋ ನು ಭವತಾಮೇತತ್ಸಾಗರಲಂಘನೇ ॥ ೩೫ ॥

---

ಸುಗ್ರೀವ ಜಾಂಬವಾದಿ ಕಪಿಮುಖ್ಯರಿಂದ ಹಿಂಬಾಲಿಸಲ್ಪಟ್ಟು ಅಭಿಜಿನ್ಮುಹೂರ್ತದಲ್ಲಿ ಹೊರಟು ನಾನಾ ದೇಶಗಳನ್ನು ದಾಟಿ ಮಹೇಂದ್ರಪರ್ವತಕ್ಕೆ ಬಂದು ಅಲ್ಲಿನ ಚಕ್ರತೀರ್ಥದ ಬಳಿ ವಾಸಮಾಡಿದನು.

೩೦. ಆಗ ಧರ್ಮಾತ್ಮನೂ, ರಾಕ್ಷಸೇಂದ್ರನಾದ ರಾವಣನ ಸಹೋದರನೂ ಆದ ವಿಭೀಷಣನು ನಾಲ್ವರು ಮಂತ್ರಿಗಳೊಡನೆ ಅಲ್ಲಿಗೆ ಬಂದು ಸೇರಿದನು.

೩೧–೩೨. ಮಹಾತ್ಮನಾದ ಶ್ರೀರಾಮನು ಆತನನ್ನು ಸ್ವಾಗತದಿಂದ ಬರಮಾಡಿಕೊಂಡನು. ಸುಗ್ರೀವನು, ಅವನು ಗೂಢಚಾರನಾಗಿರಬಹುದೆಂದು ಶಂಕಿಸಲು, ರಾಘವನು ಹಿತಕರವಾದ ಆತನ ನಡೆನುಡಿಗಳಿಂದ ಆತನನ್ನು ಚೆನ್ನಾಗಿ ಪರೀಕ್ಷಿಸಿ ನಿರ್ದುಷ್ಟನೆಂದು ತಿಳಿದ ತರುವಾಯ ಆತನನ್ನು ಸತ್ಕರಿಸಿದನು.

೩೩–೩೪. ಬಳಿಕ ಸಮಸ್ತ ರಾಕ್ಷಸರಾಜ್ಯಕ್ಕೂ ಆತನನ್ನು ಪಟ್ಟಾಭಿಷಿಕ್ತನನ್ನಾಗಿಸಿ, ಸುಗ್ರೀವನಂತೆಯೆ ಅವನನ್ನೂ ತನ್ನ ಮಂತ್ರಿವರ್ಗಕ್ಕೆ ಸೇರಿಸಿಕೊಂಡನು. ಹೀಗೆ ರಘುನಂದನನು ಚಕ್ರತೀರ್ಥದಲ್ಲಿದ್ದುಕೊಂಡೇ ಸುಗ್ರೀವಾದಿಗಳೊಡನೆ ವಿಚಾರಮಾಡತೊಡಗಿ ಆ ವಾನರ ಮಧ್ಯದಲ್ಲಿಯೆ ಆ ಸಮಯಕ್ಕನುಗುಣವಾದ ಈ ಮಾತನ್ನಾಡಿದನು:—

೩೫–೩೭. "ಎಲೈ ವಾನರಶ್ರೇಷ್ಠರೇ! ಈ ಸಮುದ್ರವನ್ನು ದಾಟಲು

ಇಯಂ ಚ ಮಹತೀ ಸೇನಾ ಸಾಗರಶ್ಚಾಪಿ ದುಸ್ತರಃ ।
ಅಂಭೋರಾಶಿರಯಂ ನೀಲಶ್ಚಂಚಲೋರ್ಮಿಸಮಾಕುಲಃ ॥ ೩೬ ॥
ಉದ್ಯನ್ಮತ್ಸ್ಯೋ ಮಹಾನಕ್ರಶಂಖಶುಕ್ತಿಸಮಾಕುಲಃ ।
ಕ್ವಚಿದೌರ್ವಾನಲಾಕ್ರಾಂತಃ ಫೇನವಾನತಿಭೀಷಣಃ ॥ ೩೭ ॥
ಪ್ರಕೃಷ್ಟಪವನಾಕೃಷ್ಟನೀಲಮೇಘಸಮನ್ವಿತಃ ।
ಪ್ರಲಯಾಂಭೋಧರಾರಾವಃ ಸಾರವಾನನಿಲೋದ್ಧತಃ ॥ ೩೮ ॥
ಕಥಂ ಸಾಗರಮಕ್ಷೋಭ್ಯಂ ತರಾಮೋ ವರುಣಾಲಯಂ ।
ಸೈನ್ಯೈಃ ಪರಿವೃತಾಃ ಸರ್ವೇ ವಾನರಾಣಾಂ ಮಹೌಜಸಾಂ ॥ ೩೯ ॥
ಉಪಾಯೈರಧಿಗಚ್ಛಾಮೋ ಯಥಾ ನದನದೀಪತಿಂ ।
ಕಥಂ ತರಾಮಃ ಸಹಸಾ ಸಸೈನ್ಯಾ ವರುಣಾಲಯಂ ॥ ೪೦ ॥
ಶತಯೋಜನಮಾಯಾತಂ ಮನಸಾಽಪಿ ದುರಾಸದಂ ।
ಅತೋ ನು ವಿಘ್ನಾ ಬಹವಃ ಕಥಂ ಪ್ರಾಪ್ಸ್ಯಾಮ ಮೈಥಿಲೀ ॥ ೪೧ ॥
ಕಷ್ಟಾತ್ಕಷ್ಟತರಂ ಪ್ರಾಪ್ತಾ ವಯಮದ್ಯ ನಿರಾಶ್ರಯಾಃ ।
ಮಹಾಜಲೇ ಮಹಾವಾತೇ ಸಮುದ್ರೇ ಹಿ ನಿರಾಶ್ರಯೇ ॥ ೪೨ ॥

---

ಉಪಾಯವೇನು? ಇದು ನೀಲವೂ, ಉಬ್ಬೇಳುವ ಚಂಚಲವಾದ ತರಂಗಗಳಿಂದ ಸಂಕುಲವೂ, ಮೀನುಗಳುಳ್ಳುದೂ, ದೊಡ್ಡ ದೊಡ್ಡ ಮೊಸಳೆಗಳಿಂದಲೂ, ತಿಮಿಂಗಿಲಗಳಿಂದಲೂ, ಶಂಖಗಳಿಂದಲೂ, ಮುತ್ತಿನಚಿಪ್ಪುಗಳಿಂದಲೂ ಕಲಕಿದಂತಹುದೂ, ಕೆಲವೆಡೆ ಬಡಬಾನಲಸಹಿತವೂ, ನೊರೆಯೊಡಕೂಡಿ ಭಯಂಕರವೂ ಆಗಿರುವುದು.

೩೮. ಪ್ರಬಲವಾದ ಬಿರುಗಾಳಿಯಿಂದ ಸೆಳೆದುತಂದ ನೀಲಮೇಘಗಳುಳ್ಳುದಾಗಿ, ಪ್ರಳಯಕಾಲದ ಮುಗಿಲನಾದದಂತೆ ಈ ಸಾಗರವು ಮಹಾ ಬಲವತ್ತರವಾಗಿರುವುದು.

೩೯. ಅಲುಗಾಡಿಸಲಾಗದ ಈ ವರುಣಾಲಯವನ್ನು ಸತ್ವಶಾಲಿಗಳಾದ ಕಪಿಸೈನ್ಯಗಳೊಡನೆ ನಾವು ದಾಟುವ ಬಗೆಯೆಂತು?

೪೦–೪೧. ನದನದೀಪತಿಯಾದ ಈ ವರುಣಾಲಯನನ್ನು ಸಸೈನಿಕರಾದ ನಾವು ದಾಟುವ ಬಗೆಯೆಂತೊ? ನೂರು ಗಾವುದ ವಿಶಾಲವಾದ ಈ ಸಮುದ್ರವು ಮನಸ್ಸಿನಿಂದ ಊಹಿಸಲೂ ಅಶಕ್ಯವಾದುದು. ಇಷ್ಟುಬಗೆಯ ಅಡಚಣೆಗಳಿಂದ ಜಾನಕಿಯನ್ನು ಹೊಂದುವುದಾದರೂ ಹೇಗೆ?

೪೨–೪೪. ನಿರಾಶ್ರಯರಾದ ನಾವು ಇದೀಗ ಅತಿ ಕಷ್ಟಕ್ಕೀಡಾದೆವು. ಅಪಾರ ಜಲಸಮೃದ್ಧಿಯುಳ್ಳುದಾಗಿ, ಬಿರುಗಾಳಿಯಿಂದ ಕೂಡಿ, ಎಡೆಯಿಲ್ಲದಿರುವ ಈ ಸಮುದ್ರದಲ್ಲಿ ಕಪಿಗಳು ದಾಟಲೇನನ್ನು ಕಲ್ಪಿಸಿಕೊಡೋಣ? ರಾಜ್ಯದಿಂದ

ಉಪಾಯಂ ಕಂ ವಿಧಾಸ್ಯಾಮಸ್ತರಣಾರ್ಥಂ ವನೌಕಸಾಂ ।
ರಾಜ್ಯಾದ್ಭ್ರಷ್ಟೋ ವನಂ ಪ್ರಾಪ್ತೋ ಹೃತಾ ಸೀತಾ ಮೃತಃ ಪಿತಾ ॥೪೩॥
ಇತೋಽಪಿ ದುಃಸಹಂ ದುಖಂ ಯತ್ಸಾಗರವಿಲಂಘನಂ ।
ಧಿಗ್ಧಿಗ್ಗರ್ಜಿತಮಂಭೋಧೇರ್ಧಿಗೇತಾಂ ವಾರಿರಾಶಿತಾಂ ॥ ೪೪ ॥
ಕಥಂ ತದ್ವಚನಂ ಮಿಥ್ಯಾ ಮಹರ್ಷೇಃ ಕುಂಭಜನ್ಮನಃ ।
ಹತ್ವಾ ತ್ವಂ ರಾವಣಂ ಪಾಪಂ ಪವಿತ್ರೇ ಗಂಧಮಾದನೇ ।
ಪಾಪೋಪಶಮನಾಯಾಶು ಗಚ್ಛಸ್ವೇತಿ ಯದೀರಿತಂ ॥ ೪೫ ॥

ಶ್ರೀ ಸೂತ ಉವಾಚ :—

ಇತಿ ರಾಮ ವಚಃ ಶ್ರುತ್ವಾ ಸುಗ್ರೀವಪ್ರಮುಖಾಸ್ತದಾ ॥ ೪೬ ॥
ಊಚುಃ ಪ್ರಾಂಜಲಯಃ ಸರ್ವೇ ರಾಘವಂ ತಂ ಮಹಾಬಲಂ ।
ನೌಭಿರೇನಂ ತರಿಷ್ಯಾಮಃ ಪ್ಲವೈಶ್ಚ ವಿವಿಧೈರಿತಿ ॥ ೪೭ ॥
ಮಧ್ಯೇ ವಾನರಕೋಟೀನಾಂ ತದೋವಾಚ ವಿಭೀಷಣಃ ।
ಸಮುದ್ರಂ ರಾಘವೋ ರಾಜಾ ಶರಣಂ ಗಂತುಮರ್ಹತಿ ॥ ೪೮ ॥
ಖನಿತಃ ಸಾಗರೈರೇಷ ಸಮುದ್ರೋ ವರುಣಾಲಯಃ ।
ಕರ್ತುಮರ್ಹತಿ ರಾಮಸ್ಯ ತಜ್ಞಾತೇಃ ಕಾರ್ಯಮಂಬುಧಿಃ ॥ ೪೯ ॥

---

ಚ್ಯುತನಾಗಿ, ಕಾಡುಪಾಲಾಗಿ, ಮಡದಿಯನ್ನು ಕಳೆದುಕೊಂಡುದಾಯಿತು, ತಂದೆಯು ತೀರಿಕೊಂಡನು. ಇದೀಗ ಈ ಸಮುದ್ರವನ್ನು ದಾಟುವ ಕೆಲಸವಂತೂ ಈ ಎಲ್ಲಕ್ಕಿಂತಲೂ ದುಃಸಹವಾದ ದುಃಖವಾಗಿದೆ. ಈ ಸಮುದ್ರದ ಗರ್ಜನೆಯನ್ನೂ, ಈ ಜಲರಾಶಿಯನ್ನೂ ನಿಂದಿಸು.

೪೫. 'ಎಲೈ ರಾಮನೇ! ನೀನು ಪಾಪಿಯಾದ ರಾವಣನನ್ನು ಬೇಗನೆಯೆ ಕೊಂದು, ಪವಿತ್ರವಾದ ಗಂಧಮಾದನದಲ್ಲಿ ಪಾಪವನ್ನು ನೀಗಲು ಕಾಡಿಗೆ ಹೊರಡೆ'ಂದು ನುಡಿದ ಕುಂಭಜನಾದ ಅಗಸ್ತ್ಯನ ನುಡಿಯು ಪುಸಿಯಾಗುವುದೆ?"

೪೬–೪೭. ಸೂತನು ಹೇಳುತ್ತಾನೆ:— ಇಂತು ನುಡಿದ ಬಲಶಾಲಿಯಾದ ರಾಘವನನ್ನು ಕುರಿತು ಸುಗ್ರೀವಾದಿಗಳು ಕೈಮುಗಿದು, "ಬಗೆ ಬಗೆಯ ಹಡಗು ಹರಿಗೋಲುಗಳಿಂದ ಸಾಗರವನ್ನು ದಾಟುವೆವು" ಎಂದು ಬಿನ್ನವಿಸಿದರು.

೪೮–೪೯. ಆಗ ವಿಭೀಷಣನು ಕಪಿಸೈನ್ಯದಿಂದೆದ್ದು, "ರಾಜನಾದ ರಾಘವನು ಸಮುದ್ರವನ್ನು ಮೊರೆಹೋಗತಕ್ಕುದು. ಸಗರರಿಂದ ರೂಪುಗೊಂಡ ಈ ಸಾಗರನೂ ಆ ವಂಶೀಯನಾದ ರಾಮನ ಕಾರ್ಯಕ್ಕೆ ಸಹಾಯಮಾಡತಕ್ಕುದು" ಎಂದು ನುಡಿದನು.

ವಿಭೀಷಣೇನೈವಮುಕ್ತೋ ರಾಕ್ಷಸೇನ ವಿಪಶ್ಚಿತಾ ।
ಸಾಂತ್ವಯನ್ರಾಘವಃ ಸರ್ವಾನ್ವಾನರಾನಿದಮಬ್ರವೀತ್ ॥ ೫೦ ॥
ಶತಯೋಜನವಿಸ್ತಾರಮಶಕ್ತಾಃ ಸರ್ವವಾನರಾಃ ।
ತರ್ತುಂ ಪ್ಲವೋಡುಪೈರೇನಂ ಸಮುದ್ರಮತಿಭೀಷಣಂ ॥ ೫೧ ॥
ನಾವೋ ನ ಸಂತಿ ಸೇನಾಯಾ ಬಹ್ವ್ಯೋ ವಾನರಪುಂಗವಾಃ ।
ವಣಿಜಾಮುಪಘಾತಂ ಚ ಕಥಮಸ್ಮದ್ವಿಧಶ್ಚರೇತ್ ॥ ೫೨ ॥
ವಿಸ್ತೀರ್ಣಂ ಚೈವ ನಃ ಸೈನ್ಯಂ ಹನ್ಯಾಚ್ಛಿದ್ರೇಷು ವಾ ಪರಃ ।
ಪ್ಲವೋಡುಪಪ್ರತಾರೋಽತೋ ನೈವಾತ್ರ ಮಮ ರೋಚತೇ ॥ ೫೩ ॥
ವಿಭೀಷಣೋಕ್ತಮೇವೇದಂ ಮೋದತೇ ಮಮ ವಾನರಾಃ ।
ಅಹಂತ್ವಿಮಂ ಜಲನಿಧಿಮುಪಾಸ್ಯೇ ಮಾರ್ಗಸಿದ್ಧಯೇ ॥ ೫೪ ॥
ನೋಚೇದ್ದರ್ಶಯಿತಾ ಮಾರ್ಗಂ ಧಕ್ಷ್ಯಾಮ್ಯೇನಮಹಂ ತದಾ ।
ಮಹಾಽಸ್ತ್ರೈರಪ್ರತಿಹತೈರತ್ಯಗ್ನಿಪವನೋಜ್ಜ್ವಲೈಃ ॥ ೫೫ ॥
ಇತ್ಯುಕ್ತ್ವಾ ಸಹ ಸೌಮಿತ್ರಿರುಪಸ್ಪೃಶ್ಯಾಽಥ ರಾಘವಃ ।
ಪ್ರತಿಶಿಶ್ಯೇ ಜಲನಿಧಿಂ ವಿಧಿವತ್ಕುಶಸಂಸ್ತರೇ ॥ ೫೬ ॥

---

೫೦–೫೧. ಬುದ್ಧಿಶಾಲಿಯಾದ ವಿಭೀಷಣನು ಇಂತು ಬಿನ್ನವಿಸಲು, ರಾಘವನು ಕಪಿಗಳನ್ನೆಲ್ಲ ಸಂತೈಸಿ, ''ನೂರಾರು ಗಾವುದದಗಲವಾದ ಭಯಂಕರ ಸಮುದ್ರವನ್ನು ಹಡಗು, ಹರಿಗೋಲುಗಳಿಂದ ದಾಟಲು ಕಪಿಗಳೆಲ್ಲರಿಗೂ ಅಸಾಧ್ಯವಾಗಿರುವುದು.

೫೨. ಇಷ್ಟು ದೊಡ್ಡ ಸೇನೆಗೆ ಸಾಕಾಗುವಷ್ಟು ಹಡಗುಗಳೂ ಇಲ್ಲ. ವ್ಯಾಪಾರಿಗಳಿಗೆ ತೊಂದರೆಮಾಡುವುದು ನಮ್ಮಂತಹವರಿಗೆ ತಕ್ಕುದೂ ಅಲ್ಲ.

೫೩. ಅವಕಾಶ ದೊರೆತಾಗ ಶತ್ರುವು ವಿಶಾಲವಾದ ನಮ್ಮ ಪಡೆಯನ್ನು ಕೊಂದರೂ ಕೊಲ್ಲಬಹುದು ; ಸಮುದ್ರದ ಸುಳಿಗಳಲ್ಲಿ ಸಿಕ್ಕಿ ಸತ್ತರೂ ಸಾಯಬಹುದು. ಆದುದರಿಂದ ಅವುಗಳಿಂದ ದಾಟುವುದು ನನಗೆ ಉಚಿತವಾಗಿ ತೋರುವುದಿಲ್ಲ. ಒಪ್ಪಿಗೆಯೂ ಇಲ್ಲ.

೫೪–೫೫. ವಿಭೀಷಣನ ಮಾತೇ ನನಗೆ ಸರಿತೋರುವುದು. ನಾನು ಸಾಗರವನ್ನು ಮೊರೆಹೋಗುವೆನು. ದಾರಿಗಾಗಿ ನಾನು ಈ ಜಲನಿಧಿಯನ್ನು ಬೇಡುವೆನು. ಕೊಡದಿದ್ದಲ್ಲಿ, ಎದುರಿಲ್ಲದ ಬೆಂಕಿ ಗಾಳಿಗಳನ್ನೂ ಮೀರಿದ ಮಹಾಸ್ತ್ರಗಳಿಂದ ಈತನನ್ನು ಒಣಗಿಸಿ ನಾಶಪಡಿಸುವೆನು.''

೫೬. ಹೀಗೆಂದು ನುಡಿದ ತರುವಾಯ ಆ ಶ್ರೀರಾಮನು ಸೌಮಿತ್ರಿಯೊಡನೆ ಆಚಮನವನ್ನು ಮಾಡಿ ಶಾಸ್ತ್ರೋಕ್ತವಾದ ರೀತಿಯಲ್ಲಿ ಸಮುದ್ರದ ಬಳಿ ದರ್ಭಾಸನದಮೇಲೆ ಕುಳಿತನು.

ತದಾ ರಾಮಃ ಕುಶಾಸ್ತೀರ್ಣೇ ತೀರೇ ನದನದೀಪತೇಃ ।
ಸಂವಿವೇಶ ಮಹಾಬಾಹುರ್ವೇದ್ಯಾಮಿವ ಹುತಾಶನಃ ॥ ೫೭ ॥
ಶೇಷಭೋಗನಿಭಂ ಬಾಹುಮುಪಧಾಯ ರಘೂದ್ವಹಃ ।
ದಕ್ಷಿಣೋ ದಕ್ಷಿಣಂ ಬಾಹುಮುಪಾಸ್ತೇ ಮಕರಾಲಯಮ್ ॥ ೫೮ ॥
ತಸ್ಯ ರಾಮಸ್ಯ ಸುಪ್ತಸ್ಯ ಕುಶಾಸ್ತೀರ್ಣೇ ಮಹೀತಲೇ ।
ನಿಯಮಾದಪ್ರಮತ್ತಸ್ಯ ನಿಶಾಸ್ತಿಸ್ರೋಽತಿಚಕ್ರಮುಃ ॥ ೫೯ ॥
ಸ ತ್ರಿರಾತ್ರೋಷಿತಸ್ತತ್ರ ನಯಜ್ಞೋ ಧರ್ಮತತ್ಪರಃ ।
ಉಪಾಸ್ತೇಽಸ್ಮ ತದಾ ರಾಮಃ ಸಾಗರಂ ಮಾರ್ಗಸಿದ್ಧಯೇ ।
ನ ಚ ದರ್ಶಯತೇ ಮಂದಸ್ತದಾ ರಾಮಸ್ಯ ಸಾಗರಃ ॥ ೬೦ ॥
ಪ್ರಯತೇನಾಽಪಿ ರಾಮೇಣ ಯಥಾಽರ್ಹಮಪಿ ಪೂಜಿತಃ ।
ತಥಾಽಪಿ ಸಾಗರೋ ರಾಮಂ ನ ದರ್ಶಯತಿ ಚಾತ್ಮನಃ ॥ ೬೧ ॥
ಸಮುದ್ರಾಯ ತತಃ ಕ್ರುದ್ಧೋ ರಾಮೋ ರಕ್ತಾಂತಲೋಚನಃ ।
ಸಮೀಪವರ್ತಿನಂ ಚೇದಂ ಲಕ್ಷ್ಮಣಂ ಪ್ರತ್ಯಭಾಷತ ॥ ೬೨ ॥

---

೫೭. ನದನದೀಪತಿಯಾದ ಆ ಸಮುದ್ರದ ತೀರದಲ್ಲಿ ದರ್ಭಾಸ್ತರಣದ ಮೇಲೆ ಮಂಡಿಸಿ ಹೋಮವೇದಿಕೆಯಲ್ಲಿ ಜ್ವಲಿಸುವ ಪಾವಕನಂತೆ ಆ ರಾಮನು ಪ್ರಕಾಶಿಸುತ್ತಿದ್ದನು.

೫೮. ದಾಕ್ಷಿಣ್ಯಸ್ವಭಾವದವನಾದ ಆ ರಘೂದ್ವಹನು ಆದಿಶೇಷನಂತೆ ಒಪ್ಪುವ ತನ್ನ ಬಲಗೈಯನ್ನು ತಲೆಗೊರಗಿಸಿಕೊಂಡು ಸಮುದ್ರನನ್ನು ಉಪಾಸಿಸ ತೊಡಗಿದನು.

೫೯. ಎಲೈ ವಿಪ್ರರೇ! ಆ ರಾಮಮೂರ್ತಿಯು ದರ್ಭಾಸ್ತರಣದಲ್ಲಿ ನೆಲದ ಮೇಲೆ ಪವಳಿಸಿ ನಿಯಮದಿಂದ ಜಾಗರೂಕನಾಗಿ ಸಾಗರವನ್ನು ಸೇವಿಸುತ್ತಿರಲು ಮೂರು ರಾತ್ರಿಗಳು ಕಳೆದುಹೋದುವು.

೬೦. ಇಂತು ನೀತಿಪರನೂ, ಧರ್ಮಪರನೂ ಆಗಿ ದರ್ಭಮಯವಾದ ಹಾಸಿಗೆಯಲ್ಲಿ ನಿಯಮದಿಂದ ಮಲಗಿ ಮಾರ್ಗಸಿದ್ಧಿಗಾಗಿ ಆ ಸಮುದ್ರನನ್ನು ಸೇವಿಸುತ್ತ ಶ್ರೀರಾಮನು ಮೂರು ರಾತ್ರಿಗಳನ್ನು ಕಳೆದನು. ಆದರೂ ಮೂಢ ನಾದ ಸಮುದ್ರನು ಅವನಿಗೆ ಪ್ರತ್ಯಕ್ಷನಾಗಲಿಲ್ಲವು.

೬೧–೬೨. ಹೀಗೆ ನಿಯಮಪೂರ್ವಕವಾಗಿ ಉಚಿತರೀತಿಯಲ್ಲಿ ಶ್ರೀರಾಮ ನಿಂದ ಸತ್ಕೃತನಾದರೂ, ಮೂಢನಾದ ಸಮುದ್ರನು ಆತನಿಗೆ ದರ್ಶನವನ್ನು ಕೊಡಲಿಲ್ಲ. ಬಳಿಕ ಕುಪಿತನಾದ ರಾಘವನು ಕೆಂಗಣ್ಣುಳ್ಳವನಾಗಿ ಬಳಿಯಲ್ಲಿದ್ದ ಸೌಮಿತ್ರಿಯನ್ನು ಕುರಿತು ಹೀಗೆಂದನು :—

ಅದ್ಯ ಮದ್ಬಾಣ ನಿರ್ಭಿನ್ನೈರ್ಮುಕರೈರ್ವರುಣಾಲಯಮ್ ।
ನಿರುದ್ಧತೋಯಂ ಸೌಮಿತ್ರೇ ಕರಿಷ್ಯಾಮಿ ಕ್ಷಣಾದಹಮ್ ॥ ೬೩ ॥
ಸಶಂಖಶುಕ್ತಾಜಾಲಂ ಹಿ ಸಮೀನಮಕರಂ ಶನೈಃ ।
ಅದ್ಯ ಬಾಣೈರಮೋಘಾಸ್ತ್ರೈರ್ವಾರಿಧಿಂ ಪರಿಶೋಷಯೇ ॥ ೬೪ ॥
ಕ್ಷಮಯಾ ಹಿ ಸಮಾಯುಕ್ತಂ ಮಾಮಯಂ ಮಕರಾಲಯಃ ।
ಅಸಮರ್ಥಂ ವಿಜಾನಾತಿ ಧಿಕ್ಕ್ಷಮಾಮೀದೃಶೇ ಜನೇ ॥ ೬೫ ॥
ನ ದರ್ಶಯತಿ ಸಾಮ್ನಾಮೇ ಸಾಗರೋ ರೂಪಮಾತ್ಮನಃ ॥ ೬೬ ॥
ಚಾಪಮಾನಯ ಸೌಮಿತ್ರೇ ಶರಾಂಶ್ಚಾಶೀವಿಷೋಪಮಾನ್ ।
ಸಾಗರಂ ಶೋಷಯಿಷ್ಯಾಮಿ ಪದ್ಭ್ಯಾಂ ಯಾಂತು ಪ್ಲವಂಗಮಾಃ ॥ ೬೭ ॥
ಏನಂ ಲಂಘಿತಮರ್ಯಾದಂ ಸಹಸ್ರೋರ್ಮಿಸಮಾಕುಲಮ್ ।
ನಿರ್ಮರ್ಯಾದಂ ಕರಿಷ್ಯಾಮಿ ಸಾಯಕೈರ್ವರುಣಾಲಯಮ್ ॥ ೬೮ ॥
ಮಹಾರ್ಣವಂ ಶೋಷಯಿಷ್ಯೇ ಮಹಾದಾನವಸಂಕುಲಮ್ ।
ಮಹಾಮಕರನಕ್ರಾಢ್ಯಂ ಮಹಾವೀಚೀಸಮಾಕುಲಮ್ ॥ ೬೯ ॥
ಏವಮುಕ್ತ್ವಾ ಧನುಷ್ಪಾಣಿಃ ಕ್ರೋಧಪರ್ಯಾಕುಲೇಕ್ಷಣಃ ।
ರಾಮೋ ಬಭೂವ ದುರ್ಧರ್ಷಸ್ತ್ರಿಪುರಘ್ನೋ ಯಥಾ ಶಿವಃ ॥ ೭೦ ॥

---

೬೩–೬೬. "ಸೌಮಿತ್ರಿ! ಈಗಲೇ ಈ ಸಮುದ್ರನನ್ನು ನನ್ನ ಕೂರಂಬುಗಳಿಂದ ಮೊಸಳೆಗಳನ್ನು ಕಿತ್ತೊಗೆದು ತಡೆಗಟ್ಟಿದ ನೀರುಳ್ಳವನನ್ನಾಗಿ ಮಾಡುವೆನು. ಶಂಖ, ಶುಕ್ತಿ, ಮಕರ, ಮೀನುಗಳೊಡನೆ ಈ ವಾರಿಧಿಯನ್ನು ನನ್ನ ಅಮೋಘವಾದ ಬಾಣಗಳಿಂದ ಒಣಗಿಸುವೆನು. ತಾಳ್ಮೆಯಿಂದ ಕೂಡಿದ ನನ್ನನ್ನು ಈ ಮಕರಾಲಯನು ಕೈಲಾಗದವನೆಂದು ತಿಳಿದಿರುವನು. ಇಂತಹನಲ್ಲಿ ಕ್ಷಮೆ ತೋರುವುದು ನಿಂದಿತವು. ಒಳ್ಳೆಯತನಕ್ಕೆ ಈತನು ಮನ್ನಣೆಕೊಡದೆ ನನಗೆ ಕಾಣಿಸಿಕೊಳ್ಳದೆಯೂ ಇರುವನು.

೬೭. ಓ ಸೌಮಿತ್ರೇ! ಸರ್ಪಸದೃಶವಾದ ಬಾಣಗಳನ್ನೂ, ಬಿಲ್ಲನ್ನೂ ತೆಗೆದುಕೊಂಡು ಬಾ. ಈ ಸಾಗರನನ್ನು ಬತ್ತಿಹೋಗುವಂತೆ ಮಾಡುವೆನು. ಕಪಿಗಳು ಕಾಲ್ನಡಿಗೆಯಿಂದಲೇ ದಾಟಹೋಗಲಿ.

೬೮. ಮರ್ಯಾದೆಯಿಲ್ಲದ ಸಾವಿರಾರು ತರಂಗಗಳಿಂದ ಸಂಕುಲನಾದ ಈ ಸಮುದ್ರನನ್ನು ಬಾಣಗಳಿಂದಲೇ ಆಳ ಇಳಿತಗಳಿಲ್ಲದವನನ್ನಾಗಿ ಮಾಡುವೆನು.

೬೯. ಮಹಾದಾನವರಿಂದ ಸಂಕುಲವೂ, ದೊಡ್ಡದಾದ ಮೀನು, ಮೊಸಳೆಗಳಿಂದ ತುಂಬಿ, ದೊಡ್ಡ ಅಲೆಗಳಿಂದ ತುಳುಕಾಡುತ್ತಿರುವುದೂ ಆದ ಈ ಮಹಾರ್ಣವವನ್ನು ಈಗಲೇ ಬತ್ತಿಸಿಬಿಡುವೆನು."

೭೦–೭೧. ಕೋಪಾಕುಲಿತವಾದ ಕಣ್ನೋಟವುಳ್ಳ ರಾಮನು ಈ ರೀತಿ ನುಡಿದು, ಬಿಲ್ಲನ್ನು ಹಿಡಿದು ತ್ರಿಪುರಘಾತಿಯಾದ ಶಿವನಂತೆ ತಡೆಯಲಸಾಧ್ಯ

ಆಕೃಷ್ಯ ಚಾಪಂ ಕೋಪೇನ ಕಂಪಯಿತ್ವಾ ಶರೈರ್ಜಗತ್ ।
ಮುಮೋಚ ವಿಶಿಖಾನುಗ್ರಾಂಸ್ತ್ರಿಪುರೇಷು ಯಥಾ ಭವಃ ॥ ೭೧ ॥
ದೀಪ್ತಾ ಬಾಣಾಶ್ಚ ಯೇ ಘೋರಾ ಭಾಸಯಂತೋ ದಿಶೋ ದಶ ।
ಪ್ರಾವಿಶನ್ವಾರಿಧೇಸ್ತೋಯಂ ದೃಪ್ತದಾನವಸಂಕುಲಂ ॥ ೭೨ ॥
ಸಮುದ್ರಸ್ತು ತತೋ ಭೀತೋ ವೇಪಮಾನಃ ಕೃತಾಂಜಲಿಃ ।
ಅನನ್ಯಶರಣೋ ವಿಪ್ರಾಃ ಪಾತಾಲಾತ್ಸ್ವಯಮುತ್ಥಿತಃ ॥ ೭೩ ॥
ಶರಣಂ ರಾಘವಂ ಭೇಜೇ ಕೈವಲ್ಯಪದಕಾರಣಂ ।
ತುಷ್ಟಾವ ರಾಘವಂ ವಿಪ್ರಾ ಭೂತ್ವಾ ಶಬ್ದೈರ್ಮನೋರಮೈಃ ॥ ೭೪ ॥

ಸಮುದ್ರ ಉವಾಚ :—

ನಮಾಮಿ ತೇ ರಾಘವ ಪಾದಪಂಕಜಂ
ಸೀತಾಪತೇ ಸೌಖ್ಯದ ಪಾದಸೇವನಾತ್ ।
ನಮಾಮಿ ತೇ ಗೌತಮದಾರಮೋಕ್ಷಜಂ
ಶ್ರೀಪಾದರೇಣುಂ ಸುರವೃಂದಸೇವ್ಯಂ ॥ ೭೫ ॥
ಸುಂದಪ್ರಿಯಾದೇಹವಿದಾರಿಣೇ ನಮೋ
ನಮೋಽಸ್ತು ತೇ ಕೌಶಿಕ ಯಾಗರಕ್ಷಿಣೇ ।
ನಮೋ ಮಹಾದೇವಶರಾಸಭೇದಿನೇ
ನಮೋ ನಮೋ ರಾಕ್ಷಸಸಂಘನಾಶಿನೇ ॥ ೭೬ ॥

---

ನಾಗಿ, ಹೆದಯನ್ನೇರಿಸಿ ಪ್ರಪಂಚವೇ ನಡುಗುವಂತೆ ಶಿವನು ತ್ರಿಪುರಾಸುರರಮೇಲೆ ಎಂತೊ ಅಂತು ಉಗ್ರವಾದ ಬಾಣಗಳನ್ನು ಆ ಸಮುದ್ರದಮೇಲೆ ಪ್ರಯೋಗಿಸಿದನು. ಭಯಂಕರವೂ, ಜಾಜ್ವಲ್ಯಮಾನವೂ ಆದ ಆ ಬಾಣಗಳು ದಶದಿಶೆಗಳನ್ನೂ ಬೆಳಗಿಸುತ್ತಾ, ಕೊಬ್ಬಿದ ದಾನವರಿಂದ ನಿಬಿಡವಾದ ಆ ಜಲನಿಧಿಯನ್ನು ಹೊಕ್ಕವು.

೭೩–೭೪. ಆಗ ಸಮುದ್ರರಾಜನು ಹೆದರಿ ನಡುಗುತ್ತಾ ಕೈಮುಗಿದು ಬೇರೆ ದಿಕ್ಕಿಲ್ಲದವನಾಗಿ ಪಾತಾಳದಿಂದೆದ್ದುಬಂದು ಮುಕ್ತಿದಾಯಕನಾದ ಆ ಶ್ರೀರಾಮನನ್ನು ಮೊರೆಹೊಕ್ಕು ಮನೋಹರವಾದ ವಾಕ್ಯಗಳಿಂದ ಅವನನ್ನು ಹೊಗಳತೊಡಗಿದನು.

೭೫. "ಎಲೈ ಸೀತಾಪತಿಯೆ! ರಾಘವ, ನೀನು ಎಲ್ಲರಿಗೂ ಸೌಖ್ಯವನ್ನು ನೀಡುವವನು; ಇದೊ ನಿನ್ನಡಿದಾವರೆಗಳಿಗೆರಗುವೆನು. ಸುರಸಂಘಗಳಿಂದ ಸೇವಿಸಲ್ಪಡುವುದಾಗಿ, ಗೌತಮಪತ್ನಿಯಾದ ಅಹಲ್ಯೆಗೆ ಮೋಕ್ಷವನ್ನಿತ್ತ ನಿನ್ನ ಶ್ರೀಪಾದರೇಣುವಿಗೆ ನಮಸ್ಕರಿಸುವೆನು.

೭೬. ಸುಂದಪತ್ನಿಯಾದ ತಾಟಕಿಯನ್ನು ಸೀಳಿದ ನಿನಗೆ ನಮಸ್ಕಾರವು!

ರಾಮ ರಾಮ ನಮಸ್ಯಾಮಿ ಭಕ್ತಾನಾಮಿಷ್ಟದಾಯಿನಂ ।
ಅವತೀರ್ಣೋ ರಘುಕುಲೇ ದೇವಕಾರ್ಯಚಿಕೀರ್ಷಯಾ ॥ ೭೭ ॥
ನಾರಾಯಣಮನಾದ್ಯಂತಂ ಮೋಕ್ಷದಂ ಶಿವಮಚ್ಯುತಂ ।
ರಾಮ ರಾಮ ಮಹಾಬಾಹೋ ರಕ್ಷ ಮಾಂ ಶರಣಾಗತಂ ॥ ೭೮ ॥
ಕೋಪಂ ಸಂಹರ ರಾಜೇಂದ್ರ ಕ್ಷಮಸ್ವ ಕರುಣಾಲಯ ।
ಭೂಮಿರ್ವಾತೋ ವಿಯಚ್ಚಾಪೋ ಜ್ಯೋತೀಂಷಿಚ ರಘೂದ್ವಹ ॥ ೭೯ ॥
ಯತ್ಸ್ವಭಾವಾನಿ ಸೃಷ್ಟಾನಿ ಬ್ರಹ್ಮಣಾ ಪರಮೇಷ್ಠಿನಾ ।
ವರ್ತಂತೇ ತತ್ಸ್ವಭಾವಾನಿ ಸ್ವಭಾವೋ ಮೇಽಹ್ಯಗಾಧತಾ ॥ ೮೦ ॥
ವಿಕಾರಸ್ತು ಭವೇದ್ಗಾಧ ಏತತ್ಸತ್ಯಂ ವದಾಮ್ಯಹಂ ।
ಲೋಭಾತ್ಕಾಮಾದ್ಭಯಾದ್ವಾಽಪಿ ರಾಗಾದ್ವಾಽಪಿ ರಘೂದ್ವಹ ॥ ೮೧ ॥
ನ ವಂಶಜಂ ಗುಣಂ ಹಾತುಮುತ್ಸಹೇಯಂ ಕಥಂಚನ ।
ತತ್ಕರಿಷ್ಯೇಽಚ ಸಾಹಾಯ್ಯಂ ಸೇನಾಯಾಸ್ತರಣೇ ತವ ॥ ೮೨ ॥
ಇತ್ಯುಕ್ತವಂತಂ ಜಲಧಿಂ ರಾಮೋಽವಾದೀನ್ನದೀಪತಿಂ ।
ಸಸೈನ್ಯೋಽಹಂ ಗಮಿಷ್ಯಾಮಿ ಲಂಕಾಂ ರಾವಣಪಾಲಿತಾಂ ॥ ೮೩ ॥

---

ವಿಶ್ವಾಮಿತ್ರ ಯಾಗರಕ್ಷಕನಾದ ನಿನಗೆ ನಮಸ್ಕಾರವಿರಲಿ. ಶಿವಧನುಸ್ಸನ್ನು ಮುರಿದ ನಿನಗಂಜಲಿಮಾಡುವೆನು. ರಾಕ್ಷಸಸಂಘವಿನಾಶಕನಾದ ನಿನಗೆ ಎರಗುವೆನು.

೭೭–೮೦. ಓ ರಘುರಾಮ! ಭಕ್ತರಿಗೆ ಇಷ್ಟದಾಯಕನಾಗಿರುವ ನಿನಗೆ ನಮೋ ನಮಃ! ದೇವಕಾರ್ಯಕ್ಕಾಗಿ ರಘುಕುಲದಲ್ಲಿ ಅವತರಿಸಿ ಆದ್ಯಂತಗಳಿಲ್ಲದ ನಾರಾಯಣನೂ, ಶಿವನೂ, ಅಚ್ಯುತನೂ, ಮೋಕ್ಷಪ್ರದಾಯಕನೂ ಆಗಿರುವ ನಿನಗೆ ವಂದಿಸುವೆನು. ಎಲೈ ಮನೋಹರನಾದ ಶ್ರೀರಾಮನೇ! ಶರಣಾಗತನಾದ ನನ್ನನ್ನು ಸಲಹು. ಕರುಣಾಕರ! ಕೋಪವನ್ನು ಅಡಗಿಸಿಕೊ. ಪೃಥಿವ್ಯಪ್ತೇಜೋವಾಯ್ವಾಕಾಶರೂಪವಾದ ಪಂಚಭೂತಗಳನ್ನಾವ ಸ್ವಭಾವದಿಂದ ಪರಮೇಷ್ಠಿಯು ಸೃಜಿಸಿರುವನೋ ಅವು ಆ ಸ್ವಭಾವದಿಂದಲೇ ಇರುತ್ತವೆ. ಆಳವೇ ನನ್ನ ಸ್ವಭಾವವು.

೮೧–೮೨. ಅದನ್ನು ಕೆಡಿಸುವುದು ನನಗೆ ವಿಕಾರವಾಗುವುದು. ಸತ್ಯವನ್ನು ನುಡಿಯುವೆನು. ಎಲೈ ರಘುಶ್ರೇಷ್ಠನೇ! ಲೋಭದಿಂದಾಗಲಿ, ಭಯರಾಗಗಳಿಂದಾಗಲಿ, ಹೇಗಾದರೂ ಕುಲೋಚಿತವಾದ ಗುಣವನ್ನು ನಾನು ಬೇರೆ ಬಿಡಲಾರೆನು. ಆದುದರಿಂದ ನಿನ್ನ ಸೇನೆಯು ದಾಟುವುದಕ್ಕೆ ಮಾತ್ರ ನಾನು ಸಹಾಯಮಾಡುವೆನು."

೮೩–೮೪. ಇಂತು ನುಡಿದ ನದನದೀಪತಿಯಾದ ಸಮುದ್ರರಾಜನನ್ನು

ತಚ್ಛೋಷಮುಪಯಾಹಿ ತ್ವಂ ತರಣಾರ್ಥಂ ಮಮಾಽಧುನಾ ।
ಇತ್ಯುಕ್ತಸ್ತಂ ಪುನಃ ಪ್ರಾಹ ರಾಘವಂ ವರುಣಾಲಯಃ ॥ ೮೪ ॥
ಶೃಣುಷ್ವಾವಹಿತೋ ರಾಮ ಶ್ರುತ್ವಾ ಕರ್ತವ್ಯಮಾಚರ ।
ಯದ್ಯಾಜ್ಞಯಾ ತೇ ಶುಷ್ಯಾಮಿ ಸಸೈನ್ಯಸ್ಯ ಯಿಯಾಸತಃ ॥ ೮೫ ॥
ಅನ್ಯೇಽಪ್ಯಾಜ್ಞಾಪಯಿಷ್ಯಂತಿ ಮಾಮೇವಂ ಧನುಷೋ ಬಲಾತ್ ।
ಉಪಾಯಮನ್ಯಂ ವಕ್ಷ್ಯಾಮಿ ತರಣಾರ್ಥಂ ಬಲಸ್ಯ ತೇ ॥ ೮೬ ॥
ಅಸ್ತಿ ಹ್ಯತಾನಲೋನಾಮ ವಾನರಃ ಶಿಲ್ಪಿಸಂಮತಃ ।
ತ್ವಷ್ಟುಃ ಕಾಕುತ್ಸ್ಥ ತನಯೋ ಬಲವಾನ್ವಿಶ್ವಕರ್ಮಣಃ ॥ ೮೭ ॥
ಸಯತ್ಕಾಷ್ಠಂ ತೃಣಂ ವಾಽಪಿ ಶಿಲಾಂ ವಾ ಕ್ಷೇಪ್ಸ್ಯತೇ ಮಯಿ ।
ಸರ್ವಂ ತದ್ಧಾರಯಿಷ್ಯಾಮಿ ಸತೇ ಸೇತುರ್ಭವಿಷ್ಯತಿ ॥ ೮೮ ॥
ಸೇತುನಾ ತೇನ ಗಚ್ಛ ತ್ವಂ ಲಂಕಾಂ ರಾವಣಪಾಲಿತಾಂ ।
ಉಕ್ತ್ವಾಂತರ್ಹಿತೇ ತಸ್ಮಿನ್ರಾಮೋ ನಲಮುವಾಚ ಹ ॥ ೮೯ ॥
ಕುರು ಸೇತುಂ ಸಮುದ್ರೇ ತ್ವಂ ಶಕ್ತೋಽಹ್ಯಸಿ ಮಹಾಮತೇ ।
ತದಾಽಬ್ರವೀನ್ನಲೋವಾಕ್ಯಂ ರಾಮಂ ಧರ್ಮಭೃತಾಂ ವರಂ ॥ ೯೦ ॥

---

ಕುರಿತು ಆ ರಾಮನು, "ಸೈನ್ಯದೊಂದಿಗೆ ನಾನು ರಾವಣಪಾಲಿತನಾದ ಲಂಕೆಗೆ ಹೋಗುವೆನು. ಅದಕ್ಕಾಗಿ ನೀನೀಗ ನಮಗೆ ದಾಟಲನುಕೂಲವಾಗುವಂತೆ ಶೋಷಿಸತಕ್ಕುದು" ಎಂದು ನುಡಿಯಲು ಮತ್ತೆ ಸಮುದ್ರನಿಂತೆಂದನು :—

೮೫–೮೬. "ರಾಮ! ನನ್ನ ಮಾತನ್ನಾಲಿಸು. ಬಳಿಕ ಮಾಡಬೇಕಾದು ದನ್ನು ಮಾಡು. ಸಸೈನ್ಯಕನಾಗಿ ದಾಟಲಿಚ್ಛಿಸುವ ನಿನ್ನ ಅಪ್ಪಣೆಯಂತೆ ನಾನೀಗ ಒಣಗಿಹೋದಲ್ಲಿ ಮತ್ತೆ ಇತರರೂ ಧನುಸ್ಸಿನ ಬಲದಿಂದಲೇ ನನ್ನಮೇಲೆ ಆಜ್ಞೆ ಹೂಡುವರು. ಆದಕಾರಣ ನಿನ್ನ ಸೈನ್ಯವು ದಾಟಲು ಮತ್ತೊಂದು ಉಪಾಯ ವನ್ನು ಹೇಳುವೆನು.

೮೭. ಶಿಲ್ಪಜ್ಞನೂ, ವಿಶ್ವಕರ್ಮನ ಮಗನೂ, ಶಿಲ್ಪದಲ್ಲಿ ತನ್ನ ತಂದೆ ಯನ್ನೂ ಮೀರಿಸಿದವನೂ ಆದ ನಲನೆಂಬ ವಾನರಶ್ರೇಷ್ಠನಿಲ್ಲಿಯೆ ಇರುವನು. ಅವನು ಮಹಾ ಬಲಾಢ್ಯನು.

೮೮–೮೯. ಅವನು ನನ್ನಲ್ಲಿ ಹಾಕಿದ ಕಟ್ಟಿಗೆ, ಕಲ್ಲು, ಹುಲ್ಲು ಏನೇ ಆಗಲಿ ಅವುಗಳನ್ನು ನಾನು ಹಾಗೆಯೆ ಹೊತ್ತಿರುವೆನು. ಅದು ನಿನಗೆ ಸೇತುವಾಗಿ ನಿಲ್ಲುವುದು. ಆ ಸೇತುವಿನ ಮೂಲಕವೇ ನೀನು ರಾವಣಪಾಲಿತವಾದ ಲಂಕೆಗೆ ಹೋಗು" ಎಂದು ಹೇಳಿ ಸಮುದ್ರರಾಜನು ಅಂತರ್ಹಿತನಾದನು. ತರುವಾಯ ರಾಮನು ಬುದ್ಧಿಶಾಲಿಯಾದ ನಲನನ್ನು ಕುರಿತು ಹೀಗೆಂದನು :—

೯೦. "ಎಲೈ ನಲನೇ! ಮಹಾ ಬುದ್ಧಿಶಾಲಿಯಾದ ನೀನು ಸಮರ್ಥ

ಅಹಂ ಸೇತುಂ ವಿಧಾಸ್ಯಾಮಿ ಹ್ಯಗಾಧೇ ವರುಣಾಲಯೇ ।
ಪಿತ್ರಾ ದತ್ತವರಶ್ಚಾಽಹಂ ಸಾಮರ್ಥ್ಯೇ ಚಾಽಪಿ ತತ್ಸಮಃ ॥ ೯೧ ॥
ಮಾತುರ್ಮಮ ವರೋ ದತ್ತೋ ಮಂದರೇ ವಿಶ್ವಕರ್ಮಣಾ ।
ಶಿಲ್ಪಕರ್ಮಣಿ ಮತ್ತುಲ್ಯೋ ಭವಿತಾ ತೇ ಸುತಸ್ತ್ವಿತಿ ॥ ೯೨ ॥
ಪುತ್ರೋಽಹಮೌರಸಸ್ತಸ್ಯ ತುಲ್ಯೋ ವೈ ವಿಶ್ವಕರ್ಮಣಾ ।
ಅದ್ಯೈವ ಕಾಮಂ ಬಧ್ನಂತು ಸೇತುಂ ವಾನರಪುಂಗವಾಃ ॥ ೯೩ ॥
ತತೋ ರಾಮನಿಸೃಷ್ಟಾಸ್ತೇ ವಾನರಾ ಬಲವತ್ತರಾಃ ।
ಪರ್ವತಾನ್ ಗಿರಿಶೃಂಗಾಣಿ ಲತಾತೃಣಮಹೀರುಹಾನ್ ॥ ೯೪ ॥
ಸಮಾಜಹ್ರುರ್ಮಹಾಕಾಯಾ ಗರುಡಾಽನಿಲರಂಹಸಃ ।
ನಲಶ್ಚಕ್ರೇ ಮಹಾಸೇತುಂ ಮಧ್ಯೇ ನದನದೀಪತೇಃ ॥ ೯೫ ॥
ದಶಯೋಜನವಿಸ್ತೀರ್ಣಂ ಶತಯೋಜನಮಾಯತಂ ।
ಜಾನಕೀರಮಣೋ ರಾಮಃ ಸೇತುಮೇವಮಕಾರಯತ್ ।
ನಲೇನ ವಾನರೇಂದ್ರೇಣ ವಿಶ್ವಕರ್ಮಸುತೇನ ವೈ ॥ ೯೬ ॥

---

ನಾಗಿರುವುದರಿಂದ ಈ ಸಾಗರದಲ್ಲಿ ಸೇತುವೆಯನ್ನು ನಿರ್ಮಾಣಮಾಡುವವನಾಗು.''

೯೧–೯೨. ಆಗ ನಲನು ಧರ್ಮಿಷ್ಠರಲ್ಲಿ ಶ್ರೇಷ್ಠನಾದ ರಾಮನನ್ನು ಕುರಿತು, ''ನನಗೆ ನಮ್ಮ ತಂದೆಯು ವರವನ್ನಿತ್ತಿರುವನು. ನಾನು ಬಲದಲ್ಲಿ ಆತನಿಗೆ ಸಮಾನನಾಗಿರುವೆನು. ಮಂದರಪರ್ವತದಲ್ಲಿ ವಿಶ್ವಕರ್ಮನು 'ಶಿಲ್ಪಿಕರ್ಮದಲ್ಲಿ ನನಗೆ ಸಮನಾದ ಪುತ್ರನು ಜನಿಸುವನು' ಎಂದು ನಮ್ಮ ತಾಯಿಗೆ ವರವನ್ನು ಕೊಟ್ಟಿರುವನು.

೯೩. ಇಂತು ವರವನ್ನು ಪಡೆದ ಆತನ ಮಗನಾದ ನಾನು ಶಿಲ್ಪದಲ್ಲಿ ಆತನಿಗೆ ಸಮನಾದುದರಿಂದ ಅಗಾಧವಾದ ಈ ಸಮುದ್ರದಲ್ಲಿ ಸೇತುವೆಯನ್ನು ನಿರ್ಮಿಸುವೆನು. ಈ ವಾನರಪುಂಗವರೆಲ್ಲರೂ ಈಗಲೇ ಇಷ್ಟಬಂದಂತೆ ಸ್ವೇಚ್ಛೆಯಾಗಿ ಸೇತುವನ್ನು ಕಟ್ಟಲು ನನ್ನ ಜೊತೆಗೆ ಬರಲಿ'' ಎಂದು ತಿಳಿಸಿದನು.

೯೪–೯೫. ಬಳಿಕ ಬಲಶಾಲಿಗಳೂ, ಮಹಾಕಾಯರೂ ಆದ ವಾನರರೆಲ್ಲರೂ ರಾಮನಿಂದ ಆಜ್ಞಪ್ತರಾಗಿ, ಬೆಟ್ಟಗಳನ್ನೂ, ಗಿರಿಶಿಖರಗಳನ್ನೂ, ಗಿಡಮರಗಳನ್ನೂ, ಹುಲ್ಲುಬಳ್ಳಿಗಳನ್ನೂ, ಗರುಡನಂತೆಯೂ, ವಾಯುವಿನಂತೆಯೂ, ವೇಗಶಾಲಿಗಳಾಗಿ ಹೊತ್ತುತಂದರು. ತರುವಾಯ ನಲನು ನದನದೀಪತಿಯಾದ ಸಮುದ್ರಮಧ್ಯದಲ್ಲಿ ಮಹಾಸೇತುವನ್ನು ನಿರ್ಮಿಸಿದನು.

೯೬. ಶ್ರೀಜಾನಕೀರಮಣನು ಹತ್ತುಗಾವುದದ ಅಗಲವೂ, ನೂರು

ತಮೇವಂ ಸೇತುಮಾಸಾದ್ಯ ರಾಮಚಂದ್ರೇಣ ಕಾರಿತಂ ।
ಸರ್ವೇ ಪಾತಕಿನೋ ಮರ್ತ್ಯಾ ಮುಚ್ಯಂತೇ ಸರ್ವಪಾತಕೈಃ ॥ ೯೭ ॥
ವ್ರತದಾನತಪೋಹೋಮೈರ್ನ ತಥಾ ತುಷ್ಯತೇ ಶಿವಃ ।
ಸೇತುಮಜ್ಜನಮಾತ್ರೇಣ ಯಥಾ ತುಷ್ಯತಿ ಶಂಕರಃ ॥ ೯೮ ॥
ನ ತುಲ್ಯಂ ವಿದ್ಯತೇ ತೇಜೋ ಯಥಾ ಸೌರೇಣ ತೇಜಸಾ ।
ಸೇತುಸ್ನಾನೇನ ಚ ತಥಾ ನ ತುಲ್ಯಂ ವಿದ್ಯತೇ ಕ್ವಚಿತ್ ॥ ೯೯ ॥
ತತ್ಸೇತುಮೂಲಂ ಲಂಕಾಯಾಂ ಯತ್ರ ರಾಮೋ ಯಿಯಾಸಯಾ ।
ವಾನರೈಃ ಸೇತುಮಾರೇಭೇ ಪುಣ್ಯಂ ಪಾಪಪ್ರಣಾಶನಂ ॥ ೧೦೦ ॥
ತದ್ದರ್ಭಶಯನಂ ನಾಮ್ನಾ ಪಶ್ಚಾಲ್ಲೋಕೇಷು ವಿಶ್ರುತಂ ॥ ೧೦೧ ॥
ಏವಮುಕ್ತಂ ಮಯಾ ವಿಪ್ರಾಃ ಸಮುದ್ರೇ ಸೇತುಬಂಧನಂ ।
ಅತ್ರ ತೀರ್ಥಾನ್ಯನೇಕಾನಿ ಸಂತಿ ಪುಣ್ಯಾನ್ಯನೇಕಶಃ ॥ ೧೦೨ ॥
ನ ಸಂಖ್ಯಾಂ ನಾಮಧೇಯಂ ವಾ ಶೇಷೋ ಗಣಯಿತುಂ ಕ್ಷಮಃ ।
ಕಿಂತ್ವಹಂ ಪ್ರಬ್ರವೀಮ್ಯದ್ಯ ತತ್ರ ತೀರ್ಥಾನಿ ಕಾನಿಚಿತ್ ॥ ೧೦೩ ॥

---

ಗಾವುದದ ಉದ್ದವೂ ಆದ ಸೇತುವನ್ನು ವಿಶ್ವಕರ್ಮಸುತನಾದ ನಲನಿಂದ ಈ ರೀತಿ ಕಟ್ಟಿಸಿದನು.

೯೭–೯೮. ಶ್ರೀರಾಮನಿರ್ಮಿತವಾದ ಆ ಸೇತುವನ್ನು ಸೇರಿ ಮಾನವರೆಲ್ಲರೂ ಮಹಾಪಾತಕಗಳಿಂದ ಮುಕ್ತರಾಗುತ್ತಾರೆ. ಶಂಕರನು ಸೇತುಸ್ನಾನದಿಂದ ಪಡೆಯುವಷ್ಟು ಸಂತೋಷವನ್ನು ವ್ರತ, ದಾನ, ಹೋಮ, ತಪಸ್ಸುಗಳಾವುಗಳಿಂದಲೂ ಪಡೆಯುವುದಿಲ್ಲವು.

೯೯–೧೦೦. ಸೇತುಸ್ನಾನದಿಂದ ಲಭಿಸುವ ತೇಜಸ್ಸು ಸೂರ್ಯನ ತೇಜಸ್ಸನ್ನೂ ಮೀರಿದುದು.. ಎಲೈ ವಿಪ್ರರೇ! ಲಂಕಾಗಮನವನ್ನು ಮಾಡಬಯಸಿ ಶ್ರೀರಾಮನು ನಲನಿಂದ ಸೇತುವನ್ನು ಕಟ್ಟಿಸಿ ವಾಸಮಾಡಿದ ಆ ಸೇತುವು ಪರಮಪವಿತ್ರವೂ, ಪಾಪಾಪನೋದಕವೂ ಆದುದು.

೧೦೧. ಆ ಸೇತು ಮೂಲವೇ ಆಮೇಲೆ ದರ್ಭಶಯನವೆಂದು ಲೋಕದಲ್ಲಿ ಖ್ಯಾತಿಪಡೆಯಿತು.

೧೦೨–೧೦೩. ಎಲೈ ಬ್ರಾಹ್ಮಣರೇ! ಈ ಪ್ರಕಾರವಾಗಿ ಸಾಗರದಲ್ಲಿ ಸೇತು ನಿರ್ಮಾಣವಾದುದೆಂತೆಂಬ ವಿಷಯವನ್ನು ನಿಮಗೆ ತಿಳಿಸಿದೆನು. ಅಲ್ಲಿ ಅನೇಕ ಪುಣ್ಯತೀರ್ಥಗಳು ವಾಸವಾಗಿವೆ. ಅವುಗಳ ಸಂಖ್ಯೆಯನ್ನಾಗಲಿ, ಹೆಸರುಗಳನ್ನಾಗಲಿ ಹೇಳಲು ಆದಿಶೇಷನಿಗೂ ಸಾಧ್ಯವಿಲ್ಲವು. ಅವುಗಳಲ್ಲಿ ಕೆಲವನ್ನು ಮಾತ್ರ ನಾನು ಹೇಳುವೆನು.

ಚತುರ್ವಿಂಶತಿತೀರ್ಥಾನಿ ಸಂತಿ ಸೇತೌ ಪ್ರಧಾನತಃ ।
ಪ್ರಥಮಂ ಚಕ್ರತೀರ್ಥಂ ಸ್ಯಾದ್ವೇತಾಲವರದಂ ತತಃ ॥ ೧೦೪ ॥
ತತಃ ಪಾಪವಿನಾಶಾರ್ಥಂ ತೀರ್ಥಂ ಲೋಕೇಷು ವಿಶ್ರುತಂ ।
ತತಃ ಸೀತಾಸರಃ ಪುಣ್ಯಂ ತತೋ ಮಂಗಲತೀರ್ಥಕಂ ॥ ೧೦೫ ॥
ತತಃ ಸಕಲಪಾಪಘ್ನೀ ನಾಮ್ನಾ ಚಾಽಮೃತವಾಪಿಕಾ ।
ಬ್ರಹ್ಮಕುಂಡಂ ತತಸ್ತೀರ್ಥಂ ತತಃ ಕುಂಡಂ ಹನೂಮತಃ ॥ ೧೦೬ ॥
ಅಗಸ್ತ್ಯಂ ಹಿ ತತಸ್ತೀರ್ಥಂ ರಾಮತೀರ್ಥಮತಃ ಪರಂ ।
ತತೋ ಲಕ್ಷ್ಮಣತೀರ್ಥಂ ಸ್ಯಾಜ್ಜಟಾತೀರ್ಥಮತಃ ಪರಂ ॥ ೧೦೭ ॥
ತತೋ ಲಕ್ಷ್ಮ್ಯಾಃ ಪರಂ ತೀರ್ಥಮಗ್ನಿತೀರ್ಥಮತಃ ಪರಂ ।
ಚಕ್ರತೀರ್ಥಂ ತತಃ ಪುಣ್ಯಂ ಶಿವತೀರ್ಥಮತಃ ಪರಂ ॥ ೧೦೮ ॥
ತತಃ ಶಂಖಾಭಿಧಂ ತೀರ್ಥಂ ತತೋ ಯಾಮುನತೀರ್ಥಕಂ ।
ಗಂಗಾತೀರ್ಥಂ ತತಃ ಪಶ್ಚಾದ್ಗಯಾತೀರ್ಥಮನಂತರಂ ॥ ೧೦೯ ॥
ತತಃ ಸ್ಯಾತ್ಕೋಟಿತೀರ್ಥಾಖ್ಯಂ ಸಾಧ್ಯಾನಾಮಮೃತಂ ತತಃ ।
ಮಾನಸಾಖ್ಯಂ ತತಸ್ತೀರ್ಥಂ ಧನುಷ್ಕೋಟಿಸ್ತತಃ ಪರಂ ॥ ೧೧೦ ॥
ಪ್ರಧಾನತೀರ್ಥಾನ್ಯೇತಾನಿ ಮಹಾಪಾಪ ಹರಾಣಿ ಚ ।
ಕಥಿತಾನಿ ದ್ವಿಜಶ್ರೇಷ್ಠಾಃ ಸೇತುಮಧ್ಯಗತಾನಿ ವೈ ॥ ೧೧೧ ॥
ಯಥಾ ಸೇತುಶ್ಚ ಬದ್ಧೋಽಭೂದ್ರಾಮೇಣ ಜಲಧೌ ಮಹಾನ್ ।
ಕಥಿತಂ ತಚ್ಚ ವಿಪ್ರೇಂದ್ರಾಃ ಪುಣ್ಯಂ ಪಾಪಹರಂ ತಥಾ ॥ ೧೧೨ ॥
ಯಚ್ಛ್ರುತ್ವಾ ಚ ಪಠಿತ್ವಾ ಚ ಮುಚ್ಯತೇ ಮಾನವೋ ಭುವಿ ॥ ೧೧೩ ॥

---

೧೦೪–೧೧೦. ಸೇತುವಿನಲ್ಲಿ ಇಪ್ಪತ್ತುನಾಲ್ಕು ತೀರ್ಥಗಳು ಪ್ರಧಾನವಾದುವು. ಅವುಗಳಲ್ಲಿ ಮೊದಲನೆಯದು ಚಕ್ರತೀರ್ಥ, ಬಳಿಕ ವೇತಾಲವರದ, ಅನಂತರ ಸುಪ್ರಸಿದ್ಧವಾದ ಪಾಪನಾಶಿನಿ, ಸೀತಾಸರೋವರ, ಮಂಗಳತೀರ್ಥ, ಪಾಪಘ್ನಿ, ಅಮೃತವಾಪಿಕಾ, ಬ್ರಹ್ಮಕುಂಡ, ಹನುಮತ್ಕುಂಡ, ಅಗಸ್ತ್ಯತೀರ್ಥ, ರಾಮತೀರ್ಥ, ಲಕ್ಷ್ಮಣತೀರ್ಥ, ಜಟಾಯುತೀರ್ಥ, ಲಕ್ಷ್ಮೀತೀರ್ಥ, ಅಗ್ನಿತೀರ್ಥ, ಚಕ್ರತೀರ್ಥ, ಶಿವತೀರ್ಥ, ಶಂಖತೀರ್ಥ, ಯಾಮುನತೀರ್ಥ, ಗಂಗಾತೀರ್ಥ, ಗಯಾತೀರ್ಥ, ಸಾಧ್ಯರಿಗೆ ಅಮೃತಪ್ರಾಯವಾದ ಕೋಟಿತೀರ್ಥ, ಮಾನಸತೀರ್ಥ, ದನುಷ್ಕೋಟಿತೀರ್ಥ ಇವು ಪ್ರಸಿದ್ಧವಾದುವು.

೧೧೧–೧೧೩. ಎಲೈ ದ್ವಿಜಪುಂಗವರೇ! ಯಾವುದನ್ನು ಕೇಳಿದರೂ, ಪಠಿಸಿದರೂ, ಲೋಕದಲ್ಲಿ ಮಾನವನು ಮೋಕ್ಷವನ್ನು ಹೊಂದುವನೊ, ಅಂತಹ ಪುಣ್ಯತಮವಾದ ರಾಮಕೃತ ಸೇತುಬಂಧನವನ್ನೂ, ಆ ಸೇತುವಿನ ಮಧ್ಯದಲ್ಲಿರುವ ಪಾಪನಾಶಕಗಳಾದ ಪ್ರಧಾನ ತೀರ್ಥಗಳನ್ನೂ ನಿಮಗೆ ತಿಳಿಸಿರುವೆನು.

ಅಧ್ಯಾಯಮೇನಂ ಪಠತೇ ಮನುಷ್ಯಃ
ಶೃಣೋತಿವಾಭಕ್ತಿಯುತೋ ದ್ವಿಜೇಂದ್ರಾಃ ।
ಸೋಽನಂತಮಾಪ್ನೋತಿ ಜಯಂ ಪರತ್ರ
ಪುನರ್ಭವಕ್ಲೇಶಮಸೌ ನ ಗಚ್ಛೇತ್ ॥ ೧೧೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ವಿಭೀಷಣ ಸಮಾಗಮಪರಿಯಂತ ರಾಮಾಯಣವೃತ್ತಾಂತವರ್ಣನಂ–ಸೇತುಬಂಧಃ–ಸೇತುಸ್ಥಿತ ಚಕ್ರತೀರ್ಥಾದಿ ಚತುರ್ವಿಂಶತಿ ತೀರ್ಥಮಾಹಾತ್ಮ್ಯವರ್ಣನಂ"ನಾಮ ದ್ವಿತೀಯೋಽಧ್ಯಾಯಃ

---

೧೧೪. ಈ ಅಧ್ಯಾಯವನ್ನು ಭಕ್ತಿಯಿಂದ ಓದುವವನಾಗಲಿ, ಕೇಳುವವನಾಗಲಿ, ಇಹಪರಲೋಕಗಳಲ್ಲಿ ಅನಂತವಾದ ವಿಜಯವನ್ನು ಹೊಂದುವುದಲ್ಲದೆ ಮತ್ತೆ ಮತ್ತೆ ಜನ್ಮವನ್ನು ತಾಳುವ ಕ್ಲೇಶವನ್ನೂ ಪಡೆಯಲಾರನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ವಿಭೀಷಣ ಸಮಾಗಮ ಪರಿಯಂತ ರಾಮಾಯಣ ವೃತ್ತಾಂತ ವರ್ಣನ–ಸೇತುಬಂಧ–ಸೇತುಸ್ಥಿತ ಚಕ್ರತೀರ್ಥಾದಿ ಚತುರ್ವಿಂಶತಿ ತೀರ್ಥ ಮಾಹಾತ್ಮ್ಯವರ್ಣನ"ವೆಂಬ ಎರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತೃತೀಯೋಽಧ್ಯಾಯಃ

### ಗಾಲವಾಖ್ಯಾನಂ — ಧರ್ಮತೀರ್ಥಸ್ಯ ಚಕ್ರತೀರ್ಥಪ್ರಥಾವರ್ಣನಂ

ಋಷಯ ಊಚು :—

ಚತುರ್ವಿಂಶತಿತೀರ್ಥಾನಿ ಯಾನ್ಯುಕ್ತಾನಿ ತ್ವಯಾ ಮುನೇ ।
ತೇಷಾಂ ಪ್ರಧಾನತೀರ್ಥಾನಾಂ ಸೇತೌ ಪಾಪವಿನಾಶನೇ ॥ ೧ ॥
ಆದಿಮಸ್ಯತು ತೀರ್ಥಸ್ಯ ಚಕ್ರತೀರ್ಥಮಿತಿ ಪ್ರಥಾ ।
ಕಥಂ ಸಮಾಗತಾ ಸೂತ ವದಾಽಸ್ಮಾಕಂ ಹಿ ಪೃಚ್ಛತಾಂ ॥ ೨ ॥

ಶ್ರೀ ಸೂತ ಉವಾಚ :—

ಚತುರ್ವಿಂಶತಿ ತೀರ್ಥಾನಾಂ ಪ್ರಧಾನಾನಾಂ ದ್ವಿಜೋತ್ತಮಾಃ ।
ಯದುಕ್ತಮಾದಿಮಂ ತೀರ್ಥಂ ಸರ್ವಲೋಕೇಷು ವಿಶ್ರುತಂ ॥ ೩ ॥
ಸ್ಮರಣಾತ್ತಸ್ಯ ತೀರ್ಥಸ್ಯ ಗರ್ಭವಾಸೋ ನ ವಿದ್ಯತೇ ।
ವಿಲಯಂ ಯಾಂತಿ ಪಾಪಾನಿ ಲಕ್ಷಜನ್ಮಕೃತಾನ್ಯಪಿ ॥ ೪ ॥
ತಸ್ಮಿಂಸ್ತೀರ್ಥೇ ಸಕೃತ್ಸ್ನಾನಾತ್ಸ್ಮರಣಾತ್ಕೀರ್ತನಾದಪಿ ।
ಲೋಕೇ ತತೋಽಧಿಕಂ ತೀರ್ಥಂ ತತ್ತುಲ್ಯಂ ವಾ ದ್ವಿಜೋತ್ತಮಾಃ ।
ನ ವಿದ್ಯತೇ ಮುನಿಶ್ರೇಷ್ಠಾಃ ಸತ್ಯಮುಕ್ತಮಿದಂ ಮಯಾ ॥ ೫ ॥

---

### ಕನ್ನಡದ ಅನುವಾದ

#### ಗಾಲವಾಖ್ಯಾನ—ಧರ್ಮತೀರ್ಥಕ್ಕೆ ಚಕ್ರತೀರ್ಥವೆಂದು ಪ್ರಸಿದ್ಧಿಬಂದುದು

೧–೨. ಋಷಿಗಳು ಕೇಳುತ್ತಾರೆ:—"ಎಲೈ ಸೂತಮಹಾಮುನಿಯೇ! ನೀನು ಈಗತಾನೆ ಅಪ್ಪಣೆಕೊಡಿಸಿದ ಪ್ರಧಾನ ತೀರ್ಥಗಳಲ್ಲಿ ಮೊದಲನೆಯ ತೀರ್ಥಕ್ಕೆ ಚಕ್ರತೀರ್ಥವೆಂದು ಹೆಸರುಬರಲು ಕಾರಣವೇನು? ಪೃಚ್ಛಕರಾದ ನಮಗೆ ಈ ವಿಷಯವನ್ನು ಅಪ್ಪಣೆಕೊಡಿಸು."

೩–೫. ಸೂತನು ಹೇಳುತ್ತಾನೆ:— "ಎಲೈ ಋಷಿವರ್ಯರೇ! ನಾನು ಹೇಳಿದಇಪ್ಪತ್ತುನಾಲ್ಕು ತೀರ್ಥಗಳಲ್ಲಿ ಮೊದಲನೆಯದಾದ ಚಕ್ರತೀರ್ಥವು ಸಮಸ್ತಲೋಕಗಳಲ್ಲಿಯೂ ಪ್ರಸಿದ್ಧವಾದುದು. ಅದರ ಸ್ಮರಣಮಾತ್ರದಿಂದಲೇ ಮಾನವನಿಗೆ ಜನ್ಮರಹಿತವಾದ ಮೋಕ್ಷವು ಲಭಿಸುವುದು. ಆ ತೀರ್ಥದಲ್ಲೊಮ್ಮೆ ಸ್ನಾನಮಾಡುವುದರಿಂದಾಗಲಿ, ಸ್ಮರಣದಿಂದಾಗಲಿ, ಕೀರ್ತನದಿಂದಾಗಲಿ, ಲಕ್ಷಜನ್ಮಗಳಿಂದಲೂ ಗಳಿಸಿದ ಪಾಪಗಳೆಲ್ಲವೂ ನಶಿಸುವುವು. ಲೋಕದಲ್ಲಿ ಇದಕ್ಕಿಂತಲೂ ಹೆಚ್ಚಿನದಾಗಲಿ, ಸಮಾನವಾದುದಾಗಲಿ ಆದ ಮತ್ತೊಂದು ತೀರ್ಥವು ಖಂಡಿತವಾಗಿಯೂ ಇರುವುದಿಲ್ಲವು. ಇದನ್ನು ನಾನು ಸತ್ಯವಾಗಿಯೂ ಹೇಳುವೆನು.

2

ಗಂಗಾ ಸರಸ್ವತೀ ರೇವಾ ಪಂಪಾ ಗೋದಾವರೀ ನದೀ ।
ಕಾಲಿಂದೀ ಚೈವ ಕಾವೇರೀ ನರ್ಮದಾ ಮಣಿಕರ್ಣಿಕಾ ॥ ೬ ॥
ಅನ್ಯಾನಿ ಯಾನಿ ತೀರ್ಥಾನಿ ನದ್ಯಃ ಪುಣ್ಯಾ ಮಹೀತಲೇ ।
ಅಸ್ಯ ತೀರ್ಥಸ್ಯ ವಿಪ್ರೇಂದ್ರಾಃ ಕೋಟ್ಯಂಶೇನಾಽಪಿ ನೋ ಸಮಾಃ ॥ ೭ ॥
ಧರ್ಮತೀರ್ಥಮಿತಿ ಪ್ರಾಹುಸ್ತತ್ತೀರ್ಥಂ ಹಿ ಪುರಾವಿದಃ ॥ ೮ ॥
ಸೇತುಮೂಲಂ ಹಿ ತತ್ಪ್ರೋಕ್ತಂ ತದ್ದರ್ಭಶಯನಂ ಮತಂ ।
ತತ್ರೈವ ಚಕ್ರತೀರ್ಥಂ ತು ಮಹಾಪಾತಕಮರ್ದನಂ ॥ ೯ ॥
ಯಥಾ ಸಮಾಗತಾ ತಸ್ಯ ಚಕ್ರತೀರ್ಥಮಿತಿ ಪ್ರಥಾ ।
ತದಿದಾನೀಂ ಪ್ರವಕ್ಷ್ಯಾಮಿ ಶೃಣುಧ್ವಂ ಮುನಿಪುಂಗವಾಃ ॥ ೧೦ ॥
ಪುರಾ ಹಿ ಗಾಲವೋ ನಾಮ ಮುನಿರ್ವಿಷ್ಣುಪರಾಯಣಃ ।
ದಕ್ಷಿಣಾಂಭೋನಿಧೇಸ್ತೀರೇ ಹಾಲಾಸ್ಯಾದವಿದೂರತಃ ॥ ೧೧ ॥
ಫುಲ್ಲಗ್ರಾಮಸಮೀಪೇ ಚ ತಥಾ ಕ್ಷೀರಸರೋಽಂತಿಕೇ ।
ಧರ್ಮಪುಷ್ಕರಿಣೀತೀರೇ ಸೋಽತಪ್ಯತ ಮಹತ್ತಪಃ ।
ಯುಗಾನಾಮಯುತಂ ಬ್ರಹ್ಮ ಗೃಣನ್ವಿಪ್ರಾಃ ಸನಾತನಂ ॥ ೧೨ ॥
ದಯಾಯುಕ್ತೋ ನಿರಾಹಾರಃ ಸತ್ಯವಾನ್ವಿಜಿತೇಂದ್ರಿಯಃ ॥ ೧೩ ॥
ಆತ್ಮವತ್ಸರ್ವಭೂತಾನಿ ಪಶ್ಯನ್ವಿಷಯನಿಸ್ಪೃಹಃ ।
ಸರ್ವಭೂತಹಿತೋ ದಾಂತಃ ಸರ್ವದ್ವಂದ್ವವಿವರ್ಜಿತಃ ॥ ೧೪ ॥

---

೬–೮. ಗಂಗಾ, ಸರಸ್ವತಿ, ರೇವಾ, ನರ್ಮದಾ, ಪಂಪಾ, ಗೋದಾವರಿ, ಯಮುನಾ, ಕಾವೇರಿ, ಮಣಿಕರ್ಣಿಕೆ ಮತ್ತು ಇತರ ಯಾವ ತೀರ್ಥಗಳೂ, ಯಾವ ನದಿಗಳೂ, ಭೂಲೋಕದಲ್ಲಿರುವುವೋ, ಅವೆಲ್ಲವೂ ಈ ತೀರ್ಥದ ಒಂದು ಕೋಟಿಯ ಒಂದು ಪಾಲನ್ನಾದರೂ ಹೋಲಲಾರವು. ಇದನ್ನೇ ಧರ್ಮತೀರ್ಥ ವೆಂದೂ ಪೂರ್ವಿಕರು ಹೇಳುವರು.

೯–೧೦. ಎಲೈ ಮುನಿಪುಂಗವರೇ! ಸೇತುಮೂಲವನ್ನೇ ದರ್ಭಶಯನ ವೆನ್ನುವರು. ಅಲ್ಲಿಯೇ ಮಹಾಪಾತಕಗಳನ್ನಡಗಿಸುವ ಚಕ್ರತೀರ್ಥವಿರುವುದು. ಅದಕ್ಕೆ ಆ ಹೆಸರು ಬರಲು ಕಾರಣವನ್ನು ಹೇಳುವೆನು; ಕೇಳಿರಿ.

೧೧–೧೪. ಹಿಂದೆ ವಿಷ್ಣುಭಕ್ತನಾದ ಗಾಲವಮುನಿಯು ದಕ್ಷಿಣಸಮುದ್ರದ ತೀರದಲ್ಲಿ ಶಿವಸಾನ್ನಿಧ್ಯದಲ್ಲಿಯೂ, ಫುಲ್ಲಗ್ರಾಮ ಮತ್ತು ಕ್ಷೀರಸರೋವರಗಳ ಬಳಿಯೂ, ಧರ್ಮಪುಷ್ಕರಿಣಿಯ ದಡದಲ್ಲಿಯೂ, ಸನಾತನನಾದ ಪರಬ್ರಹ್ಮನನ್ನು ಕುರಿತು ಹತ್ತುಸಾವಿರ ವರ್ಷಗಳಕಾಲ ಮಹಾತಪಸ್ಸನ್ನು ಆಚರಿಸಿದನು. ಆತನು ದಯಾಯುಕ್ತನೂ, ನಿರಾಹಾರಿಯೂ, ಸತ್ಯವಂತನೂ, ಜಿತೇಂದ್ರಿಯನೂ, ಸರ್ವಪ್ರಾಣಿಗಳನ್ನೂ ತನ್ನಂತೆಯೇ ಕಾಣುವವನೂ, ವಿಷಯಗಳಲ್ಲಿ ನಿಸ್ಪೃಹನೂ,

ವರ್ಷಾಣಿ ಕತಿಚಿತ್ಸೋಽಯಂ ಜೀರ್ಣಪರ್ಣಾಶನೋಽಭವತ್ ।
ಕಿಂಚಿತ್ಕಾಲಂ ಜಲಾಹಾರಃ ವಾಯುಭಕ್ಷಃ ಕಿಯತ್ಸಮಾಃ ॥ ೧೫ ॥
ಏವಂ ಪಂಚಸಹಸ್ರಾಣಿ ವರ್ಷಾಣಿ ಸ ಮಹಾಮುನಿಃ ।
ಅತಪ್ಯತ ತಪೋ ಘೋರಂ ದೇವೈರಪಿ ಸುದುಷ್ಕರಂ ॥ ೧೬ ॥
ತತಃ ಪಂಚಸಹಸ್ರಾಣಿ ವರ್ಷಾಣಿ ಮುನಿಪುಂಗವಃ ।
ನಿರಾಹಾರೋ ನಿರಾಲೋಕೋ ನಿರುಚ್ಛ್ವಾಸೋ ನಿರಾಸ್ಪದಃ ॥ ೧೭ ॥
ವರ್ಷಾಸ್ವಾಸಾರಸಹನಂ ಹೇಮಂತೇಷು ಜಲೇಶಯಃ ।
ಗ್ರೀಷ್ಮೇ ಪಂಚಾಽಗ್ನಿಮಧ್ಯಸ್ಥೋ ವಿಷ್ಣುಧ್ಯಾನಪರಾಯಣಃ ॥ ೧೮ ॥
ಜಪನ್ನಷ್ಟಾಕ್ಷರಂ ಮಂತ್ರಂ ಧ್ಯಾಯನ್ ಹೃದಿ ಜನಾರ್ದನಂ ।
ತತಾಪ ಸುಮಹಾತೇಜಾ ಗಾಲವೋ ಮುನಿಪುಂಗವಃ ।
ಏವಂತ್ವಯುತವರ್ಷಾಣಿ ಸಮತೀತಾನಿ ವೈ ಮುನೇಃ ॥ ೧೯ ॥
ಅಥ ತತ್ತಪಸಾ ತುಷ್ಟೋ ಭಗವಾನ್ ಕಮಲಾಪತಿಃ ॥ ೨೦ ॥
ಪ್ರತ್ಯಕ್ಷತಾಮುಗಾತ್ತಸ್ಯ ಶಂಖಚಕ್ರಗದಾಧರಃ ।
ವಿಕಚಾಂಬುಜಪತ್ರಾಕ್ಷಃ ಸೂರ್ಯಕೋಟಿಸಮಪ್ರಭಃ ॥ ೨೧ ॥

---

ಸರ್ವಭೂತಹಿತಂಕರನೂ, ದಾಂತನೂ, ಸುಖದುಃಖಾದಿ ದ್ವಂದ್ವವಿವರ್ಜಿತನೂ ಆಗಿದ್ದನು.

೧೫–೧೭. ಆತನು ಜೀರ್ಣಪರ್ಣಾಶನನಾಗಿ ಕೆಲವು ವರ್ಷಗಳೂ, ಜಲಾಹಾರಿಯಾಗಿ ಕೆಲವು ಕಾಲವೂ, ವಾಯುಭಕ್ಷಕನಾಗಿ ಕೆಲವು ವರ್ಷಗಳೂ, ಈ ರೀತಿಯಾಗಿ ಐದುಸಾವಿರ ವರ್ಷಗಳಕಾಲ ದೇವತೆಗಳಿಗೂ ಅಶಕ್ಯವಾದ ಘೋರ ತಪಸ್ಸನ್ನು ಮಾಡಿದನು. ಬಳಿಕ ಆತನು ಐದುಸಾವಿರ ವರ್ಷಗಳು ನಿರಾಹಾರಿಯಾಗಿಯೂ, ಬೆಳಕನ್ನು ಕಾಣದವನಾಗಿಯೂ, ಉಸಿರನ್ನು ಬಿಡದೆಯೂ, ನಿರಾಲಂಬನಾಗಿಯೂ ತಪವಂಗೈಯುತ್ತಿದ್ದನು.

೧೮–೧೯. ವರ್ಷಾಕಾಲದಲ್ಲಿ ಜಲಧಾರೆಗಳನ್ನು ಸಹಿಸಿಯೂ, ಹೇಮಂತದಲ್ಲಿ ನೀರಲ್ಲಿ ಮಲಗಿಯೂ, ಗ್ರೀಷ್ಮದಲ್ಲಿ ಪಂಚಾಗ್ನಿಮಧ್ಯದಲ್ಲಿಯೂ, ವಿಷ್ಣುಧ್ಯಾನಪರಾಯಣನಾಗಿ ಅಷ್ಟಾಕ್ಷರಿಯನ್ನು ಜಪಿಸುತ್ತಾ, ಜನಾರ್ದನನನ್ನು ಮನದಲ್ಲಿ ನೆನದು ತೇಜಶ್ಶಾಲಿಯಾಗಿ ಆ ಗಾಲವಮುನಿಯು ತಪವನ್ನು ಮಾಡುತ್ತಿರಲು ಹತ್ತುಸಾವಿರ ವರ್ಷಗಳು ಕಳೆದುವು.

೨೦–೨೮. ಶಂಖಚಕ್ರಗದಾಧಾರಿಯೂ, ಅರಳಿದ ಕನ್ನೈದಿಲೆಗಳಂತಿರುವ ಕಣ್ಣುಗಳುಳ್ಳವನೂ, ಕೋಟಿಸೂರ್ಯಪ್ರಭಾಸಮಾನನೂ, ಗರುಡಾರೂಢನೂ, ಛತ್ರಚಾಮರಗಳಿಂದೊಪ್ಪುವವನೂ, ಕಿರೀಟ ಹಾರ ಕಟಕಕೇಯೂರಗಳಿಂದ ಕಂಗೊಳಿಸುವವನೂ, ವಿಷ್ವಕ್ಸೇನಸುನಂದಾದಿಗಳಿಂದ ಸಂಸೇವ್ಯಮಾನನೂ,

ವಿನತಾನಂದನಾರೂಢಶ್ಛತ್ರಚಾಮರಶೋಭಿತಃ ।
ಹಾರಕೇಯೂರಮುಕುಟಕಟಕಾದಿವಿಭೂಷಿತಃ ॥ ೨೨ ॥
ವಿಷ್ವಕ್ಸೇನಸುನಂದಾದಿಕಿಂಕರೈಃ ಪರಿವಾರಿತಃ ।
ವೀಣಾವೇಣುಮೃದಂಗಾದಿವಾದಕೈರ್ನಾರದಾದಿಭಿಃ ॥ ೨೩ ॥
ಉಪಗೀಯಮಾನವಿಜಯಃ ಪೀತಾಂಬರವಿರಾಜಿತಃ ।
ಲಕ್ಷ್ಮೀವಿರಾಜಿತೋರಸ್ಕೋ ನೀಲಮೇಘಸಮುಚ್ಛವಿಃ ॥ ೨೪ ॥
ಧುನಾನಃ ಪದ್ಮಮೇಕೇನ ಪಾಣಿನಾ ಮಧುಸೂದನಃ ।
ಸನಕಾದಿಮಹಾಯೋಗಿಸೇವಿತಃ ಪಾರ್ಶ್ವಯೋರ್ದ್ವಯೋಃ ॥ ೨೫ ॥
ಮಂದಸ್ಮಿತೇನ ಸಕಲಂ ಮೋಹಯನ್ ಭುವನತ್ರಯಂ ।
ಸ್ವಭಾಸಾ ಭಾಸಯನ್ಸರ್ವಾ ದಿಶೋ ದಶ ಚ ಭೂಸುರಾಃ ॥ ೨೬ ॥
ಕಂಠಲಗ್ನೇನ ಮಣಿನಾ ಕೌಸ್ತುಭೇನ ಚ ಶೋಭಿತಃ ।
ಸುವರ್ಣವೇತ್ರಹಸ್ತೈಶ್ಚ ಸೌವಿದಲ್ಲೈರನೇಕಶಃ ॥ ೨೭ ॥
ಅನನ್ಯದುರ್ಲಭಾಃಚಿಂತ್ಯಗೀಯಮಾನನಿಜಾದ್ಭುತಃ ।
ಸುಭಕ್ತಸುಲಭೋ ದೇವೋ ಲಕ್ಷ್ಮೀಕಾಂತೋ ಹರಿಃ ಸ್ವಯಂ ।
ಸನ್ನ್ಯಧತ್ತ ಪುರಸ್ತಸ್ಯ ಗಾಲವಸ್ಯ ಮಹಾಮುನೇಃ ॥ ೨೮ ॥
ಆವಿರ್ಭೂತಂ ತದಾ ದೃಷ್ಟ್ವಾ ಶ್ರೀವತ್ಸಾಂಕಿತವಕ್ಷಸಂ ।
ಪೀತಾಂಬರಧರಂ ದೇವಂ ತುಷ್ಟಿಂ ಪ್ರಾಪ ಮಹಾಮುನಿಃ ॥ ೨೯ ॥
ಭಕ್ತ್ಯಾ ಪರಮಯಾ ಯುಕ್ತಸ್ತುಷ್ಟಾವ ಜಗದೀಶ್ವರಂ ॥ ೩೦ ॥

---

ವೀಣಾ ವೇಣು ಮೃದಂಗಧಾರಿಗಳಾದ ನಾರದಾದಿಗಳಿಂದ ಗೀಯಮಾನವಾದ ವಿಜಯವೈಭವಗಳುಳ್ಳವನೂ, ಪೀತಾಂಬರಶೋಭಿತನೂ, ಶ್ರೀವತ್ಸದಿಂದ ಕಂಗೊಳಿಸುವ ಎದೆಯುಳ್ಳವನೂ, ನೀಲಮೇಘಶ್ಯಾಮಲನೂ, ಭಕ್ತಿಸುಲಭನೂ, ಒಂದು ಕೈಯಲ್ಲಿ ಕಮಲವನ್ನು ಧರಿಸಿದವನೂ, ಇರ್ಕಡೆಗಳಲ್ಲಿಯೂ ಸನಕಾದಿ ಮಹಾಮುನಿಗಳು ಸೇವೆ ಸಲ್ಲಿಸುತ್ತಿರಲು ಕಿರುನಗೆಯಿಂದ ಭುವನತ್ರಯಗಳನ್ನೂ ಮೋಹಗೊಳಿಸುತ್ತ ತನ್ನ ಕಾಂತಿಯಿಂದ ದಿಕ್ಕುಗಳನ್ನು ಬೆಳಗುತ್ತ ಕೌಸ್ತುಭ ಮಣಿಯು ಕತ್ತಿನಲ್ಲಿ ಕಂಗೊಳಿಸಲು, ಕಂಚುಕಿಗಳು ಚಿನ್ನದ ಬೆತ್ತಗಳನ್ನು ಹಿಡಿದು ದರ್ಪವನ್ನು ಮೆರೆಯಿಸುತ್ತ ಇತರರಿಗೆ ದೊರಕಲಾರದ ಊಹಿಸಲಾಗದ ಅದ್ಭುತ ಚರಿತ್ರವನ್ನು ಹೊಗಳುತ್ತಿರಲು ಬಹುವಾಗಿ ಶೋಭಿಸುತ್ತಿರುವವನೂ ಆಗಿ ಆ ಗಾಲವಮಹರ್ಷಿಗೆ ಕಾಣಿಸಿಕೊಂಡನು.

೨೯–೩೦. ಆ ಮಹಾಮುನಿಯು ಹೀಗೆ ಪ್ರತ್ಯಕ್ಷನಾದ ಆ ಶ್ರೀವತ್ಸಾಂಕಿತನನ್ನು ಕಂಡು ಸಂತೋಷಗೊಂಡು ಪರಮಭಕ್ತಿಯುಕ್ತನಾಗಿ ಈ ಪ್ರಕಾರವಾಗಿ ಸ್ತೋತ್ರಮಾಡತೊಡಗಿದನು.

ಗಾಲವ ಉವಾಚ :—

ನಮೋ ದೇವಾದಿದೇವಾಯ ಶಂಖಚಕ್ರಗದಾಭೃತೇ ।
ನಮೋ ನಿತ್ಯಾಯ ಶುದ್ಧಾಯ ಸಚ್ಚಿದಾನಂದರೂಪಿಣೇ ॥ ೩೧ ॥
ನಮೋ ಭಕ್ತಾರ್ತಿಹಂತ್ರೇ ತೇ ಹವ್ಯಕವ್ಯಸ್ವರೂಪಿಣೇ ।
ನಮಸ್ತ್ರಿಮೂರ್ತಯೇ ತುಭ್ಯಂ ಸೃಷ್ಟಿಸ್ಥಿತ್ಯಂತಕಾರಿಣೇ ॥ ೩೨ ॥
ನಮಃ ಪರೇಶಾಯ ನಮೋ ವಿಭೂಮ್ನೇ
ನಮೋಽಸ್ತು ಲಕ್ಷ್ಮೀಪತಯೇ ವಿಧಾತ್ರೇ ।
ನಮೋಽಸ್ತು ಸೂರ್ಯೇಂದುವಿಲೋಚನಾಯ
ನಮೋ ವಿರಿಂಚ್ಯಾದ್ಯಭಿವಂದಿತಾಯ ॥ ೩೩ ॥
ಯೋ ನಾಮಜಾತ್ಯಾದಿವಿಕಲ್ಪಹೀನಃ
ಸಮಸ್ತದೋಷೈರಪಿ ವರ್ಜಿತೋ ಯಃ ।
ಸಮಸ್ತಸಂಸಾರಭಯಾಽಪಹಾರಿಣೇ
ತಸ್ಮೈ ನಮೋ ದೈತ್ಯವಿನಾಶನಾಯ ॥ ೩೪ ॥
ವೇದಾಂತವೇದ್ಯಾಯ ರಮೇಶ್ವರಾಯ
ವೈಕುಂಠವಾಸಾಯ ವಿಧಾತೃಪಿತ್ರೇ ।
ನಮೋ ನಮಃ ಸತ್ಯಜನಾರ್ತಿಹಾರಿಣೇ
ನಾರಾಯಣಾಯಾಽಮಿತವಿಕ್ರಮಾಯ ॥ ೩೫ ॥

---

೩೧–೩೨. ಗಾಲವನು ಸ್ತುತಿಸುತ್ತಾನೆ:—"ಶಂಖಚಕ್ರಗದಾಧರನಾದ ಓ ದೇವದೇವ! ನಿನಗೆ ನಮಸ್ಕಾರವು. ನಿತ್ಯಶುದ್ಧನಾದ ಎಲೈ ಸಚ್ಚಿದಾನಂದ ರೂಪನೇ! ನಿನಗೆ ನಮಸ್ಕಾರವು. ಹವ್ಯಕವ್ಯಸ್ವರೂಪಿಯಾದ ಓ ಭಕ್ತಾರ್ತಿ ಭಂಜಕ! ನಿನಗೆರಗುವೆನು. ಸೃಷ್ಟಿಸ್ಥಿತಿಸಂಹಾರಕಾರಕನೂ, ತ್ರಿಮೂರ್ತ್ಯಾತ್ಮಕನೂ ಆದ ನಿನಗೆ ವಂದಿಸುವೆನು.

೩೩. ಪರೇಶನೂ, ವಿಭುವೂ, ಲಕ್ಷ್ಮೀಪತಿಯೂ, ವಿಧಾತನೂ, ಸೂರ್ಯೇಂದುನೇತ್ರನೂ, ಬ್ರಹ್ಮಾದಿವಂದಿತನೂ, ಆದ ನಿನಗೆ ನಮಸ್ಕಾರವಿರಲಿ.

೩೪. ಯಾವನಿಗೆ ನಾಮ ಜಾತ್ಯಾದಿ ವಿಕಾರಗಳಿಲ್ಲವೋ, ಯಾವನು ಸಕಲ ದೋಷರಹಿತನೋ, ಅಂತಹ ದೈತ್ಯವಿನಾಶಕನೂ, ಸಂಸಾರ ಭಯವನ್ನು ನೀಗುವವನೂ ಆದ ಓ ಪ್ರಭುವೇ! ನಿನಗೆ ನಮೋ ನಮಃ!

೩೫. ವೇದಾಂತವೇದ್ಯನೂ, ರಮಾಪತಿಯೂ, ವೈಕುಂಠವಾಸನೂ, ವಿಧಾತೃಪಿತನೂ, ಸತ್ಯವಚನರನ್ನು ಪೊರೆಯುವವನೂ, ಅಮಿತಪರಾಕ್ರಮಿಯೂ ಆದ ಓ ಶ್ರೀಮನ್ನಾರಾಯಣಾ! ನಿನಗೆ ನಮೋ ನಮಃ!

ನಮಸ್ತುಭ್ಯಂ ಭಗವತೇ ವಾಸುದೇವಾಯ ಶಾರ್ಙ್ಗಿಣೇ ।
ಭೂಯೋ ಭೂಯೋ ನಮಸ್ತುಭ್ಯಂ ಶೇಷಪರ್ಯಂಕಶಾಯಿನೇ ॥ ೩೬ ॥
ಇತಿ ಸ್ತುತ್ವಾ ಹರಿಂ ವಿಪ್ರಾಸ್ತೂಷ್ಣೀಮಾಸ್ತೇ ಸ ಗಾಲವಃ ।
ಶ್ರುತ್ವಾ ಸ್ತುತಿಂ ಶ್ರುತಿಸುಖಾಂ ಹರಿಸ್ತಸ್ಯ ಮಹಾತ್ಮನಃ ॥ ೩೭ ॥
ಅವಾಪ ಪರಮಂ ತೋಷಂ ಶಂಖಚಕ್ರಗದಾಧರಃ ।
ಅಥಾಽಽಲಿಂಗ್ಯ ಮುನಿಂ ಶೌರಿಶ್ಚತುರ್ಭಿರ್ಬಾಹುಭಿಸ್ತದಾ ।
ಬಭಾಷೇ ಪ್ರೀತಿಸಂಯುಕ್ತೋ ವರೋ ವೈ ವ್ರಿಯತಾಮಿತಿ ॥ ೩೮ ॥
ತುಷ್ಟೋಽಸ್ಮಿ ತಪಸಾ ತೇಽದ್ಯ ಸ್ತೋತ್ರೇಣಾಽಪಿ ಚ ಗಾಲವ ।
ನಮಸ್ಕಾರೇಣ ಚ ಪ್ರೀತೋ ವರದೋಽಹಂ ತವಾಽಽಗತಃ ॥ ೩೯ ॥

ಗಾಲವ ಉವಾಚ:—

ನಾರಾಯಣ ರಮಾನಾಥ ಪೀತಾಂಬರ ಜಗನ್ಮಯ ॥ ೪೦ ॥
ಜನಾರ್ದನ ಜಗದ್ಧಾಮನ್ ಗೋವಿಂದ ನರಕಾಂತಕ ।
ತ್ವದ್ದರ್ಶನಾತ್ಕೃತಾಽರ್ಥೋಽಸ್ಮಿ ಸರ್ವಸ್ಮಾದಧಿಕಸ್ತಥಾ ॥ ೪೧ ॥
ತ್ವಾಂ ನ ಪಶ್ಯಂತ್ಯಧರ್ಮಿಷ್ಠಾ ಯತಸ್ತ್ವಂ ಧರ್ಮಪಾಲಕಃ ।
ಯನ್ನ ವೇತ್ತಿ ಭವೋ ಬ್ರಹ್ಮಾ ಯನ್ನ ವೇತ್ತಿ ತ್ರಯೀ ತಥಾ ॥ ೪೨ ॥
ತಂ ವೇದ್ಮಿ ಪರಮಾತ್ಮಾನಂ ಕಿಮಸ್ಮಾದಧಿಕಂ ವರಂ ।
ಯೋಗಿನೋ ಯಂ ನ ಪಶ್ಯಂತಿ ಯಂ ನ ಪಶ್ಯಂತಿ ಕರ್ಮಠಾಃ ॥ ೪೩ ॥

---

೩೬. ಭಗವಂತನೂ, ಶಾರ್ಙ್ಗಧರನೂ, ಶೇಷಶಾಯಿಯೂ, ವಾಸುದೇವನೂ ಆದ ನಿನ್ನನ್ನು ಬಾರಿ ಬಾರಿಗೂ ವಂದಿಸುವೆನು.''

೩೭–೩೮. ಇಂತು ಆ ಗಾಲವನು ಶ್ರೀಹರಿಯನ್ನು ಸ್ತುತಿಸಿ ಸುಮ್ಮನಾಗಲು, ಕಿವಿಗಿಂಪಾದ ಆತನ ಸ್ತೋತ್ರಕ್ಕೆ ಮೆಚ್ಚಿ ಶಂಖಚಕ್ರಗದಾಧಾರಿಯಾದ ಆ ವಾಸುದೇವನು ತನ್ನ ನಲ್ತೋಳುಗಳಿಂದಲೂ ಆತನನ್ನಪ್ಪಿಕೊಂಡು ಪ್ರೀತಿಯುಕ್ತನಾಗಿ ಹೀಗೆಂದನು :—

೩೯. '' ಎಲೈ ಗಾಲವನೇ! ನಿನ್ನ ತಪಸ್ಸಿನಿಂದಲೂ, ಸ್ತೋತ್ರ ನಮಸ್ಕಾರಗಳಿಂದಲೂ ತೃಪ್ತನಾಗಿ ವರವನ್ನು ನೀಡಲು ಬಂದಿರುವೆನು. ವರವನ್ನು ಬೇಡು.''

೪೦–೪೫. ಗಾಲವನು ಹೇಳುತ್ತಾನೆ:—'' ಓ ನಾರಾಯಣನೇ! ರಮಾಕಾಂತ, ಪೀತಾಂಬರಧರ, ಜಗನ್ಮಯ, ಜನಾರ್ದನ, ಜಗನ್ನಿವಾಸ, ಗೋವಿಂದ, ನರಕಾಂತಕ! ಎಲ್ಲಕ್ಕಿಂತಲೂ ಹೆಚ್ಚಿನದಾದ ನಿನ್ನ ದರ್ಶನದಿಂದ ನಾನೀಗ ಕೃತಕೃತ್ಯನಾದೆನು. ಧರ್ಮರಕ್ಷಕನಾದ ನಿನ್ನನ್ನು ಅಧರ್ಮಿಷ್ಠರೆಂತು ತಾನೆ ಕಂಡಾರು? ಈಶ್ವರನೂ, ಬ್ರಹ್ಮನೂ, ವೇದಗಳೂ ಕೂಡ ಅರಿಯಲಾರದ

ತಂ ಪಶ್ಯಾಮಿ ಜಗದ್ದೇವಂ ಕಿಮಸ್ಮಾದಧಿಕಂ ವರಂ ।
ಏತೇನ ಚ ಕೃತಾರ್ಥೋಽಸ್ಮಿ ಜನಾರ್ದನ ಜಗತ್ಪತೇ ॥ ೪೪ ॥
ಯನ್ನಾಮಸ್ಮೃತಿಮಾತ್ರೇಣ ಮಹಾಪಾತಕಿನೋಽಪಿ ಚ ।
ಮುಕ್ತಿಂ ಪ್ರಯಾಂತಿ ಮುನಯಸ್ತಂ ಪಶ್ಯಾಮಿ ಜನಾರ್ದನಂ ।
ತ್ವತ್ಪಾದಪದ್ಮಯುಗಲೇ ನಿಶ್ಚಲಾ ಭಕ್ತಿರಸ್ತು ಮೇ ॥ ೪೫ ॥

ಶ್ರೀ ಹರಿರುವಾಚ :—

ಮಯಿ ಭಕ್ತಿರ್ದೃಢಾ ತೇಽಸ್ತು ನಿಷ್ಕಾಮಾ ಗಾಲವಾಧುನಾ ॥ ೪೬ ॥
ಶೃಣು ಚಾಽಪ್ಯಪರಂ ವಾಕ್ಯಂ ಉಚ್ಯಮಾನಂ ಮಯಾ ಮುನೇ ।
ಮದರ್ಥಂ ಕರ್ಮ ಕುರ್ವಾಣೋ ಮದ್ಧ್ಯಾನೋ ಮತ್ಪರಾಯಣಃ ॥೪೭॥
ಏತತ್ಪ್ರಾರಬ್ಧದೇಹಾಂತೇ ಮತ್ಸ್ವರೂಪಮವಾಪ್ಸ್ಯಸಿ ।
ಅಸ್ಮಿನ್ನೇವಾಶ್ರಮೇ ವಾಸಂ ಕುರುಷ್ವ ಮುನಿಪುಂಗವ ॥ ೪೮ ॥
ಧರ್ಮಪುಷ್ಕರಿಣೀ ಚೇಯಂ ಪುಣ್ಯಾ ಪಾಪವಿನಾಶಿನೀ ।
ಅಸ್ಯಾಸ್ತೀರೇ ತಪಃ ಕುರ್ವಂಸ್ತಪಃಸಿದ್ಧಿಮವಾಪ್ನುಯಾತ್ ॥ ೪೯ ॥
ಧರ್ಮಃ ಪುರಾ ಸಮಾಗತ್ಯ ದಕ್ಷಿಣಸ್ಯೋದಧೇಸ್ತಟೇ ।
ತಪಸ್ತೇಪೇ ಮಹಾದೇವಂ ಚಿಂತಯನ್ಮನಸಾ ತದಾ ॥ ೫೦ ॥

---

ಪರಮಾತ್ಮನಾದ ನಿನ್ನ ದರ್ಶನಕ್ಕಿಂತಲೂ ಹೆಚ್ಚಿನ ವರವು ಮತ್ತೊಂದಿರುವುದೆ? ಯಾವನನ್ನು ಯೋಗಿಗಳೂ, ಕರ್ಮಠರೂ ಕೂಡ ಕಾಣಲಾರರೋ ಅಂತಹ ಪರಮಾತ್ಮನಾದ ನಿನ್ನನ್ನು ನಾನೀಗ ಕಂಡೆನು. ಇದಕ್ಕಿಂತಲೂ ಹೆಚ್ಚಿನ ವರವು ಮತ್ತೊಂದುಂಟೇ? ಎಲೈ ಜನಾರ್ದನನೆ, ಜಗತ್ಪತಿಯೆ! ಇದರಿಂದಲೇ ನಾನು ಕೃತಾರ್ಥನಾದೆನು. ಯಾವ ನಿನ್ನ ನಾಮದ ನೆನಪಿನಿಂದ ಪಾಪಿಗಳೂ ಮೋಕ್ಷವನ್ನು ಪಡೆಯುವರೋ ಆ ನಿನ್ನನ್ನು ಕಂಡೆನು. ನಿನ್ನಡಿದಾವರೆಗಳಲ್ಲಿ ಅಚ್ಚಳಿಯದ ಭಕ್ತಿಯೊಂದಿರಲಿ, ಅಷ್ಟೆ ನನಗೆ ಸಾಕು."

೪೬–೪೮. ಹರಿಯು ಹೇಳುತ್ತಾನೆ:—"ಎಲೈ ಗಾಲವನೇ! ನನ್ನಲ್ಲಿ ನಿನಗೆ ದೃಢವಾದ ಭಕ್ತಿಯಿರಲಿ. ನನ್ನನ್ನು ನೆನೆದು, ನನ್ನಲ್ಲಿಯೇ ಭಕ್ತಿಯಿಟ್ಟು, ನನಗಾಗಿಯೇ ಕರ್ಮಗಳನ್ನು ಮಾಡುವ ನೀನು, ಪ್ರಾರಬ್ಧದಿಂದ ಬಂದ ಈ ದೇಹದ ಅಂತದಲ್ಲಿ ನನ್ನ ಸ್ವರೂಪವನ್ನೇ ಪಡೆಯುವೆ. ನೀನು ಈ ಆಶ್ರಮದಲ್ಲಿಯೇ ವಾಸನಾಗಿರು.

೪೯. ಈ ಧರ್ಮಪುಷ್ಕರಿಣಿಯು ಪುಣ್ಯವೂ, ಪಾಪವಿನಾಶಕವೂ ಆದುದು. ಇದರ ಬಳಿ ತಪವನ್ನು ಮಾಡುವವನು ಸಿದ್ಧಿಯನ್ನು ಪಡೆಯುತ್ತಾನೆ.

೫೦–೫೧. ಹಿಂದೆ ಧರ್ಮಪುರುಷನು ದಕ್ಷಿಣ ಸಮುದ್ರದ ದಡಕ್ಕೆ ಬಂದು ಪರಮೇಶ್ವರನನ್ನು ಕುರಿತು ತಪವನ್ನಾಚರಿಸುತ್ತ ಸ್ನಾನಕ್ಕಾಗಿ ಇಲ್ಲೊಂದು

ಸ್ನಾನಾರ್ಥಮೇಕಂ ತೀರ್ಥಂ ಚ ಚಕ್ರೇ ಧರ್ಮೋ ಮಹಾಮುನೇ ।
ಧರ್ಮಪುಷ್ಕರಿಣೀ ತೇನ ಪ್ರಸಿದ್ಧಾ ತತ್ಕೃತಾ ಯತಃ ॥ ೫೧ ॥
ತ್ವಯಾ ಯಥಾ ತಪಸ್ತಪ್ತಮಿದಾನೀಂ ಮುನಿಸತ್ತಮ ।
ತಥಾ ತಪ್ತಂ ತಪಸ್ತೇನ ಧರ್ಮೇಣ ಹರಸೇವಿನಾ ॥ ೫೨ ॥
ತಪಸಾ ತಸ್ಯ ತುಷ್ಟಃ ಸನ್ ಶೂಲಪಾಣಿರ್ಮಹೇಶ್ವರಃ ।
ಪ್ರಾದುರಾಸೀತ್ಸ್ವಯಾ ದೀಪ್ತ್ಯಾ ದಿಶೋ ದಶ ವಿಭಾಸಯನ್ ॥ ೫೩ ॥
ಅಥಾಽಽಶ್ರಮಮನುಪ್ರಾಪ್ತಂ ಮಹಾದೇವಂ ಕೃಪಾನಿಧಿಂ ।
ಧರ್ಮಃ ಪರಮಸಂತುಷ್ಟಸ್ತುಷ್ಟಾವ ಪರಮೇಶ್ವರಂ ॥ ೫೪ ॥

ಧರ್ಮ ಉವಾಚ :—

ಪ್ರಣಮಾಮಿ ಜಗನ್ನಾಥಮೀಶಾನಂ ಪ್ರಣವಾಽಽತ್ಮಕಂ ।
ಸಮಸ್ತದೇವತಾರೂಪಮಾದಿಮಧ್ಯಾಂತವರ್ಜಿತಂ ॥ ೫೫ ॥
ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಂ ನಮಾಮ್ಯಹಂ ।
ಸಮಸ್ತಜಗದಾಧಾರಮನಂತಮಜಮವ್ಯಯಂ ॥ ೫೬ ॥
ಯಮಾಮನಂತಿ ಯೋಗೀಂದ್ರಾಸ್ತಂ ವಂದೇ ಪುಷ್ಟಿವರ್ಧನಂ ।
ನಮೋ ಲೋಕಾಽಧಿನಾಥಾಯ ವಂಚತೇ ಪರಿವಂಚತೇ ॥ ೫೭ ॥
ನಮೋಽಸ್ತು ನೀಲಕಂಠಾಯ ಪಶೂನಾಂ ಪತಯೇ ನಮಃ ।
ನಮಃ ಕಲ್ಮಷನಾಶಾಯ ನಮೋ ಮೀಢುಷ್ಟಮಾಯ ಚ ॥ ೫೮ ॥

---

ತೀರ್ಥವನ್ನು ನಿರ್ಮಿಸಿದನು. ಆದುದರಿಂದ ಈ ತೀರ್ಥಕ್ಕೆ ಧರ್ಮತೀರ್ಥವೆಂದು ಹೆಸರುಬಂದಿತು.

೫೨. ಆಗ ಆ ಧರ್ಮಪುರುಷನು ನಿನ್ನಂತೆಯೆ ಪರಮೇಶ್ವರನನ್ನು ಕುರಿತು ತಪಸ್ಸನ್ನು ಮಾಡಿದನು.

೫೩. ಶೂಲಪಾಣಿಯಾದ ಮಹೇಶ್ವರನು ಆತನ ತಪಸ್ಸಿಗೆ ಮೆಚ್ಚಿ ತನ್ನ ಕಾಂತಿಯಿಂದ ದಶದಿಕ್ಕುಗಳನ್ನೂ ಬೆಳಗುತ್ತ ತಾನಾಗಿಯೇ ಆತನಿಗೆ ಪ್ರತ್ಯಕ್ಷನಾದನು.

೫೪. ಇಂತು ಆಶ್ರಮಕ್ಕೆ ಬಿಜೆಮಾಡಿದ ಕೃಪಾನಿಧಿಯಾದ ಮಹಾದೇವನನ್ನು ಕುರಿತು ಸಂತೋಷಗೊಂಡ ಧರ್ಮನು ಅವನನ್ನು ಸ್ತುತಿಸಿದನು.

೫೫—೫೬. ಧರ್ಮನು ಸ್ತುತಿಸುತ್ತಾನೆ:—"ಜಗನ್ನಾಥನೂ, ಪ್ರಣವಸ್ವರೂಪಿಯೂ, ಸಮಸ್ತ ದೇವಾತ್ಮಕನೂ, ಆದಿಮಧ್ಯಾಂತರಹಿತನೂ, ಊರ್ಧ್ವರೇತನೂ, ವಿರೂಪಾಕ್ಷನೂ, ವಿಶ್ವರೂಪಿಯೂ, ಸಮಸ್ತ ಜಗದಾಧಾರನೂ, ಅನಂತನೂ, ಅಜನೂ, ಅವ್ಯಯನೂ ಆದ ಓ ಈಶಾನ! ನಿನಗೆ ನಮಸ್ಕಾರವು!

೫೭—೫೮. ಯೋಗೀಶ್ವರರಾವನನ್ನು ಚಿಂತಿಸುವರೋ, ಆ ಪುಷ್ಟಿವರ್ಧನನೇ ನೀನು! ಇದೋ ನಿನ್ನನ್ನು ನಮಿಸುವೆನು. ಲೋಕನಾಯಕನೂ, ವಂಚಕನೂ,

ನಮೋ ರುದ್ರಾಯ ದೇವಾಯ ಕದ್ರುದ್ರಾಯ ಪ್ರಚೇತಸೇ ।
ನಮಃ ಪಿನಾಕಹಸ್ತಾಯ ಶೂಲಹಸ್ತಾಯ ತೇ ನಮಃ ॥ ೫೯ ॥
ನಮಶ್ಚೈತನ್ಯರೂಪಾಯ ಪುಷ್ಟೀನಾಂ ಪತಯೇ ನಮಃ ।
ನಮಃ ಪಂಚಾಸ್ಯದೇವಾಯ ಕ್ಷೇತ್ರಾಣಾಂ ಪತಯೇ ನಮಃ ॥ ೬೦ ॥
ಇತಿ ಸ್ತುತೋ ಮಹಾದೇವಃ ಶಂಕರೋ ಲೋಕಶಂಕರಃ ।
ಧರ್ಮಸ್ಯ ಪರಮಾಂ ತುಷ್ಟಿಮಾಪನ್ನಸ್ತಮುವಾಚ ವೈ ॥ ೬೧ ॥

ಮಹೇಶ್ವರ ಉವಾಚ :—

ಪ್ರೀತೋಽಸ್ಮ್ಯನೇನ ಸ್ತೋತ್ರೇಣ ತವ ಧರ್ಮ ಮಹಾಮತೇ ।
ವರಂ ಮತ್ತೋ ವೃಣೀಷ್ವ ತ್ವಂ ಮಾ ವಿಲಂಬಂ ಕುರುಷ್ವ ವೈ ॥ ೬೨ ॥
ಈಶ್ವರೇಣೈವಮುಕ್ತಸ್ತು ಧರ್ಮೋ ದೇವಮಥಾಽಬ್ರವೀತ್ ।
ವಾಹನಂ ತೇ ಭವಿಷ್ಯಾಮಿ ಸದಾಽಹಂ ಪಾರ್ವತೀಪತೇ ॥ ೬೩ ॥
ಅಯಮೇವ ವರೋ ಮಹ್ಯಂ ದಾತವ್ಯಸ್ತ್ರಿಪುರಾಂತಕ ।
ತವೋದ್ವಹನಮಾತ್ರೇಣ ಕೃತಾರ್ಥೋಽಹಂ ಭವಾಮಿ ಭೋಃ ॥ ೬೪ ॥
ಇತ್ಥಂ ಧರ್ಮೇಣ ಕಥಿತೋ ದೇವೋ ಧರ್ಮಮಥಾಽಬ್ರವೀತ್ ।

ಈಶ್ವರ ಉವಾಚ :—

ವಾಹನಂ ಭವ ಮೇ ಧರ್ಮ ಸರ್ವದಾ ಲೋಕಪೂಜಿತಃ ॥ ೬೫ ॥

---

ಪರಿವಂಚಕನೂ, ನೀಲಕಂಠನೂ, ಪಶುಪತಿಯೂ, ಶೂಲಿಯೂ, ಪಿನಾಕಪಾಣಿಯೂ ಆದ ನಿನಗೆ ನಮಸ್ಕಾರವು. ಪಾಪನಾಶಕನಾದ ನಿನಗೆ ನಮಸ್ಕಾರವು. ಮೀಢುಷ್ಟಮನೂ, ರುದ್ರನೂ, ಕದ್ರುದ್ರನೂ, ಪ್ರಚೇತಸನೂ, ಪಿನಾಕಪಾಣಿಯೂ, ಶೂಲಹಸ್ತನೂ ಆದ ನಿನಗೆ ನಮಸ್ಕಾರವು!

೬೦. ಚೈತನ್ಯರೂಪಿಯೂ, ಪುಷ್ಟಿಪತಿಯೂ, ಪಂಚಮುಖನೂ, ಕ್ಷೇತ್ರಪಾಲಕನೂ ಆದ ನಿನಗೆ ನಮಸ್ಕಾರವು.''

೬೧. ಇಂತು ಧರ್ಮಪುರುಷನಿಂದ ಸಂಸ್ತುತನಾದ, ಲೋಕಶಂಕರನಾದ ಮಹಾದೇವನು ಸಂತೋಷಗೊಂಡು ಅವನನ್ನು ಕುರಿತು ಹೇಳಿದನು.

೬೨. ಮಹೇಶ್ವರನು ಹೇಳುತ್ತಾನೆ:—'' ಎಲೈ ಧರ್ಮನೇ? ನಿನ್ನ ಈ ಸ್ತೋತ್ರದಿಂದ ಸಂತೋಷಗೊಂಡಿರುವೆನು. ಬೇಕಾದ ವರವನ್ನು ಬೇಡು.''

೬೩–೬೪. ಇಂತು ನುಡಿದ ಆ ದೇವನನ್ನು ಕುರಿತು ಧರ್ಮನು '' ಎಲೈ ಪಾರ್ವತೀಪತಿಯೇ! ನಾನು ನಿನಗೆ ಸತತವೂ ವಾಹನವಾಗಿರಬೇಕು. ಎಲೈ ತ್ರಿಪುರಾಂತಕನೇ! ಇದೇ ನೀನು ಕೊಡಬೇಕಾದ ವರವು. ಸ್ವಾಮಿಯೇ! ನಿನ್ನನ್ನು ಹೊರುವುದರಿಂದಲೇ ನಾನು ಕೃತಾರ್ಥನಾಗುವೆನು'' ಎಂದು ನುಡಿದನು.

೬೫–೬೬. ಮಹೇಶ್ವರನು ಹೇಳುತ್ತಾನೆ:—'' ಎಲೈ ಧರ್ಮನೆ! ಯಾವಾ

ಮಮ ಚೋದ್ವಹನೇ ಶಕ್ತಿರಮೋಘಾ ತೇ ಭವಿಷ್ಯತಿ ।
ತ್ವತ್ಸೇವಿನಾಂ ಸದಾ ಭಕ್ತಿರ್ಮಯಿ ಸ್ಯಾನ್ನಾತ್ರ ಸಂಶಯಃ ॥ ೧೬ ॥
ಇತ್ಯುಕ್ತೇ ಶಂಕರೇಣಾಥ ಧರ್ಮೋಽಪಿ ವೃಷರೂಪಧೃಕ್ ।
ಉವಾಹ ಪರಮೇಶಾನಂ ತದಾ ಪ್ರಭೃತಿ ಗಾಲವ ॥ ೧೭ ॥
ಮಹಾದೇವಸ್ತಮಾರುಹ್ಯ ಧರ್ಮಂ ವೈ ವೃಷರೂಪಿಣಂ ।
ಶೋಭಮಾನೋ ಭೃಶಂ ಧರ್ಮಮುವಾಚ ಪರಮಾಮೃತಂ ॥ ೧೮ ॥

ಈಶ್ವರ ಉವಾಚ :—

ತ್ವಯಾ ಕೃತಂ ಹಿ ಯತ್ತೀರ್ಥಂ ದಕ್ಷಿಣಸ್ಯೋದಧೇಸ್ತಟೇ ।
ಧರ್ಮಪುಷ್ಕರಣೀತ್ಯೇಷಾ ಲೋಕೇ ಖ್ಯಾತಾ ಭವಿಷ್ಯತಿ ॥ ೧೯ ॥
ಅಸ್ಯಾಸ್ತೀರೇ ಜಪೋ ಹೋಮೋ ದಾನಂ ಸ್ವಾಧ್ಯಾಯ ಏವ ಚ ।
ಅನ್ಯೇ ಚ ಧರ್ಮನಿವಹಾಃ ಕ್ರಿಯಮಾಣಾ ನರೈರ್ಮುದಾ ॥ ೨೦ ॥
ಅನಂತಫಲದಾ ಜ್ಞೇಯಾ ನಾತ್ರ ಕಾರ್ಯಾ ವಿಚಾರಣಾ ।
ಇತಿ ದತ್ವಾ ವರಂ ತಸ್ಮೈ ಧರ್ಮತೀರ್ಥಾಯ ಶಂಕರಃ ।
ಆರುಹ್ಯ ವೃಷಭಂ ಧರ್ಮಂ ಕೈಲಾಸಂ ಪರ್ವತಂ ಯಯೌ ॥ ೨೧ ॥
ಧರ್ಮಪುಷ್ಕರಿಣೀತೀರೇ ಗಾಲವ ತ್ವಮತೋಽಧುನಾ ॥ ೨೨ ॥
ಶರೀರಪಾತಪರ್ಯಂತಂ ತಪಃ ಕುರ್ವನ್ಸಮಾಹಿತಃ ।
ವಸ ತ್ವಂ ಮುನಿಶಾರ್ದೂಲ ಪಶ್ಚಾನ್ಮಾಮಾಪ್ಸ್ಯಸೇ ಧ್ರುವಂ ॥ ೨೩ ॥

---

ಗಲೂ ನನ್ನನ್ನು ಹೊರುತ್ತಾ ಸರ್ವಲೋಕಪೂಜಿತನಾಗಿರು. ನನ್ನನ್ನು ಹೊರಲು ನಿನಗೆ ಅಮೋಘವಾದ ಶಕ್ತಿಯು ಬರಲಿ. ನಿನ್ನನ್ನು ಸೇವಿಸುವವರಿಗೆ ಯಾವಾಗಲೂ, ನನ್ನಲ್ಲಿ ಭಕ್ತಿಯು ಸ್ಥಿರವಾಗಿರುವುದು. ಇದರಲ್ಲಿ ಸಂಶಯವಿಲ್ಲವು."

೧೭. ಶಿವನಿಂತು ನುಡಿಯಲು ಧರ್ಮಪುರುಷನು ವೃಷಭರೂಪವನ್ನು ಹೊಂದಿ ಆಗಿನಿಂದಲೂ ಪರಮೇಶ್ವರನನ್ನು ಹೊರುತ್ತಿರುವನು.

೧೮. ಮಹೇಶ್ವರನು ಆ ಧರ್ಮವೃಷಭವನ್ನು ಹತ್ತಿ ಬಹಳವಾಗಿ ಪ್ರಕಾಶಿಸುತ್ತ ಅವನನ್ನು ಕುರಿತು ಅಮೃತಸದೃಶವಾದ ವಾಣಿಯನ್ನು ನುಡಿದನು.

೧೯. ಈಶ್ವರನು ಹೇಳುತ್ತಾನೆ:—" ಎಲೈ ಧರ್ಮನೇ! ದಕ್ಷಿಣ ಸಮುದ್ರದ ದಡದಲ್ಲಿ ನೀನು ಮಾಡಿದ ಈ ತೀರ್ಥವು ಧರ್ಮಪುಷ್ಕರಿಣಿ ಎಂದು ಖ್ಯಾತಿಯನ್ನು ಪಡೆಯುವುದು.

೨೦–೨೨. ಇದರ ತೀರದಲ್ಲಿ ಮಾಡಿದ ಜಪ, ಹೋಮ, ದಾನಾಧ್ಯಯನಾದಿ ಧರ್ಮ ಕಾರ್ಯಗಳೆಲ್ಲವೂ, ಅನಂತ ಫಲದಾಯಕಗಳೆಂದು ತಿಳಿಯತಕ್ಕುದು. ಇದರಲ್ಲಿ ವಿಚಾರಮಾಡಬೇಕಾಗಿಲ್ಲ" ಎಂದು ಶಂಕರನು ಧರ್ಮತೀರ್ಥಕ್ಕೆ ವರವಿತ್ತು, ಆ ಧರ್ಮವೃಷಭವನ್ನು ಹತ್ತಿ ಕೈಲಾಸಕ್ಕೆ ದಯಮಾಡಿಸಿದನು.

೨೩. ಎಲೈ ಗಾಲವನೇ! ಆದುದರಿಂದ ನೀನು ಈ ಧರ್ಮಪುಷ್ಕರಿಣೀ

ಯದಾ ತೇ ಜಾಯತೇ ಭೀತಿಸ್ತದಾ ತಾಂ ನಾಶಯಾಮ್ಯಹಂ ।
ಮಮಾಯುಧೇನ ಚಕ್ರೇಣ ಪ್ರೇರಿತೇನ ಮಯಾ ಕ್ಷಣಾತ್ ।
ಇತ್ಯುಕ್ತ್ವಾ ಭಗವಾನ್ವಿಷ್ಣುಸ್ತತ್ರೈವಾಂತರಧೀಯತ ॥ ೭೪ ॥
ಶ್ರೀ ಸೂತ ಉವಾಚ :—
ತಸ್ಮಿನ್ನಂತರ್ಹಿತೇ ವಿಷ್ಣೌ ಗಾಲವೋ ಮುನಿಪುಂಗವಃ ।
ಧರ್ಮಪುಷ್ಕರಿಣೀತೀರೇ ವಿಷ್ಣುಧ್ಯಾನಪರಾಯಣಃ ॥ ೭೫ ॥
ತ್ರಿಕಾಲಮರ್ಚಯನ್ ವಿಷ್ಣುಂ ಶಾಲಗ್ರಾಮೇ ವಿಮುಕ್ತಿದೇ ।
ಉವಾಸ ಮತಿಮಾನ್ ಧೀರೋ ವಿರಕ್ತೋ ವಿಜಿತೇಂದ್ರಿಯಃ ॥ ೭೬ ॥
ಕದಾಚಿನ್ಮಾಘಮಾಸೇ ತು ಶುಕ್ಲಪಕ್ಷೇ ಹರೇರ್ದಿನೇ ।
ಉಪೋಷ್ಯ ಜಾಗರಂ ಕೃತ್ವಾ ರಾತ್ರೌ ವಿಷ್ಣುಮಪೂಜಯತ್ ॥ ೭೭ ॥
ಸ್ನಾತ್ವಾ ಪರೇದ್ಯುರ್ದ್ವಾದಶ್ಯಾಂ ಧರ್ಮಪುಷ್ಕರಿಣೀಜಲೇ ।
ಸಂಧ್ಯಾವಂದನಪೂರ್ವಾಣಿ ನಿತ್ಯಕರ್ಮಾಣಿ ಚಾಽಕರೋತ್ ॥ ೭೮ ॥
ತತಃ ಪೂಜಾಂ ವಿಧಾತುಂ ಸ ಹರೇಃ ಸಮುಪಚಕ್ರಮೇ ॥ ೭೯ ॥
ತುಲಸ್ಯಾದೀನಿ ಪುಷ್ಪಾಣಿ ಸಮಾಹೃತ್ಯಚ ಗಾಲವಃ ।
ವಿಧಾಯ ಪೂಜಾಂ ಕೃಷ್ಣಸ್ಯ ಸ್ತೋತ್ರಮೇತದುದೈರಯತ್ ॥ ೮೦ ॥

---

ತೀರದಲ್ಲಿ ದೇಹಾಂತದವರೆಗೂ ತಪವನ್ನು ಮಾಡುತ್ತಿದ್ದು ಆ ಬಳಿಕ ನನ್ನನ್ನು ಹೊಂದುವೆ. ಇದು ನಿಜವು.

೭೪. ನಿನಗೆ ಭಯವಾದಾಗ ನಾನು ಈ ಚಕ್ರಾಯುಧದಿಂದ ಅದನ್ನು ಹೋಗಲಾಡಿಸುವೆನು" ಎಂದು ಅಪ್ಪಣೆಮಾಡಿ ಶ್ರೀಮಹಾವಿಷ್ಣುವು ಅಲ್ಲಿಯೇ ಮಾಯವಾದನು.

೭೫–೭೬. ಸೂತನು ಹೇಳುತ್ತಾನೆ:— ವಿಷ್ಣುವಂತು ಮಾಯವಾಗಲು ಮುನಿಪುಂಗವನಾದ ಗಾಲವನು ವಿಷ್ಣುಧ್ಯಾನಪಾರಾಯಣನಾಗಿಯೆ, ಧರ್ಮಪುಷ್ಕರಿಣೀತೀರದಲ್ಲಿ ಮುಕ್ತಿದಾಯಕವಾದ ಸಾಲಗ್ರಾಮದಲ್ಲಿ ತ್ರಿಕಾಲದಲ್ಲಿಯೂ ಶ್ರೀಮಹಾವಿಷ್ಣುವನ್ನರ್ಚಿಸುತ್ತ, ಮತಿವಂತನೂ, ಧೀರನೂ, ವಿರಕ್ತನೂ, ಜಿತೇಂದ್ರಿಯನೂ ಆಗಿ ವಾಸಿಸುತ್ತಿದ್ದನು.

೭೭–೭೯. ಒಮ್ಮೆ ಮಾಘಮಾಸದ ಶುಕ್ಲಪಕ್ಷದಲ್ಲಿ ಹರಿವಾಸರದ ದಿನ ಉಪವಾಸವಿದ್ದು ರಾತ್ರಿ ಜಾಗರಣಮಾಡಿ ಶ್ರೀಹರಿಯನ್ನು ಪೂಜಿಸಿ ದ್ವಾದಶಿಯ ದಿನ ಬೆಳಗ್ಗೆ ಧರ್ಮಪುಷ್ಕರಿಣಿಯಲ್ಲಿ ಸ್ನಾನಮಾಡಿ, ಸಂಧ್ಯಾದಿ ನಿತ್ಯಕರ್ಮಗಳನ್ನು ಮುಗಿಸಿ ಶ್ರೀಹರಿಯನ್ನು ಪೂಜಿಸಿದನು.

೮೦. ಹೂವು, ತುಲಸಿ ಮುಂತಾದುವುಗಳಿಂದ ಪೂಜೆಮಾಡಿದ ತರುವಾಯ ಆ ಗಾಲವನು ಈ ಮುಂದೆ ನಿರೂಪಿಸುವ ಶ್ರೀಕೃಷ್ಣಸ್ತೋತ್ರವನ್ನು ಮಾಡಿದನು.

ಗಾಲವ ಉವಾಚ :—

ಸಹಸ್ರಶಿರಸಂ ವಿಷ್ಣುಂ ಮತ್ಸ್ಯರೂಪಧರಂ ಹರಿಂ ।
ನಮಸ್ಯಾಮಿ ಹೃಷೀಕೇಶಂ ಕೂರ್ಮವಾರಾಹರೂಪಿಣಂ ॥ ೪೧ ॥
ನಾರಸಿಂಹಂ ವಾಮನಾಖ್ಯಂ ಜಾಮದಗ್ನ್ಯಂ ಚ ರಾಘವಂ ।
ಬಲಭದ್ರಂ ಚ ಕೃಷ್ಣಂ ಚ ಕಲ್ಕಿಂ ವಿಷ್ಣುಂ ನಮಾಮ್ಯಹಂ ॥ ೪೨ ॥
ವಾಸುದೇವಮನಾಧಾರಂ ಪ್ರಣತಾರ್ತಿವಿನಾಶನಂ ।
ಆಧಾರಂ ಸರ್ವಭೂತಾನಾಂ ಪ್ರಣಮಾಮಿ ಜನಾರ್ದನಂ ॥ ೪೩ ॥
ಸರ್ವಜ್ಞಂ ಸರ್ವಕರ್ತಾರಂ ಸಚ್ಚಿದಾನಂದವಿಗ್ರಹಂ ।
ಅಪ್ರತರ್ಕ್ಯಮನಿರ್ದೇಶ್ಯಂ ಪ್ರಣತೋಽಸ್ಮಿ ಜನಾರ್ದನಂ ॥ ೪೪ ॥
ಏವಂ ಸ್ತುವನ್ಮಹಾಯೋಗೀ ಗಾಲವೋ ಮುನಿಪುಂಗವಃ ।
ಧರ್ಮಪುಷ್ಕರಿಣೀತೀರೇ ತಸ್ಥೌ ಧ್ಯಾನಪರಾಯಣಃ ॥ ೪೫ ॥
ಏತಸ್ಮಿನ್ನಂತರೇ ಕಶ್ಚಿದ್ರಾಕ್ಷಸೋ ಗಾಲವಂ ಮುನಿಂ ।
ಆಯಯೌ ಭಕ್ಷಿತುಂ ಘೋರಃ ಕ್ಷುಧಯಾ ಪೀಡಿತೋ ಭೃಶಂ ॥ ೪೬ ॥
ಗಾಲವಂ ತರಸಾ ಸೋಽಯಂ ರಾಕ್ಷಸೋ ಜಗೃಹೇ ತದಾ ।
ಗೃಹೀತಸ್ತರಸಾ ತೇನ ಗಾಲವೋ ನೈರ್ಋತೇನ ಸಃ ॥ ೪೭ ॥

---

೪೧. ಗಾಲವನು ಸ್ತುತಿಸುತ್ತಾನೆ:—"ಸಹಸ್ರಶೀರ್ಷನೂ, ಮತ್ಸ್ಯರೂಪಿಯೂ ಆದ ಶ್ರೀಮಹಾವಿಷ್ಣುವನ್ನು ವಂದಿಸುವೆನು. ಕೂರ್ಮವರಾಹರೂಪಿಯಾದ ಶ್ರೀಹೃಷೀಕೇಶನನ್ನು ನಮಸ್ಕರಿಸುವೆನು.

೪೨. ನಾರಸಿಂಹನೂ, ವಾಮನನೂ, ಪರಶುರಾಮನೂ, ಶ್ರೀರಾಮನೂ, ಬಲರಾಮನೂ, ಶ್ರೀಕೃಷ್ಣನೂ, ಕಲ್ಕಿಯೂ ಆದ ಶ್ರೀವಿಷ್ಣುವಿಗೆ ನಾನೆರಗುವೆನು.

೪೩. ವಾಸುದೇವನೂ, ನಿರಾಧಾರನೂ, ಪ್ರಣತಾರ್ತಿಹರನೂ, ಸರ್ವಭೂತಗಳಿಗೂ ಆಧಾರನೂ ಆದ ಜನಾರ್ದನನಿಗೆ ನಮಸ್ಕಾರವು.

೪೪. ಸರ್ವಜ್ಞನೂ, ಸರ್ವಕರ್ತನೂ, ಸಚ್ಚಿದಾನಂದವಿಗ್ರಹನೂ, ಅಚಿಂತ್ಯನೂ, ಇಂತೆಂದು ನಿರ್ದೇಶಿಸಲು ಅಸದಳನೂ ಆದ ಜನಾರ್ದನನ್ನು ನಮಿಸುವೆನು."

೪೫. ಪರಮಯೋಗಿಯಾದ ಆ ಗಾಲವಮುನಿಯು ಈ ರೀತಿ ಸ್ತುತಿಸಿ ಧರ್ಮಪುಷ್ಕರಿಣೀತೀರದಲ್ಲಿಯೆ ಧ್ಯಾನಪರಾಯಣನಾಗಿ ವಾಸಿಸುತ್ತಿದ್ದನು.

೪೬. ಇದೇ ಸಮಯದಲ್ಲಿಯೆ ಭಯಂಕರನಾದ ಒಬ್ಬ ರಾಕ್ಷಸನು ಹಸಿವಿನಿಂದ ಬಹಳವಾಗಿ ಬಳಲಿ ಆ ಮುನಿಯನ್ನು ತಿನ್ನಲು ಬಂದನು.

೪೭—೪೯. ಹೀಗೆ ಆ ರಾಕ್ಷಸನು ತನ್ನನ್ನು ಭಕ್ಷಿಸಬಯಸಿ ಬಂದು ಇದ್ದಕ್ಕಿದ್ದಂತೆಯೇ ಹಿಡಿದುಕೊಳ್ಳಲು ಆ ಗಾಲವಮುನಿಯು ದಯಾಸಮುದ್ರನೂ,

ಪ್ರಭುಕೋಶ ದಯಾಂಭೋಧಿಮಾಪನ್ನಾನಾಂ ಪರಾಯಣಂ ।
ನಾರಾಯಣಂ ಚಕ್ರಪಾಣಿಂ ರಕ್ಷರಕ್ಷೇತಿ ವೈ ಮುಹುಃ ॥ ೮೮ ॥
ಪರೇಶ ಪರಮಾನಂದ ಶರಣಾಗತಪಾಲಕ ।
ತ್ರಾಹಿ ಮಾಂ ಕರುಣಾಸಿಂಧೋ ರಕ್ಷೋವಶಮುಪಾಗತಂ ॥ ೮೯ ॥
ಲಕ್ಷ್ಮೀಕಾಂತ ಹರೇ ವಿಷ್ಣೋ ವೈಕುಂಠ ಗರುಡಧ್ವಜ ।
ರಕ್ಷ ಮಾಂ ರಾಕ್ಷಸಾಕ್ರಾಂತಂ ಗ್ರಾಹಕ್ರಾಂತಂ ಗಜಂ ಯಥಾ ॥ ೯೦ ॥
ದಾಮೋದರ ಜಗನ್ನಾಥ ಹಿರಣ್ಯಾಸುರಮರ್ದನ ।
ಪ್ರಹ್ಲಾದಮಿವ ಮಾಂ ರಕ್ಷ ರಾಕ್ಷಸೇನಾಽತಿಪೀಡಿತಂ ॥ ೯೧ ॥
ಇತ್ಯೇವಂ ಸ್ತುವತಸ್ತಸ್ಯ ಗಾಲವಸ್ಯ ದ್ವಿಜೋತ್ತಮಾಃ ।
ಸ್ವಭಕ್ತಸ್ಯ ಭಯಂ ಜ್ಞಾತ್ವಾ ಚಕ್ರಪಾಣಿರ್ವೃಷಾಕಪಿಃ ।
ಸ್ವಚಕ್ರಂ ಪ್ರೇಷಯಾಮಾಸ ಭಕ್ತರಕ್ಷಣಕಾರಣಾತ್ ॥ ೯೨ ॥
ಪ್ರೇರಿತಂ ವಿಷ್ಣುಚಕ್ರಂ ತದ್ವಿಷ್ಣುನಾ ಪ್ರಭವಿಷ್ಣುನಾ ।
ಆಜಗಾಮಾಽಥ ವೇಗೇನ ಧರ್ಮಪುಷ್ಕರಿಣೀತಟಂ ॥ ೯೩ ॥
ಅನಂತಾದಿತ್ಯಸಂಕಾಶಮನಂತಾಽಗ್ನಿಸಮಪ್ರಭಂ ।
ಮಹಾಜ್ವಾಲಂ ಮಹಾನಾದಂ ಮಹಾಽಸುರವಿಮರ್ದನಂ ॥ ೯೪ ॥
ದೃಷ್ಟ್ವಾ ಸುದರ್ಶನಂ ವಿಷ್ಣೋ ರಾಕ್ಷಸೋಽಥ ಪ್ರದುದ್ರುವೇ ॥ ೯೫ ॥

---

ಕಷ್ಟಕ್ಕೀಡಾದವರಿಗೆ ದಿಕ್ಕೂ, ಚಕ್ರಪಾಣಿಯೂ ಆದ ಶ್ರೀಮನ್ನಾರಾಯಣನನ್ನು ಕುರಿತು ರಕ್ಷೆಗಾಗಿ ಅಡಿಗಡಿಗೂ ಮೊರೆಯಿಡುತ್ತ, "ಎಲೈ ಪರೇಶನೇ! ಪರಮಾನಂದಸ್ವರೂಪನೂ, ಶರಣಾಗತಪಾಲಕನೂ, ಕರುಣಾಸಿಂಧುವೂ ಆದ ಓ ಸ್ವಾಮಿಯೆ! ರಕ್ಕಸನ ಪಾಲಾಗಿರುವ ನನ್ನನ್ನು ಸಲಹು.

೯೦. ಎಲೈ ಲಕ್ಷ್ಮೀಕಾಂತನೆ! ಹರಿಯೇ, ವೈಕುಂಠ, ಗರುಡಧ್ವಜ, ಮೊಸಳೆಗೆ ಸಿಲುಕಿದ ಗಜೇಂದ್ರನನ್ನು ಸಲಹಿದಂತೆ, ಈ ರಾಕ್ಷಸನ ವಶವಾಗಿರುವ ನನ್ನನ್ನು ಕಾಪಾಡು.

೯೧. ಎಲೈ ದಾಮೋದರನೇ! ಜಗನ್ನಾಥ, ಹಿರಣ್ಯಾಸುರಮರ್ದನಾ!! ನೀನು ಪ್ರಹ್ಲಾದನನ್ನು ರಕ್ಷಿಸಿದಂತೆ ಈ ರಾಕ್ಷಸನಿಂದ ಬಹಳವಾಗಿ ಪೀಡಿತನಾಗಿರುವ ನನ್ನನ್ನು ರಕ್ಷಿಸು" ಎಂದು ಪ್ರಾರ್ಥಿಸಿದನು.

೯೨. ಹೀಗೆ ಸ್ತೋತ್ರಮಾಡಿದ ಭಕ್ತನಾದ ಗಾಲವನಿಗೊದಗಿದ ಭಯವನ್ನು ತಿಳಿದು ಚಕ್ರಪಾಣಿಯಾದ ಲಕ್ಷ್ಮೀಶನು ತನ್ನ ಚಕ್ರವನ್ನು ಆ ಭಕ್ತನ ರಕ್ಷಣೆಗಾಗಿ ಕಳುಹಿದನು.

೯೩–೯೫. ಸರ್ವಶಕ್ತನಾದ ವಿಷ್ಣುವಿನಿಂದ ಪ್ರೇರಿತನಾದ ಆ ಚಕ್ರವು ಧರ್ಮಪುರಷ್ಕರಿಣೀತೀರಕ್ಕೆ ಬಂದಿತು. ಬಳಿಕ ಅನಂತಸೂರ್ಯಸದೃಶವೂ,

ದ್ರವಮಾಣಸ್ಯ ತಸ್ಯಾಽಽಶು ರಾಕ್ಷಸಸ್ಯ ಸುದರ್ಶನಂ ।
ಶಿರಶ್ಚಕರ್ತ ಸಹಸಾ ಜ್ವಾಲಾಮಾಲಾದುರಾಸದಂ ॥ ೯೬ ॥
ತತಸ್ತು ಗಾಲವೋ ದೃಷ್ಟ್ವಾ ರಾಕ್ಷಸಂ ಪತಿತಂ ಭುವಿ ।
ಮುದಾ ಪರಮಯಾ ಯುಕ್ತಸ್ತುಷ್ಟಾವ ಚ ಸುದರ್ಶನಂ ॥ ೯೭ ॥

ಗಾಲವ ಉವಾಚ:—

ವಿಷ್ಣುಚಕ್ರ ನಮಸ್ತೇಽಸ್ತು ವಿಶ್ವರಕ್ಷಣದೀಕ್ಷಿತ ।
ನಾರಾಯಣಕರಾಂಭೋಜಭೂಷಣಾಯ ನಮೋಽಸ್ತು ತೇ ॥ ೯೮ ॥
ಯುದ್ಧೇಷ್ವಸುರಸಂಹಾರಕುಶಲಾಯ ಮಹಾರವ ।
ಸುದರ್ಶನ ನಮಸ್ತುಭ್ಯಂ ಭಕ್ತಾನಾಮಾರ್ತಿನಾಶಿನೇ ॥ ೯೯ ॥
ರಕ್ಷ ಮಾಂ ಭಯಸಂವಿಗ್ನಂ ಸರ್ವಸ್ಮಾದಪಿ ಕಲ್ಮಷಾತ್ ।
ಸ್ವಾಮಿನ್ಸುದರ್ಶನವಿಭೋ ಧರ್ಮತೀರ್ಥೇ ಸದಾ ಭವಾನ್ ।
ಸನ್ನಿಧೇಹಿ ಹಿತಾಯ ತ್ವಂ ಜಗತೋ ಮುಕ್ತಿಕಾಂಕ್ಷಿಣಃ ॥ ೧೦೦ ॥
ಗಾಲವೇನೈವಮುಕ್ತಂ ತದ್ವಿಷ್ಣುಚಕ್ರಂ ಮುನೀಶ್ವರಾಃ ।
ತಂ ಪ್ರಾಹ ಗಾಲವಮುನಿಂ ಪ್ರೀಣಯನ್ನಿವ ಸೌಹೃದಾತ್ ॥ ೧೦೧ ॥

---

ಅನೇಕಾಗ್ನಿಸಮಾನವೂ, ಮಹಾನಾದಭರಿತವೂ, ಅನೇಕ ರಾಕ್ಷಸರನ್ನು ಸಂಹರಿಸಿದುದೂ ಆದ ಆ ಸುದರ್ಶನವನ್ನು ಕಂಡು ರಾಕ್ಷಸನು ಒಡನೆಯೆ ಓಡಿಹೋದನು.

೯೬. ಅಗ್ನಿಜ್ವಾಲೆಗಳಿಂದ ಆವೃತವಾದ ಆ ಚಕ್ರವಾದರೊ ಓಡಿಹೋಗುತ್ತಿರುವ ಆ ರಾಕ್ಷಸನನ್ನು ಹಿಂಬಾಲಿಸಿಹೋಗಿ ಅವನ ಶಿರಸ್ಸನ್ನು ಕತ್ತರಿಸಿ ಕೆಡವಿತು.

೯೭. ಬಳಿಕ ಆ ಗಾಲವಮುನಿಯು ನೆಲದಮೇಲುರುಳಿದ ಆ ರಾಕ್ಷಸನನ್ನು ಕಂಡು ಸಂತೋಷದಿಂದ ಆ ಸುದರ್ಶನಚಕ್ರವನ್ನು ಹೊಗಳಿದನು.

೯೮–೯೯. ಗಾಲವನು ಸ್ತುತಿಸುತ್ತಾನೆ:— "ಪ್ರಪಂಚರಕ್ಷಣದೀಕ್ಷಿತನಾದ ಓ ವಿಷ್ಣುಚಕ್ರಮೂರ್ತಿಯೆ! ನಿನಗೆ ನಮಸ್ಕಾರವು. ಶ್ರೀಮನ್ನಾರಾಯಣನ ಕರಕಮಲಭೂಷಣನಾದ ನಿನಗೆ ನಮಸ್ಕಾರವು. ಮಹಾವೇಗವುಳ್ಳ ಎಲೈ ಸುದರ್ಶನನೇ! ಮಹಾಯುದ್ಧಗಳಲ್ಲಿ ಅಸುರಸಂಹಾರಚತುರನೂ, ಭಕ್ತರ ಕಷ್ಟಗಳನ್ನು ನೀಗುವವನೂ ಆದ ನಿನಗೆರಗುವೆನು.

೧೦೦–೧೦೧. ಓ ಸುದರ್ಶನ! ಭಯಾಕುಲನಾದ ನನ್ನನ್ನು ಸರ್ವಪಾಪಗಳಿಂದಲೂ ಕಾಪಾಡು. ಮುಕ್ತಿಯನ್ನು ಬಯಸುವ ಪ್ರಜೆಗಳ ಹಿತಕ್ಕಾಗಿ ನೀನು ಯಾವಾಗಲೂ ಈ ಧರ್ಮತೀರ್ಥದಲ್ಲಿಯೆ ಸನ್ನಿಹಿತನಾಗಿರು." ಹೀಗೆ ಸ್ತುತಿಸಿ ನುಡಿದ ಗಾಲವನನ್ನು ಕುರಿತು ಆ ವಿಷ್ಣುಚಕ್ರವು ಸ್ನೇಹದಿಂದ ಸಂತುಷ್ಟನಾದವನಂತೆ ಹೇಳಿದನು.

ಸುದರ್ಶನ ಉವಾಚ :—

ಗಾಲವೈತನ್ಮಹಾಪುಣ್ಯಂ ಧರ್ಮತೀರ್ಥಮನುತ್ತಮಂ ॥ ೧೦೨ ॥
ಅಸ್ಮಿನ್ವಸಾಮಿ ಸತತಂ ಲೋಕಾನಾಂ ಹಿತಕಾಮ್ಯಯಾ ।
ತ್ವತ್ಪೀಡಾಂ ಪರಿಚಿಂತ್ಯಾಽಹಂ ರಾಕ್ಷಸೇನ ದುರಾತ್ಮನಾ ॥ ೧೦೩ ॥
ಪ್ರೇರಿತೋ ವಿಷ್ಣುನಾ ವಿಪ್ರ ತ್ವರಯಾ ಸಮುಪಾಗತಃ ।
ತ್ವತ್ಪೀಡಕೋಽಥ ನಿಹತೋ ಮಯಾಽಯಂ ರಾಕ್ಷಸಾಽಧಮಃ ॥ ೧೦೪ ॥
ಮೋಚಿತಸ್ತ್ವಂ ಭಯಾದಸ್ಮಾತ್ತ್ವಂ ಹಿ ಭಕ್ತೋ ಹರೇಃ ಸದಾ ।
ಪುಷ್ಕರಿಣ್ಯಾಮಹಂ ತ್ವಸ್ಯಾಂ ಧರ್ಮಸ್ಯ ಮುನಿಪುಂಗವ ॥ ೧೦೫ ॥
ಸತತಂ ಲೋಕರಕ್ಷಾರ್ಥಂ ಸನ್ನಿಧಾನಂ ಕರೋಮಿ ವೈ ।
ಅಸ್ಯಾಂ ಮತ್ಸನ್ನಿಧಾನಾತ್ತೇ ತಥಾಽನ್ಯೇಷಾಮಪಿ ದ್ವಿಜ ॥ ೧೦೬ ॥
ಇತಃ ಪರಂ ನ ಪೀಡಾಸ್ಯಾದ್ಭೂತರಾಕ್ಷಸಸಂಭವಾ ।
ಧರ್ಮಪುಷ್ಕರಿಣೀ ಹ್ಯೇಷಾ ಸರ್ವಪಾಪವಿನಾಶಿನೀ ॥ ೧೦೭ ॥
ದೇವೀಪತ್ತನಪರ್ಯಂತಾ ಕೃತಾ ಧರ್ಮೇಣ ವೈ ಪುರಾ ।
ಅತ್ರ ಸರ್ವತ್ರ ವತ್ಸ್ಯಾಮಿ ಸರ್ವದಾ ಮುನಿಪುಂಗವ ॥ ೧೦೮ ॥
ಅಸ್ಯಾ ಮತ್ಸನ್ನಿಧಾನಾಚ್ಚ ಸ್ಯಾಚ್ಚಕ್ರತೀರ್ಥಮಿತಿ ಪ್ರಥಾ ।
ಸ್ನಾನಂ ಯೇತ್ರ ಪ್ರಕುರ್ವಂತಿ ಚಕ್ರತೀರ್ಥೇ ವಿಮುಕ್ತಿದೇ ॥ ೧೦೯ ॥

---

೧೦೨. ಸುದರ್ಶನನು ಹೇಳುತ್ತಾನೆ:—"ಎಲೈ ಗಾಲವನೇ! ಈ ಧರ್ಮ ತೀರ್ಥವು ಪುಣ್ಯಕರವಾದುದು. ಇದಕ್ಕೆ ಸಮಾನವಾದ ತೀರ್ಥವಾವುದೂ ಇರುವುದಿಲ್ಲವು.

೧೦೩. ದುಷ್ಟನಾದ ರಾಕ್ಷಸನಿಂದ ನಿನಗೊದಗಿದ ಪೀಡೆಯನ್ನು ಚಿಂತಿಸಿ ಲೋಕಹಿತವನ್ನು ಬಯಸಿ ನಾನು ಈ ತೀರ್ಥದಲ್ಲಿ ಯಾವಾಗಲೂ ವಾಸವಾಗಿರುತ್ತೇನೆ.

೧೦೪. ಮಹಾವಿಷ್ಣುವಿನಿಂದ ಪ್ರೇರಿತನಾಗಿ ಬಂದ ನಾನು ನಿನಗೆ ಭೀತಿಯನ್ನುಂಟುಮಾಡಿದ ಈ ರಾಕ್ಷಸಾಧಮನನ್ನು ಸಂಹರಿಸಿರುವೆನು.

೧೦೫—೧೦೮. ನೀನಾವಾಗಲೂ ವಿಷ್ಣುಭಕ್ತನಾಗಿರುವುದರಿಂದ ಈ ಭಯದಿಂದ ಬಿಡುಗಡೆಹೊಂದಿದೆ. ಓ ಮುನಿಶ್ರೇಷ್ಠನೇ! ಈ ಧರ್ಮಪುಷ್ಕರಿಣಿಯಲ್ಲಿ ನಾನು ಯಾವಾಗಲೂ ಸನ್ನಿಹಿತನಾಗಿರುವುದರಿಂದ ನಿನಗೂ, ಮತ್ತಿತರರಿಗೂ, ಭೂತರಾಕ್ಷಸಾದಿ ಭಯವುಂಟಾಗುವುದಿಲ್ಲ. ಸರ್ವಪಾಪನಿವಾರಕವಾದ ಈ ಪುಷ್ಕರಿಣಿಯು ಧರ್ಮಪುರುಷನಿಂದ ದೇವೀಪಟ್ಟಣದವರೆಗೂ ನಿರ್ಮಿತವಾಯಿತು. ಅಲ್ಲಿಯವರೆಗೂ ನಾನಿಲ್ಲಿ ಸರ್ವದಾ ವಾಸಮಾಡುತ್ತೇನೆ.

೧೦೯—೧೧೦. ನನ್ನ ಸಾನ್ನಿಧ್ಯದಿಂದಲೇ ಇದಕ್ಕೆ ಚಕ್ರತೀರ್ಥವೆಂಬ ಹೆಸ

ತೇಷಾಂ ಪುತ್ರಾಶ್ಚ ಪೌತ್ರಾಶ್ಚ ವಂಶಜಾಃ ಸರ್ವ ಏವ ಹಿ ।
ವಿಧೂತಪಾಪಾ ಯಾಸ್ಯಂತಿ ತದ್ವಿಷ್ಣೋಃ ಪರಮಂ ಪದಂ ॥ ೧೧೦ ॥
ಪಿತ್ರೂನುದ್ದಿಶ್ಯ ಪಿಂಡಾನಾಂ ದಾತಾರೋ ಯೇಽತ್ರ ಗಾಲವ ।
ಸ್ವರ್ಗಂ ಪ್ರಯಾಂತಿ ತೇ ಸರ್ವೇ ಪಿತರಶ್ಚಾಽಪಿ ತರ್ಪಿತಾಃ ॥ ೧೧೧ ॥
ಇತ್ಯುಕ್ತ್ವಾ ವಿಷ್ಣುಚಕ್ರಂ ತದ್ಗಾಲವಸ್ಯಾಽಪಿ ಪಶ್ಯತಃ ।
ಅನ್ಯೇಷಾಮಪಿ ವಿಪ್ರಾಣಾಂ ಪಶ್ಯತಾಂ ಸಹಸಾ ದ್ವಿಜಾಃ ।
ಧರ್ಮ ಪುಷ್ಕರಿಣೀಂ ತಾಂ ತು ಪ್ರಾವಿಶತ್ಪಾಪನಾಶಿನೀಂ ॥ ೧೧೨ ॥

ಶ್ರೀ ಸೂತ ಉವಾಚ:—

ಧರ್ಮತೀರ್ಥಸ್ಯ ವಿಪ್ರೇಂದ್ರಾಶ್ಚಕ್ರ ತೀರ್ಥಮಿತಿ ಪ್ರಥಾ ।
ಪ್ರಾಪ್ತಾ ಯಥಾ ತತ್ಕಥಿತಂ ಯುಷ್ಮಾಕಂ ಹಿ ಮಯಾ ಮುದಾ ॥ ೧೧೩ ॥
ಚಕ್ರತೀರ್ಥಸಮಂ ತೀರ್ಥಂ ನ ಭೂತಂ ನ ಭವಿಷ್ಯತಿ ।
ಅತ್ರ ಸ್ನಾತಾ ನರಾ ವಿಪ್ರಾ ಮೋಕ್ಷಭಾಜೋ ನ ಸಂಶಯಃ ॥ ೧೧೪ ॥
ಕೀರ್ತಯೇದಿಮಮಧ್ಯಾಯಂ ಶೃಣುಯಾದ್ವಾ ಸಮಾಹಿತಃ ।
ಚಕ್ರತೀರ್ಥಾಽಭಿಷೇಕಸ್ಯ ಪ್ರಾಪ್ನೋತಿ ಫಲಮುತ್ತಮಂ ॥ ೧೧೫ ॥
ಇಹ ಲೋಕೇ ಸುಖಂ ಪ್ರಾಪ್ಯ ಪರತ್ರಾಽಪಿ ಸುಖಂ ಲಭೇತ್ ॥ ೧೧೬ ॥

---

ರುಂಟಾಗಲಿ. ಪುಣ್ಯತಮವಾದುದೂ, ಮುಕ್ತಿಕರವೂ ಆದ ಈ ಚಕ್ರತೀರ್ಥದಲ್ಲಿ ಸ್ನಾನಮಾಡುವವರ ಪುತ್ರಪೌತ್ರಾದಿ ವಂಶಜರೆಲ್ಲರೂ ವಿಗತಪಾಪರಾಗಿ ವಿಷ್ಣು ಲೋಕವನ್ನು ಪಡೆಯುತ್ತಾರೆ.

೧೧೧. ಎಲೈ ಗಾಲವನೇ! ಇಲ್ಲಿ ಪಿತೃಗಳನ್ನುದ್ದೇಶಿಸಿ ಪಿಂಡದಾನವನ್ನು ಮಾಡಿದವರು ಸ್ವರ್ಗವನ್ನು ಹೊಂದುವರು, ಅಲ್ಲದೆ ಅದರಿಂದ ಆ ಪಿತೃಗಳೂ ತೃಪ್ತಿಹೊಂದುತ್ತಾರೆ.''

೧೧೨. ಎಲೈ ಬ್ರಾಹ್ಮಣಶ್ರೇಷ್ಠರೇ! ಆ ವಿಷ್ಣುಚಕ್ರವಿಂತು ನುಡಿದು ಗಾಲವನೂ ಮಿಕ್ಕ ಬ್ರಾಹ್ಮಣರೂ ನೋಡುತ್ತಿರುವಂತೆಯೆ ಪಾಪನಾಶಕವಾದ ಆ ಧರ್ಮತೀರ್ಥವನ್ನು ಪ್ರವೇಶಿಸಿತು.

೧೧೩-೧೧೬. ಹೀಗೆ ಧರ್ಮತೀರ್ಥಕ್ಕೆ ಚಕ್ರತೀರ್ಥವೆಂದು ಹೆಸರು ಬರಲು ಕಾರಣವನ್ನು ನಿಮಗೆ ಸಂತೋಷದಿಂದ ತಿಳಿಯಪಡಿಸಿರುವೆನು. ಇದಕ್ಕೆ ಸಮಾನವಾದ ತೀರ್ಥವು ಹಿಂದಿರಲಿಲ್ಲ; ಮುಂದಾಗುವುದಿಲ್ಲವು. ಇಲ್ಲಿ ಸ್ನಾನ ಮಾಡಿದವರು ಮೋಕ್ಷಭಾಗಿಗಳಾಗುವುದರಲ್ಲಿ ಸಂಶಯವಿಲ್ಲ. ಈ ಅಧ್ಯಾಯವನ್ನು ಓದಿದರೂ, ಸಾವಧಾನದಿಂದ ಕೇಳಿದರೂ, ಚಕ್ರತೀರ್ಥಸ್ನಾನಕ್ಕೆ ಸಮವಾದ ಫಲವನ್ನೇ ಪಡೆಯುತ್ತಾರೆ; ಈ ಲೋಕದಲ್ಲಿ ಸುಖವನ್ನನುಭವಿಸುವುದಲ್ಲದೆ ಪರಲೋಕದಲ್ಲಿಯೂ ಸುಖವನ್ನು ಹೊಂದುತ್ತಾರೆ.

ಯೋ ಧರ್ಮತೀರ್ಥಂ ಚ ತಥೈವ ಗಾಲವಂ
ಕುರ್ವಾಣಮತ್ಯುಗ್ರಸಮಾಧಿಯೋಗಂ ।
ಸುದರ್ಶನಂ ರಾಕ್ಷಸನಾಶನಂ ಚ
ಸ್ಮರೇತ್ಸಕೃದ್ವಾ ಸ ಸ ಪಾಪಭಾಗ್ಜನಃ ॥ ೧೧೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಗಾಲವಾಖ್ಯಾನೇ—ಧರ್ಮತೀರ್ಥಸ್ಯ ಚಕ್ರತೀರ್ಥಪ್ರಥಾವರ್ಣನಂ" ನಾಮ ತೃತೀಯೋಽಧ್ಯಾಯಃ

---

೧೧೭. ಯಾವನು ಧರ್ಮತೀರ್ಥವನ್ನೂ, ಅಂತೆಯೇ ಅತ್ಯುಗ್ರವಾದ ತಪವಂಗೈದ ಗಾಲವನನ್ನೂ, ರಾಕ್ಷಸನಾಶಕವಾದ ಸುದರ್ಶನವನ್ನೂ ಒಂದಾವರ್ತಿಯಾದರೂ ನೆನೆಯುವನೋ ಅವನು ಪಾಪಕ್ಕೀಡಾಗುವುದಿಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಗಾಲವಾಖ್ಯಾನ—ಧರ್ಮತೀರ್ಥಕ್ಕೆ ಚಕ್ರತೀರ್ಥವೆಂದು ಪ್ರಸಿದ್ಧಿಬಂದುದು" ಎಂಬ ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ಥೋಽಧ್ಯಾಯಃ

### ದುರ್ದಮ ಗಂಧರ್ವಶಾಪಮೋಚನಂ

ಋಷಯ ಊಚುಃ :—

ಭಗವನ್ ರಾಕ್ಷಸಃ ಕೋಽಸೌ ಸೂತ ಪೌರಾಣಿಕೋತ್ತಮ ।
ವಿಷ್ಣುಭಕ್ತಂ ಮಹಾತ್ಮಾನಂ ಯೋ ಗಾಲವಮಬಾಧತ ॥ ೧ ॥

ಸೂತ ಉವಾಚ :—

ವಕ್ಷ್ಯಾಮಿ ರಾಕ್ಷಸಂ ಕ್ರೂರಂ ತಂ ವಿಪ್ರಾಃ ಶೃಣುತಾದರಾತ್ ।
ಯಥಾ ಸ ರಾಕ್ಷಸೋ ಜಾತೋ ಮುನೀನಾಂ ಶಾಪವೈಭವಾತ್ ॥ ೨ ॥
ಪುರಾ ಕೈಲಾಶಶಿಖರೇ ಹಾಲಾಸ್ಯೇ ಶಿವಮಂದಿರೇ ।
ಚತುರ್ವಿಂಶತಿ ಸಾಹಸ್ರಾ ಮುನಯೋ ಬ್ರಹ್ಮವಾದಿನಃ ॥ ೩ ॥
ವಸಿಷ್ಠಾಽತ್ರಿಮುಖಾಃ ಸರ್ವೇ ಶಿವಭಕ್ತಾ ಮಹೌಜಸಃ ।
ಭಸ್ಮೋದ್ಧೂಲಿತಸರ್ವಾಂಗಾಸ್ತ್ರಿಪುಂಡ್ರಾಂಕಿತಮಸ್ತಕಾಃ ॥ ೪ ॥
ರುದ್ರಾಕ್ಷಮಾಲಾಽಽಭರಣಾಃ ಪಂಚಾಽಕ್ಷರಜಪೇರತಾಃ ।
ಹಾಲಾಸ್ಯನಾಥಂ ಭೂತೇಶಂ ಚಂದ್ರಚೂಡಮುಮಾಪತಿಂ ।
ಉಪಾಸಾಂಚಕ್ರಿರೇ ಮುಕ್ತ್ಯೈ ಮಧುರಾಪುರವಾಸಿನಃ ॥ ೫ ॥

---

## ಕನ್ನಡದ ಅನುವಾದ

### ದುರ್ದಮ ಗಂಧರ್ವಶಾಪಮೋಚನ

೧. ಋಷಿಗಳು ಕೇಳುತ್ತಾರೆ:— "ಪೂಜ್ಯನಾದ ಸೂತಪುರಾಣಿಕನೇ! ಈ ರಾಕ್ಷಸನಾರು? ವಿಷ್ಣುಭಕ್ತನಾದ ಗಾಲವಮುನಿಯನ್ನು ಅವನು ಪೀಡಿಸಿದ್ದೇಕೆ?"

೨. ಸೂತನು ಹೇಳುತ್ತಾನೆ:—ಎಲೈ ವಿಪ್ರರೇ! ಈಗ ನಾನು ಆ ಕ್ರೂರ ರಾಕ್ಷಸನ ವೃತ್ತಾಂತವನ್ನು ನಿರೂಪಿಸುತ್ತೇನೆ. ಆದರದಿಂದ ಕೇಳಿರಿ. ಅವನು ಮುನಿಗಳ ಶಾಪವೈಭವದಿಂದ ರಾಕ್ಷಸತ್ವವನ್ನು ಪಡೆದುದೆಂತೆಂಬುದನ್ನು ತಿಳಿಸುವೆನು; ಕೇಳಿರಿ.

೩—೫. ಪೂರ್ವದಲ್ಲಿ ಮಧುರಾಪುರಹಾಲಾಸ್ಯವೆಂಬ ಮಹಾದೇವನ ಆವಾಸಸ್ಥಲದಲ್ಲಿ ವಾಸಮಾಡುವವರಾದ ವಸಿಷ್ಠ, ಅತ್ರಿ ಮೊದಲಾದ ಇಪ್ಪತ್ತನಾಲ್ಕು ಮಂದಿ ಬ್ರಹ್ಮರ್ಷಿಗಳೂ, ಕೈಲಾಸದಲ್ಲಿನ ಮಹಾತೇಜಸ್ವಿಗಳೂ, ಶಿವಭಕ್ತರೂ, ಭಸ್ಮಾಂಕಿತದೇಹರೂ, ತ್ರಿಪುಂಡ್ರಧಾರಿಗಳೂ, ರುದ್ರಾಕ್ಷಮಾಲಾಲಂಕೃತರೂ, ಪಂಚಾಕ್ಷರಜಪನಿರತರೂ ಆಗಿ ಚಂದ್ರಶೇಖರನೂ, ಪಶುಪತಿಯೂ, ಹಾಲಾಸ್ಯ

ಕಥಾಚಿತ್ತತ್ರ ಗಂಧರ್ವೋ ವಿಶ್ವಾವಸುಸುತೋ ಬಲೀ ।
ದುರ್ದಮೋ ನಾಮ ವಿಪ್ರೇಂದ್ರಾ ವಿಟಗೋಷ್ಠೀಪರಾಯಣಃ ॥ ೬ ॥
ಲಲನಾಶತಸಂಯುಕ್ತೋ ವಿವಸ್ತ್ರಃ ಸಲಿಲಾಶಯೇ ।
ಚಿಕ್ರೀಡ ಸ ವಿವಸ್ತ್ರಾಭಿಃ ಸಾಕಂ ಯುವತಿಭಿರ್ಮುದಾ ॥ ೭ ॥
ಹಾಲಾಸ್ಯನಾಥತೀರ್ಥಂ ತದ್ವಸಿಷ್ಠೋ ಮುನಿಭಿಃ ಸಹ ।
ಮಾಧ್ಯಂದಿನಂ ಕರ್ತುಮನಾ ಯಯೌ ಶಂಕರಮಂದಿರಾತ್ ॥ ೮ ॥
ತಾನೃಷೀನವಲೋಕ್ಯಾಽಥ ರಾಮಾಸ್ತಾ ಭಯಕಾತರಾಃ ।
ವಾಸಾಂಸ್ಯಾಚ್ಛಾದಯಾಮಾಸುರ್ದುರ್ದಮೋ ನ ತು ಸಾಹಸೀ ॥ ೯ ॥
ತತೋ ವಸಿಷ್ಠಃ ಕುಪಿತಃ ಶಶಾಪೈನಂ ಗತತ್ರಪಂ ॥ ೧೦ ॥

ವಸಿಷ್ಠ ಉವಾಚ :—

ಯಸ್ಮಾದ್ದುರ್ದಮಗಂಧರ್ವ ದೃಷ್ಟ್ವಾಽಸ್ಮಾನ್ ಲಜ್ಜಯಾ ತ್ವಯಾ ।
ವಾಸೋ ನಾಽಽಸಾದಿತಂ ಶೀಘ್ರಂ ಯಾಹಿ ರಾಕ್ಷಸತಾಂ ತತಃ ॥ ೧೧ ॥
ಇತ್ಯುಕ್ತ್ವಾ ತಾಸ್ತ್ರಿಯಃ ಪ್ರಾಹ ವಸಿಷ್ಠೋ ಮುನಿಪುಂಗವಃ ।
ಯಸ್ಮಾದಾಚ್ಛಾದಿತಂ ವಸ್ತ್ರಂ ದೃಷ್ಟ್ವಾಽಸ್ಮಾನ್ ಲಲನೋತ್ತಮಾಃ ।
ತತೋ ನ ಯುಷ್ಮಾನ್ ಶಪ್ಸ್ಯಾಮಿ ಗಚ್ಛಧ್ವಂ ತ್ರಿದಿವಂ ತತಃ ॥ ೧೨ ॥

---

ನಾಥನೂ ಆದ ಉಮಾಪತಿಯನ್ನು ಕುರಿತು ಮುಕ್ತಿಯನ್ನು ಪಡೆಯಲು ಉಪಾಸನೆ ಮಾಡುತ್ತಿದ್ದರು.

೬–೭. ಆಗ ಬಲಿಷ್ಠನೂ, ವಿಶ್ವಾವಸುವಿನ ಮಗನೂ ಆದ ದುರ್ದಮನೆಂಬ ಗಂಧರ್ವನು ವಿಟಗೋಷ್ಠಿಯಲ್ಲಾಸಕ್ತನಾಗಿ, ವಿವಸ್ತ್ರರಾದ ನೂರಾರು ಮಂದಿ ಯುವತಿಯರೊಡಗೂಡಿ ವಸ್ತ್ರವಿಲ್ಲದೆಯೇ ಹಾಲಾಸ್ಯನಾಥತೀರ್ಥವೆಂಬ ಸರೋವರದಲ್ಲಿ ಸಂತೋಷದಿಂದ ಕ್ರೀಡಿಸುತ್ತಿದ್ದನು.

೮. ಆ ಸಮಯದಲ್ಲಿಯೆ ವಸಿಷ್ಠಮುನಿಯು ಮಾಧ್ಯಾಹ್ನಿಕವನ್ನು ನಡೆಸಲು ಕೈಲಾಸದಿಂದ ಋಷಿಗಳೊಡನೆ ಅಲ್ಲಿಗೆ ಬಂದನು.

೯–೧೦. ಅವರನ್ನು ನೋಡಿ ಹೆಂಗಸರೆಲ್ಲರೂ ಭಯದಿಂದ ತತ್ತಳಿಸಿ ಒಡನೆಯೇ ವಸ್ತ್ರಗಳನ್ನು ಧರಿಸಿದರು; ಸಾಹಸಿಯಾದ ದುರ್ದಮನು ಮಾತ್ರ ಧರಿಸಲಿಲ್ಲ. ಅದರಿಂದ ವಸಿಷ್ಠನು ಬಹಳವಾಗಿ ಮುನಿದು, ನಿರ್ಲಜ್ಜನಾದ ಅವನನ್ನು ಈ ರೀತಿ ಶಪಿಸಿದನು.

೧೧–೧೨. ವಸಿಷ್ಠನು ಹೇಳುತ್ತಾನೆ:—"ಎಲೈ ದುರ್ದಮಗಂಧರ್ವನೇ! ನಮ್ಮನ್ನು ಕಂಡರೂ ನಾಚದೆ ಬಟ್ಟೆಯನ್ನುಡದಿರುವೆಯಾದುದರಿಂದ ನೀನು ಈ ಕೂಡಲೆ ರಾಕ್ಷಸತ್ವವನ್ನು ಹೊಂದು" ಎಂದು ಶಪಿಸಿದನು. ತರುವಾಯ ಆ ಮುನಿಪುಂಗವನು ಆ ಸುರಾಂಗನೆಯರನ್ನು ಕುರಿತು, "ಎಲೌ ಗಂಧರ್ವ ಸ್ತ್ರೀಯರೇ! ನೀವು ನಮ್ಮನ್ನು ಗೌರವಿಸಿ ವಸ್ತ್ರಗಳನ್ನು [illegible]ನ್ನು

ಏವಮುಕ್ತಾ ವಸಿಷ್ಠೇನ ರಾಮಾಃ ಪ್ರಾಂಜಲಯಸ್ತದಾ ।
ಪ್ರಣಿಪತ್ಯ ವಸಿಷ್ಠಂ ತಂ ಭಕ್ತಿನಮ್ರೇಣ ಚೇತಸಾ ॥ ೧೩ ॥
ಮುನಿಮಂಡಲಮಧ್ಯೇ ತಂ ವಸಿಷ್ಠಮಿದಮಬ್ರುವನ್ ॥ ೧೪ ॥

ರಾಮಾ ಊಚುಃ:—

ಭಗವನ್ ಸರ್ವಧರ್ಮಜ್ಞ ಚತುರಾನನನಂದನ ।
ದಯಾಸಿಂಧೋಽವಲೋಕ್ಯಾಸ್ಮಾನ್ಕೋಪಂ ಕರ್ತುಮರ್ಹಸಿ ॥ ೧೫ ॥
ಪತಿರೇವ ಹಿ ನಾರೀಣಾಂ ಭೂಷಣಂ ಪರಮುಚ್ಯತೇ ।
ಪತಿಹೀನಾ ತು ಯಾ ನಾರೀ ಶತಪುತ್ರಾಽಪಿ ಸಾ ಮುನೇ ॥ ೧೬ ॥
ವಿಧವೇತ್ಯುಚ್ಯತೇ ಲೋಕೇ ತತ್ಸ್ತ್ರೀಣಾಂ ಮರಣಂ ಸ್ಮೃತಂ ।
ತತ್ಪ್ರಸಾದಂ ಕುರು ಮುನೇ ಪತ್ಯಾವಸ್ಮಾಕಮಾದರಾತ್ ॥ ೧೭ ॥
ಏಕೋಽಪರಾಧಃ ಕ್ಷಂತವ್ಯೋ ಮುನಿಭಿಸ್ತತ್ತ್ವದರ್ಶಿಭಿಃ ।
ಕ್ಷಮಾಂ ಕುರು ದಯಾಸಿಂಧೋ ಯುಷ್ಮಚ್ಛಿಷ್ಯೇಽತ್ರ ದುರ್ದಮೇ ॥೧೮॥
ವಸಿಷ್ಠಃ ಪ್ರಾರ್ಥಿತಸ್ತ್ವೇವಂ ದುರ್ದಮಸ್ಯಾಂಗನಾಜನೈಃ ।
ಪ್ರೋವಾಚ ವಚನಂ ಭೂಯಃ ಪ್ರಸನ್ನಃ ಸ ದ್ವಿಜೋತ್ತಮಾಃ ॥ ೧೯ ॥

---

ನಾನು ಶಪಿಸುವುದಿಲ್ಲ. ನೀವು ದೇವಲೋಕಕ್ಕೆ ಹೋಗಿರಿ'' ಎಂದು ಆ ಸ್ತ್ರೀಯರಿಗೆ ಅಪ್ಪಣೆಯಿತ್ತನು.

೧೩–೧೪. ಎಲೈ ವಿಪ್ರರೇ! ಆ ವಸಿಷ್ಠಮುನಿಯಿಂತೆನಲು, ಆ ಸುಂದರಿಯರು ಮುನಿವೃಂದದ ಮಧ್ಯದಲ್ಲಿರುವ ಆತನಿಗೆ ಭಕ್ತಿಯಿಂದ ಕೈಮುಗಿದು ಹೀಗೆಂದು ಅರಿಕೆ ಮಾಡಿದರು.

೧೫. ಸುಂದರಿಯರು ಹೇಳುತ್ತಾರೆ:—"ಎಲೈ ಪುಣ್ಯಾತ್ಮನೇ! ನೀನು ಸರ್ವಧರ್ಮಗಳನ್ನೂ ಅರಿತವನು; ಕರುಣಾಸಮುದ್ರನು; ಓ ಬ್ರಹ್ಮಪುತ್ರ? ನಮ್ಮನ್ನು ದೃಷ್ಟಿಸಿ ಈ ರೀತಿ ಕೋಪವನ್ನು ತಾಳಬೇಡ.

೧೬–೧೭. ಹೆಂಗಸರಿಗೆ ಪತಿಯೇ ಪರಮಭೂಷಣವಲ್ಲವೆ! ಪತಿಹೀನಳು ನೂರಾರು ಮಕ್ಕಳುಳ್ಳವಳಾದರೂ ಲೋಕದಲ್ಲಿ ವಿಧವೆಯೆನಿಸುತ್ತಾಳೆ. ಅಂತಹವಳಿಗೆ ಮರಣವೇ ಲೇಸು. ಆದುದರಿಂದ ಎಲೈ ಮಹರ್ಷಿಯೇ! ನಮಗೆ ನಮ್ಮ ಪತಿಯನ್ನನುಗ್ರಹಿಸು.

೧೮. ಮಹಾತ್ಮರಾದ ಮುನಿಪುಂಗವರು ಒಂದು ತಪ್ಪನ್ನು ಕ್ಷಮಿಸುವ ಕ್ಷಮಾಶೀಲರು. ಎಲೈ ದಯಾಸಿಂಧುವೆ! ಆದುದರಿಂದ ನಿನ್ನ ಶಿಷ್ಯನಾದ ಈ ದುರ್ದಮನಲ್ಲಿ ಕೃಪೆದೋರು.''

೧೯. ಈ ಬಗೆಯಾಗಿ ದುರ್ದಮನ ಪತ್ನಿಯರಿಂದ ಪ್ರಾರ್ಥಿತನಾದ ವಸಿಷ್ಠನು ಅವರಲ್ಲಿ ಪ್ರಸನ್ನನಾಗಿ ಮತ್ತೆ ಅವರನ್ನು ಕುರಿತು ಹೀಗೆ ಹೇಳಿದನು.

ನ ಮೇ ಸ್ಯಾದ್ವಚನಂ ಮಿಥ್ಯಾ ಕದಾಚಿದಪಿ ಸುಭ್ರುವಃ ।
ಉಪಾಯಂ ವಃ ಪ್ರವಕ್ಷ್ಯಾಮಿ ಶೃಣುಧ್ವಂ ಶ್ರದ್ಧಯಾ ಸಹ ॥ ೨೦ ॥
ಷೋಡಶಾಬ್ದಾವಧಿಃ ಶಾಪೋ ಭರ್ತುರ್ವೋ ಭವಿತಾ ಧ್ರುವಂ ।
ಷೋಡಶಾಬ್ದಾವಧೌ ಚೈಷ ದುರ್ದಮೋ ರಾಕ್ಷಸಾಕೃತಿಃ ॥ ೨೧ ॥
ಯದೃಚ್ಛಯಾ ಚಕ್ರತೀರ್ಥಂ ಗಮಿಷ್ಯತಿ ಸುರಾಂಗನಾಃ ।
ಆಸ್ತೇ ತತ್ರ ಮಹಾಯೋಗೀ ಗಾಲವೋ ವಿಷ್ಣುತತ್ಪರಃ ॥ ೨೨ ॥
ಭಕ್ಷ್ಯಾರ್ಥಂ ತಂ ಮುನಿಂ ಸೋಽಯಂ ರಾಕ್ಷಸೋಽಭಿಗಮಿಷ್ಯತಿ ।
ತತೋ ಗಾಲವರಕ್ಷಾರ್ಥಂ ಪ್ರೇರಿತಂ ಚಕ್ರಮುತ್ತಮಂ ।
ವಿಷ್ಣುನಾಽಸ್ಯ ಶಿರೋ ರಾಮಾ ಹರಿಷ್ಯತಿ ನ ಸಂಶಯಃ ॥ ೨೩ ॥
ತತಃ ಸ್ವರೂಪಮಾಸಾದ್ಯ ಶಾಪಾನ್ಮುಕ್ತಃ ಸದುರ್ದಮಃ ।
ಪತಿರ್ವಸ್ತ್ರಿದಿವಂ ಭೂಯೋ ಗಂತಾಽಸ್ತ್ಯತ್ರ ನ ಸಂಶಯಃ ॥ ೨೪ ॥
ತತಸ್ತ್ರಿದಿವಮಾಸಾದ್ಯ ದುರ್ದಮೋಽಯಂ ಪತಿರ್ಹಿ ವಃ ।
ರಮಯಿಷ್ಯತಿ ಸುಂದರ್ಯೋ ಯುಷ್ಮಾನ್ ಸುಂದರವೇಷಭೃತ್ ॥ ೨೫ ॥

ಶ್ರೀ ಸೂತ ಉವಾಚ :—

ಇತ್ಯುಕ್ತ್ವಾ ತು ವಸಿಷ್ಠಸ್ತಾ ದುರ್ದಮಸ್ಯ ವರಾಂಗನಾಃ ।
ಸ್ವಾಶ್ರಮಂ ಪ್ರಯಯೌ ತೂರ್ಣಂ ಹಾಲಾಸ್ಯೇಶ್ವರಭಕ್ತಿಮಾನ್ ॥ ೨೬ ॥

---

೨೦. "ಎಲೌ ನಾರಿಯರೇ! ನನ್ನ ಮಾತೆಂದಿಗೂ ವ್ಯರ್ಥವಾಗಲಾರದು. ಇದರ ನಿವಾರಣೆಗೆ ಮಾತ್ರ ಒಂದು ಉಪಾಯವನ್ನು ಹೇಳುವೆನು; ಸಾವಧಾನದಿಂದ ಕೇಳಿರಿ.

೨೧-೨೨. ನಿಮ್ಮ ಪತಿಗೆ ನಾನಿತ್ತ ಶಾಪವು ಹದಿನಾರುವರ್ಷದವರೆಗಿನದು. ಬಳಿಕ ಈತನೇ ಅಕಸ್ಮಾತ್ತಾಗಿ ಚಕ್ರತೀರ್ಥಕ್ಕೆ ಹೋಗುತ್ತಾನೆ. ಅಲ್ಲಿ ಮಹಾಯೋಗಿಯಾದ ಗಾಲವಮುನಿಯು ವಿಷ್ಣುಧ್ಯಾನಪರನಾಗಿರುವನು.

೨೩-೨೪. ಆತನನ್ನು ಈ ರಾಕ್ಷಸನು ತಿನ್ನುವುದಕ್ಕೆ ಹೋಗುತ್ತಾನೆ. ಎಲೌ ಸ್ತ್ರೀಯರೇ! ಆಗ ಆತನ ರಕ್ಷಣೆಗಾಗಿ ವಿಷ್ಣುವಿನಿಂದ ಕಳುಹಲ್ಪಟ್ಟ ಚಕ್ರವು ಈತನ ಶಿರವನ್ನು ಖಂಡಿತವಾಗಿಯೂ ಕತ್ತರಿಸುವುದು. ಆಗ ಈ ದುರ್ದಮನು ಶಾಪದಿಂದ ಬಿಡುಗಡೆಹೊಂದಿ ಮೊದಲಿನಂತೆಯೆ ಗಂಧರ್ವನಾಗಿ ಸ್ವರ್ಗಲೋಕವನ್ನು ಸೇರುತ್ತಾನೆ.

೨೫. ಮತ್ತೆ ಈ ನಿಮ್ಮ ಪತಿಯು ದೇವಲೋಕಕ್ಕೆ ಬರುತ್ತಾನೆ. ಇದರಲ್ಲಿ ಸಂಶಯವಿಲ್ಲವು. ಸುರೂಪನಾಗಿ ನಿಮ್ಮೊಡನೆ ಸುಖವಾಗಿರುತ್ತಾನೆ. ನಿಮ್ಮನ್ನೂ ಸುಖಪಡಿಸುತ್ತಾನೆ."

೨೬. ಸೂತನು ಹೇಳುತ್ತಾನೆ:—ವಸಿಷ್ಠನು ಹೀಗೆ ಆ ದುರ್ದಮ

ಅಥ ರಾಮಾಸ್ತ್ವಮಾಲಿಂಗ್ಯ ದುರ್ದಮಂ ಪತಿಮಾತುರಾಃ ।
ರುರುದುಃ ಶೋಕಸಂವಿಗ್ನಾ ದುಃಖಸಾಗರಮಧ್ಯಗಾಃ ॥ ೨೭ ॥
ಪ್ರಪಶ್ಯಂತೀಷು ತಾಸ್ವೇವ ದುರ್ದಮೋ ರಾಕ್ಷಸೋಽಭವತ್ ॥ ೨೮ ॥
ಮಹಾದಂಷ್ಟ್ರೋ ಮಹಾಕಾಯೋ ರಕ್ತಶ್ಮಶ್ರುಶಿರೋರುಹಃ ।
ತಂ ದೃಷ್ಟ್ವಾ ಭಯಸಂವಿಗ್ನಾ ಜಗ್ಮೂ ರಾಮಾಸ್ತ್ರಿವಿಷ್ಟಪಂ ॥ ೨೯ ॥
ತತೋ ರಾಕ್ಷಸವೇಷೋಽಯಂ ದುರ್ದಮೋ ಭೈರವಾಕೃತಿಃ ।
ಭಕ್ಷಯನ್ಪ್ರಾಣಿನಃ ಸರ್ವಾನ್ ದೇಶಾದ್ದೇಶಂ ವನಾದ್ವನಂ ॥ ೩೦ ॥
ಭ್ರಮನ್ನನಿಲವೇಗೋಽಸೌ ಧರ್ಮತೀರ್ಥಂ ತತೋ ಯಯೌ ।
ಏವಂ ಷೋಡಶವರ್ಷಾಣಿ ಭ್ರಮತೋಽಸ್ಯ ಯಯುಸ್ತದಾ ॥ ೩೧ ॥
ತತಸ್ತು ಷೋಡಶಾಬ್ದಾಂತೇ ರಾಕ್ಷಸೋಽಯಂ ಮುನೀಶ್ವರಾಃ ।
ಭಕ್ಷಿತುಂ ಗಾಲವಮುನಿಂ ಧರ್ಮತೀರ್ಥನಿವಾಸಿನಂ ॥ ೩೨ ॥
ಉಪಾದ್ರವದ್ವಾಯುವೇಗಃ ಸಚಾಽಸೌ ತುಷ್ಟಿಜ್ಜನಾರ್ದನಂ ।
ಗಾಲವೇನ ಸ್ತುತೋ ವಿಷ್ಣುಸ್ತದಾ ಚಕ್ರಮಚೋದಯತ್ ॥ ೩೩ ॥
ರಕ್ಷಿತುಂ ಗಾಲವಮುನಿಂ ರಾಕ್ಷಸೇನ ಪ್ರಪೀಡಿತಂ ।
ಅಥಾಽಗತ್ಯ ಹರೇಶ್ಚಕ್ರಂ ರಾಕ್ಷಸಸ್ಯ ಶಿರೋಽಹರತ್ ॥ ೩೪ ॥

---

ಪತ್ನಿಯರಿಗೆ ಅಪ್ಪಣೆಯಿತ್ತು ಹಾಲಾಸ್ಯನಾಥನನ್ನು ಧ್ಯಾನಿಸುತ್ತಾ ತನ್ನ ಆಶ್ರಮಕ್ಕೆ ಹೊರಟುಹೋದನು.

೨೭. ಬಳಿಕ ಕಳವಳಗೊಂಡ ಆ ಹೆಂಗಸರು ದುಃಖಸಮುದ್ರದಲ್ಲಿ ಮುಳುಗಿದವರಾಗಿ ಆ ದುರ್ದಮನನ್ನಪ್ಪಿಕೊಂಡು ಬಹಳವಾಗಿ ಪ್ರಲಪಿಸಿದರು.

೨೮–೨೯. ಅವರು ನೋಡುತ್ತಿರುವಂತೆಯೆ ದುರ್ದಮನು ಭಯಂಕರವಾದ ಕೋರೆಹಲ್ಲುಗಳುಳ್ಳವನೂ, ದೊಡ್ಡ ದೇಹವುಳ್ಳವನೂ, ಕೆಂಗೂದಲೂ, ಗಡ್ಡ ಮೀಸೆಗಳು ಉಳ್ಳವನೂ ಆದ ರಾಕ್ಷಸನಾದನು. ಅವನನ್ನು ಕಂಡು ಆ ಹೆಂಗಸರು ಹೆದರಿ ಸ್ವರ್ಗಲೋಕಕ್ಕೆ ಓಡಿಹೋದರು.

೩೦–೩೪. ಬಳಿಕ ಭಯಂಕರನೂ, ರಾಕ್ಷಸವೇಷಧಾರಿಯೂ ಆದ ಆ ದುರ್ದಮನು ದೇಶವಿದೇಶಗಳನ್ನೂ, ಕಾಡುಮೇಡುಗಳನ್ನೂ ವಾಯುವೇಗದಿಂದ ಸುತ್ತುತ್ತ ಎಲ್ಲ ಪ್ರಾಣಿಗಳನ್ನೂ ತಿನ್ನುತ್ತ ಹೊರಟನು. ಹೀಗೆ ಸುತ್ತುತ್ತಿರುವಂತೆಯೆ ಅವನ ಶಾಪದ ಅವಧಿಯಾದ ಹದಿನಾರು ವರ್ಷಗಳು ಕಳೆದುವು. ಹದಿನಾರು ವರ್ಷಗಳು ಕಳೆದ ಬಳಿಕ ಒಂದು ದಿನ ಧರ್ಮತೀರ್ಥದಲ್ಲಿ ವಾಸಿಸುತ್ತಿದ್ದ ಗಾಲವನನ್ನು ತಿನ್ನಲು ಅವನು ವಾಯುವೇಗದಿಂದೋಡಿದನು. ಆ ಮುನಿಯಾದರೊ ಜನಾರ್ದನನನ್ನು ಧ್ಯಾನಿಸಿದನು. ಆತನಿಂದ ಸಂಸ್ತುತನಾದ ಮಹಾವಿಷ್ಣುವು ರಾಕ್ಷಸನ ಕೈಗೆ ಸಿಕ್ಕಿದ ಆ ಗಾಲವನನ್ನು ರಕ್ಷಿಸಲು ತನ್ನ

ತತೋಽಯಂ ರಾಕ್ಷಸಂ ದೇಹಂ ತ್ಯಕ್ತ್ವಾ ದಿವ್ಯಕಲೇಬರಃ ।
ವಿಮಾನವರಮಾರುಹ್ಯ ದುರ್ದಮಃ ಪುಷ್ಪವರ್ಷಿತಃ ॥ ೩೫ ॥
ಪ್ರಾಂಜಲಿಃ ಪ್ರಣತೋ ಭೂತ್ವಾ ವವಂದೇ ತಂ ಸುದರ್ಶನಂ ।
ತುಷ್ಟಾವ ಶ್ರುತಿರಮ್ಯಾಭಿಃ ವಾಗ್ಭಿರಗ್ರ್ಯಾಭಿರಾದರಾತ್ ॥ ೩೬ ॥

ದುರ್ದಮ ಉವಾಚ :—

ಸುದರ್ಶನ ನಮಸ್ತೇಽಸ್ತು ವಿಷ್ಣುಹಸ್ತೈಕಭೂಷಣ ।
ನಮಸ್ತೇಽಸುರಸಂಹರ್ತ್ರೇ ಸಹಸ್ರಾದಿತ್ಯತೇಜಸೇ ॥ ೩೭ ॥
ಕೃಪಾಲೇಶೇನ ಭವತಸ್ತ್ಯಕ್ತ್ವಾಽಹಂ ರಾಕ್ಷಸೀಂ ತನುಂ ।
ಸ್ವರೂಪಮಭಜಂ ವಿಷ್ಣೋಃಶ್ಚಕ್ರಾಯುಧ ನಮೋಽಸ್ತುತೇ ॥ ೩೮ ॥
ಅನುಜಾನೀಹಿ ಮಾಂ ಗಂತುಂ ತ್ರಿದಿವಂ ವಿಷ್ಣುವಲ್ಲಭ ।
ಭಾರ್ಯಾ ಮೇ ಪರಿಶೋಚಂತಿ ವಿರಹಾತುರಚೇತಸಃ ॥ ೩೯ ॥
ತ್ವನ್ಮನಸ್ಕೋ ಭವಿಷ್ಯಾಮಿ ಯಾವಜ್ಜೀವಂ ಯಥಾಹ್ಯಹಂ ।
ತಥಾ ಕೃಪಾಂ ಕುರುಷ್ವ ತ್ವಂ ಮಯಿ ಚಕ್ರ ನಮೋಽಸ್ತುತೇ ॥ ೪೦ ॥

---

ಚಕ್ರವನ್ನು ಪ್ರೇರಿಸಿ ಕಳುಹಿಸಿದನು. ಅದು ಆ ರಾಕ್ಷಸನ ಶಿರವನ್ನು ಖಂಡಿಸಿ ಗಾಲವನನ್ನು ಕಾಪಾಡಿತು.

೩೫–೩೬. ಆ ರಾಕ್ಷಸನಾದರೋ ತನ್ನ ರಾಕ್ಷಸದೇಹವನ್ನು ತೊರೆದು ದಿವ್ಯ ದೇಹವನ್ನು ಧರಿಸಿ ಪುಷ್ಪವೃಷ್ಟಿಯಾಗುತ್ತಿರಲು ಶ್ರೇಷ್ಠವಾದ ವಿಮಾನವನ್ನೇರಿ ಅಂಜಲಿಬದ್ಧನಾಗಿ ಆ ಸುದರ್ಶನನನ್ನು ನಮಸ್ಕರಿಸಿ ಶ್ರೇಷ್ಠವಾದ ಸ್ತುತಿವಚನ ಗಳಿಂದ ಇಂಪಾಗಿ ಈ ರೀತಿ ಸ್ತುತಿಸಿದನು :—

೩೭–೩೮. ದುರ್ದಮನು ಸ್ತುತಿಸುತ್ತಾನೆ:—"ವಿಷ್ಣುವಿನ ಕರಭೂಷಣ ವಾಗಿ ಬೆಳಗುತ್ತಿರುವ ಓ ಸುದರ್ಶನನೆ! ನಿನಗೆ ನಮಸ್ಕಾರವು. ಸಾವಿರಾರು ಸೂರ್ಯರಂತೆ ಅಮಿತವಾದ ತೇಜಸ್ಸಿನಿಂದ ಬೆಳಗುತ್ತ ರಾಕ್ಷಸಾಂತಕನಾಗಿರುವ ನಿನಗೆರಗುವೆನು. ಎಲೈ ಚಕ್ರಾಯುಧವೆ! ನಿನ್ನ ದಯಾಲೇಶದಿಂದ ನಾನು ಈ ರಾಕ್ಷಸದೇಹವನ್ನು ತೊರೆದು ನಿಜರೂಪವನ್ನು ಪಡೆದೆನು. ಇದೋ ನಿನಗೆ ನಮೋ ನಮಃ!

೩೯. ಎಲೈ ಸುದರ್ಶನಮೂರ್ತಿಯೆ! ನನ್ನ ಪತ್ನಿಯರು ವಿರಹಪೀಡಿತರಾಗಿ ದುಃಖಿಸುತ್ತಿರುವುದರಿಂದ ಅವರನ್ನು ಕಾಣಲು ತ್ರಿದಿವಕ್ಕೆ ಹೋಗಲಪ್ಪಣೆಯನ್ನು ನೀಡು.

೪೦. ನಾನು ಬದುಕಿರುವಷ್ಟುದಿನವೂ ನಿನ್ನನ್ನು ನೆನೆವಂತೆ ಕೃಪೆಮಾಡು. ನಿನಗೆ ನಮಸ್ಕಾರ ಮಾಡುವೆನು."

ಏವಂ ಸ್ತುತಂ ವಿಷ್ಣುಚಕ್ರಂ ದುರ್ದಮೇನ ಸಭಕ್ತಿಕಂ ।
ಅನುಜಗ್ರಾಹ ಸಹಸಾ ತಥಾಽಸ್ತ್ವಿತಿ ಮುನೀಶ್ವರಾಃ ॥ ೪೧ ॥
ಚಕ್ರಾಯುಧಾಽಭ್ಯನುಜ್ಞಾತೋ ದುರ್ದಮೋ ಗಾಲವಂ ಮುನಿಂ ।
ಪ್ರಣಮ್ಯ ತೇನಾಽನುಜ್ಞಾತೋ ಗಂಧರ್ವಸ್ತ್ರಿದಿವಂ ಯಯೌ ॥ ೪೨ ॥
ದುರ್ದಮೇ ತು ಗತೇ ಸ್ವರ್ಗಂ ಗಾಲವೋ ಮುನಿಪುಂಗವಃ ।
ಸ ಚಕ್ರಂ ಪ್ರಾರ್ಥಯಾಮಾಸ ವಿಷ್ಣ್ವಾಯುಧಮನುತ್ತಮಂ ॥ ೪೩ ॥
ಚಕ್ರಾಯುಧ ನಮಾಮಿ ತ್ವಾಂ ಮಹಾಽಸುರವಿಮರ್ದನ ।
ದೇವೀಪತ್ತನಪರ್ಯಂತೇ ಧರ್ಮತೀರ್ಥೇ ಹ್ಯನುತ್ತಮೇ ॥ ೪೪ ॥
ಸನ್ನಿಧಾನಂ ಕುರುಷ್ವ ತ್ವಂ ಸರ್ವಪಾಪವಿನಾಶನಂ ।
ತ್ವತ್ಸನ್ನಿಧಾನಾತ್ಸರ್ವೇಷಾಂ ಸ್ನಾತಾನಾಂ ಪಾಪಿನಾಮಿಹ ॥ ೪೫ ॥
ಪಾಪನಾಶಂ ಕುರುಷ್ವ ತ್ವಂ ಮೋಕ್ಷಂ ಚ ಕುರು ಶಾಶ್ವತಂ ।
ಚಕ್ರತೀರ್ಥಮಿತಿ ಖ್ಯಾತಿಂ ಲೋಕಸ್ಯ ಪರಿಕಲ್ಪಯ ॥ ೪೬ ॥
ತ್ವತ್ಸನ್ನಿಧಾನಾದತ್ರತ್ಯಮುನೀನಾಂ ಭಯನಾಶನಂ ।
ಇತಃ ಪರಂ ಭವತ್ವಾರ್ಯ ಚಕ್ರಾಯುಧ ನಮೋಽಸ್ತುತೇ ॥ ೪೭ ॥
ಭೂತಪ್ರೇತಪಿಶಾಚೇಭ್ಯೋ ಭಯಂ ಮಾ ಭವತು ಪ್ರಭೋ ।
ಇತಿ ಸಂಪ್ರಾರ್ಥಿತಂ ಚಕ್ರಂ ಗಾಲವೇನ ಮುನೀಶ್ವರಾಃ ।
ತಥೈವಾಸ್ತ್ವಿತಿ ಸಂಭಾಷ್ಯ ತಸ್ಮಿಂಸ್ತೀರ್ಥೇ ತಿರೋಹಿತಂ ॥ ೪೮ ॥

---

೪೧. ಎಲೈ ಮುನಿಶ್ರೇಷ್ಠರೇ! ಈ ಬಗೆಯಾಗಿ ದುರ್ದಮನು ಭಕ್ತಿಯಿಂದ ಸ್ತುತಿಸಲು ಆ ವಿಷ್ಣುಚಕ್ರವು ಅಂತೆಯೇ ಅವನನ್ನು ಅನುಗ್ರಹಿಸಿತು.

೪೨. ಬಳಿಕ ಆ ದುರ್ದಮಗಂಧರ್ವನು ಗಾಲವನನ್ನು ವಂದಿಸಿ ಆತನ ಅಪ್ಪಣೆಯನ್ನೂ ಪಡೆದುಕೊಂಡು ಸ್ವರ್ಗಲೋಕಕ್ಕೆ ಹೋದನು.

೪೩. ಇಂತು ಆ ಗಂಧರ್ವನು ಹೊರಟುಹೋದ ಬಳಿಕ ಗಾಲವನು ವಿಷ್ಣ್ವಾಯುಧವಾದ ಆ ದಿವ್ಯಚಕ್ರವನ್ನು ಈ ರೀತಿ ಪ್ರಾರ್ಥಿಸಿದನು.

೪೪–೪೬. "ಮಹಾಸುರಸಂಹಾರಕನಾದ ಓ ಚಕ್ರಾಯುಧ! ನಿನಗೆ ನಮಸ್ಕಾರವು. ದೇವೀಪಟ್ಟಣದವರೆಗೆ ಪಸರಿಸಿರುವ ಈ ಧರ್ಮತೀರ್ಥದಲ್ಲಿ ನೀನು ಯಾವಾಗಲೂ ಸನ್ನಿಹಿತನಾಗಿದ್ದು ನನ್ನನ್ನು ಅನುಗ್ರಹಿಸು. ನಿನ್ನ ಸನ್ನಿಧಾನ ಬಲದಿಂದ ಇಲ್ಲಿ ಸ್ನಾನಮಾಡುವ ಪಾಪಿಗಳೆಲ್ಲರಿಗೂ ಪಾಪವನ್ನು ತೊಲಗಿಸಿ ಶಾಶ್ವತವಾದ ಮೋಕ್ಷವನ್ನನುಗ್ರಹಿಸು. ಇದಕ್ಕೆ ಚಕ್ರತೀರ್ಥವೆಂಬ ಪ್ರಸಿದ್ಧಿಯನ್ನು ಸಂಪಾದಿಸಿಕೊಡು.

೪೭–೪೮. ನಿನ್ನ ಆವಾಸದಿಂದಿಲ್ಲಿ ನೆಲಸಿರುವ ಮುನಿಗಳಿಗೆ ಇನ್ನುಮುಂದೆ ರಾಕ್ಷಸಪೀಡೆಯ ಭಯವಿಲ್ಲದಂತೆ ಕೃಪೆಮಾಡು. ಎಲೈ ಚಕ್ರಾಯುಧವೇ!

ಶ್ರೀ ಸೂತ ಉವಾಚ :—

ಏವಂ ವಃ ಕಥಿತೋ ವಿಪ್ರಾಃ ರಾಕ್ಷಸಸ್ಯ ಭವೋ ಮಯಾ ॥ ೪೯ ॥
ಮಾಹಾತ್ಮ್ಯಂ ಚಕ್ರತೀರ್ಥಸ್ಯ ಕಥಿತಂ ಚ ಮಲಾಽಪಹಂ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ಮಾನವೋ ಭುವಿ ॥ ೫೦ ॥

ಋಷಯ ಊಚುಃ :—

ವ್ಯಾಸಶಿಷ್ಯ ಮಹಾಪ್ರಾಜ್ಞ ಸೂತ ಪೌರಾಣಿಕೋತ್ತಮ ।
ಆರಭ್ಯ ದರ್ಭಶಯನಮಾದೇವೀಪತ್ತನಾಽವಧಿ ॥ ೫೧ ॥
ಬಹುವ್ಯಾಯಾಮಸಂಯುಕ್ತಂ ಚಕ್ರತೀರ್ಥಮನುತ್ತಮಂ ।
ಯಯಯೌ ವಿಚ್ಛಿನ್ನತಾಂ ಮಧ್ಯೇ ಕಥಂ ಕಥಯ ಸಾಂಪ್ರತಂ ।
ಏನಂ ಮನಸಿ ತಿಷ್ಠಂತಂ ಸಂಶಯಂ ಛೇತ್ತುಮರ್ಹಸಿ ॥ ೫೨ ॥

ಶ್ರೀ ಸೂತ ಉವಾಚ :—

ಪುರಾಹಿ ಪರ್ವತಾಃ ಸರ್ವೇ ಜಾತಪಕ್ಷಾ ಮನೋಜವಾಃ ।
ಪರ್ಯಂತಪರ್ವತೈಃ ಸಾರ್ಧಂ ಚೇರುರಾಕಾಶಮಾರ್ಗಗಾಃ ॥ ೫೩ ॥
ನಗರೇಷು ಚ ರಾಷ್ಟ್ರೇಷು ಗ್ರಾಮೇಷು ಚ ವನೇಷು ಚ ।
ಆಪ್ಲುತ್ಯಾಪ್ಲುತ್ಯ ತಿಷ್ಠಂತಿ ಪರ್ವತಾಃ ಸರ್ವತೋ ಭುವಿ ॥ ೫೪ ॥

---

ನಿನಗೆರಗುವೆನು. ಇಲ್ಲಿ ಮುಂದವರಿಗೆ ಭೂತಪ್ರೇತಪಿಶಾಚಗಳ ಕಾಟವೂ ತೊಲಗಲಿ.'' ಗಾಲವನಿಂತೆಂದು ಪ್ರಾರ್ಥಿಸಲು ಆ ಚಕ್ರಾಯುಧವು ಅಂತೆಯೇ ಆಗಲೆಂದೊಪ್ಪಿ ಆ ತೀರ್ಥದಲ್ಲಿ ಮಾಯವಾಯಿತು.

೪೯–೫೦. ಸೂತಮಹರ್ಷಿಯು ಹೇಳುತ್ತಾನೆ:—ಎಲೈ ವಿಪ್ರರೇ! ಈ ರೀತಿ ರಾಕ್ಷಸನ ಉತ್ಪತ್ತಿಯನ್ನೂ, ಮೈ ಮನಸ್ಸು ಮತ್ತು ಮಾತುಗಳ ಮಲವನ್ನು ತೊಳೆಯುವ ಚಕ್ರತೀರ್ಥದ ಮಹಿಮೆಯನ್ನೂ ನಿಮಗೆ ವಿವರಿಸಿದೆನು. ಇದನ್ನು ಕೇಳಿದ ಮಾನವರು ಸಮಸ್ತ ಪಾಪಗಳಿಂದಲೂ ಮುಕ್ತರಾಗುತ್ತಾರೆ.

೫೧–೫೨. ಋಷಿಗಳು ಕೇಳುತ್ತಾರೆ:—ಎಲೈ ಮಹಾಪ್ರಾಜ್ಞನೂ, ವ್ಯಾಸ ಶಿಷ್ಯನೂ ಆದ ಸೂತನೇ! ದರ್ಭಶಯನ ಮೊದಲುಗೊಂಡು ದೇವೀಪಟ್ಟಣದ ವರೆಗೆ ಅನೇಕ ಮಾರುಗಳ ದೂರವುಳ್ಳ ಶ್ರೇಷ್ಠವಾದ ಚಕ್ರತೀರ್ಥವು ಮಧ್ಯದಲ್ಲಿ ಹೇಗೆ ಬಿಟ್ಟುಹೋಯಿತು? ನಮ್ಮ ಮನಸ್ಸಿನ ಈ ಸಂಶಯವನ್ನು ನೀಗಲು ನೀನು ಸಮರ್ಥನಾಗಿರುವೆ. ಆದುದರಿಂದ ಪೌರಾಣಿಕೋತ್ತಮನಾದ ನೀನು ಈ ವಿಷಯವನ್ನು ನಮಗೆ ಅಪ್ಪಣೆಕೊಡಿಸಬೇಕು.

೫೩–೫೬. ಸೂತಪುರಾಣಿಕನು ಹೇಳುತ್ತಾನೆ:—ಅಯ್ಯಾ ಬ್ರಾಹ್ಮಣರೆ! ಹಿಂದೆ ಪರ್ವತಗಳೆಲ್ಲವೂ ರೆಕ್ಕೆಗಳುಳ್ಳುವಾಗಿ ಬಹಳ ವೇಗದಿಂದ ಸಂಚರಿಸುವ ಸಾಮರ್ಥ್ಯವನ್ನು ಹೊಂದಿ, ತಪ್ಪಲಿನ ಗುಡ್ಡಗಳೊಡನೆಯೆ ಆಕಾಶದಲ್ಲಿ ಸಂಚರಿ

ಆಕ್ರಮ್ಯಾಕ್ರಮ್ಯ ತಿಷ್ಠಂತಿ ಯತ್ರ ಯತ್ರ ಮಹೀಧರಾಃ ।
ತತ್ರ ತತ್ರ ನರಾ ಗಾವಸ್ತಥಾಽನ್ಯೇ ಪ್ರಾಣಿಸಂಚಯಾಃ ॥ ೫೫ ॥
ಮರಣಂ ಸಹಸಾ ಪ್ರಾಪುಃ ಪೀಡ್ಯಮಾನಾ ಮಹೀಧರೈಃ ॥ ೫೬ ॥
ಬ್ರಾಹ್ಮಣಾದಿಷು ವರ್ಣೇಷು ನಷ್ಟೇಷು ಸಮನಂತರಂ ।
ಯಜ್ಞಾದ್ಯಭಾವಾತ್ಸಹಸಾ ದೇವತಾ ವ್ಯಸನಂ ಯಯುಃ ॥ ೫೭ ॥
ತತ ಇಂದ್ರೋ ಮಹಾಕ್ರುದ್ಧೋ ವಜ್ರಮಾದಾಯ ವೇಗವಾನ್ ।
ಚಿಚ್ಛೇದ ಸಹಸಾ ಪಕ್ಷಾನ್ಪರ್ವತಾನಾಂ ತರಸ್ವಿನಾಂ ॥ ೫೮ ॥
ಛಿದ್ಯಮಾನಚ್ಛದಾಃ ಸರ್ವೇ ವಾಸವೇನ ಮಹೀಧರಾಃ ।
ಅನನ್ಯಶರಣಾ ಭೂತ್ವಾ ಸಮುದ್ರಂ ಪ್ರಾವಿಶನ್ ಭಯಾತ್ ॥ ೫೯ ॥
ಅಚಲೇಷು ಚ ಸರ್ವೇಷು ಪತತ್ಸು ಲವಣಾರ್ಣವೇ ।
ನಿಪೇತುರರ್ಣವಭ್ರಾಂತ್ಯಾ ಚಕ್ರತೀರ್ಥೇಽಪಿ ಕೇಚನ ॥ ೬೦ ॥
ಪತಿತೈಃ ಪರ್ವತೈಸ್ತೈಸ್ತು ಮಧ್ಯತಃ ಪೂರಿತೋದರಂ ।
ಚಕ್ರತೀರ್ಥಂ ಮಹಾಪುಣ್ಯಂ ಮಧ್ಯೇ ವಿಚ್ಛೇದಮಾಯಯೌ ॥ ೬೧ ॥
ಯದೃಚ್ಛಯಾ ಮಹಾಶೈಲಾಃ ಪಾರ್ಶ್ವಯೋಸ್ತತ್ರ ನಾಽಪತನ್ ।
ಅತೋ ವೈ ದರ್ಭಶಯನೇ ತಥಾ ದೇವೀಪುರೇಽಪಿಚ ॥ ೬೨ ॥

---

ಸುತ್ತ ಪಟ್ಟಣಗಳ ಮೇಲೂ, ಗ್ರಾಮಗಳ ಮೇಲೂ, ದೇಶಗಳ ಮೇಲೂ, ಕಾಡುಗಳ ಮೇಲೂ ಕುಪ್ಪಳಿಸುತ್ತಿದ್ದವು. ಅವು ಆಕ್ರಮಿಸಿದ ಸ್ಥಳಗಳಲ್ಲಿ ಜನರೂ ಮತ್ತು ದನಗಳೇ ಅಲ್ಲದೆ, ಇತರ ಪ್ರಾಣಿಗಳೂ ಅವುಗಳ ಪೀಡೆಗೊಳಗಾಗಿ ಅಲ್ಲಲ್ಲಿಯೇ ಮರಣಹೊಂದುತ್ತಿದ್ದವು.

೫೭. ಆಗ ಬ್ರಾಹ್ಮಣಾದಿ ವರ್ಣಗಳು ನಷ್ಟವಾದುದರಿಂದ ಯಾಗಾದಿ ಸತ್ಕರ್ಮಗಳಿಲ್ಲದೆಹೋಗಲು ಹವಿರ್ಭೋಜಿಗಳಾದ ದೇವತೆಗಳು ಬಹಳ ವ್ಯಸನಗೊಂಡರು.

೫೮. ಬಳಿಕ ವೇಗವಂತನಾದ ಇಂದ್ರನು ಬಹಳವಾಗಿ ಕೋಪಗೊಂಡು ಓಡುತ್ತಿದ್ದ ಆ ಬೆಟ್ಟಗಳ ರೆಕ್ಕೆಗಳನ್ನು ಕೂಡಲೇ ಕತ್ತರಿಸಿ ಕೆಡವಿದನು.

೫೯. ಆಗ ದೇವೇಂದ್ರನಿಂದ ಕತ್ತರಿಸಲ್ಪಟ್ಟ ರೆಕ್ಕೆಗಳುಳ್ಳ ಬೆಟ್ಟಗಳು ಬೇರಾವ ದಿಕ್ಕಿಲ್ಲದೆ ಭೀತಿಯಿಂದ ಸಮುದ್ರವನ್ನು ಹೊಕ್ಕವು.

೬೦. ಹೀಗೆ ಪರ್ವತಗಳೆಲ್ಲವೂ ಸಮುದ್ರಕ್ಕೆ ನುಗ್ಗುತ್ತಿರಲು ಕೆಲವು ಸಮುದ್ರದ ಭ್ರಾಂತಿಯಿಂದಲೇ ಈ ಚಕ್ರತೀರ್ಥದೊಳಹೊಕ್ಕವು.

೬೧. ಇಂತು ತನ್ನ ಮಧ್ಯದಲ್ಲಿ ಬಿದ್ದ ಪರ್ವತಗಳಿಂದ ತುಂಬಿದ ಮಹಾಪುಣ್ಯಕರವಾದ ಆ ಚಕ್ರತೀರ್ಥವು ಬೇರ್ಪಟ್ಟಿತು.

೬೨-೬೩. ಆಕಸ್ಮಿಕವಾಗಿ ಮಹಾಪರ್ವತಗಳು ಪಕ್ಕದಲ್ಲಿ ಬೀಳಲಿಲ್ಲ.

ವಿಚ್ಛಿನ್ನಮಧ್ಯಂ ತದ್ದ್ವೇಧಾ ವಿಭಕ್ತಮಿವ ದೃಶ್ಯತೇ ।
ಮಧ್ಯತಃ ಪತಿತೈಃ ಶೈಲೈಶ್ಚಕ್ರತೀರ್ಥಂ ಸ್ಥಲೀಕೃತಂ ॥ ೬೩ ॥

ಶ್ರೀ ಸೂತ ಉವಾಚ:—

ಯುಷ್ಮಾಕಮೇವಂ ಕಥಿತಂ ಮುನೀಂದ್ರಾ
ಯನ್ಮಧ್ಯತಸ್ತೀರ್ಥಮಿದಂ ಸ್ಥಲೀಕೃತಂ ।
ಯಥಾ ಮಹೀಧ್ರಾಃ ಸಹಸಾ ಬಿಡೌಜಸಾ
ವಿಚ್ಛಿನ್ನಪಕ್ಷಾ ಇಹ ಪೇತುರುನ್ನತಾಃ ॥ ೬೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ದುರ್ದಮಗಂಧರ್ವಶಾಪ ಮೋಚನಂ"ನಾಮ ಚತುರ್ಥೋಽಧ್ಯಾಯಃ

---

ಆದುದರಿಂದ ಮಧ್ಯದಲ್ಲಿಯೇ ಛಿನ್ನವಾಗಿ ಆ ಚಕ್ರತೀರ್ಥವು ದರ್ಭಶಯನ ಮತ್ತು ದೇವೀಪಟ್ಟಣಗಳಲ್ಲಿ ಎರಡು ಭಾಗವಾಯಿತು. ಮಧ್ಯದಲ್ಲಿ ನೆಲವು ಏರ್ಪಟ್ಟಿತು.

೬೪. ಎಲೈ ಋಷಿಶ್ರೇಷ್ಠರೇ! ಹೀಗೆ ಈ ಚಕ್ರತೀರ್ಥದ ಮಧ್ಯಭಾಗವು ಹೇಗೆ ನೆಲವಾಯಿತೆಂಬುದನ್ನೂ, ಇಂದ್ರನೇತಕ್ಕೆ ಬೆಟ್ಟಗಳ ರೆಕ್ಕೆಗಳನ್ನು ಕತ್ತರಿಸಿದನೆಂಬುದನ್ನೂ ನಿಮಗೆ ವಿವರಿಸಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ದುರ್ದಮಗಂಧರ್ವಶಾಪಮೋಚನ"ವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಮೋಽಧ್ಯಾಯಃ

### ಅಲಂಬುಸಾವಿಧೂಮಶಾಪವಿಮೋಚನಂ

ಶ್ರೀ ಸೂತ ಉವಾಚ :—

ಪ್ರಸ್ತುತ್ಯ ಚಕ್ರತೀರ್ಥಂ ತು ಪುಣ್ಯಂ ಪಾಪವಿನಾಶನಂ ।
ಪುನರಪ್ಯದ್ಭುತಂ ಕಿಂಚಿತ್ಪ್ರಬ್ರವೀಮಿ ಮುನೀಶ್ವರಾಃ ॥ ೧ ॥
ವಿಧೂಮನಾಮಾ ಹಿ ವಸುರ್ದೇವಸ್ತ್ರೀ ಚಾಪ್ಯಲಂಬುಸಾ ।
ಬ್ರಹ್ಮಶಾಪಾನ್ಮಹಾಘೋರಾತ್ಪುರಾ ಪ್ರಾಪ್ತೌ ಮನುಷ್ಯತಾಂ ।
ಚಕ್ರತೀರ್ಥೇ ಮಹಾಪುಣ್ಯೇ ಸ್ನಾತ್ವಾ ಶಾಪಾದ್ವಿಮೋಚಿತೌ ॥ ೨ ॥

ಋಷಯ ಊಚುಃ :—

ಸೂತಸೂತ ಮಹಾಪ್ರಾಜ್ಞ ಪುರಾಣಾರ್ಥವಿಶಾರದ ।
ಪ್ರಾಜ್ಞತ್ವಾದ್ವ್ಯಾಸಶಿಷ್ಯತ್ವಾದಜ್ಞಾತಂ ತೇ ನ ಕಿಂಚನ ॥ ೩ ॥
ಬ್ರಹ್ಮಾ ಕೇನಾಽಪರಾಧೇನ ಸಹಾಲಂಬುಸಯಾ ವಸುಂ
ಪುರಾ ವಿಧೂಮನಾಮಾನಂ ಶಪ್ತವಾಂಶ್ಚತುರಾನನಃ । ॥ ೪ ॥
ಬ್ರಹ್ಮಶಾಪೇನ ಘೋರೇಣ ಕಯೋಽಸ್ತೌ ಪುತ್ರತಾಂ ಗತೌ ॥ ೫ ॥
ಶಾಪಸ್ಯಾಂತಃ ಕಥಮಭೂದ್ಬ್ರಹ್ಮಣಾ ಶಪ್ತಯೋಸ್ತಯೋಃ ।
ಏತನ್ನಃ ಶ್ರದ್ದಧಾನಾನಾಂ ವಿಸ್ತರಾದ್ವಕ್ತುಮರ್ಹಸಿ ॥ ೬ ॥

---

### ಕನ್ನಡದ ಅನುವಾದ

#### ಅಲಂಬುಸಾವಿಧೂಮಶಾಪವಿಮೋಚನ

೧. ಸೂತನು ಹೇಳುತ್ತಾನೆ :—ಎಲೈ ಮುನಿವರ್ಯರೇ ! ಪುಣ್ಯವೂ, ಪಾಪನಾಶಕವೂ ಆದ ಚಕ್ರತೀರ್ಥವನ್ನಿಂತು ಬಣ್ಣಿಸಿ ಮತ್ತೊಂದದ್ಭುತವನ್ನು ನಿಮಗೆ ತಿಳಿಯಹೇಳುವೆನು.

೨. ವಿಧೂಮನೆಂಬ ಹೆಸರುಳ್ಳ ವಸುವೂ, ಅಲಂಬುಸೆಯೆಂಬ ದೇವವನಿತೆಯೂ, ಬ್ರಹ್ಮದೇವನ ಘೋರ ಶಾಪದಿಂದ ಹಿಂದೆ ಮನುಷ್ಯತ್ವವನ್ನು ಹೊಂದಿ ಮಹಾ ಪುಣ್ಯಪ್ರದವಾದ ಈ ಚಕ್ರತೀರ್ಥದಲ್ಲಿ ಸ್ನಾನಮಾಡಿ ಮುಕ್ತರಾದರು.

೩. ಋಷಿಗಳು ಕೇಳುತ್ತಾರೆ :—ಪಂಡಿತನೂ, ಸಕಲ ಪುರಾಣಾರ್ಥಗಳನ್ನು ಅರಿತವನೂ ಆದ ಎಲೈ ಸೂತನೇ ! ಪಾಂಡಿತ್ಯವಿರುವುದರಿಂದಲೂ, ವ್ಯಾಸಶಿಷ್ಯನಾದುದರಿಂದಲೂ ನಿನಗೆ ತಿಳಿಯದುದಾವುದೂ ಇಲ್ಲವು.

೪-೬. ಯಾವ ತಪ್ಪಿಗಾಗಿ ಬ್ರಹ್ಮದೇವನು ವಿಧೂಮನೆಂಬ ವಸುವನ್ನು ಅಲಂಬಸೆಯೊಡನೆ ಶಪಿಸಿದನು ? ಆದರಿಂದ ಅವರು ಯಾರ ಮಕ್ಕಳಾಗಿ ಜನಿಸಿ

ಶ್ರೀ ಸೂತ ಉವಾಚ :–
ಪುರಾಹಿ ಭಗವಾನ್ ಬ್ರಹ್ಮಾ ಸ್ವಯಂಭೂಶ್ಚತುರಾನನಃ ।
ಸಾವಿತ್ರ್ಯಾ ಚ ಸರಸ್ವತ್ಯಾ ಪಾರ್ಶ್ವಯೋಃ ಪ್ರವಿರಾಜತಃ ॥ ೭ ॥
ಸನಾತನೇನ ಮುನಿನಾ ಸನಕೇನ ಚ ಧೀಮತಾ ।
ಸನತ್ಕುಮಾರ ನಾಮ್ನಾ ಚ ನಾರದೇನ ಮಹಾತ್ಮನಾ ॥ ೮ ॥
ಸನಂದನಾದಿಭಿಶ್ಚಾಽನ್ಯೈಃ ಸೇವ್ಯಮಾನೋ ಮುನೀಶ್ವರೈಃ ।
ಸುಪರ್ವವೃಂದಜುಷ್ಟೇನ ಸ್ತೂಯಮಾನೋ ಬಿಡೌಜಸಾ ॥ ೯ ॥
ಆದಿತ್ಯಾದಿ ಗ್ರಹೈಶ್ಚೈವ ಸ್ತೂಯಮಾನಪದಾಂಬುಜಃ ।
ಸಿದ್ಧೈಃ ಸಾಧ್ಯೈರ್ಮರುದ್ಭಿಶ್ಚ ಕಿನ್ನರೈಶ್ಚ ಸಮಾವೃತಃ ॥ ೧೦ ॥
ಗಣೈಃ ಕಿಂಪುರುಷಾಣಾಂ ಚ ವಸುಭಿಶ್ಚಾಽಷ್ಟಭಿರ್ವೃತಃ ।
ಊರ್ವಶೀಪ್ರಮುಖಾನಾಂ ಚ ಸ್ವರ್ವೇಶ್ಯಾನಾಂ ಮನೋರಮಂ ॥ ೧೧ ॥
ನೃತ್ಯಂ ವಾದಿತ್ರಸಹಿತಂ ವೀಕ್ಷ್ಯಮಾಣೋ ಮುಹುರ್ಮುಹುಃ ।
ಗೋಷ್ಠೀಂ ಚಕ್ರೇ ಸಭಾಮಧ್ಯೇ ಸತ್ಯಲೋಕೇ ಕದಾಚನ ॥ ೧೨ ॥
ಮೇಘಗರ್ಜಿತಗಂಭೀರೋ ಜನಾನಾನಂದಯನ್ಮುಹುಃ ।
ವೀಣಾವೇಣುಮೃದಂಗಾನಾಂ ಧ್ವನಿಸ್ತತ್ರ ವ್ಯಸರ್ಪತ ॥ ೧೩ ॥

---

ದರು? ಬ್ರಹ್ಮನ ಘೋರವಾದ ಶಾಪವು ಅವರಿಗೆ ಹೇಗೆ ತೊಲಗಿತು? ಈ ವಿಚಾರವನ್ನು ಶ್ರದ್ಧಾಳುಗಳಾದ ನಮಗೆ ವಿವರಿಸಬೇಕು.

೭–೧೨. ಸೂತನು ಹೇಳುತ್ತಾನೆ:—ಎಲೈ ವಿಪ್ರರೇ! ಪೂರ್ವದಲ್ಲಿ ಸ್ವಯಂಭುವನಾದ ಚತುರ್ಮುಖಬ್ರಹ್ಮನು ಒಮ್ಮೆ ಸತ್ಯಲೋಕದಲ್ಲಿ ಸಾವಿತ್ರೀ ಸರಸ್ವತಿಯರು ಇರ್ಕಡೆಗಳಲ್ಲಿಯೂ ಸೇವೆ ಸಲ್ಲಿಸುತ್ತ ಪ್ರಕಾಶಿಸುತ್ತಿರಲು, ಸನಕ, ಸನಂದನ, ಸನಾತನ, ಸನತ್ಕುಮಾರ, ನಾರದಾದಿ ಮುನೀಶ್ವರರಿಂದ ಸೇವಿತನೂ, ದೇವವೃಂದಸಹಿತನಾದ ಇಂದ್ರನಿಂದ ಸಂಸ್ತುತನೂ, ಆದಿತ್ಯಾದಿ ನವಗ್ರಹಗಳಿಂದ ಹೊಗಳಲ್ಪಟ್ಟ ಪಾದಪದ್ಮಗಳುಳ್ಳವನೂ, ಸಿದ್ಧ ಸಾಧ್ಯ ಕಿನ್ನರ ಕಿಂಪುರುಷ ಗಣಗಳಿಂದಲೂ, ಮರುತ್ತುಗಳಿಂದಲೂ, ಅಷ್ಟವಸುಗಳಿಂದಲೂ ಕೂಡಿದವನೂ, ಊರ್ವಶಿಯೇ ಮೊದಲಾದ ಅಪ್ಸರೆಯರ ಮನೋಹರವಾದ ನೃತ್ಯವನ್ನು ನೋಡುತ್ತಿರುವವನೂ ಆಗಿ ಓಲಗದಲ್ಲಿದ್ದನು.

೧೩. ಆಗ ವೀಣೆ, ಕೊಳಲು, ಮದ್ದಲೆ ಮುಂತಾದ ವಾದ್ಯಗಳ ಗುಡುಗಿನ ಧ್ವನಿಯಂತೆ ಗಂಭೀರವಾದ ಧ್ವನಿಯು ಅಲ್ಲಿನ ಸಾಮಾಜಿಕರನ್ನು ಆನಂದಗೊಳಿಸುತ್ತಿದ್ದಿತು.

ಗಂಗಾತರಂಗಮಾಲಾನಾಂ ಶೀಕರಸ್ಸ್ಪರ್ಶಶೀತಲಃ ।
ಪವಮಾನಃ ಸುಖಸ್ಪರ್ಶೋ ಮಂದಂ ಮಂದಂ ವವೌ ತದಾ ॥ ೧೪ ॥
ಪರ್ಯಾಯೇಣ ತದಾ ಸರ್ವಾ ನನೃತುರ್ದೇವಯೋಷಿತಃ ।
ನೃತ್ಯಶ್ರಮೇಣ ಖಿನ್ನಾಸು ವೇಶ್ಯಾಸ್ವನ್ಯಾಸು ಸಾದರಂ ॥ ೧೫ ॥
ಅಲಂಬುಸಾ ದೇವನಾರೀ ರೂಪಯೌವನಶಾಲಿನೀ ।
ಮದಯಂತೀ ಜನಾನ್ಸರ್ವಾನ್ಸಭಾಮಧ್ಯೇ ನನರ್ತ ವೈ ॥ ೧೬ ॥
ತಸ್ಮಿನ್ನವಸರೇ ತಸ್ಯಾ ನೃತ್ಯಂತ್ಯಾಃ ಸಂಸದಿ ದ್ವಿಜಾಃ ।
ವಸ್ತ್ರಮಾಭ್ಯಂತರಂ ವಾಯುರ್ಲೀಲಯಾ ಸಮುದಕ್ಷಿಪತ್ ॥ ೧೭ ॥
ತತ್ಕ್ಷಿಪ್ತೇ ವಸನೇ ಸ್ಪಷ್ಟಮೂರುಮೂಲಮದೃಶ್ಯತ ।
ತಥಾ ಭೂತಾಂ ತು ತಾಂ ದೃಷ್ಟ್ವಾ ಸರ್ವೇ ಬ್ರಹ್ಮಾದಯೋ ಹ್ರಿಯಾ ॥ ೧೮ ॥
ಸಭಾಮಧ್ಯೇ ಸಮಾಸೀನಾ ನಿಮೀಲಿತದೃಶೋಽಭವನ್ ।
ವಿಧೂಮನಾಮಾತು ವಸುಃ ಕಾಮಬಾಣಪ್ರಪೀಡಿತಃ ॥ ೧೯ ॥
ತಾಮೇವ ಬ್ರಹ್ಮಭವನೇ ದೃಷ್ಟ್ವಾಽನಿಲಹೃತಾಂಶುಕಾಂ ।
ಹರ್ಷಸಂಪುಲ್ಲನಯನೋ ಹೃಷ್ಟರೋಮಾ ತತೋಽಭವತ್ ॥ ೨೦ ॥
ಅಲಂಬುಸಾಯಾಂ ತಸ್ಯಾಂ ತು ಜಾತಕಾಮಂ ವಿಲೋಕ್ಯ ತಂ ।
ವಸುಂ ವಿಧೂಮನಾಮಾನಂ ಶಶಾಪ ಚತುರಾನನಃ ॥ ೨೧ ॥

---

೧೪. ಗಂಗೆಯ ಅಲೆಗಳ ಮೇಲೆ ಅಡ್ಡಾಡಿ ಬಂದ ತಂಗಾಳಿಯು ಮೆಲ್ಲ ಮೆಲ್ಲನೆ ಸುಯ್ಯುಬಂದು ಬಹಳ ಸೊಂಪಾಗಿ ಬೀಸುತ್ತಿದ್ದಿತು.

೧೫–೧೬. ಆಗ ಅಪ್ಸರೆಯರು ಒಬ್ಬರಾದಮೇಲೊಬ್ಬರು ನೃತ್ಯಮಾಡುತ್ತ ಎಲ್ಲರೂ ಬಳಲಿದವರಾಗಲು, ಅಂದಗಾತಿಯೂ, ಪ್ರಾಯದವಳೂ ಆದ ಅಲಂಬುಸೆ ಯೆಂಬ ಅಪ್ಸರೆಯು ಆ ಸಭೆಯವರೆಲ್ಲರನ್ನೂ ಮೋಹಗೊಳಿಸುತ್ತಾ ನರ್ತನ ಮಾಡತೊಡಗಿದಳು.

೧೭. ಎಲೈ ಬ್ರಾಹ್ಮಣರೇ! ಆಗ ನರ್ತಿಸುತ್ತಿದ್ದ ಆಕೆಯ ವಸ್ತ್ರವನ್ನು ಗಾಳಿಯು ಲೀಲೆಯಿಂದ ಹಾರಿಸಿತು.

೧೮–೨೦. ಆಕೆಯ ಊರುಮೂಲವು ಸ್ಪಷ್ಟವಾಗಿ ಕಾಣಿಸಲು ಸಭೆಯಲ್ಲಿದ್ದ ಬ್ರಹ್ಮಾದಿಗಳೆಲ್ಲರೂ ನಾಚಿಕೆಯಿಂದ ಕಣ್ಣುಮುಚ್ಚಿ ಕುಳಿತರು. ವಿಧೂಮನೆಂಬ ವಸುವು ಮಾತ್ರ ಕಾಮಪೀಡಿತನಾಗಿ ಗಾಳಿಯಿಂದ ಹಾರಿಸಲ್ಪಟ್ಟ ಬಟ್ಟೆಯುಳ್ಳ ಆಕೆಯನ್ನೇ ನೋಡುತ್ತಾ, ಸಂತೋಷದಿಂದರಳಿದ ಕಣ್ಣುಳ್ಳವನೂ, ರೋಮಾಂಚ ವುಳ್ಳವನೂ ಆದನು.

೨೧. ಆಗ ಬ್ರಹ್ಮದೇವನು ಈ ರೀತಿ ಅಲಂಬುಸೆಯಲ್ಲಿ ಮೋಹಗೊಂಡ ಆ ವಿಧೂಮನನ್ನು ನೋಡಿ ಅವನನ್ನು ಶಪಿಸಿದನು.

ಯಸ್ಮಾತ್ತ್ವಮೀದೃಶಂ ಕಾರ್ಯಂ ವಿಧೂಮ ಕೃತವಾನಸಿ ।
ತಸ್ಮಾದ್ಧಿ ಮರ್ತ್ಯಲೋಕೇ ತ್ವಂ ಮಾನುಷತ್ವಮವಾಪ್ಸ್ಯಸಿ ।
ಇಯಂ ಚ ದೇವಯೋಷಿತ್ತೇ ತತ್ರ ಭಾರ್ಯಾ ಭವಿಷ್ಯತಿ ॥ ೨೨ ॥
ಏವಂ ಸ ಬ್ರಹ್ಮಣಾ ಶಪ್ತೋ ವಿಧೂಮಃ ಖಿನ್ನಮಾನಸಃ ।
ಪ್ರಸಾದಯಾಮಾಸ ವಸುರ್ಬ್ರಹ್ಮಾಣಂ ಪ್ರಣಿಪತ್ಯ ತು ॥ ೨೩ ॥

ವಿಧೂಮ ಉವಾಚ :—

ಅಸ್ಯ ಶಾಪಸ್ಯ ಘೋರಸ್ಯ ಭಗವನ್ಭಕ್ತವತ್ಸಲ ।
ನಾಽಹಮರ್ಹೋಽಸ್ಮಿ ದೇವೇಶ ರಕ್ಷ ಮಾಂ ಕರುಣಾನಿಧೇ ॥ ೨೪ ॥
ಏವಂ ಪ್ರಸಾದಿತಸ್ತೇನ ಭಾರತೀಪತಿರವ್ಯಯಃ ।
ಕೃಪಯಾ ಪರಯಾ ಯುಕ್ತೋ ವಿಧೂಮಂ ಪ್ರಾಹ ಸಾಂತ್ವಯನ್ ॥

ಬ್ರಹ್ಮೋವಾಚ :—

ತ್ವಯಿ ಶಾಪೋಽಪ್ಯಯಂ ದತ್ತೋ ನಚಾಽಸತ್ಯಂ ಬ್ರವೀಮ್ಯಹಂ ।
ತತೋಽವಧಿಂ ಕಲ್ಪಯಾಮಿ ಶಾಪಸ್ಯಾಽಸ್ಯ ತವಾಧುನಾ ॥ ೨೬ ॥
ಮರ್ತ್ಯಭಾವಂ ಸಮಾಪನ್ನಃ ಸಹಾಽಲಂಬುಸಯಾಽನಯಾ ।
ತತ್ರ ಭೂತ್ವಾ ಮಹಾರಾಜಃ ಶಾಸಯಿತ್ವಾ ಚಿರಂ ಮಹೀಂ ॥ ೨೭ ॥
ಪುತ್ರಮಪ್ರತಿಮಂ ತ್ವಸ್ಯಾಂ ಜನಯಿತ್ವಾ ಮಹೀಪತಿಂ ।
ಅಭಿಷಿಚ್ಯಚ ರಾಜ್ಯೇ ತಂ ರಾಜ್ಯರಕ್ಷಾವಿಚಕ್ಷಣಂ ॥ ೨೮ ॥

---

೨೨. "ಎಲೈ ವಿಧೂಮನೇ! ನೀನಿಂತಹ ದುಷ್ಕೃತ್ಯವನ್ನು ಮಾಡಿದುದರಿಂದ ಮರ್ತ್ಯಲೋಕದಲ್ಲಿ ಮನುಷ್ಯತ್ವವನ್ನು ಪಡೆಯುವೆ. ಈ ದೇವತಾಸ್ತ್ರೀಯು ಅಲ್ಲಿ ನಿನ್ನ ಹೆಂಡತಿಯಾಗುವಳು."

೨೩. ಇಂತು ಬ್ರಹ್ಮನಿಂದ ಶಪ್ತನಾದ ಆ ವಸುವು ಬಹಳ ಖಿನ್ನನಾಗಿ ಆತನಿಗೆರಗಿ ಸಮಾಧಾನಮಾಡತೊಡಗಿದನು.

೨೪. ವಿಧೂಮನು ಹೊಗಳುತ್ತಾನೆ:— "ಭಕ್ತವತ್ಸಲನಾದ ಎಲೈ ಪೂಜ್ಯನೇ! ಘೋರವಾದ ಈ ಶಾಪಕ್ಕೆ ನಾನು ತಕ್ಕವನಲ್ಲ. ದಯಾಳುವೇ! ನನ್ನನ್ನು ರಕ್ಷಿಸು."

೨೫. ವಿಧೂಮವಸುವು ಹೀಗೆ ಬೇಡಿಕೊಳ್ಳಲು, ಅವ್ಯಯನಾದ ಆ ವಾಗೀಶನು ಬಹಳ ದಯೆಯಿಂದ ಕೂಡಿದವನಾಗಿ ಅವನನ್ನು ಸಂತೈಸಿ ಹೇಳಿದನು.

೨೬–೩೧. ಬ್ರಹ್ಮನು ಹೇಳುತ್ತಾನೆ:— "ಎಲೈ ವಿಧೂಮನೇ! ನನ್ನ ವಚನವು ಅಸತ್ಯವಾಗಲಾರದು. ಆದರೆ ಈ ನಿನ್ನ ಶಾಪಕ್ಕೆ ಒಂದು ಅವಧಿಯನ್ನಿಡುವೆನು. ನೀನು ಭೂಲೋಕದಲ್ಲಿ ಒಬ್ಬ ಮಹಾರಾಜನಾಗಿ ಈ ಅಲಂಬುಸೆ

ಏತಚ್ಛಾಪಸ್ಯ ಶಾಂತ್ಯರ್ಥಂ ದಕ್ಷಿಣಸ್ಯೋದಧೇಸ್ತಟೇ ।
ಫುಲ್ಲಗ್ರಾಮಸಮೀಪಸ್ಥೇ ಚಕ್ರತೀರ್ಥೇ ಮಹತ್ತರೇ ॥ ೨೯ ॥
ಅನಯಾ ಭಾರ್ಯಯಾ ಸಾರ್ಧಂ ಯದಾ ಸ್ನಾನಂ ಕರಿಷ್ಯಸಿ ।
ತದಾ ತ್ವಂ ಮಾನುಷಂ ಭಾವಂ ಜೀರ್ಣತ್ವಚಮಿವೋರಗಃ ॥ ೩೦ ॥
ವಿಸೃಜ್ಯ ಭಾರ್ಯಯಾ ಸಾರ್ಧಂ ಸ್ವಂ ಲೋಕಂ ಪ್ರತಿಪತ್ಸ್ಯಸೇ ।
ಚಕ್ರತೀರ್ಥೇ ವಿನಾ ಸ್ನಾನಂ ನ ನಶ್ಯೇಚ್ಛಾಪ ಈದೃಶಃ ॥ ೩೧ ॥
ಇತಿ ಬ್ರಹ್ಮವಚಃ ಶ್ರುತ್ವಾ ವಿಧೂಮೋ ನಾತಿಹೃಷ್ಟವಾನ್ ।
ಸ್ವವೇಶ್ಮ ಪ್ರಾವಿಶತ್ತೂರ್ಣಮಾಮಂತ್ರ್ಯ ಚತುರಾನನಂ ॥ ೩೨ ॥
ಚಿಂತಯಾಮಾಸ ತತ್ರಾಽಸೌ ಮರ್ತ್ಯತಾಂ ಯಾಸ್ಯತೋ ಮಮ ।
ಕೋ ವಾ ಪಿತಾ ಭವೇದ್ಭೂಮೌ ಕಾ ವಾ ಮಾತಾ ಭವಿಷ್ಯತಿ ॥ ೩೩ ॥
ಬಹುಧೇತ್ಥಂ ಸಮಾಲೋಚ್ಯ ವಿಧೂಮೋ ನಿಶ್ಚಿಕಾಯ ಸಃ ।
ಕೌಶಾಂಬೀನಗರೇ ರಾಜಾ ಶತಾನೀಕ ಇತಿ ಶ್ರುತಃ ॥ ೩೪ ॥
ಅಸ್ತಿ ವೀರೋ ಮಹಾಭಾಗೋ ಭಾರ್ಯಾ ಚಾಽಪಿ ಪತಿವ್ರತಾ ।
ತಸ್ಯ ವಿಷ್ಣುಮತೀ ನಾಮ ವಿಷ್ಣೋಃ ಶ್ರೀರಿವ ವಲ್ಲಭಾ ॥ ೩೫ ॥
ತಮೇವ ಪಿತರಂ ಕೃತ್ವಾ ಮಾತರಂ ಚ ವಿಧಾಯ ತಾಂ ।
ಸಂಭವಿಷ್ಯಾಮಿ ಭೂಲೋಕೇ ಸ್ವಕರ್ಮಪರಿಪಾಕತಃ ॥ ೩೬ ॥

---

ಯೊಡನೆ ಬಹಳಕಾಲ ರಾಜ್ಯವಾಳು. ಈಕೆಯಲ್ಲಿ ಅಸಾಧಾರಣನಾದ ಮಗನೊಬ್ಬನನ್ನು ಪಡೆದು ಸಮರ್ಥನಾದ ಆತನಿಗೆ ಪಟ್ಟಕಟ್ಟು. ಈ ಶಾಪವಿಮುಕ್ತಿಗಾಗಿ ದಕ್ಷಿಣಸಮುದ್ರದ ದಡದಲ್ಲಿನ ಫುಲ್ಲಗ್ರಾಮದ ಬಳಿಯಲ್ಲಿರುವ ಶ್ರೇಷ್ಠವಾದ ಚಕ್ರತೀರ್ಥದಲ್ಲಿ ಇವಳೊಡನೆ ಸ್ನಾನಮಾಡು. ಆಗ ನೀನು, ಸರ್ಪವು ಪೊರೆಯನ್ನು ಬಿಡುವಂತೆ ಮನುಷ್ಯತ್ವವನ್ನು ನೀಗಿ ನಿನ್ನ ಪತ್ನಿಯೊಡನೆಯೆ ನಿನ್ನ ಲೋಕವನ್ನು ಮತ್ತೆ ಹೊಂದುವೆ. ಚಕ್ರತೀರ್ಥದ ಸ್ನಾನದ ಹೊರತು ಇಂತಹ ನನ್ನ ಶಾಪವು ತೊಲಗಲಾರದು.''

೩೨. ಬ್ರಹ್ಮನ ಈ ಶಾಪವಿಮೋಚನದ ಮಾತನ್ನು ಕೇಳಿದರೂ, ಬಹಳವಾಗಿ ಸಮಾಧಾನಗೊಳ್ಳದೆ ಆ ವಿಧೂಮನು ಚತುರಾನನನನ್ನು ವಂದಿಸಿ ಬೇಗನೆ ತನ್ನ ಮನೆಗೆ ಬಂದನು.

೩೩-೩೬. ''ಮನುಷ್ಯತ್ವವನ್ನು ಪಡೆಯುವ ನನಗೆ ಯಾರು ತಂದೆಯಾಗುವನೋ? ಎಂತಹವಳು ತಾಯಿಯಾಗುವಳೋ?'' ಎಂದು ಬಹಳವಾಗಿ ಯೋಚಿಸಿ ಕಡೆಗೆ ಆತನು, ''ಕೌಶಾಂಬೀ ನಗರದಲ್ಲಿ ಶತಾನೀಕನೆಂಬ ಪರಾಕ್ರಮಿಯಾದ ರಾಜನು ಪ್ರಸಿದ್ಧನಾಗಿರುವನು. ಆತನಿಗೆ, ನಾರಾಯಣನಿಗೆ ಲಕ್ಷ್ಮಿಯಂತೊಪ್ಪುವ ಪತಿವ್ರತೆಯಾದ ವಿಷ್ಣುಮತಿಯೆಂಬ ಹೆಂಡತಿಯಿರುವಳು. ನಾನು

ತತಃ ಸಮಾಲ್ಯವಂತಂ ಚ ಪುಷ್ಪದಂತಂ ಬಲೋತ್ಕಟಂ ।
ತ್ರೀನಾಹೂಯಾತ್ಮನೋ ಭೃತ್ಯಾನ್ಸ್ವೃತ್ತಮೇತನ್ನ್ಯವೇದಯತ್ ॥ ೩೭ ॥
ಭೃತ್ಯಾಃ ಶೃಣುತ ಭದ್ರಂ ವೋ ಬ್ರಹ್ಮಶಾಪಾನ್ಮಹಾಭಯಾತ್ ।
ಜನಿಷ್ಯಾಮಿ ಶತಾನೀಕಾದ್ವಿಷ್ಣುಮತ್ಯಾಮಹಂ ಸುತಃ ॥ ೩೮ ॥
ಇತಿ ಶ್ರುತ್ವಾ ವಚೋ ಭೃತ್ಯಾಸ್ತಸ್ಯ ಪ್ರಾಣಾ ಬಹಿಶ್ಚರಾಃ ।
ಬಾಷ್ಪಪೂರ್ಣಮುಖಾಃ ಸರ್ವೇ ವಿಭೂಮಂ ವಾಕ್ಯಮಬ್ರುವನ್ ॥ ೩೯ ॥

ಭೃತ್ಯಾ ಊಚುಃ:—

ತ್ವದ್ವಿಯೋಗಂ ವಯಂ ಸರ್ವೇ ತ್ರಯೋಽಪಿ ನ ಸಹಾಮಹೇ ।
ತಸ್ಮಾನ್ಮಾನುಷಭಾವಂ ತ್ವಮಸ್ಮಾಭಿಃ ಸಹ ಯಾಸ್ಯಸಿ ॥ ೪೦ ॥
ಶತಾನೀಕಸ್ಯ ರಾಜರ್ಷೇರ್ಮಂತ್ರೀ ಯೋಽಯಂ ಯುಗಂಧರಃ ।
ಸೇನಾನೀರ್ವಿಪ್ರತೀಕಶ್ಚ ಯೋಽಯಂ ಪ್ರಾಗ್ರಸರೋ ರಣೇ ॥ ೪೧ ॥
ನರ್ಮಕರ್ಮಸುಹೃದ್ವಿಪ್ರೋ ವಲ್ಲಭಾಖ್ಯೋ ಮಹಾಂಶ್ಚ ಯಃ ।
ತೇಷಾಂ ಪುತ್ರಾಸ್ತ್ರಯೋಪ್ಯೇತೇ ಭವಿಷ್ಯಾಮೋ ನ ಸಂಶಯಃ ॥ ೪೨ ॥
ಶತಾನೀಕಸ್ಯ ರಾಜರ್ಷೇಃ ಪುತ್ರಭಾವಂ ಗತಸ್ಯ ತೇ ।
ಶುಶ್ರೂಷಾಂ ಸಂವಿಧಾಸ್ಯಾಮಸ್ತೇಷು ತೇಷು ಚ ಕರ್ಮಸು ।
ತಾನೇವಂ ವಾದಿನಃ ಸೋಽಯಂ ವಿಭೂಮೋ ವಾಕ್ಯಮಬ್ರವೀತ್ ॥ ೪೩ ॥

---

ಅವರನ್ನೇ ತಾಯಿತಂದೆಯರನ್ನಾಗಿ ಮಾಡಿಕೊಂಡು ನನ್ನ ಕರ್ಮವಶದಿಂದ ಭೂಲೋಕದಲ್ಲಿ ಹುಟ್ಟುವೆನು" ಎಂದು ನಿಶ್ಚಯಿಸಿದನು.

೩೭. ಬಳಿಕಲಾತನು ಮಾಲ್ಯವಂತ, ಪುಷ್ಪದಂತ, ಬಲೋತ್ಕಟರೆಂಬ ತನ್ನ ಮೂವರು ಸೇವಕರನ್ನೂ ಕರೆದು ಈ ಸಮಾಚಾರವನ್ನವರಿಗೆ ತಿಳುಹಿದನು.

೩೮. "ಎಲೈ ಭೃತ್ಯರೇ! ನಾನು ಘೋರವಾದ ಈ ಬ್ರಹ್ಮಶಾಪದ ದೆಸೆಯಿಂದ ಭೂಲೋಕದಲ್ಲಿ ಶತಾನೀಕ ವಿಷ್ಣುಮತಿಯರಿಗೆ ಮಗನಾಗಿ ಹುಟ್ಟುವೆನು."

೩೯. ಆತನ ಪ್ರಾಣಗಳಂತಿರುವ ಭೃತ್ಯರು ಈ ಮಾತನ್ನು ಕೇಳಿ ಕಣ್ಣೀರಿಟ್ಟು ಆತನಿಗೆ ಹೇಳತೊಡಗಿದರು.

೪೦. ಭೃತ್ಯರು ಹೇಳುತ್ತಾರೆ:— "ಪ್ರಭೋ! ನಾವು ನಿನ್ನನ್ನಗಲಿರಲಾರೆವು. ನಿನ್ನೊಂದಿಗೆಯೇ ನಾವೂ ಮನುಷ್ಯತ್ವವನ್ನು ಪಡೆಯಬೇಕು.

೪೧. ರಾಜರ್ಷಿಯಾದ ಶತಾನೀಕನಿಗೆ ಯುಗಂಧರನೆಂಬ ಮಂತ್ರಿಯೂ, ಯುದ್ಧದಲ್ಲಿ ಅಗ್ರೇಸರನಾದ ವಿಪ್ರತೀಕನೆಂಬ ಸೇನಾಪತಿಯೂ, ಹಾಸ್ಯಪ್ರಿಯನಾದ ವಲ್ಲಭನೆಂಬ ಮಹಾಬ್ರಾಹ್ಮಣನೂ ಇರುವರು. ನಾವು ಮೂವರೂ ಅವರ ಮಕ್ಕಳಾಗಿ ಹುಟ್ಟುವೆವು.

೪೨–೪೩. ಶತಾನೀಕನ ಮಗನಾಗಿ ಹುಟ್ಟುವ ನಿನಗೆ ನಾವು ಆ ಆ ಕೆಲಸ

ವಿಧೂಮ ಉವಾಚ:—
ಜಾನೇಽಹಂ ಭವತಾಂ ಸ್ನೇಹಂ ತಾದೃಶಂ ಮಯ್ಯನುತ್ತಮಂ ॥ ೪೪ ॥
ತಥಾಽಪಿ ಕಥಯಾಮ್ಯದ್ಯ ತಚ್ಛೃಣುಧ್ವಂ ಹಿತಂ ವಚಃ ।
ಬ್ರಹ್ಮಶಾಪೇನ ಘೋರೇಣ ಸ್ವೇನ ದುಷ್ಕರ್ಮಣಾ ಕೃತಂ ॥ ೪೫ ॥
ಕುತ್ಸಿತಂ ಮಾನುಷಂ ಭಾವಮಹಮೇಕೋಽನುವರ್ತಯೇ ।
ವಿಹಿತಂ ನಹಿ ಯುಷ್ಮಾಕಮೇತಚ್ಛಾಪಾಽನುವರ್ತನಂ ॥ ೪೬ ॥
ಜುಗುಪ್ಸಿತೇಽತೋ ಮಾನುಷ್ಯೇ ಮಾಕುರುಧ್ವಂ ಮನೋಽಧುನಾ ।
ಅತಃ ಶಾಪಾಽವಧಿರ್ಯಾವನ್ಮದ್ವಿಯೋಗೋ ವಿಷಹ್ಯತಾಂ ॥ ೪೭ ॥
ಇತ್ಯುಕ್ತವಂತಂ ತೇ ಸರ್ವೇ ಮಾಲ್ಯವತ್ಪ್ರಮುಖಾಸ್ತದಾ ।
ಊಚುಃ ಪ್ರಣಮ್ಯ ಶಿರಸಾ ಪ್ರಾರ್ಥಯಂತಃ ಪುನಃ ಪುನಃ ॥ ೪೮ ॥
ರಕ್ಷಿತ್ವಾ ಕೃಪಯಾ ಹ್ಯಸ್ಮಾನ್ಮಾಕುರುಷ್ವಚ ಸಾಹಸಂ ।
ಪರಿತ್ಯಜಸಿ ನಃ ಸರ್ವಾನ್ ಭಕ್ತಾನದ್ಯ ನಿರಾಗಸಃ ॥ ೪೯ ॥
ತ್ವದ್ವಿಯೋಗಾನ್ಮಹಾಘೋರಾನ್ಮಾನುಷ್ಯಮಪಿ ಕುತ್ಸಿತಂ ।
ಬಹುಮನ್ಯಾಮಹೇ ದೇವ ತಸ್ಮಾನ್ನಸ್ತ್ರಾಹಿ ಸಾಂಪ್ರತಂ ॥ ೫೦ ॥
ಏವಂ ಸ ಯಾಚಮಾನಾಂಸ್ತ್ರೀನನ್ವಮನ್ಯತ ಭೃತ್ಯಕಾನ್ ।
ತೈಸ್ತ್ರಿಭಿಃ ಸಹಿತಃ ಸೋಽಯಂ ಕೌಶಾಂಬೀಂ ಗಂತುಮೈಚ್ಛತ ॥ ೫೧ ॥

---

ಗಳಿಂದ ಸೇವೆ ಸಲ್ಲಿಸಿಕೊಂಡಿರುವೆವು.'' ಈ ರೀತಿ ಹೇಳುತ್ತಿರುವ ಅವರನ್ನು ಕುರಿತು ವಿಧೂಮನು ಹೇಳಿದನು.

೪೪–೪೭. ವಿಧೂಮನು ಹೇಳುತ್ತಾನೆ:—''ಅಯ್ಯಾ ಭೃತ್ಯರೇ! ನಿಮಗೆ ನನ್ನಲ್ಲಿರುವ ನಿರುಪಮವಾದ ಸ್ನೇಹವನ್ನು ನಾನು ಬಲ್ಲೆ. ಆದರೂ ನಿಮ್ಮ ಹಿತವನ್ನು ಬಯಸಿ ಹೇಳುವೆನು; ಕೇಳಿರಿ. ಬ್ರಹ್ಮನ ಘೋರ ಶಾಪದಿಂದ ತುಚ್ಛವಾದ ಈ ಮನುಷ್ಯತ್ವವು ನನಗೊಬ್ಬನಿಗೇ ಒದಗಿರುವುದರಿಂದ ನಾನು ಮಾತ್ರ ಅದನ್ನು ಅನುಭವಿಸುವೆನು. ನನ್ನ ಶಾಪವನ್ನು ನೀವೂ ಅನುವರ್ತಿಸುವುದು ನಿಮಗೆ ಹಿತಕರವಲ್ಲದುದರಿಂದ ನೀಚವಾದ ಈ ಮನುಷ್ಯತ್ವದಲ್ಲಿ ಆಸೆಯು ಬೇಡ. ನನ್ನ ಶಾಪವು ಮುಗಿಯುವವರೆಗೆ ನನ್ನ ಅಗಲಿಕೆಯನ್ನು ಸಹಿಸಿಕೊಂಡಿರಿ.''

೪೮. ಇಂತು ಹೇಳಿದ ವಿಧೂಮನ ಮಾತನ್ನು ಕೇಳಿ ಅವರು ಮೂವರೂ ಆತನಿಗೆ ನಮಸ್ಕರಿಸಿ ಬಾರಿಬಾರಿಗೂ ಈ ರೀತಿಯಾಗಿ ಬೇಡತೊಡಗಿದರು.

೪೯–೫೦. ''ಎಲೈ ಸ್ವಾಮಿಯೇ! ದಯೆಯಿಂದ ನಮ್ಮನ್ನು ಸಲಹು. ನಿರಪರಾಧಿಗಳೂ, ಭಕ್ತರೂ ಆದ ನಮ್ಮನ್ನು ತೊರೆಯುವ ಸಾಹಸವನ್ನು ಮಾಡಬೇಡ. ದೇವ! ಕಠಿನವಾದ ನಿನ್ನ ವಿರಹಕ್ಕಿಂತಲೂ, ನೀಚವಾದ ಮನುಷ್ಯತ್ವವೇ ಲೇಸೆಂದು ಬಗೆದಿರುವ ನಮ್ಮನ್ನು ಕಾಪಾಡು.''

೫೧. ಹೀಗೆ ಬೇಡಿದ ಆ ಭೃತ್ಯರನ್ನನುಗ್ರಹಿಸಿ ವಿಧೂಮನು ಆ ಮೂವರೊಡನೆಯೂ ಕೌಶಾಂಬಿಗೆ ತೆರಳಲಿಚ್ಛಿಸಿದನು.

ಏತಸ್ಮಿನ್ನೇವ ಕಾಲೇತು ಸೋಮವಂಶವಿವರ್ಧನಃ ।
ಅರ್ಜುನಾಭಿಜನೇ ಜಾತೋ ಜನಮೇಜಯಸಂಭವಃ ॥ ೫೨ ॥
ಶತಾನೀಕೋ ಮಹೀಪಾಲಃ ಪೃಥಿವೀಮನ್ವಪಾಲಯತ್ ।
ಬುದ್ಧಿಮಾನ್ನೀತಿಮಾನ್ವಾಗ್ಮೀ ಪ್ರಜಾಪಾಲನತತ್ಪರಃ ॥ ೫೩ ॥
ಚತುರಂಗಬಲೋಪೇತೋ ವಿಕ್ರಮೈಕಧನೋ ಯುವಾ ।
ಸ ಕೌಶಾಂಬೀಂ ಮಹಾರಾಜೋ ನಗರೀಮಧ್ಯುವಾಸ ವೈ ॥ ೫೪ ॥
ತಸ್ಯ ಮಂತ್ರರಹಸ್ಯಜ್ಞೋ ಮಂತ್ರೀ ಜಾತೋ ಯುಗಂಧರಃ ।
ಸೇನಾನೀರ್ವಿಪ್ರತೀಕಶ್ಚ ತಸ್ಯ ಪ್ರಾಗ್ರಸರೋ ರಣೇ ॥ ೫೫ ॥
ನರ್ಮಕರ್ಮಸು ತಸ್ಯಾಽಽಸೀದ್ವಲ್ಲಭಾಖ್ಯಃ ಸಖಾ ದ್ವಿಜಃ ।
ತಸ್ಯ ವಿಷ್ಣುಮತೀ ನಾಮ ವಿಷ್ಣೋಃ ಶ್ರೀರಿವ ವಲ್ಲಭಾ ॥ ೫೬ ॥
ಸ ಸರ್ವಗುಣಸಂಪನ್ನಃ ಶತಾನೀಕೋ ಮಹಾಮತಿಃ ।
ಪುತ್ರಮಾತ್ಮಸಮಂ ತಸ್ಯಾಂ ಭಾರ್ಯಾಯಾಂ ನಾಽನ್ವವಿಂದತ ॥ ೫೭ ॥
ಆತ್ಮಾನಮಸುತಂ ಜ್ಞಾತ್ವಾ ಸ ಭೃಶಂ ಪರ್ಯತಪ್ಯತ ।
ಸ ಯುಗಂಧರಮಾಹೂಯ ಮಂತ್ರಿಣಂ ಮಂತ್ರವಿತ್ತಮಂ ॥ ೫೮ ॥
ಪುತ್ರಲಾಭಃ ಕಥಂ ಮೇ ಸ್ಯಾದಿತಿ ಕಾರ್ಯಮಮಂತ್ರಯತ್ ।
ಯುಗಂಧರೋ ಮಹೀಪಾಲಂ ಪುತ್ರಾಽಲಾಭೇನ ಪೀಡಿತಂ ।
ಹರ್ಷಯನ್ವಚಸಾ ಸ್ವೇನ ವಾಕ್ಯಮೇತದಭಾಷತ ॥ ೫೯ ॥

---

೫೨–೫೪. ಇದೇ ಸಮಯದಲ್ಲಿಯೇ, ಅರ್ಜುನನ ವಂಶದಲ್ಲಿ ಜನಿಸಿ ಚಂದ್ರ ವಂಶವನ್ನು ಬೆಳಸುವವನೂ, ಜನಮೇಜಯನ ಮಗನೂ ಆದ ಶತಾನೀಕ ಮಹಾರಾಜನು ಬುದ್ಧಿಶಾಲಿಯೂ, ನೀತಿವಂತನೂ, ಮಾತಿನಲ್ಲಿ ಚತುರನೂ, ಪ್ರಜಾಪಾಲನಸಮರ್ಥನೂ, ಗಜತುರಗಾದಿ ಚತುರಂಗ ಬಲಸಹಿತನೂ, ಬಾಹು ಬಲದಿಂದೊಪ್ಪುವವನೂ, ಯೌವನಸಂಪನ್ನನೂ ಆಗಿ ಕೌಶಾಂಬಿಯಲ್ಲಿ ರಾಜ್ಯ ವಾಳುತ್ತಿದ್ದನು.

೫೫–೫೬. ಆತನಿಗೆ ಮಂತ್ರಜ್ಞನಾದ ಯುಗಂಧರನೆಂಬ ಮಂತ್ರಿಯೂ, ಯುದ್ಧಗಳಲ್ಲಿ ಮುಂದಾಳಾದ ವಿಪ್ರತೀಕನೆಂಬ ಸೇನಾಪತಿಯೂ, ಹಾಸ್ಯ ಕುಶಲನಾದ ವಲ್ಲಭನೆಂಬ ಬ್ರಾಹ್ಮಣನೂ, ವಿಷ್ಣುವಿಗೆ ಲಕ್ಷ್ಮಿಯಂತೊಪ್ಪುವ ವಿಷ್ಣುಮತಿಯೆಂಬ ಮಡದಿಯೂ ಇದ್ದರು.

೫೭–೫೯. ಸರ್ವಗುಣಸಂಪನ್ನನೂ, ಬುದ್ಧಿಶಾಲಿಯೂ ಆದ ಶತಾನೀಕನಿಗೆ ತನ್ನ ಧರ್ಮಪತ್ನಿಯಲ್ಲಿ ಬಹುಕಾಲ ಅನುರೂಪನಾದ ಮಗನಾಗದಿರಲು ಆತನು ಬಹಳವಾಗಿ ವ್ಯಥೆಗೊಂಡು ಮಂತ್ರಜ್ಞನಾದ ಯುಗಂಧರನೆಂಬ ಮಂತ್ರಿ ಯನ್ನು ಕರೆಯಿಸಿ ಪುತ್ರಪ್ರಾಪ್ತಿಯಾಗುವ ಉಪಾಯವನ್ನು ಕುರಿತು ವಿಚಾರ

ಯುಗಂಧರ ಉವಾಚ :—

ಅಸ್ತಿ ಶಾಂಡಿಲ್ಯನಾಮಾ ತು ಮಹರ್ಷಿಃ ಸತ್ಯವಾಕ್ಛುಚಿಃ ॥ ೬೦ ॥
ಶತ್ರುಮಿತ್ರಸಮೋ ದಾಂತಸ್ತಪಃಸ್ವಾಧ್ಯಾಯತತ್ಪರಃ ।
ತಮೇವ ಮುನಿಮಾಸಾದ್ಯ ಜ್ವಲಂತಮಿವ ಪಾವಕಂ ॥ ೬೧ ॥
ಪುತ್ರಮಾತ್ಮಸಮಂ ರಾಜನ್ಪ್ರಾರ್ಥಯೇಥಾ ವಿನೀತವತ್ ।
ಕೃಪಾವಾನ್ ಸ ಮಹರ್ಷಿಸ್ತು ಪುತ್ರಂ ತೇ ದಾಸ್ಯತಿ ಧ್ರುವಂ ॥ ೬೨ ॥
ಇತಿ ತದ್ವಚನಂ ಶ್ರುತ್ವಾ ಹರ್ಷಸಂಫುಲ್ಲಲೋಚನಃ ।
ಮಂತ್ರಿಣಾ ತೇನ ಸಂಯುಕ್ತಸ್ತಸ್ಯಾಗಾದಾಶ್ರಮಂ ಮುನೇಃ ॥ ೬೩ ॥
ತಮಾಶ್ರಮೇ ಸಮಾಸೀನಂ ಪ್ರಣನಾಮ ಮಹೀಪತಿಃ ।
ಶಾಂಡಿಲ್ಯಸ್ತು ಮಹಾತೇಜಾ ರಾಜಾನಂ ಪ್ರಾಪ್ತಮಾಶ್ರಮಂ ।
ದೃಷ್ಟ್ವಾ ಪಾದ್ಯಾದಿಭಿಃ ಪೂಜ್ಯ ಸ್ವಾಗತಂ ವ್ಯಾಜಹಾರ ಸಃ ॥ ೬೪ ॥

ಶಾಂಡಿಲ್ಯ ಉವಾಚ :—

ಶತಾನೀಕ ಕಿಮರ್ಥಂ ತ್ವಮಾಶ್ರಮಂ ಪ್ರಾಪ್ತವಾನ್ಮಮ ॥ ೬೫ ॥
ಯತ್ಕರ್ತವ್ಯಮಿದಾನೀಂ ತೇ ತದ್ವದಸ್ವ ಕರೋಮ್ಯಹಂ ।
ಮುನಿಮೇವಂ ವದಂತಂ ತಂ ಪ್ರತ್ಯವಾದೀದ್ಯುಗಂಧರಃ ॥ ೬೬ ॥

---

ಮಾಡಿದನು. ಬುದ್ಧಿಶಾಲಿಯಾದ ಯುಗಂಧರನು ಮಕ್ಕಳ ಹಂಬಲದಿಂದ ಖಿನ್ನನಾದ ಆ ರಾಜನನ್ನು ಸಂತೈಸುತ್ತಾ ಹೀಗೆ ಹೇಳಿದನು.

೬೦–೬೨. ಯುಗಂಧರನು ಹೇಳುತ್ತಾನೆ :—"ಸತ್ಯವಾಕ್ಯನೂ, ಶುಚಿಯೂ, ಹಗೆಗಳನ್ನೂ ಗೆಳೆಯರನ್ನಾಗಿ ಎಣಿಸುವವನೂ, ಇಂದ್ರಿಯನಿಗ್ರಹವುಳ್ಳವನೂ, ತಪಸ್ಸಿನಲ್ಲಿಯೂ, ವೇದಾಧ್ಯಯನದಲ್ಲಿಯೂ ನಿರತನೂ ಆದ ಶಾಂಡಿಲ್ಯನೆಂಬ ಮಹರ್ಷಿಯಿರುವನು. ತೇಜಶ್ಶಾಲಿಯಾದ ಆತನನ್ನಾಶ್ರಯಿಸಿ ನಿನಗನುರೂಪನಾದ ಮಗನನ್ನು ಪಡೆ. ವಿನಯದಿಂದಾತನನ್ನು ಬೇಡಿಕೋ? ದಯಾಶಾಲಿಯಾದ ಆ ಮಹರ್ಷಿಯು ನಿಶ್ಚಯವಾಗಿ ನಿನಗೆ ಪುತ್ರವರವನ್ನನುಗ್ರಹಿಸುವನು."

೬೩. ಮಂತ್ರಿಯ ಈ ಮಾತನ್ನು ಕೇಳಿ ಆ ಶತಾನೀಕರಾಜನು ಸಂತೋಷಗೊಂಡು ಆತನೊಡನೆ ಆ ಮಹರ್ಷಿಯ ಆಶ್ರಮಕ್ಕೆ ತೆರಳಿದನು.

೬೪. ಅಲ್ಲಿ ಸುಖಾಸೀನನಾಗಿರುವ ಆತನಿಗೆರಗಲು ತೇಜಸ್ವಿಯಾದ ಆತನು ತನ್ನ ಆಶ್ರಮಕ್ಕೆ ಬಂದಿರುವ ಮಹಾರಾಜನನ್ನು ಅರ್ಘ್ಯಪಾದ್ಯಾದಿಗಳಿಂದುಪಚರಿಸಿ ಸ್ವಾಗತವನ್ನು ಬಯಸಿ ಆತನನ್ನು ಕುರಿತಿಂತೆಂದನು.

೬೫–೬೬. ಶಾಂಡಿಲ್ಯನು ಹೇಳುತ್ತಾನೆ :—"ಎಲೈ ಶತಾನೀಕ ಮಹಾರಾಜನೇ! ನನ್ನ ಆಶ್ರಮಕ್ಕೆ ದಯಮಾಡಿಸಿದ ನಿಮಿತ್ತವೇನು. ನನ್ನಿಂದೇನಾಗಬೇಕಾಗಿದೆಯೋ ತಿಳಿಸು. ಮಾಡಿಕೊಡುವೆನು." ಇಂತು ಕೇಳುತ್ತಿರುವ

ಭಗವನ್ನೇಷ ವೈ ರಾಜಾ ಪುತ್ರಾಽಲಾಭೇನ ಕರ್ಷಿತಃ ।
ಭವಂತಂ ಶರಣಂ ಪ್ರಾಪ್ತಃ ಸಾಂಪ್ರತಂ ಪುತ್ರಕಾರಣಾತ್ ।
ಅಸ್ಯಾಽಪುತ್ರತ್ವಜಂ ದುಃಖಂ ತ್ವಮುಪಾಕರ್ತುಮರ್ಹಸಿ ॥ ೬೭ ॥
ಇತಿ ತಸ್ಯ ವಚಃ ಶ್ರುತ್ವಾ ಶಾಂಡಿಲ್ಯೋ ಮುನಿಸತ್ತಮಃ ।
ಪುತ್ರಲಾಭವರಂ ತಸ್ಮೈ ಪ್ರತಿಜಜ್ಞೇ ನೃಪಾಯ ವೈ ॥ ೬೮ ॥
ಸ ರಾಜ್ಞೋ ವರದಃ ಶ್ರೀಮಾನ್ ಕೌಶಾಂಬೀಮೇತ್ಯ ಸಾದರಂ ।
ಪುತ್ರೇಷ್ಟ್ಯಾಂ ಪುತ್ರಕಾಮಸ್ಯ ಯಾಜಕೋಽಭೂನ್ಮಹಾಮುನಿಃ ॥ ೬೯ ॥
ತತೋ ಮುನಿಪ್ರಸಾದೇನ ರಾಜಾ ದಶರಥೋಪಮಃ ।
ಯಜ್ಞಾದ್ರಾಮಮಿವ ಪ್ರಾಪ ಸಹಸ್ರಾನೀಕಮಾತ್ಮಜಂ ॥ ೭೦ ॥
ಏವಂ ವಿಧೂಮಃ ಸಂಜಜ್ಞೇ ಶತಾನೀಕಾನ್ನೃಪೋತ್ತಮಾತ್ ॥ ೭೧ ॥
ಅತ್ರಾಂತರೇ ಮಂತ್ರಿವರಸ್ಸೇನಾನೀಸ್ತು ಮಹೀಪತೇಃ ।
ದ್ವಿಜೋ ನರ್ಮವಯಸ್ಯಶ್ಚ ಪುತ್ರಾನ್ಪ್ರಾಪುಃ ಕುಲೋಚಿತಾನ್ ॥ ೭೨ ॥
ಪುತ್ರೋ ಯುಗಂಧರಸ್ಯಾಸೀನ್ಮಾಲ್ಯವಾನ್ನಾಮ ಭೃತ್ಯಕಃ ।
ಯೌಗಂಧರಾಯಣೋ ನಾಮ್ನಾ ಮಂತ್ರಶಾಸ್ತ್ರೇಷು ಕೋವಿದಃ ॥ ೭೩ ॥
ವಿಪ್ರತೀಕಸ್ಯ ತನಯಃ ಪುಷ್ಪದಂತೋ ಬಭೂವ ಹ
ರುಮಣ್ವಾನಿತಿ ವಿಖ್ಯಾತಃ ಪರಸೈನ್ಯವಿಮರ್ದನಃ ॥ ೭೪ ॥

---

ಆ ಮಹರ್ಷಿಯನ್ನು ಕುರಿತು ಮಂತ್ರಿಯಾದ ಯುಗಂಧರನು, "ಪೂಜ್ಯನೇ! ಈ ಮಹಾರಾಜನು ಮಕ್ಕಳಿಲ್ಲದುದರಿಂದ ವ್ಯಸನಗೊಂಡು ಪುತ್ರಪ್ರಾಪ್ತಿಗಾಗಿ ನಿನ್ನನ್ನು ಮೊರೆಹೊಕ್ಕಿರುವನು. ಈತನ ಈ ದುಃಖವನ್ನು ಹೋಗಲಾಡಿಸಲು ನೀನೇ ಸಮರ್ಥನು" ಎಂದು ನುಡಿದನು.

೬೮. ಮುನಿಯು ಆ ಮಾತನ್ನು ಕೇಳಿ, ರಾಜನಿಗೆ ಪುತ್ರಲಾಭದ ವರವನ್ನಿತ್ತು ಆದರದಿಂದ ಆ ರಾಜನೊಡನೆಯೇ ಕೌಶಾಂಬಿಗೆ ದಯಮಾಡಿಸಿದನು.

೬೯–೭೦. ಅಲ್ಲಿ ತಾನು ಋತ್ವಿಜನಾಗಿ ನಿಂತು ಪುತ್ರಕಾಮೇಷ್ಟಿಯನ್ನು ಆತನಿಂದ ಮಾಡಿಸಲು ಆತನ ಅನುಗ್ರಹದಿಂದ ದಶರಥನಿಗೆ ರಾಮನೆಂತೋ ಅಂತು ಆತನಿಗೆ ಸಹಸ್ರಾನೀಕನೆಂಬ ಪುತ್ರನುದಯಿಸಿದನು. ಈತನೇ ಬ್ರಹ್ಮ ಶಾಪಕ್ಕೊಳಗಾದ ವಿಧೂಮವಸುವು. ಈ ರೀತಿ ವಿಧೂಮನು ಶತಾನೀಕನ ಮಗನಾಗಿ ಜನಿಸಿದನು.

೭೧–೭೪. ಈ ಸಮಯದಲ್ಲಿಯೇ ರಾಜನ ಮಂತ್ರಿ, ಸೇನಾಪತಿಗಳಿಗೂ ಮಿತ್ರನಾದ ವಲ್ಲಭ ಬ್ರಾಹ್ಮಣನಿಗೂ ಮಾಲ್ಯವಂತ, ಪುಷ್ಪದಂತ, ಬಲೋತ್ಕಟರೆಂಬ ವಿಧೂಮನ ಭೃತ್ಯರು ಕ್ರಮವಾಗಿ ಪುತ್ರರಾಗಿ ಜನಿಸಿದರು. ಮಾಲ್ಯವಂತನು ಯುಗಂಧರನ ಮಗನಾದುದರಿಂದ ಯೌಗಂಧರಾಯಣನೆಂಬ ಹೆಸರನ್ನು ಪಡೆದು

ವಲ್ಲಭಸ್ಯ ತದಾ ಜಜ್ಞೇ ತನಯೋ ವೈ ಬಲೋತ್ಕಟಃ ।
ವಸಂತಕ ಇತಿ ಖ್ಯಾತೋ ನರ್ಮಕರ್ಮಸು ಕೋವಿದಃ ॥ ೭೫ ॥
ಅಥ ತೇ ವವೃಧುಃ ಸರ್ವೇ ರಾಜಪುತ್ರಪುರೋಗಮಾಃ ।
ಪಂಚಹಾಯನತಾಂ ತೇಷು ಯಾತೇಷು ತದನಂತರಂ ॥ ೭೬ ॥
ಅಲಂಬುಸಾಽಪಿ ಸ್ವರ್ವೇಶ್ಯಾ ಭೂಪತೇಃ ಕೃತವರ್ಮಣಃ ।
ಅಯೋಧ್ಯಾಯಾಂ ಮಹಾಪುರ್ಯಾಂ ಕನ್ಯಾಜಾತಾ ಮೃಗಾವತೀ ॥ ೭೭ ॥
ಏವಂ ವಿಧೂಮಮುಖ್ಯಾಸ್ತೇ ಜಜ್ಞಿರೇ ಕ್ಷಿತಿಮಂಡಲೇ ।
ಅತ್ರಾಂತರೇ ಮಹಾಸತ್ತ್ವೋ ದುಷ್ಟಸಾನುಚರೋ ಬಲೀ ॥ ೭೮ ॥
ಅಹಿದಂಷ್ಟ್ರ ಇತಿಖ್ಯಾತೋ ಮಹಾದೈತ್ಯೋ ಬಲೋತ್ಕಟಃ ।
ಯುಕ್ತಸ್ಥೂಲಶಿರೋನಾಮ್ನಾ ಸಹಾಯೇನ ದುರಾತ್ಮನಾ ॥ ೭೯ ॥
ರುರೋಧ ದೇವನಗರಂ ಬಬಾಧೇ ವಿಬುಧಾನಪಿ ।
ವರ್ತಮಾನೇ ದಿವಿ ಮಹಾಸಮರೇ ಸುರರಕ್ಷಸಾಂ ॥ ೮೦ ॥
ಆನಿನಾಯ ಶತಾನೀಕಂ ಸಹಾಯಾರ್ಥಂ ಪುರಂದರಃ ।
ಸ ಯೌವರಾಜ್ಯೇ ತನಯಂ ವಿಧಾಯ ವಿಧಿನಾ ನೃಪಃ ॥ ೮೧ ॥

---

ಮಂತ್ರಶಾಸ್ತ್ರದಲ್ಲಿ ಪ್ರವೀಣನಾದನು. ಪುಷ್ಪದಂತನು ವಿಪ್ರತೀಕನ ಮಗನಾಗಿ ರಮಣ್ವಂತನೆಂಬ ಹೆಸರನ್ನು ಹೊಂದಿ ಹಗೆಗಳನ್ನು ಹಿಮ್ಮೆಟ್ಟಿಸುವವನಾದನು. ಬಲೋತ್ಕಟನು ವಲ್ಲಭನ ಮಗನಾಗಿ ವಸಂತಕನೆಂದು ಹೆಸರುಪಡೆದು ನರ್ಮ ಸಚಿವನಾಗಿ ಖ್ಯಾತಿಯನ್ನು ಪಡೆದನು.

೭೬. ಇವರೆಲ್ಲರಿಗೂ ಐದು ವರ್ಷಗಳು ತುಂಬಿದುವು. ರಾಜಪುತ್ರಾದಿ ಗಳೆಲ್ಲರೂ ಕ್ರಮವಾಗಿ ವರ್ಧಿಸತೊಡಗಿದರು.

೭೭. ತರುವಾಯ ಅಲಂಬುಸೆಯೆಂಬ ಅಪ್ಸರೆಯೂ ಅಯೋಧ್ಯೆಯ ನ್ನಾಳುವ ಕೃತವರ್ಮನ ಮಗಳಾಗಿ ಹುಟ್ಟಿ ಮೃಗಾವತಿಯೆಂಬ ಹೆಸರಿನಿಂದ ಬೆಳೆಯುತ್ತಿದ್ದಳು.

೭೮–೮೩. ಹೀಗೆ ವಿಧೂಮನೇ ಮೊದಲಾದವರು ಭೂಲೋಕದಲ್ಲಿ ಹುಟ್ಟಿ ಬೆಳೆಯುತ್ತಿರಲು, ಮಹಾಬಲಶಾಲಿಯೂ, ಮಹಾಕಾಯನೂ, ಅತಿ ಗರ್ವಿತನೂ ಆದ ಅಹಿದಂಷ್ಟ್ರನೆಂಬ ದುಷ್ಟರಾಕ್ಷಸನು ದುರಾತ್ಮನಾದ ಸ್ಥೂಲದೇಹನೆಂಬವ ನೊಂದಿಗೆ ಒಮ್ಮೆ ಅಮರಾವತಿಯನ್ನು ಮುತ್ತಿ ದೇವತೆಗಳನ್ನೆಲ್ಲಾ ಹಿಂಸಿಸತೊಡ ಗಿದನು. ಇಂತು ಸ್ವರ್ಗಲೋಕದಲ್ಲಿ ದೇವದಾನವರಿಗೆ ಯುದ್ಧವಾಗುತ್ತಿರಲು ಇಂದ್ರನು ಶತಾನೀಕನನ್ನು ತನ್ನ ಸಹಾಯಕ್ಕೆ ಕರೆಕಳಿಸಿದನು. ಆಗ ಶತಾನೀಕನು ಮಗನಾದ ಸಹಸ್ರಾನೀಕನನ್ನು ಶಾಸ್ತ್ರೋಕ್ತವಾಗಿ ಯುವರಾಜನನ್ನಾಗಿ ಮಾಡಿ

ಪ್ರತಸ್ಥೇ ರಥಮಾಸ್ಥಾಯ ಯುದ್ಧಾಯ ದಿತಿಜೈಃ ಸಹ ।
ನೀತೋ ಮಾತಲಿನಾಽಭ್ಯೇತ್ಯ ಸಾದರಂ ಸ ಧನುರ್ಧರಃ ॥ ೮೨ ॥
ವಿಧಾಯ ಪ್ರೇಕ್ಷಕಾನ್‌ದೇವಾನ್ ಜಘಾನ ದಿತಿಜಾನ್ರಣೇ ।
ಅಥ ದೈತ್ಯಾಽಧಿಪಃ ಸೋಽಪಿ ನಿಹತಃ ಸಮರೇ ದಿವಿ ॥ ೮೩ ॥
ತತಃ ಶಕ್ರಸ್ಯ ವಚಸಾ ಪರೇತಂ ನೃಪಪುಂಗವಂ ।
ರಥಮಾರೋಪ್ಯ ಸಹಸಾ ಕೌಶಾಂಬೀಂ ಮಾತಲಿರ್ಯಯೌ ॥ ೮೪ ॥
ನೀತ್ವಾ ಮಹೀತಲಮಸೌ ತತ್ಸುತಾಯ ನ್ಯವೇದಯತ್ ।
ತತಃ ಸಹಸ್ರಾನೀಕೋಽಪಿ ವಿಲಪ್ಯ ಬಹುದುಃಖಿತಃ ॥ ೮೫ ॥
ಮಂತ್ರಿಭಿಃ ಸಹ ಸಂಭೂಯ ಪ್ರೇತಕಾರ್ಯಂ ನ್ಯವರ್ತಯತ್ ।
ಮೃತಂ ಜ್ಞಾತ್ವಾ ಪತಿಂ ರಾಜ್ಞೀ ಸಹೈವಾಸುಮುಮೋಚ ಚ ॥ ೮೬ ॥
ಮಹಿಷ್ಯಾ ಸಹ ಸಂಪ್ರಾಪ್ತೇ ಭೂಪಾಲೇ ಕೀರ್ತಿಶೇಷತಾಂ ।
ಭೇಜೇ ರಾಜ್ಯಂ ಶತಾನೀಕತನಯೋ ಮಂತ್ರಿಣಾಂ ಗಿರಾ ॥ ೮೭ ॥
ಯುಗಂಧರೇ ವಿಪ್ರತೀಕೇ ವಲ್ಲಭೇ ಚ ಮೃತೇ ಸತಿ ।
ಯೌಗಂಧರಾಯಣಮುಖ್ಯಾಸ್ತತ್ಪುತ್ರಾಃ ಸರ್ವ ಏವಹಿ ।
ಶತಾನೀಕಸುತಸ್ಯಾಽಸ್ಯ ತತ್ತತ್ಕಾರ್ಯಮಕುರ್ವತ ॥ ೮೮ ॥
ಏವಂ ಸ ಪಾಲಯಾಮಾಸ ಮಹೀಂ ರಾಜಸುತೋ ಬಲೀ ॥ ೮೯ ॥

---

ಮಾತಲಿಯು ತಂದಿದ್ದ ರಥದಲ್ಲಿ ಕುಳಿತು ಧನುರ್ಧಾರಿಯಾಗಿ ದೈತ್ಯರೊಂದಿಗೆ ಸಂಗರಕ್ಕೆ ತೆರಳಿದನು. ಅಲ್ಲಿ ಅವನು ದೇವತೆಗಳನ್ನೆಲ್ಲಾ ಪ್ರೇಕ್ಷಕರನ್ನಾಗಿ ಸುಮ್ಮನಿರಿಸಿ ತಾನೊಬ್ಬನೇ ದಾನವರನ್ನೆಲ್ಲಾ ಕೊನೆಗಾಣಿಸಿದನು. ಕಡೆಗೆ ರಾಕ್ಷಸರಾಜನೊಂದಿಗೆ ಹೋರಾಡಿ ಆತನನ್ನೂ ಕೊಂದು ತಾನೂ ಮಡಿದನು.

೮೪-೮೬. ಬಳಿಕ ಇಂದ್ರನ ಅಪ್ಪಣೆಯಂತೆ ಮಾತಲಿಯು ಆತನ ಶವವನ್ನು ರಥದಲ್ಲಿರಿಸಿಕೊಂಡು ಕೌಶಾಂಬಿಗೆ ತಂದು ಆತನ ಮಗನಾದ ಸಹಸ್ರಾನೀಕನಿಗೊಪ್ಪಿಸಿದನು. ಸಹಸ್ರಾನೀಕನೂ ಬಹಳವಾಗಿ ದುಃಖಿಸಿ ಮಂತ್ರಿಗಳೊಡಗೂಡಿ ತಂದೆಗೆ ಅಂತ್ಯಸಂಸ್ಕಾರವನ್ನು ನೆರವೇರಿಸಿದನು. ಶತಾನೀಕನ ರಾಣಿಯೂ ಪತಿಯೊಂದಿಗೆ ಸಹಗಮನಮಾಡಿದಳು.

೮೭. ಇಂತು ರಾಜನೂ, ರಾಜ್ಞಿಯೂ, ಕೀರ್ತಿಶೇಷರಾಗಲು ಮಂತ್ರಿಗಳು ಆತನ ಮಗನಾದ ಸಹಸ್ರಾನೀಕನಿಗೆ ಪಟ್ಟಾಭಿಷೇಕವನ್ನು ಮಾಡಿದರು.

೮೮-೮೯. ಬಳಿಕ ಯುಗಂಧರ, ವಿಪ್ರತೀಕ ಮತ್ತು ವಲ್ಲಭರೆಂಬುವರೂ ತೀರಿಹೋದಮೇಲೆ ಯೌಗಂಧರಾಯಣನೇ ಮುಂತಾದ ಅವರ ಮಕ್ಕಳು ಆ ಸಹಸ್ರಾನೀಕನಿಗೆ ಆಯಾ ಕೆಲಸಗಳಲ್ಲಿ ಊಳಿಗವನ್ನು ಮಾಡುತ್ತಿರಲು ಸಹಸ್ರಾನೀಕನು ಸಮರ್ಥನಾಗಿ ರಾಜ್ಯವಾಳುತ್ತಿದ್ದನು.

ಯಾತೇ ಕಾಲೇ ಮಹೇಂದ್ರೇಣ ಸನಂದನಮಹೋತ್ಸವೇ ।
ನಿಮಂತ್ರಿತಸ್ತತ್ಕಥಿತಾಂ ಭಾವಿನೀಮಶೃಣೋತ್ಕಥಾಂ ॥ ೯೦ ॥
ಸ್ವರ್ಯೋರ್ಷಿದ್ಬ್ರಹ್ಮಣಃ ಶಾಪಾದಯೋಧ್ಯಾಯಾಮಲಂಬುಸಾ ।
ಜಾತಾ ಮೃಗಾವತೀ ಕನ್ಯಾ ಭೂಪತೇಃ ಕೃತವರ್ಮಣಃ ॥ ೯೧ ॥
ವಿಧೂಮನಾಮಾ ಚ ವಸುಸ್ತ್ವಂ ನಾಕಲಲನಾಂ ಪುರಾ ।
ತಾಮೇವ ಬ್ರಹ್ಮಸದನೇ ದೃಷ್ಟ್ವಾಽನಿಲಹೃತಾಂಶುಕಾಂ ॥ ೯೨ ॥
ತದೈವ ಮದನಾಕ್ರಾಂತಃ ಶಾಪಾನ್ಮರ್ತ್ಯತ್ವಮಾಗತಃ ।
ಸೈವ ತೇ ದಯಿತಾ ರಾಜನ್ಭಾವಿನೀ ನ ಚಿರಾತ್ಸಖೇ ॥ ೯೩ ॥
ಯದಾ ತ್ವಮಾತ್ಮನಃ ಪುತ್ರಂ ರಾಜ್ಯೇ ಸಂಸ್ಥಾಪ್ಯ ಭೂಪತೇ ।
ಮೃಗಾವತ್ಯಾ ಸ್ತ್ರಿಯಾ ಸಾರ್ಧಂ ದಕ್ಷಿಣಸ್ಯೋದಧೇಸ್ತಟೇ ॥ ೯೪ ॥
ಚಕ್ರತೀರ್ಥೇ ಮಹಾಪುಣ್ಯೇ ಫುಲ್ಲಗ್ರಾಮಸಮೀಪತಃ ।
ಸ್ನಾನಂ ಕರಿಷ್ಯಸಿ ತದಾ ಶಾಪಾನ್ಮುಕ್ತೋ ಭವಿಷ್ಯಸಿ ।
ಇತಿ ಪ್ರೋವಾಚ ಭಗವಾನ್ ಸತ್ಯಲೋಕೇ ಪಿತಾಮಹಃ ॥ ೯೫ ॥
ಇತೀಂದ್ರವಚನಂ ಶ್ರುತ್ವಾ ಸಹಸ್ರಾನೀಕ ಭೂಪತಿಃ ॥ ೯೬ ॥

---

೯೦–೯೧. ಹೀಗೆ ಸ್ವಲ್ಪಕಾಲ ಕಳೆದಮೇಲೆ ಇಂದ್ರನು ಸಹಸ್ರಾನೀಕನನ್ನು ನಂದನೋತ್ಸವಕ್ಕೆ ಕರೆದು, "ಅಯ್ಯಾ, ಸಹಸ್ರಾನೀಕನೇ! ಅಲಂಬುಸೆಯೆಂಬ ಅಪ್ಸರೆಯು ಅಯೋಧ್ಯೆಯಲ್ಲಿ ಕೃತವರ್ಮರಾಜನ ಮಗಳಾಗಿ ಹುಟ್ಟಿ ಮೃಗಾವತಿ ಯೆಂಬ ಹೆಸರನ್ನು ಪಡೆದಿರುವಳು.

೯೨–೯೩. ನೀನು ವಿಧೂಮನೆಂಬ ವಸುವು. ನೀನು ಹಿಂದೊಮ್ಮೆ ಬ್ರಹ್ಮನ ಆಸ್ಥಾನದಲ್ಲಿ ಗಾಳಿಯಿಂದ ಹಾರಿಸಲ್ಪಟ್ಟ ವಸ್ತ್ರವುಳ್ಳ ಆಕೆಯನ್ನು ಕಂಡು ಮೋಹಗೊಂಡೆ. ಕೂಡಲೇ ಬ್ರಹ್ಮನ ಶಾಪದಿಂದ ಈ ಮನುಷ್ಯತ್ವವನ್ನು ಪಡೆದಿರುವೆ. ಅಯ್ಯಾ ಗೆಳೆಯನೇ! ಬೇಗನೆಯೆ ಆಕೆಯು ನಿನ್ನ ಮಡದಿ ಯಾಗುವಳು.

೯೪–೯೫. ನೀನು ಆಕೆಯಲ್ಲಿ ಮಗನನ್ನು ಪಡೆದು ರಾಜ್ಯದಲ್ಲಾತನನ್ನಿರಿಸಿ ಹೆಂಡತಿಯಾದ ಆಕೆಯೊಡನೆಯೆ ದಕ್ಷಿಣಸಮುದ್ರ ತೀರದಲ್ಲಿ ಫುಲ್ಲಗ್ರಾಮದ ಬಳಿಯಿರುವ ಪವಿತ್ರವಾದ ಚಕ್ರತೀರ್ಥದಲ್ಲಿ ಸ್ನಾನಮಾಡು. ಆಗ ನೀನು ಶಾಪದಿಂದ ಮುಕ್ತನಾಗುವೆ. ಬ್ರಹ್ಮನಿಂತು ಸತ್ಯಲೋಕದಲ್ಲಿ ನಿನಗೆ ಅಪ್ಪಣೆ ಯಿತ್ತಿರುವನು" ಎಂದು ಪೂರ್ವೋತ್ತರ ಕಥೆಯನ್ನಾತನಿಗೆ ತಿಳಿಸಿದನು.

೯೬–೯೮. ಇದನ್ನು ಕೇಳಿದ ಸಹಸ್ರಾನೀಕನು ಮದುವೆಯಾಗಬೇಕೆಂಬ ಸಡಗರವುಳ್ಳವನಾಗಿ ಇಂದ್ರನಿಂದ ಬೀಳ್ಕೊಂಡು ಸಂತೋಷದಿಂದ ಕೌಶಾಂಬಿಗೆ

ತಥೋದ್ವಾಹಕೃತೋತ್ಸಾಹಃ ಸಮಾಮಂತ್ರ್ಯ ಶಚೀಪತಿಂ ।
ಕೌಶಾಂಬೀಂ ಪ್ರಸ್ಥಿತೋ ಹೃಷ್ಟಃ ಸ ತಿಲೋತ್ತಮಯಾ ಪಥಿ ॥ ೯೭ ॥
ಸ್ಮರನ್ ಕಿಮಪಿ ತಾಂ ಕಾಂತಾಂ ಭಾಷಮಾಣಾಮನನ್ಯಧೀಃ ।
ಧ್ಯಾಯನ್ ಶತಕ್ರತುವಚೋ ನಾಲುಲೋಕೇ ಮಹೀಪತಿಃ ॥ ೯೮ ॥
ಸಾ ಶಶಾಪ ನೃಪಂ ಸುಭ್ರೂರನಾದರತಿರಸ್ಕೃತಾ ।
ಆಹೂಯಮಾನೋಽಪಿ ಮಯಾ ಸಹಸ್ರಾನೀಕ ಭೂಪತೇ ॥ ೯೯ ॥
ಮೃಗಾವತೀಂ ಹೃದಾ ಧ್ಯಾಯನ್ನಿಮರ್ಥಂ ಮಾಮುಪೇಕ್ಷಸೇ ।
ಸೌಭಾಗ್ಯಮತ್ತಾ ಮಾನಿನ್ಯೋ ನ ಸಹಂತೇಽವಧೀರಣಾಂ ॥ ೧೦೦ ॥
ಮಾಮವಜ್ಞಾಯ ಯಾಂ ರಾಜನ್ ಹೃದಾ ಧ್ಯಾಯಸಿ ಸಾಂಪ್ರತಂ ।
ತಯಾ ಚತುರ್ದಶ ಸಮಾ ವಿಯುಕ್ತಸ್ತ್ವಂ ಭವಿಷ್ಯಸಿ ॥ ೧೦೧ ॥
ಇತಿ ಶಪ್ತವತೀಂ ರಾಜಾ ತಾಮುವಾಚ ತಿಲೋತ್ತಮಾಂ ।
ತಾಮೇವ ಯದಿ ಲಭ್ಯೇಯಂ ತನುಜಾಂ ಕೃತವರ್ಮಣಃ ॥ ೧೦೨ ॥
ಚತುರ್ದಶ ಸಮಾ ದುಃಖಂ ಸಹಿಷ್ಯೇ ತದ್ವಿಯೋಗಜಂ ।
ಇತ್ಯುಕ್ತ್ವಾ ತದ್ಗತಮನಾ ನೃಪಃ ಪ್ರಾಯಾನ್ನಿಜಾಂ ಪುರೀಂ ॥ ೧೦೩ ॥
ತತಃ ಕಾಲೇನ ತನಯಾ ಭೂಪತೇಃ ಕೃತವರ್ಮಣಃ ।
ತಮಾಸಸಾದ ದಯಿತಾ ಸರ್ವಸ್ವಂ ಪುಷ್ಪಧನ್ವನಃ ॥ ೧೦೪ ॥

---

ಹೊರಟಿರಲು ದಾರಿಯಲ್ಲಿ ತಿಲೋತ್ತಮೆಯು ಆತನನ್ನು ಕಂಡು ಮಾತನಾಡಿಸಿದರೂ ಬೇರೊಂದೆಡೆಗೆ ಮನವಿಡದೆ ಇಂದ್ರನ ಮಾತನ್ನೇ ನೆನದು ಏನೇನೋ ಚಿಂತಿಸುತ್ತಿದ್ದುದರಿಂದ ಆಕೆಯನ್ನು ಗಮನಿಸಲಿಲ್ಲ.

೯೯–೧೦೧. ಇದರಿಂದ ಅಪಮಾನಗೊಂಡ ಆ ಸುಂದರಿಯು, "ಎಲೈ ಸಹಸ್ರಾನೀಕರಾಜನೇ ! ನಾನು ಮಾತನಾಡಿಸುತ್ತಿದ್ದರೂ, ಮೃಗಾವತಿಯಲ್ಲಿ ಮನವಿಟ್ಟು ನನ್ನನ್ನು ಉದಾಸೀನಮಾಡಿರುವೆ. ಸೌಭಾಗ್ಯದಿಂದ ಮತ್ತರಾದ ಮಾನಿನಿಯರು ಇಂತಹ ಅಪಮಾನಗಳನ್ನು ಸಹಿಸಲಾರರು. ನೀನಾವಳನ್ನು ನೆನೆಯುತ್ತಾ ನನ್ನನ್ನುಪೇಕ್ಷಿಸಿದೆಯೋ, ಅವಳ ವಿರಹವನ್ನು ಹದಿನಾಲ್ಕು ವರ್ಷಗಳಕಾಲ ಅನುಭವಿಸುವೆ" ಎಂದು ಶಪಿಸಿದಳು.

೧೦೨–೧೦೩. ತಿಲೋತ್ತಮೆಯು ಈ ರೀತಿ ಶಪಿಸಲು ಆ ರಾಜನು, "ಎಲೌ ತಿಲೋತ್ತಮೆಯೇ ! ಅವಳೇ ನನ್ನ ಮಡದಿಯಾಗುವುದಾದಲ್ಲಿ ಹೇಗಾದರೂ ಈ ಹದಿನಾಲ್ಕು ವರ್ಷಗಳ ವಿಯೋಗವನ್ನು ಸಹಿಸಬಲ್ಲೆ" ಎಂದು ಉತ್ತರವಿತ್ತು ಮೃಗಾವತಿಯನ್ನೇ ಧ್ಯಾನಿಸುತ್ತಾ ತನ್ನ ಪಟ್ಟಣಕ್ಕೆ ಹಿಂತಿರುಗಿ ಬಂದನು.

೧೦೪–೧೦೫. ಕೆಲವುಕಾಲದ ತರುವಾಯ ಮೃಗಾವತಿಯು ಮನ್ಮಥನಂತೆ ಚೆಲುವನಾದ ಆತನನ್ನೇ ಪತಿಯನ್ನಾಗಿ ಪಡೆದಳು. ಸಹಸ್ರಾನೀಕನೂ ವಿಭ್ರಮ

ಮೃಗಾವತೀಂ ಸಮಾಸಾದ್ಯ ವಿಲಾಸತರುವಲ್ಲರೀಂ ।
ವಿಭ್ರಮಾಂಭೋಧಿಲಹರೀಂ ನನಂದ ಮದನದ್ಯುತಿಃ ॥ ೧೦೫ ॥
ಸಾ ತಸ್ಮಾದ್ಗರ್ಭಮಾಧತ್ತ ಭವಾನೀವೇಂದುಶೇಖರಾತ್ ।
ಪಾಂಡಿಮ್ನಾ ಶಶಿಲೇಖೇವ ಪೀಯೂಷಕ್ಷಾಲಿತಾ ಬಭೌ ॥ ೧೦೬ ॥
ಸುಂದರೀ ದೌರ್ಹೃದವ್ಯಕ್ತೇರಥ ಪೌರಂದರೀವ ದಿಕ್ ।
ರರಾಜ ರಾಜಮಹಿಷೀ ರಜನೀಕರಗರ್ಭಿಣೀ ॥ ೧೦೭ ॥
ಸಾ ದೌರ್ಹೃದವಶಾದ್ರಾಜ್ಞೀ ಯಂ ಯಂ ಕಾಮಮಕಾಮಯತ್ ।
ಸುದುರ್ಲಭಮಪಿ ಪ್ರೇಮ್ಣಾ ತತ್ತತ್ಸರ್ವಂ ಸಮಾಹರತ್ ॥ ೧೦೮ ॥
ಪತ್ಯೌ ಸಮಾಹಿತಕರೇ ಸಾ ಕದಾಚಿನ್ಮೃಗಾವತೀ ।
ಸ್ವೇಚ್ಛಯಾ ವೈ ಮತಿಂ ಚಕ್ರೇ ರಕ್ತವಾಪೀನಿಮಜ್ಜನೇ ॥ ೧೦೯ ॥
ಅಭಿಲಾಷಂ ಸ ವಿಜ್ಞಾಯ ಮೃಗಾವತ್ಯಾ ಮಹೀಪತಿಃ ।
ಕೌಸುಂಭಸಲಿಲೈಃ ಪೂರ್ಣಾಂ ಕ್ಷಣಾದ್ವಾಪೀಮಕಾರಯತ್ ॥ ೧೧೦ ॥
ತಸ್ಮಿನ್ರಕ್ತಜಲೇ ರಾಜ್ಞೀ ಸ್ನಾನಂ ಸಾದರಮಾತನೋತ್ ।
ತತಸ್ತಾಂ ರಕ್ತತೋಯಾರ್ದ್ರಾಂ ಫುಲ್ಲಕಿಂಶುಕಸನ್ನಿಭಾಂ ॥ ೧೧೧ ॥

---

ವಿಲಾಸಗಳಿಂದೊಪ್ಪುವ ಆ ಮೃಗಾವತಿಯನ್ನು ಪತ್ನಿಯನ್ನಾಗಿ ಪಡೆದು ಆನಂದಿಸಿದನು.

೧೦೬. ಮೃಗಾವತಿಯು ಪರಮೇಶ್ವರನಿಂದ ಪಾರ್ವತಿಯಂತೆ ಆತನ ದೆಸೆಯಿಂದ ಗರ್ಭವನ್ನು ಧರಿಸಿದಳು. ಆಗ ಬಸುರಿನಿಂದ ಬಿಳುಪೇರಿದ ಆಕೆಯು ಅಮೃತದಿಂದ ತೊಯ್ದ ಚಂದ್ರಕಲೆಯಂತೊಪ್ಪುತ್ತಿದ್ದಳು.

೧೦೭. ಬಯಕೆಯ ಕಾಲದಲ್ಲಿ ಸುಂದರಿಯೂ, ರಾಜಮಹಿಷಿಯೂ ಆದ ಆ ಮೃಗಾವತಿಯು ಚಂದ್ರನನ್ನೊಳಗೊಂಡ ಪೂರ್ವದಿಕ್ಕಿನಂತೆ ಕಂಗೊಳಿಸುತ್ತಿದ್ದಳು.

೧೦೮. ಮಹಾರಾಜನಾಕೆಯ ಬಯಕೆಗಳೆಷ್ಟೇ ಕಷ್ಟವಾದುವಾದರೂ ಅಕ್ಕರೆಯಿಂದ ಅವುಗಳನ್ನು ತೀರಿಸುತ್ತಿದ್ದನು.

೧೦೯. ಹೀಗಿರಲೊಮ್ಮೆ ಆಕೆಯು ಮಹಾರಾಜನು ತನ್ನ ಇಷ್ಟದಂತೆ ಬಯಕೆಗಳನ್ನು ತೀರಿಸುತ್ತಿದ್ದುದರಿಂದ, ರಕ್ತಸರೋವರದಲ್ಲಿ ಸ್ವೇಚ್ಛೆಯಾಗಿ ಸ್ನಾನ ಮಾಡಲು ಇಷ್ಟಪಟ್ಟಳು.

೧೧೦–೧೧೩. ರಾಜನಾದರೊ ತನ್ನ ಮಡದಿಯಾದ ಆ ಮೃಗಾವತಿಯ ಬಯಕೆಯನ್ನು ಪೂರೈಸಲು ಕೂಡಲೆಯೇ ಕುಂಕುಮಕೇಸರಿಯ ನೀರಿನ ಕೊಳವನ್ನಣಿಮಾಡಿಸಿದನು. ರಾಣಿಯೂ ಆಸೆಯಿಂದ ಆ ಕೆನ್ನೀರಿನಲ್ಲಿ ಮಿಂದಳು. ಆಗ ಅರಳಿದ ಮುತ್ತುಗದಂತಿದ್ದ ಆಕೆಯನ್ನು ಕಂಡು ಸುಪರ್ಣನ ಕುಲದಲ್ಲಿ ಜನಿಸಿದ

ರಾಜಸ್ತ್ರೀಮಾಮಿಷಧಿಯಾ ಸುಪರ್ಣಕುಲಸಂಭವಃ ।
ಜಹಾರ ವಿಕಟಃ ಪಕ್ಷೀ ಮುಗ್ಧಾಂ ದಗ್ಧವಿಧೇರ್ವಶಾತ್ ॥ ೧೧೨ ॥
ನೀತ್ವಾ ವಿಹಾಯಸಾ ದೂರಂ ಸ ತಾಮುಚಲಸನ್ನಿಭಃ ।
ತತ್ಯಾಜ ಮೋಹವಿವಶಾಮುದಯಾಽಚಲಕಂದರೇ ॥ ೧೧೩ ॥
ಲಬ್ಧಸಂಜ್ಞಾ ಶನೈಃ ಕಂಪವಿಲೋಲತನುವಲ್ಲರೀ ।
ದೃಗ್ಭ್ಯಾಮುತ್ಪಲತುಲ್ಯಾಭ್ಯಾಂ ಮುಹುರಶ್ರೂಣ್ಯವರ್ತಯತ್ ॥ ೧೧೪ ॥
ಹಾ ನಾಥ ಮಂದಭಾಗ್ಯಾಽಹಂ ತ್ವದ್ವಿಯೋಗೇನ ಪೀಡಿತಾ ।
ಕಾ ಗತಿಃ ಕ್ವನು ಗಚ್ಛಾಮಿ ದ್ರಕ್ಷ್ಯಾಮಿ ತ್ವನ್ಮುಖಂ ಕದಾ ॥ ೧೧೫ ॥
ಇತ್ಯುಕ್ತ್ವಾ ಗಜಸಿಂಹಾನಾಂ ಪುರೋಽಭೂದ್ವಧಕಾಂಕ್ಷಿಣೀ ।
ಸಾ ಸರ್ವಕೇಸರಿಗಜೈಸ್ತ್ಯಕ್ತಾ ನ ನಿಧನಂ ಗತಾ ॥ ೧೧೬ ॥
ಆಪತ್ಕಾಲೇ ನೃಣಾಂ ನೂನಂ ಮರಣಂ ನೈವ ಲಭ್ಯತೇ ।
ಅತಿದೀನಂ ಸಮಾಕರ್ಣ್ಯ ತಸ್ಯಾಃ ಕ್ರಂದಿತಮುನ್ಮುಖಾಃ ॥ ೧೧೭ ॥
ಮೃಗಾ ನಿಷ್ಪಂದಗತಯೋ ನ ತೃಣಾನ್ಯಪ್ಯಭಕ್ಷಯನ್ ।
ತತಸ್ತಾಂ ಕರುಣಾಸಿಂಧುರ್ಮುನಿಪುತ್ರಸ್ತಥಾ ಸ್ಥಿತಾಂ ॥ ೧೧೮ ॥
ರುದತೀಂ ಕೃಪಯಾ ರಾಜ್ಞೀಂ ಸಮಾನೀಯ ಸ್ವಮಾಶ್ರಮಂ ।
ನ್ಯವೇದಯಚ್ಚ ತಾಂ ರಾಜ್ಞೀಂ ಗುರವೇ ಜಾಮದಗ್ನಯೇ ।
ಜಮದಗ್ನಿಸ್ತು ಧರ್ಮಾತ್ಮಾ ತಾಮಾಶ್ವಾಸಯದಂತಿಕೇ ॥ ೧೧೯ ॥

---

ಭಯಂಕರವಾದ ಗರುಡಪಕ್ಷಿಯೊಂದು ಮಾಂಸವೆಂದು ತಿಳಿದು ದುರದೃಷ್ಟವಶದಿಂದ ಅಂತರಿಕ್ಷಕ್ಕೆ ಹಾರಿಸಿಕೊಂಡುಹೋಗಿ ಬಹಳ ದೂರದಲ್ಲಿರುವ ಉದಯಾಚಲದ ತಪ್ಪಲಿನಲ್ಲಿ ಕೆಡವಿತು.

೧೧೪–೧೧೬. ಬಳಿಕ ಆಕೆಯು ಮೆಲ್ಲನೆ ಎಚ್ಚೆತ್ತು ತನ್ನ ಅವಸ್ಥೆಯನ್ನು ಕಂಡು ಭಯದಿಂದ ನಡುಗಿದಳು. ನೈದಿಲೆಗಳಂತಿರುವ ಕಣ್ಣುಗಳಿಂದ ನೀರು ಸುರಿಸುತ್ತ, "ಎಲೈ ಪ್ರಿಯನೆ! ದುರ್ಭಾಗ್ಯಳಾದ ನಾನು ನಿನ್ನ ವಿರಹದಿಂದ ಬಳಲಿದೆ. ಏನುಗತಿ! ಎಲ್ಲಿಹೋಗಲಿ! ನಿನ್ನ ಮುಖವನ್ನಾವಾಗಕಾಣುವೆನೊ!" ಎಂದು ಗೋಳಾಡುತ್ತ ಕಷ್ಟವನ್ನು ಸಹಿಸಲಾರದೆ ಸಾವನ್ನು ಬಯಸಿ ಆನೆ, ಸಿಂಹ ಮುಂತಾದ ಮೃಗಗಳ ಮುಂದೆ ಬಿದ್ದಳು. ಆದರೆ ಅವಾವುವೂ ಆಕೆಯನ್ನು ಕೊಲ್ಲಲಿಲ್ಲ.

೧೧೭–೧೧೯. ಕಷ್ಟದಲ್ಲಿ ಮನುಜರಿಗೆ ಸಾವೂ ದೂರಸರಿಯುವುದಲ್ಲವೆ? ಬಹಳ ಕನಿಕರವನ್ನುಂಟುಮಾಡುವ ಆಕೆಯ ಗೋಳನ್ನು ಕೇಳಿ ಜಿಂಕೆಗಳು ತಮ್ಮ ಮುಖಗಳನ್ನು ಮೇಲಕ್ಕೆತ್ತಿಕೊಂಡು ನಡಿಗೆಯನ್ನು ನಿಲ್ಲಿಸಿ, ಹುಲ್ಲನ್ನು ಕೂಡ ತಿನ್ನದೆ ನಿಂತುಬಿಟ್ಟವು. ಆಗ ಮರುಕದ ಕಡಲಂತಿದ್ದ ಒಬ್ಬ ಮುನಿಕುಮಾರನು

ಜಮದಗ್ನಿರುವಾಚ :—

ತಥಾ ಜಾನೀಹಿ ಮಾಂ ಭದ್ರೇ ಕೃತವರ್ಮಾ ಯಥಾ ತವ ॥ ೧೨೦ ॥
ಏವಮಾಶ್ವಾಸಿತಾ ತತ್ರ ಕೃಪಯಾ ಜಮದಗ್ನಿನಾ ।
ಚಕ್ರೇ ತತ್ರೈವ ಸಾ ವಾಸಮಾಶ್ರಮೇ ಮುನಿಸಂಕುಲೇ ॥ ೧೨೧ ॥
ತತಸ್ಸ್ವಲ್ಪೇನ ಕಾಲೇನ ವಿಶಾಖಮಿವ ಪಾರ್ವತೀ ।
ಅಸೂತ ತನಯಂ ಬಾಲಾ ಶೌರ್ಯಧೈರ್ಯಗುಣಾನ್ವಿತಂ ॥ ೧೨೨ ॥
ಸೂತಿಕಾಗೃಹಕೃತ್ಯಾನಿ ಯಾನಿ ಕಾರ್ಯಾಣಿ ಬಂಧುಭಿಃ ।
ಚಕ್ರಿರೇ ಮಾತೃವತ್ತಾನಿ ನೃಗಾಪತ್ಯಾ ಮುನಿಸ್ತ್ರಿಯಃ ॥ ೧೨೩ ॥
ತಂ ಸುಜಾತಂ ನೃಪಸುತಂ ಕಾಽಪಿ ವಾಪಿ ಶರೀರಿಣೀ ।
ಉದಯಾಚಲಜಾತತ್ವಾಚ್ಚಕಾರೋದಯನಾಽಭಿಧಂ ॥ ೧೨೪ ॥
ಆಶ್ರಮೇ ಸ ಮುನೀಂದ್ರೇಣ ಕೃತಚೂಡಾದಿಕವ್ರತಃ ।
ಜಗ್ರಾಹ ಸಕಲಾ ವಿದ್ಯಾ ಜಮದಗ್ನೇರ್ಮಹಾಮುನೇಃ ॥ ೧೨೫ ॥
ಯುವಾ ನೃಪಸುತಃ ಸೋಽಯಂ ಕದಾಚಿನ್ಮೃಗಯಾಪರಃ ।
ಅಪಶ್ಯದೇಕಂ ಭುಜಗಂ ವ್ಯಾಧೇನ ದೃಢಸಂಯುತಂ ॥ ೧೨೬ ॥

---

ಆಕೆಯನ್ನು ತನ್ನ ಆಶ್ರಮಕ್ಕೆ ಕರೆದೊಯ್ದು ತನ್ನ ಗುರುವಾದ ಜಮದಗ್ನಿಗೆ ಒಪ್ಪಿಸಿದನು. ಜಮದಗ್ನಿಯೂ ಆಕೆಯನ್ನು ಹತ್ತಿರಕ್ಕೆ ಕರೆದು ಸಮಾಧಾನ ಮಾಡತೊಡಗಿದನು.

೧೨೦. ಜಮದಗ್ನಿಯು ಹೇಳುತ್ತಾನೆ:— "ಎಲೆ ಸೌಭಾಗ್ಯವತಿಯೇ ! ನನ್ನನ್ನು ನಿಮ್ಮ ತಂದೆಯಾದ ಕೃತವರ್ಮನೆಂದೇ ಭಾವಿಸು."

೧೨೧. ಹೀಗೆ ಆತನ ಸಾಂತ್ವನವನ್ನು ಪಡೆದು ಆಕೆಯು ಮುನಿಸಂಕುಲವಾದ ಆ ಆಶ್ರಮದಲ್ಲಿಯೇ ವಾಸಮಾಡುತ್ತಿದ್ದಳು.

೧೨೨. ಸ್ವಲ್ಪಕಾಲದಬಳಿಕ ಆಕೆಯು, ಪಾರ್ವತಿಯು ಕುಮಾರಸ್ವಾಮಿಯನ್ನು ಪಡೆದಂತೆ ಧೈರ್ಯಸ್ಥೈರ್ಯಪರಾಕ್ರಮಾದಿಗುಣಸಂಪನ್ನನಾದ ಓರ್ವ ಮಗನನ್ನು ಹೆತ್ತಳು.

೧೨೩. ಆಗ ಋಷಿಪತ್ನಿಯರು ನಂಟರಿಷ್ಟರಂತೆಯೂ, ತಾಯಿಯಂತೆಯೂ ಹೆರುಮನೆಯ ಕೆಲಸಗಳನ್ನು ನೆರವೇರಿಸಿದರು.

೧೨೪. ಆ ಸಮಯದಲ್ಲಿ ಅಶರೀರವಾಣಿಯು ದೊರೆ ಮಗನಾದ ಆತನು ಉದಯಪರ್ವತದಲ್ಲಿ ಜನಿಸಿದುದರಿಂದ ಆತನನ್ನು ಉದಯನನೆಂದು ಕರೆಯಿತು.

೧೨೫. ಜಮದಗ್ನಿಮಹರ್ಷಿಯು ಆತನಿಗೆ ಚೌಲೋಪನಯನಗಳನ್ನು ಮಾಡಿ ಸಕಲ ವಿದ್ಯೆಗಳನ್ನೂ ಕಲಿಸಿದನು.

೧೨೬. ಪ್ರಾಯದವನಾಗಿ ಬೆಳೆದ ಬಳಿಕ ಆ ರಾಜಕುಮಾರನೊಮ್ಮೆ ಬೇಟೆಗೆ

ಉವಾಚ ಸ ಕೃಪಾಯುಕ್ತೋ ವ್ಯಾಧ ಮುಂಚ ಭುಜಂಗಮಂ ।
ಕಿಂ ಕರಿಷ್ಯಸ್ಯನೇನ ತ್ವಂ ನೈನಂ ಹಿಂಸಿತುಮರ್ಹಸಿ ॥ ೧೨೭ ॥
ತಮುವಾಚ ತತೋ ವ್ಯಾಧಃ ಸರ್ಪೇಣಾಽನೇನ ಪೂರುಷ ।
ಧನಧಾನ್ಯಾದಿಕಂ ಲಪ್ಸ್ಯೇ ಗ್ರಾಮೇಷು ನಗರೇಷು ಚ ॥ ೧೨೮ ॥
ಅತೋಽಹಂ ಜೀವಿಕಾಮೇನಂ ನೈವ ಮೋಕ್ಷ್ಯೇ ಕಥಂಚನ ।
ಇತ್ಯುಕ್ತ್ವಾ ಪೇಟಿಕಾಯಾಂ ತಂ ಬಬಂಧ ಶಬರಾಽಧಮಃ ॥ ೧೨೯ ॥
ಬದ್ಧಮಾಲೋಕ್ಯ ಭುಜಗಂ ಶಬರಾಯ ಧನಾರ್ಥಿನೇ ।
ಅಮೋಚಯತ್ಸ್ವಜನನೀದತ್ತಂ ದತ್ವಾ ಸ ಕಂಕಣಂ ॥ ೧೩೦ ॥
ಮೋಚಿತಸ್ತೇನ ಸರ್ಪೋಽಸೌ ನರೋ ಭೂತ್ವಾ ಕೃತಾಂಜಲಿಃ ।
ಸಖ್ಯಂ ಕೃತ್ವಾ ಚ ಸಹಸಾ ತಂ ಪಾತಾಲಂ ನಿನಾಯ ವೈ ॥ ೧೩೧ ॥
ಕಿನ್ನರಾಖ್ಯೇನ ನಾಗೇನ ಧೃತರಾಷ್ಟ್ರ ಸುತೇನ ಸಃ ।
ಪಾತಾಲಂ ಪ್ರಾವಿಶತ್ತತ್ರ ನ್ಯವಸತ್ಪೂಜಿತಸ್ಸುಖಂ ॥ ೧೩೨ ॥
ಧೃತರಾಷ್ಟ್ರಸ್ಯ ತನಯಾಂ ಭಗಿನೀಂ ಕಿನ್ನರಸ್ಯ ಚ ।
ಲಲಿತಾಖ್ಯಾಂ ಗುಣೋಪೇತಾಂ ಪ್ರಿಯಾಂ ಭೇಜೇ ನೃಪಾತ್ಮಜಃ ॥ ೧೩೩ ॥

---

ಹೋಗಿ ಹಾವಾಡಿಗನ ಕೈಗೆ ಸಿಲುಕಿ ಕಷ್ಟಪಡುತ್ತಿರುವ ಸರ್ಪವೊಂದನ್ನು ಕಂಡನು.

೧೨೭. ಬಳಿಕ ಅವನು ದಯಾಪರವಶನಾಗಿ, "ಅಯ್ಯಾ ಬೇಡನೇ! ನೀನಿದನ್ನೇನುಮಾಡುವೆ? ಇದನ್ನು ಹಿಂಸಿಸಬೇಡ ಬಿಟ್ಟುಬಿಡು" ಎಂದಾತನಿಗೆ ಹೇಳಿದನು.

೧೨೮–೧೨೯. "ಅಯ್ಯಾ ಪುರುಷನೇ! ನಾನು ಇದನ್ನಾಡಿಸಿ ಪ್ರತಿ ಊರಿನಲ್ಲಿಯೂ ಧನಧಾನ್ಯಾದಿಗಳನ್ನು ಗಳಿಸಿ ಹೊಟ್ಟೆ ಹೊರೆದುಕೊಳ್ಳುವೆನು. ಇದು ನನ್ನ ಜೀವಿಕೆ. ಆದುದರಿಂದ ಇದನ್ನು ಏನಾದರೂ ಬಿಡಲಾರೆನು" ಎಂದು ಹೇಳಿ ಆ ನೀಚನು ಅದನ್ನು ಬುಟ್ಟಿಯಲ್ಲಿಟ್ಟು ಬಂಧಿಸಿದನು.

೧೩೦. ಆಗ ರಾಜಕುಮಾರನು ಹಣದಾಸೆಯುಳ್ಳ ಆ ಹಾವಾಡಿಗನಿಗೆ ತನ್ನ ತಾಯಿಯು ತನಗೆ ಕೊಟ್ಟಿದ್ದ ಕೈಗಡಗವನ್ನು ಕೊಟ್ಟು ಅದನ್ನು ಬಿಡಿಸಿದನು.

೧೩೧. ಇಂತು ಬಿಡುಗಡೆ ಹೊಂದಿದ ಆ ಸರ್ಪವು ಮನುಷ್ಯನಾಗಿ ನಿಂತು ಕೈಮುಗಿದು ಆತನೊಡನೆ ಸ್ನೇಹಮಾಡಿಕೊಂಡು ಆತನನ್ನು ಪಾತಾಳಲೋಕಕ್ಕೆ ಕರೆದುಕೊಂಡುಹೋದನು.

೧೩೨–೧೩೩. ಅವನು ಧೃತರಾಷ್ಟ್ರನೆಂಬ ಸರ್ಪರಾಜನ ಮಗನಾದ ಕಿನ್ನರನೆಂಬುವನು. ರಾಜಪುತ್ರನು ಆತನ ಸೋದರಿಯಾದ ಲಲಿತೆಯೆಂಬ ಗುಣವತಿಯನ್ನು ಮದುವೆಯಾಗಿ ಅಲ್ಲಿಯೇ ಸುಖದಿಂದಿದ್ದನು.

ಸಾ ತಸ್ಮಾಜ್ಜನಯಾಮಾಸ ಪುತ್ರಮಪ್ರತಿಮೌಜಸಂ ।
ತತಃ ಸಾ ಲಲಿತಾ ಪ್ರಾಹ ತ್ವರಿತೋದಯನಂ ಪ್ರತಿ ॥ ೧೩೪ ॥

ಲಲಿತೋವಾಚ :—

ಅಹಂ ವಿದ್ಯಾಧರೀ ಪೂರ್ವಂ ಸುಕರ್ಣೀನಾಮ ನಾಮತಃ ।
ಶಾಪಾತ್ಸರ್ಪತ್ವಮಾಪನ್ನಾಽಸ್ಮಿ ಶಾಪಾಂತೋ ಗರ್ಭ ಏಷ ಮೇ ॥ ೧೩೫ ॥
ತತೋಽಮುಂ ಪ್ರತಿಗೃಹ್ಣೀಷ್ವ ಪುತ್ರಮಪ್ರತಿಮೌಜಸಂ ।
ತಾಂಬೂಲೀಂ ಸ್ರಜಮಮ್ಲಾನಾಂ ವೀಣಾಂ ಘೋಷವತೀಮಪಿ ॥ ೧೩೬ ॥
ತಥೇತಿ ಪ್ರತಿಜಗ್ರಾಹ ತತ್ಸರ್ವಂ ನೃಪನಂದನಃ ।
ಪಶ್ಯತಾಂ ಸರ್ವಸರ್ಪಾಣಾಂ ಸಾಽಪ್ಯಗಚ್ಛದ್ವಿಹಾಯಸಂ ॥ ೧೩೭ ॥
ತತಃ ಸೋಽಪಿ ಗೃಹೀತ್ವಾತು ವೀಣಾಂ ಮಾಲಾಂ ಚ ಪುತ್ರಕಂ ।
ದುಃಖಿತಾಮಾತ್ಮಜನನೀಂ ದ್ರಷ್ಟುಕಾಮಸ್ತ್ವರಾನ್ವಿತಃ ॥ ೧೩೮ ॥
ಶ್ವಶುರಾದೀನನುಜ್ಞಾಪ್ಯ ಸಹಸಾ ಸ್ವಾಶ್ರಮಂ ಯಯೌ ।
ಜನನೀಂ ಶೋಕಸಂತಪ್ತಾಮಾಶ್ವಸ್ತಾಂ ಜಮದಗ್ನಿನಾ ॥ ೧೩೯ ॥
ಸಮೇತ್ಯ ತೋಷಯಾಮಾಸ ವೃತ್ತಂ ಚಾಽಸ್ಯೈ ನ್ಯವೇದಯತ್ ।
ತದಾ ಪ್ರಹೃಷ್ಟಹೃದಯಾ ಸಾ ಬಭೂವ ಮೃಗಾವತೀ ॥ ೧೪೦ ॥

---

೧೩೪. ತರುವಾಯ ಕೆಲವು ದಿನಗಳಲ್ಲಿ ಆಕೆಯು ಆತನಿಂದೊಬ್ಬ ಮಗನನ್ನು ಪಡೆದಳು. ಬಳಿಕ ಅವಳು ಉದಯನನ್ನು ಕುರಿತು ಬಹಳ ತ್ವರೆಯಿಂದ ಹೀಗೆ ಹೇಳಿದಳು.

೧೩೫. ಲಲಿತೆಯು ಹೇಳುತ್ತಾಳೆ:— "ಅರಸ! ನಾನು ಹಿಂದೆ ಸುಕರ್ಣಿಯೆಂಬ ಹೆಸರುಳ್ಳ ವಿದ್ಯಾಧರಿಯಾಗಿದ್ದೆನು. ಶಾಪದಿಂದ ಸರ್ಪತ್ವವನ್ನು ಪಡೆದು ಈಗ ನಿನ್ನಿಂದ ಮಗನನ್ನು ಹಡೆದೆನು. ಇದೇ ನನಗೆ ಶಾಪದ ಅವಧಿ.

೧೩೬. ಆದುದರಿಂದ ಅಸಾಧಾರಣಪರಾಕ್ರಮಿಯಾದ ಈ ನಿನ್ನ ಮಗನನ್ನೂ, ಎಂದಿಗೂ ಬಾಡದ ಈ ವೀಳ್ಯದೆಲೆಯ ಬಳ್ಳಿಯನ್ನೂ (ತಾಂಬೂಲ ಮಾಲೆಯನ್ನೂ), ಘೋಷವತಿಯೆಂಬ ಈ ವೀಣೆಯನ್ನೂ ಸ್ವೀಕರಿಸು."

೧೩೭. ಅಂತೆಯೇ ಉದಯನನು ಅವುಗಳನ್ನು ಪಡೆದನು. ಬಳಿಕ ಸರ್ಪಗಳೆಲ್ಲವೂ ನೋಡುತ್ತಿರುವಂತೆಯೇ ಆ ಲಲಿತೆಯು ಅಂತರಿಕ್ಷಕ್ಕೆ ಹಾರಿಹೋದಳು.

೧೩೮-೧೪೦. ತರುವಾಯ ಉದಯನನು ಮೂವನೇ ಮುಂತಾದ ಪಾತಾಳ ಲೋಕದ ನೆಂಟರಿಷ್ಟರಿಂದ ಬೀಳ್ಕೊಂಡು, ಆ ವೀಣೆಯನ್ನೂ, ತಾಂಬೂಲಮಾಲೆಯನ್ನೂ ತೆಗೆದುಕೊಂಡು ಮಗನೊಡಗೂಡಿ, ದುಃಖಗೊಂಡಿರುವ ತನ್ನ ತಾಯಿಯನ್ನು ಸಂತೈಸುವುದರಲ್ಲಾತುರನಾಗಿ ಆಶ್ರಮಕ್ಕೆ ಹಿಂತಿರುಗಿದನು. ಅಲ್ಲಿ ಜಮದಗ್ನಿಯಿಂದ ಸಂತೈಸಲ್ಪಡುತ್ತಿದ್ದ ತಾಯಿಯ ಬಳಿಗೆ ಹೋಗಿ ಆ ವೃತ್ತಾಂತವನ್ನಾಕೆಗರುಹಿದನು. ಆಕೆಯು ಸಂತೋಷಗೊಂಡ ಹೃದಯವುಳ್ಳವಳಾದಳು.

ಅತ್ರಾಂತರೇ ಸ ಶಬರಃ ಕೌಶಾಂಬ್ಯಾಂ ವಣಿಜಂ ಯಯೌ ।
ಸಹಸ್ರಾನೀಕನಾಮಾಂಕಂ ವಿಕ್ರೇತುಂ ಮಣಿಕಂಕಣಂ ॥ ೧೪೧ ॥
ರಾಜಮುದ್ರಾಂ ಸಮಾಲೋಕ್ಯ ಕಂಕಣೇ ಸವಣಿಗ್ವರಃ ।
ಶಬರೇಣ ಸಮಂ ಗತ್ವಾ ಸರ್ವಂ ರಾಜ್ಞೇ ನ್ಯವೇದಯತ್ ॥ ೧೪೨ ॥
ತತಃ ಸಹಸ್ರಾನೀಕೋಽಯಂ ತತ್ಪ್ರಾಪ್ಯ ಮಣಿಕಂಕಣಂ ।
ಮೃಗಾವತೀವಿಪ್ರಯೋಗವಿಷಾಗ್ನಿಪರಿಪೀಡಿತಃ ॥ ೧೪೩ ॥
ತದ್ಬಾಹುಸಂಗಪೀಯೂಷಶೀಕರಾಸಾರಶೀತಲಂ ।
ಕಂಕಣಂ ಹೃದಯೇ ನ್ಯಸ್ಯ ವಿಲಲಾಪ ಸುದುಃಖಿತಃ ॥ ೧೪೪ ॥
ಉವಾಚ ಚ ಕಥಂ ಲಬ್ಧಂ ಕಂಕಣಂ ಶಬರ ತ್ವಯಾ ।
ಸ ಚೈವಮುಕ್ತಸ್ತತ್ಪ್ರಾಪ್ತಿಕ್ರಮಂ ತಸ್ಮೈ ನ್ಯವೇದಯತ್ ॥ ೧೪೫ ॥
ಶಬರಸ್ಯ ವಚಃ ಶ್ರುತ್ವಾ ಸಹಸ್ರಾನೀಕ ಭೂಪತಿಃ ।
ಪ್ರತಸ್ಥೇ ಮಂತ್ರಿಭಿಃ ಸಾರ್ಧಂ ಪ್ರಿಯಾಲೋಕನಕೌತುಕೀ ॥ ೧೪೬ ॥
ಯತ್ರೇಂದುಭಾಸ್ಕರಮುಖಾ ಲಭಂತೇ ಸಹಸೋದಯಂ ।
ತಮೇವ ಗಿರಿಮುದ್ದಿಶ್ಯ ಸಹಸಾ ಸೋಽಭ್ಯಗಚ್ಛತ ॥ ೧೪೭ ॥

---

೧೪೧. ಇಷ್ಟರಲ್ಲಿ ಆ ಹಾವಾಡಿಗನಾದರೊ ಸಹಸ್ರಾನೀಕರಾಜನ ಹೆಸರುಳ್ಳ ಆ ರತ್ನಕಂಕಣವನ್ನು ತೆಗೆದುಕೊಂಡು ಕೌಶಾಂಬೀ ನಗರದಲ್ಲೊಬ್ಬ ವೈಶ್ಯನ ಬಳಿ ಮಾರುವುದಕ್ಕೆ ಹೋದನು.

೧೪೨. ಆಗ ಆ ವಣಿಜನು ಉಂಗುರದಮೇಲೆ ರಾಜನ ಹೆಸರನ್ನು ಕಂಡು ಅದನ್ನು ತೆಗೆದುಕೊಂಡು ಆತನೊಡನೆಯೆ ರಾಜನ ಬಳಿಗೆ ಹೋಗಿ ಆ ವೃತ್ತಾಂತ ವೆಲ್ಲವನ್ನೂ ಅರಿಕೆಮಾಡಿದನು.

೧೪೩–೧೪೫. ಮೃಗಾವತಿಯ ವಿರಹಾಗ್ನಿಯಿಂದ ಬಹುವಾಗಿ ಬಳಲಿದ್ದ ಆ ಸಹಸ್ರಾನೀಕನು ಆಕೆಯ ಕರಸಂಗದಿಂದ ಅಮೃತದಂತೆ ಶೀತಲವಾದ ಆ ಮಣಿಕಂಕಣವನ್ನು ತೆಗೆದುಕೊಂಡು ಎದೆಗಪ್ಪಿ ಬಹಳ ದುಃಖಗೊಂಡು ಆ ಹಾವಾಡಿಗನನ್ನು ಕುರಿತು, "ಅಯ್ಯಾ ಶಬರನೆ! ಈ ಮಣಿಕಂಕಣವು ನಿನಗೆ ದೊರೆತ ಬಗೆಯೆಂತು" ಎಂದು ಕೇಳಿದನು. ಆ ಮಾತನ್ನು ಕೇಳಿ ಶಬರನು ಆ ವೃತ್ತಾಂತವೆಲ್ಲವನ್ನೂ ಆತನಿಗೆ ಅರುಹಿದನು.

೧೪೬–೧೪೭. ಬಳಿಕ ಮಡದಿಯನ್ನು ನೋಡಬೇಕೆಂಬ ತವಕದಿಂದ ಮಂತ್ರಿಗಳೊಡಗೂಡಿ ಆ ರಾಜನು ಸೂರ್ಯಚಂದ್ರಾದಿಗಳ ಉದಯಕ್ಕೆ ಸ್ಥಾನವಾದ ಉದಯಪರ್ವತಕ್ಕೆ ಹೊರಟನು.

ಕಿಂಚಿನ್ಮಾರ್ಗಂ ಸಮುಲ್ಲಂಘ್ಯ ತಸ್ಥೌ ವಿಶ್ರಾಂತಸೈನಿಕಃ ।
ತಸ್ಮಿನ್ನಿನಿದ್ರೇ ದಯಿತಾಸಂಗಮಧ್ಯಾನತತ್ಪರೇ ॥ ೧೪೮ ॥
ವಸಂತಕೋ ವಿಚಿತ್ರಾಸ್ತು ಕಥಯಾಮಾಸ ವೈ ಕಥಾಃ ।
ತತ್ಕಥಾಶ್ರವಣೇನೈವ ತಾಂ ರಾತ್ರಿಂ ಸ ನಿನಾಯ ವೈ ॥ ೧೪೯ ॥
ತತಃ ಕಾಲೇನ ಕಕುಭಂ ಪ್ರಾಪ್ಯ ಜಂಭಾರಿಪಾಲಿತಾಂ ।
ಜಮದಗ್ನ್ಯಾಶ್ರಮಂ ಗತ್ವಾ ನಿರ್ವೈರಹರಿಕುಂಜರಂ ॥ ೧೫೦ ॥
ತಪಸ್ಯಂತಂ ಮುನಿಂ ದೃಷ್ಟ್ವಾ ಶಿರಸಾ ಪ್ರಣನಾಮ ಸಃ ।
ಆಶೀರ್ವಾದೇನ ಸಮುನಿಃ ಪ್ರತಿಜಗ್ರಾಹ ತಂ ನೃಪಂ ॥ ೧೫೧ ॥
ವಿಧಿವತ್ಪೂಜಯಾಮಾಸ ಪಾದ್ಯಾರ್ಘ್ಯಾಚಮನೀಯಕೈಃ ।
ಉವಾಚ ಚ ಮಹೀಪಾಲಂ ಧರ್ಮಾರ್ಥಸಹಿತಂ ವಚಃ ॥ ೧೫೨ ॥
ನರನಾಥ ಮೃಗಾವತ್ಯಾಂ ಜಾತೋಽಯಂ ತನಯಸ್ತವ ।
ಯಶೋನಿಧಿರ್ಮಹಾತೇಜಾ ರಾಮಚಂದ್ರ ಇವಾಽಪರಃ ॥ ೧೫೩ ॥
ಭವಿಷ್ಯತಿ ದಿಶಾಂ ಜೇತಾ ಸಿಂಹಸಂಹನನೋ ಯುವಾ ।
ಪೌತ್ರ ಏಷ ಮಹಾಭಾಗ ಸ್ತಥಾಹ್ಯುದಯನಾತ್ಮಜಃ ॥ ೧೫೪ ॥
ಇಯಂ ಮೃಗಾವತೀ ಭಾರ್ಯಾ ಪಾತಿವ್ರತ್ಯಪರಾಯಣಾ ।
ತದೇತಾಂ ಸ್ತ್ರೀಂ ಮಹಾರಾಜ ಪ್ರತಿಗೃಹ್ಣೀಷ್ವ ಮಾಚಿರಂ ॥ ೧೫೫ ॥

---

೧೪೮–೧೪೯. ಸ್ವಲ್ಪದೂರ ಬಂದ ಮೇಲೆ ಪರಿವಾರವು ಬಳಲಿದುದರಿಂದ ಅವನು ಅಲ್ಲಿಯೇ ಒಂದೆಡೆ ತಂಗಿದನು. ಆ ರಾತ್ರಿ ಅವನು ಪ್ರಿಯೆಯ ಸಮಾಗಮವನ್ನೇ ನೆನೆಯುತ್ತಾ ನಿದ್ದೆಯಿಲ್ಲದಿರಲು, ನರ್ಮಸಚಿವನಾದ ವಸಂತಕನು ಹೇಳಿದ ವಿಚಿತ್ರವಾದ ಕಥೆಗಳಿಂದ ಆ ರಾತ್ರಿಯನ್ನು ಹೇಗೆಹೇಗೆಯೋ ಕಳೆದನು.

೧೫೦. ಬಳಿಕ ಅಲ್ಲಿಂದ ಪೂರ್ವಕ್ಕೆ ಪ್ರಯಾಣಮಾಡಿ ಬಹುದೂರದಲ್ಲಿ ಕಂಗೊಳಿಸುತ್ತಿರುವುದೂ, ಸ್ನೇಹದಿಂದ ವರ್ತಿಸುವ ಸಹಜವೈರಿ ಮೃಗವರ್ಗವುಳ್ಳುದೂ ಆದ ಜಮದಗ್ನಿಯ ಆಶ್ರಮವನ್ನು ಸೇರಿದನು.

೧೫೧–೧೫೨. ಅಲ್ಲಿ ತಪಸ್ಸನ್ನು ಮಾಡುತ್ತಿದ್ದ ಆ ಮಹರ್ಷಿಗೆ ನಮಿಸಲಾತನು, ಆಶೀರ್ವಾದದಿಂದನುಗ್ರಹಿಸಿ ಅರ್ಘ್ಯಪಾದ್ಯಾದಿಗಳಿಂದ ಆ ರಾಜನನ್ನು ಪೂಜಿಸಿ ಇಂತೆಂದನು.

೧೫೩–೧೫೫. "ಎಲೈ ಸಹಸ್ರಾನೀಕರಾಜನೇ! ಮೃಗಾವತಿಯಲ್ಲುದಿಸಿದ ಈ ನಿನ್ನ ಮಗನು ಶ್ರೀರಾಮಚಂದ್ರನಂತೆ ಬಹು ತೇಜಸ್ವಿಯೂ, ಯಶಸ್ವಿಯೂ ಆಗಿ, ಸಿಂಹಬಲದಿಂದ ಎಲ್ಲ ದಿಕ್ಕುಗಳನ್ನೂ ಜಯಿಸುವನು. ಈ ಮಗುವು ಉದಯನನ ಮಗನು; ನಿನ್ನ ಮೊಮ್ಮಗನು. ಇದೋ ಈಕೆಯು ಪಾತಿವ್ರತ್ಯನಿರತಳಾದ ಮೃಗಾವತಿಯು. ಈ ಮೂವರನ್ನು ಸ್ವೀಕರಿಸು. ತಡಮಾಡಬೇಡ."

ಉಕ್ತ್ವೈವಂ ಮುನಿನಾ ದತ್ತಾಂಸ್ತಾನ್ ಗೃಹೀತ್ವಾ ಮಹೀಪತಿಃ ।
ಪ್ರಿಯಾಸಹಾಯಃ ಸ್ವಪುರೀಂ ಪ್ರತಸ್ಥೇ ಮಂತ್ರಿಭಿರ್ವೃತಃ ॥ ೧೫೬ ॥
ತತಃ ಪ್ರವಿಶ್ಯ ಕೌಶಾಂಬೀಂ ನಗರೀಂ ಸ ನೃಪೋತ್ತಮಃ ।
ಸ್ಮರನ್ ಶಕ್ರಸ್ಯ ವಚನಂ ಮಾನುಷಂ ಜನ್ಮ ಕುತ್ಸಯನ್ ॥ ೧೫೭ ॥
ಮಹೀಮುದಯನಾಯೈವ ದದೌ ಪುತ್ರಾಯ ಧೀಮತೇ ।
ತಸ್ಮಿನ್ನುದಯನೇ ಪುತ್ರೇ ರಾಜ್ಯಪಾಲನದಕ್ಷಿಣೇ ॥ ೧೫೮ ॥
ರಾಜ್ಯಭಾರಂ ವಿನಿಕ್ಷಿಪ್ಯ ಸ ಶಾಪವಿನಿವೃತ್ತಯೇ ।
ವಸಂತಕರುಮಣ್ವದ್ಭ್ಯಾಂ ಮೃಗಾವತ್ಯಾ ಚ ಭಾರ್ಯಯಾ ॥ ೧೫೯ ॥
ಯೌಗಂಧರಾಯಣೇನಾಪಿ ಮಂತ್ರಿಪುತ್ರೇಣ ಸಂಯುತಃ ।
ಚಕ್ರತೀರ್ಥೇ ಮಹಾಪುಣ್ಯೇ ದಕ್ಷಿಣಸ್ಯೋದಧೇಸ್ತಟೇ ॥ ೧೬೦ ॥
ಸ್ನಾನಂ ಕರ್ತುಂ ಯಯೌ ತೂರ್ಣಂ ಸರ್ವತೀರ್ಥೋತ್ತಮೋತ್ತಮೇ ।
ವಾಹನೈರ್ವಾತರಂಹೋಭಿರಚಿರಾಲ್ಲವಣೋದಧಿಂ ॥ ೧೬೧ ॥
ಸಂಪ್ರಾಪ್ಯ ಚಕ್ರತೀರ್ಥಂ ಚ ಸ್ನಾನಂ ಚಕ್ರುರ್ಯಥಾವಿಧಿ ।
ತೇಷು ಚ ಸ್ನಾತಮಾತ್ರೇಷು ಚಕ್ರತೀರ್ಥೇ ನೃಪಾದಿಷು ॥ ೧೬೨ ॥
ವಿನಷ್ಟಂ ತತ್ಕ್ಷಣಾದೇವ ಮಾನುಷ್ಯಮತಿಕುತ್ಸಿತಂ ।
ತತೋ ವಿಧೂತಪಾಪಾಸ್ತೇ ಸ್ವಂ ರೂಪಂ ಪ್ರತಿಪೇದಿರೇ ॥ ೧೬೩ ॥
ದಿವ್ಯಾಂಬರಧರಾಃ ಸರ್ವೇ ದಿವ್ಯಮಾಲ್ಯಾನುಲೇಪನಾಃ ।
ವಿಮಾನಾನಿ ಮಹಾರ್ಹಾಣಿ ಸಮಾರುಹ್ಯ ವಿಭೂಷಿತಾಃ ॥ ೧೬೪ ॥

---

೧೫೬. ಆ ಮಹರ್ಷಿಯ ಅಪ್ಪಣೆಯಂತೆ ಸಹಸ್ರಾನೀಕನು ಅವರನ್ನು ಸ್ವೀಕರಿಸಿ, ಮಂತ್ರಿಗಳೊಡಗೂಡಿ ತನ್ನ ರಾಜಧಾನಿಗೆ ಬಂದನು.

೧೫೭–೧೬೧. ರಾಜಧಾನಿಗೆ ಬಂದಬಳಿಕ ಇಂದ್ರನ ಮಾತು ನೆನಪಿಗೆ ಬರಲು ಆ ಸಹಸ್ರಾನೀಕರಾಜನು ಮನುಷ್ಯಜನ್ಮದಲ್ಲಿ ಬೇಸರಗೊಂಡು ಸಮರ್ಥನಾದ ಉದಯನನಿಗೇ ರಾಜ್ಯವನ್ನೊಪ್ಪಿಸಿ ಶಾಪಮುಕ್ತಿಗಾಗಿ ಯೌಗಂಧರಾಯಣಾದಿ ಭೃತ್ಯರಿಂದ ಕೂಡಿ ಭಾರ್ಯೆಯಾದ ಆ ಮೃಗಾವತಿಯೊಡನೆ ವಾಯುವೇಗವುಳ್ಳ ವಾಹನಗಳ ಸಹಾಯದಿಂದ ದಕ್ಷಿಣಸಮುದ್ರದ ದಡದಲ್ಲಿರುವ ಫುಲ್ಲಗ್ರಾಮದ ಬಳಿಯ ತೀರ್ಥಗಳಲ್ಲಿ ಅತ್ಯುತ್ತಮವಾದ ಚಕ್ರತೀರ್ಥಕ್ಕೆ ಶೀಘ್ರವಾಗಿ ಬಂದನು.

೧೬೨–೧೬೩. ಅವರೆಲ್ಲರೂ ಆ ಚಕ್ರತೀರ್ಥದಲ್ಲಿ ಯಥಾವಿಧಿಯಾಗಿ ಸ್ನಾನ ಮಾಡಿದಕೂಡಲೆ ಪಾಪದಿಂದ ಮುಕ್ತರಾಗಿ ಅತಿ ಕುತ್ಸಿತವಾದ ಮನುಷ್ಯತ್ವವನ್ನು ನೀಗಿ ತಮ್ಮತಮ್ಮ ರೂಪಗಳನ್ನು ಪಡೆದರು.

೧೬೪–೧೬೫. ಕೂಡಲೇ ದಿವ್ಯವಾದ ವಸ್ತ್ರಾಭರಣಗಳಿಂದಲೂ, ಹೂಮಾಲೆಗಳಿಂದಲೂ ಅಲಂಕೃತರಾಗಿ ಅಮೂಲ್ಯವಾದ ವಿಮಾನಗಳನ್ನೇರಿ ತಮ್ಮನ್ನು

ತತ್ತೀರ್ಥಂ ಬಹುಮನ್ವಾನಾಃ ಸ್ವಶಾಪಚ್ಛೇದಕಾರಣಂ ।
ಪಶ್ಯತಾಂ ಸರ್ವಲೋಕಾನಾಂ ಸ್ವರ್ಗಲೋಕಂ ಯಯುಸ್ತದಾ ॥ ೧೬೫ ॥
ತದಾ ಪ್ರಭೃತಿ ತೇ ಸರ್ವೇ ಜ್ಞಾತ್ವಾ ತತ್ತೀರ್ಥವೈಭವಂ ।
ಪಾವನೇ ಚಕ್ರತೀರ್ಥೇऽಸ್ಮಿನ್ ಸ್ನಾನಂ ಕುರ್ವಂತಿ ಸರ್ವದಾ ॥ ೧೬೬ ॥
ಏವಂ ಪ್ರಭಾವಂ ತತ್ತೀರ್ಥಂ ಯೇ ಸಮಾಗತ್ಯ ಮಾನವಾಃ ।
ಸ್ನಾನಂ ಸಕೃಚ್ಚ ಕುರ್ವಂತಿ ತೇ ಸರ್ವೇ ಸ್ವರ್ಗವಾಸಿನಃ ॥ ೧೬೭ ॥

ಸೂತ ಉವಾಚ:—

ಏವಂ ವಃ ಕಥಿತಂ ವಿಪ್ರಾ ವಿಧೂಮಚರಿತಂ ಮಹತ್ ।
ಯಃ ಪಠೇದಿಮಮಧ್ಯಾಯಂ ಶೃಣುಯಾದ್ವಾ ಸಮಾಹಿತಃ ।
ಯಂ ಯಂ ಕಾಮಯತೇ ಕಾಮಂ ತಂ ಸರ್ವಂ ಶೀಘ್ರಮಾಪ್ನುಯಾತ್ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಅಲಂಬುಸಾ ವಿಧೂಮಶಾಪವಿಮೋಚನಂ"ನಾಮ ಪಂಚಮೋऽಧ್ಯಾಯಃ

---

ಶಾಪದಿಂದ ಬಿಡಿಸಿದ ಆ ಚಕ್ರತೀರ್ಥವನ್ನು ಗೌರವಿಸಿ ಜನರೆಲ್ಲರೂ ನೋಡುತ್ತಿದ್ದಂತೆಯೇ ಸ್ವರ್ಗಲೋಕಕ್ಕೆ ತೆರಳಿದರು.

೧೬೬. ಆಗಿನಿಂದೆಲ್ಲರೂ ಆ ತೀರ್ಥರಾಜನ ಮಹಿಮೆಯನ್ನರಿತು ಅದರಲ್ಲಿ ಯಾವಾಗಲೂ ಸ್ನಾನಮಾಡುತ್ತಿರುವರು.

೧೬೭. ಇಂತಹ ಪ್ರಭಾವದಿಂದೊಪ್ಪುವ ಈ ತೀರ್ಥಕ್ಕೆ ಬಂದು ಸ್ನಾನ ಮಾಡುವವರೆಲ್ಲರೂ ಸ್ವರ್ಗವನ್ನು ಪಡೆಯುತ್ತಾರೆ.

೧೬೮. ಎಲೈ ಮಹರ್ಷಿಗಳಿರಾ! ಈ ಬಗೆಯಾಗಿ ನಿಮಗೆ ವಿಧೂಮ ವಸುವಿನ ಚರಿತ್ರೆಯನ್ನು ತಿಳಿಸಿರುವೆನು. ಈ ಅಧ್ಯಾಯವನ್ನು ಓದುವವರೂ, ಕೇಳುವವರೂ ಬಯಸಿದ ಇಷ್ಟಾರ್ಥಗಳೆಲ್ಲವನ್ನೂ ಕ್ಷಿಪ್ರವಾಗಿ ಪಡೆಯುತ್ತಾರೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಅಲಂಬುಸಾವಿಧೂಮ ಶಾಪವಿಮೋಚನವರ್ಣನ"ವೆಂಬ ಐದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಷ್ಠೋಽಧ್ಯಾಯಃ

### ದೇವೀಮಹಿಷಾಸುರಯುದ್ಧವರ್ಣನಂ

ಋಷಯ ಊಚುಃ:—

ದ್ವೈಪಾಯನಸ ವಿನೇಯ ತ್ವಂ ಸೂತ ಪೌರಾಣಿಕೋತ್ತಮ ।
ದೇವೀಪತ್ತನಪರ್ಯಂತಂ ಚಕ್ರತೀರ್ಥಮನುತ್ತಮಂ ॥ ೧ ॥
ಇತ್ಯಬ್ರವೀಃ ಪುರಾಽಸ್ಮಾಕಮತಃ ಪೃಚ್ಛಾಮಿ ಕಿಂಚನ ।
ದೇವೀಪುರಂ ಹಿ ತತ್ಕುತ್ರ ಯದಂತಂ ಚಕ್ರತೀರ್ಥಕಂ ॥ ೨ ॥
ದೇವೀಪತ್ತನಮಿತ್ಯಾಖ್ಯಾ ಕಥಂ ತಸ್ಯಾಽಭವತ್ತಥಾ ।
ಶ್ರೀರಾಮಸೇತುಮೂಲೇ ಚ ಸ್ನಾತಾನಾಂ ಪಾಪಿನಾಮಪಿ ॥ ೩ ॥
ಕೀದೃಶಂ ವಾ ಭವೇತ್ಪುಣ್ಯಂ ಚಕ್ರತೀರ್ಥೇ ತಥೈವ ಚ ।
ಏತಚ್ಚಾಽನ್ಯಾನ್ವಿಶೇಷಾಂಶ್ಚ ಬ್ರೂಹಿ ಪೌರಾಣಿಕೋತ್ತಮ ॥ ೪ ॥

ಶ್ರೀ ಸೂತ ಉವಾಚ:—

ಸರ್ವಮೇತತ್ಪ್ರವಕ್ಷ್ಯಾಮಿ ಶೃಣುಧ್ವಂ ಮುನಿಪುಂಗವಾಃ ।
ಪಠತಾಂ ಶೃಣ್ವತಾಂ ಚೈತದಾಖ್ಯಾನಂ ಪಾಪನಾಶನಂ ॥ ೫ ॥
ಯತ್ರ ಪಾಷಾಣನವಕಂ ಸ್ಥಾಪಯಿತ್ವಾ ರಘೂದ್ವಹಃ ।
ಬಬಂಧ ಪ್ರಥಮಂ ಸೇತುಂ ಸಮುದ್ರೇ ಮೈಥಿಲೀಪತಿಃ ॥ ೬ ॥

---

### ಕನ್ನಡದ ಅನುವಾದ

#### ದೇವೀಮಹಿಷಾಸುರಯುದ್ಧವರ್ಣನ

೧–೪. ಋಷಿಗಳು ಕೇಳುತ್ತಾರೆ:—"ವ್ಯಾಸಶಿಷ್ಯನೂ, ಪೌರಾಣಿಕರಲ್ಲಿ ಶ್ರೇಷ್ಠನೂ ಆದ ಎಲೈ ಸೂತನೇ! ಚಕ್ರತೀರ್ಥವು ದೇವೀಪಟ್ಟಣದವರೆಗೂ ಇರುವುದೆಂದು ಹಿಂದೆ ನಮಗಪ್ಪಣೆಕೊಡಿಸಿದೆಯಾದಕಾರಣ ಕೇಳುವುವು. ಆ ಪಟ್ಟಣವೆಲ್ಲಿರುವುದು? ದೇವೀಪಟ್ಟಣವೆಂದು ಅದಕ್ಕೆ ಹೆಸರೇಕೆ ಬಂದಿತು? ಶ್ರೀರಾಮನಿರ್ಮಿತವಾದ ಸೇತುಮೂಲದಲ್ಲಿಯೂ, ಚಕ್ರತೀರ್ಥದಲ್ಲಿಯೂ ಸ್ನಾನಮಾಡುವ ಪಾಪಿಗಳಿಗಾವಫಲವು ದೊರಕುವುದು? ಇವೇ ಮುಂತಾದ ವಿಶೇಷಗಳನ್ನೆಲ್ಲ ನಮಗರುಹು."

೫. ಸೂತನು ಹೇಳುತ್ತಾನೆ:—"ಎಲೈ ಮಹರ್ಷಿಗಳಿರಾ! ಕೇಳಿರಿ. ಈ ಉಪಾಖ್ಯಾನವು ಓದುವವರಿಗೂ, ಕೇಳುವವರಿಗೂ ಪಾಪವನ್ನು ತೊಲಗಿಸುವಂತಹುದು.

೬–೮. ಶ್ರೀರಾಮನು ಮೊದಲು ಒಂಬತ್ತು ಕಲ್ಲುಗಳನ್ನು ಒಂದೆಡೆ ನೆಟ್ಟು

ದೇವೀಪುರಂ ತು ತತ್ರೈವ ಯದಂತಂ ಚಕ್ರತೀರ್ಥಕಂ ।
ದೇವೀಪತ್ತನಮಿತ್ಯಾಖ್ಯಾ ಯಥಾ ತಸ್ಯ ಸಮಾಗತಾ ॥ ೭ ॥
ತದ್ವ್ರವೀಮಿ ಮುನಿಶ್ರೇಷ್ಠಾಃ ಶೃಣುಧ್ವಂ ಶ್ರದ್ಧಯಾ ಸಹ ।
ಪುರಾ ದೇವಾಽಸುರೇ ಯುದ್ಧೇ ದೇವೈರ್ನಾಶಿತಪುತ್ರಿಣೀ ।
ದಿತಿಃ ಪ್ರೋವಾಚ ತನಯಾಮಾತ್ಮನಃ ಶೋಕಮೋಹಿತಾ ॥ ೮ ॥

ದಿತಿರುವಾಚ :—

ಯಾಹಿ ಪುತ್ರಿ ತಪಃ ಕರ್ತುಂ ತಪೋವನಮನುತ್ತಮಂ ।
ಪುತ್ರಾರ್ಥಂ ತವ ಸುಶ್ರೋಣಿ ನಿಯತಾ ನಿಯತೇಂದ್ರಿಯಾ ॥ ೯ ॥
ಇಂದ್ರಾದಯೋ ನ ಶಿಕ್ಷ್ಯೇರನ್ಯೇನ ಪುತ್ರೇಣ ವೈ ಸುರಾಃ ।
ಉದಿತಾ ತನಯಾ ಚೈವಂ ಜನನ್ಯಾ ತಾಂ ಪ್ರಣಮ್ಯ ಸಾ ॥ ೧೦ ॥
ಸ್ವೀಕೃತ್ಯ ಮಾಹಿಷಂ ರೂಪಂ ವಸಂ ಪಂಚಾಽಗ್ನಿಮಧ್ಯಗಾ ।
ತಪೋಽತಪ್ಯತ ಸಾ ಘೋರಂ ತೇನ ಲೋಕಾಶ್ಚ ಕಂಪಿರೇ ॥ ೧೧ ॥
ತಸ್ಯಾಂ ತಪಃ ಪ್ರಕುರ್ವಂತ್ಯಾಂ ತ್ರಿಲೋಕ್ಯಾಸೀದ್ಭಯಾತುರಾ ।
ಇಂದ್ರಾದಯಃ ಸುರಗಣಾ ಮೋಹಮಾಪುರ್ದ್ವಿಜೋತ್ತಮಾಃ ॥ ೧೨ ॥
ಸುಪಾರ್ಶ್ವಸ್ತಪಸಾ ತಸ್ಯಾ ಮುನಿಃ ಕ್ಷುಬ್ಧೋಽವದತ್ತು ತಾಂ ॥ ೧೩ ॥

---

ಸಮುದ್ರದಮೇಲೆ ಸೇತುವನ್ನು ಕಟ್ಟಲಾರಂಭಿಸಿದನು. ಅದೇ ನವಪಾಷಾಣ ತೀರ್ಥ. ಅದರ ಬಳಿಯಲ್ಲಿರುವುದೇ ದೇವೀಪಟ್ಟಣವು. ಚಕ್ರತೀರ್ಥವೂ ಅಲ್ಲಿಗೇ ಮುಗಿಯುವುದು. ಇನ್ನು ಅದಕ್ಕೆ ದೇವೀಪಟ್ಟಣವೆಂಬ ಹೆಸರು ಬರಲು ಕಾರಣವನ್ನು ಹೇಳುವೆನು; ಒಮ್ಮನದಿಂದ ಕೇಳಿರಿ. ಹಿಂದೆ ದಿತೀದೇವಿಯು ದೇವಾಸುರ ಯುದ್ಧದಲ್ಲಿ ದೇವತೆಗಳು, ತನ್ನ ಮಕ್ಕಳಾದ ದೈತ್ಯರನ್ನೆಲ್ಲ ಕೊಲ್ಲಲು ಬಹುವಾಗಿ ಶೋಕಗೊಂಡು ತನ್ನ ಮಗಳಿಗೆ ಹೀಗೆ ಹೇಳಿದಳು.

೯–೧೦. ದಿತಿಯು ಹೇಳುತ್ತಾಳೆ:—"ಎಲೌ ಮಗಳೇ! ಶ್ರೇಷ್ಠವಾದ ಒಂದು ತಪೋವನಕ್ಕೆ ಹೋಗಿ ಇಂದ್ರಾದಿ ದೇವತೆಗಳನ್ನು ಶಿಕ್ಷಿಸುವಂತಹ ಮಗನನ್ನು ಪಡೆಯುವುದಕ್ಕಾಗಿ ಇಂದ್ರಿಯನಿಯಮನದಿಂದ ತಪವನ್ನಾಚರಿಸು."

೧೧–೧೩. ಇಂತು ನುಡಿದ ದಿತಿಯ ಅಪ್ಪಣೆಯಮಾತನ್ನು ಕೇಳಿ ಆ ಮಗಳು ಆಕೆಗೆರಗಿ ಎಮ್ಮೆಯ ರೂಪವನ್ನು ಧರಿಸಿ ಕಾಡಿಗೆಹೋಗಿ ಪಂಚಾಗ್ನಿಮಧ್ಯದಲ್ಲಿ ನಿಂತು ಘೋರವಾದ ತಪಸ್ಸನ್ನು ಮಾಡಿದಳು. ಅದರಿಂದ ಮೂರುಲೋಕಗಳೂ ನಡುಗಿದವು. ಇಂದ್ರಾದಿ ದೇವತೆಗಳು ದಿಕ್ಕುತೋರದವರಾದರು. ತರುವಾಯ ಸುಪಾರ್ಶ್ವನೆಂಬ ಮಹರ್ಷಿಯು ಅವಳ ತಪಸ್ಸಿನಿಂದ ಕಳವಳಗೊಂಡು ಅಲ್ಲಿಗೆ ಬಂದು ಆಕೆಯನ್ನು ಕುರಿತು ಈ ರೀತಿ ಹೇಳಿದನು.

ಸುಪಾರ್ಶ್ವ ಉವಾಚ :—
ಪರಿತುಷ್ಟೋಽಸ್ಮಿ ಸುಶ್ರೋಣಿ ಪುತ್ರಸ್ತ್ವ ಭವಿಷ್ಯತಿ ।
ಮುಖೇನ ಮಹಿಷಾಕಾರೋ ವಪುಷಾ ನರರೂಪವಾನ್ ॥ ೧೪ ॥
ಮಹಿಷೋ ನಾಮ ಪುತ್ರಸ್ತೇ ಭವಿಷ್ಯತ್ಯತಿವೀರ್ಯವಾನ್ ।
ಪೀಡಯಿಷ್ಯತಿ ಯಃ ಸ್ವರ್ಗಂ ದೇವೇಂದ್ರಂ ಚ ಸಸೈನಿಕಂ ॥ ೧೫ ॥
ಸುಪಾರ್ಶ್ವಸ್ತ್ವೇವಮುಕ್ತ್ವಾ ತಾಂ ವಿನಿವಾರ್ಯ ತಪಸ್ತಥಾ ।
ಆಗಚ್ಛದಾತ್ಮನೋ ಲೋಕಂ ಅನುನೀಯ ತಪಸ್ವಿನೀಂ ॥ ೧೬ ॥
ಅಥ ಜಜ್ಞೇ ಸ ಮಹಿಷೋ ಯಥೋಕ್ತಂ ಬ್ರಹ್ಮಣಾ ಪುರಾ ।
ವ್ಯವರ್ಧತ ಮಹಾವೀರ್ಯಃ ಪರ್ವಣೀವ ಮಹೋದಧಿಃ ॥ ೧೭ ॥
ತತಃ ಪುತ್ರೋ ವಿಪ್ರಚಿತ್ತೇರ್ವಿದ್ಯುನ್ಮಾಲ್ಯಸುರಾಗ್ರಣೀಃ ।
ಅನ್ಯೇಽಪ್ಯಸುರವರ್ಯಾಸ್ತೇ ಸಂತಿ ಯೇ ಭೂತಲೇ ದ್ವಿಜಾಃ ॥ ೧೮ ॥
ತೇ ಸರ್ವೇ ಮಹಿಷಸ್ಯಾಽಸ್ಯ ಶ್ರುತ್ವಾ ದತ್ತಂ ವರಂ ಮುದಾ ।
ಸಮಾಗಮ್ಯ ಮುನಿಶ್ರೇಷ್ಠಾಃ ಪ್ರಾಽವದನ್ಮಹಿಷಾಸುರಂ ॥ ೧೯ ॥
ಸ್ವರ್ಗಾಧಿಪತ್ಯಮಸ್ಮಾಕಂ ಪೂರ್ವಮಾಸೀನ್ಮಹಾಮತೇ ।
ದೇವೈರ್ವಿಷ್ಣುಂ ಸಮಾಶ್ರಿತ್ಯ ರಾಜ್ಯಂ ನೋ ಹೃತಮೋಜಸಾ ॥ ೨೦ ॥
ತದ್ರಾಜ್ಯಮಾನಯಂ ಬಲಾದಸ್ಮಾಕಂ ಮಹಿಷಾಸುರ ।
ವೀರ್ಯಂ ಪ್ರಕಟಯಸ್ವಾಽದ್ಯ ಪ್ರಭಾವಮಪಿ ಚಾತ್ಮನಃ ॥ ೨೧ ॥

---

೧೪. "ಎಲೆ ಸುಮಧ್ಯಮೆ! ನಿನ್ನ ತಪಸ್ಸಿಗೆ ಮೆಚ್ಚಿದೆ. ನಿನಗೆ ಎಮ್ಮೆಯ ಮುಖವೂ, ಮಾನವ ದೇಹವೂ ಇರುವ ಮಗನೊಬ್ಬನು ಜನಿಸುವನು.

೧೫. ಅವನು ಮಹಿಷನೆಂದೇ ಹೆಸರುಗೊಂಡು ಪರಾಕ್ರಮಸಂಪನ್ನನಾಗಿ ಸಪರಿವಾರನಾದ ದೇವೇಂದ್ರನನ್ನೂ ಬಂಧಿಸುವವನಾಗುತ್ತಾನೆ."

೧೬. ಈ ಪ್ರಕಾರವಾಗಿ ಆ ಸುಪಾರ್ಶ್ವನು ಅವಳಿಗೆ ವರವನ್ನು ಅನುಗ್ರಹಿಸಿ ಅವಳ ತಪಸ್ಸನ್ನು ಅಲ್ಲಿಗೇ ನಿಲ್ಲಿಸಿ ತನ್ನ ಲೋಕಕ್ಕೆ ಹೊರಟುಹೋದನು.

೧೭. ತರುವಾಯ ಬ್ರಹ್ಮನು ಪೂರ್ವದಲ್ಲಿ ಹೇಳಿದ್ದಂತೆ ಅವಳಲ್ಲಿ ಮಹಿಷಾಸುರನು ಹುಟ್ಟಿ ಪರ್ವಕಾಲದ ಮಹಾಸಾಗರದಂತೆ ಬೆಳೆಯುತ್ತಿದ್ದನು.

೧೮–೧೯. ಎಲೈ ವಿಪ್ರರೇ! ತರುವಾಯ ಅದುವರೆಗೆ ಭೂಲೋಕದಲ್ಲಿದ್ದ ವಿಪ್ರಚಿತ್ತಿಯ ಮಗನಾದ ಮಾಲ್ಯವಂತನೇ ಮೊದಲಾದ ಮಹಾಸುರರೆಲ್ಲರೂ ಆ ಮಹಿಷನ ಜನ್ಮವೃತ್ತಾಂತವನ್ನು ಕೇಳಿ ಸಂತೋಷದಿಂದ ಅವನಿದ್ದೆಡೆಗೆ ಬಂದು ಅವನಿಗೆ ಹೇಳತೊಡಗಿದರು.

೨೦. "ಎಲೈ ಬುದ್ಧಿಶಾಲಿಯೇ! ಹಿಂದೆ ನಮ್ಮದಾಗಿದ್ದ ಸ್ವರ್ಗದ ಆಡಳಿತವನ್ನು ವಿಷ್ಣುವಿನ ಬೆಂಬಲದಿಂದ ದೇವತೆಗಳು ನಮ್ಮಿಂದ ಕಿತ್ತುಕೊಂಡಿರುವರು.

೨೧. ಅಯ್ಯಾ ಮಹಿಷಾಸುರನೇ! ಈಗ ನೀನು ಮತ್ತೆ ಆ ದೇವರಾಜ್ಯವನ್ನುಗಳಿಸು. ನಿನ್ನ ಬಲವನ್ನು ತೋರು; ನಿನ್ನ ಮಹಿಮೆಯನ್ನು ಹೊರಗೆಡಹು.

ಅತುಲ್ಯಬಲವೀರ್ಯಸ್ತ್ವಂ ಬ್ರಹ್ಮದತ್ತವರೋದ್ಧತಃ ।
ಪುಲೋಮಜಾಪತಿಂ ಯುದ್ಧೇ ಜಹಿ ದೇವಗಣೈಃ ಸಹ ॥ ೨೨ ॥
ದನುಜೈರೇವಮುಕ್ತೋಽಸೌ ಯೋದ್ಧುಕಾಮೋಽಸುರೈಃ ಸಹ ।
ಮಹಾವೀರ್ಯೋಽಥ ಮಹಿಷಃ ಪ್ರಯಯಾವಮರಾವತೀಂ ॥ ೨೩ ॥
ದೇವಾನಾಮಸುರಾಣಾಂ ಚ ಸಂವತ್ಸರಶತಂ ರಣಂ ।
ಪುರಾ ಬಭೂವ ವಿಪ್ರೇಂದ್ರಾಸ್ತುಮುಲಂ ರೋಮಹರ್ಷಣಂ ॥ ೨೪ ॥
ದೇವವೃಂದಂ ತತೋ ಭೀತ್ವಾ ಪುರಸ್ಕೃತ್ಯ ಪುರಂದರಂ ।
ಕಾಂದಿಶೀಕಮಭೂದ್ವಿಪ್ರಾ ಬ್ರಹ್ಮಾಣಂ ಚ ಯಯೌ ತದಾ ॥ ೨೫ ॥
ಬ್ರಹ್ಮಾ ತಾನಮರಾನ್ಸರ್ವಾನ್ಸಮಾದಾಯ ಯಯೌ ಪುನಃ ।
ನಾರಾಯಣಶಿವೌ ಯತ್ರ ವರ್ತೇತೇ ವಿಶ್ವಪಾಲಕೌ ॥ ೨೬ ॥
ತತ್ರ ಗತ್ವಾ ನಮಸ್ಕೃತ್ಯ ಸ್ತುತ್ವಾ ಸ್ತೋತ್ರೈರನೇಕಶಃ ।
ಬ್ರಹ್ಮಾ ನಿವೇದಯಾಮಾಸ ಮಹಿಷಾಸುರಚೇಷ್ಟಿತಂ ॥ ೨೭ ॥
ಸುರಾಣಾಮಸುರೈಃ ಪೀಡಾಂ ದೇವಯೋಃ ಶಂಭುಕೃಷ್ಣಯೋಃ ।
ಇಂದ್ರಾಗ್ನಿಯಮಸೂರ್ಯೇಂದುಕುಬೇರವರುಣಾದಿಕಾನ್ ॥ ೨೮ ॥
ನಿರಾಕೃತ್ಯಾಧಿಕಾರೇಷು ತೇಷಾಂ ತಿಷ್ಠತ್ಯಯಂ ಸ್ವಯಂ ।
ಅನ್ಯೇಷಾಂ ದೇವವೃಂದಾನಾಮಧಿಕಾರೇಽಪಿ ತಿಷ್ಠತಿ ॥ ೨೯ ॥

---

೨೨. ನಿನ್ನ ಪರಾಕ್ರಮವು ಅಸದೃಶವಾದುದು. ನೀನು ಬ್ರಹ್ಮನ ವರದಿಂದ ಬಲಗೊಂಡಿರುವೆ. ಇಂತಹ ನೀನು ಈಗ ದೇವತೆಗಳಿಂದ ಕೂಡಿದ ಆ ಮಹೇಂದ್ರನನ್ನು ಸಮರಾಂಗಣದಲ್ಲಿ ಗೆಲ್ಲುವವನಾಗು.''

೨೩. ಇಂತು ನುಡಿದ ಆ ಅಸುರರ ಮಾತನ್ನು ಕೇಳಿ ಮಹಾವೀರನಾದ ಆ ಮಹಿಷನು ದೇವತೆಗಳೊಡನೆ ಯುದ್ಧಮಾಡಲಾಸೆಗೊಂಡು ಅಮರಾವತಿಗೆ ಹೋದನು.

೨೪. ಅಲ್ಲಿ ದೇವಾಸುರರಿಗೆ ನೂರಾರುವರ್ಷಗಳಕಾಲ ರೋಮಾಂಚಕರವಾದ ಭಯಂಕರಸಮರವಾಯಿತು.

೨೫. ಕಡೆಗೆ ದೇವತೆಗಳು ಹೆದರಿ ಇಂದ್ರನೊಡನೆ ಬ್ರಹ್ಮಲೋಕಕ್ಕೆ ಓಡಿಹೋಗಿ ಆತನನ್ನು ಮೊರೆಹೊಕ್ಕರು.

೨೬–೨೭. ಬ್ರಹ್ಮದೇವನು ಆ ದೇವತೆಗಳನ್ನೆಲ್ಲ ಕರೆದುಕೊಂಡು ಲೋಕರಕ್ಷಕರಾದ ಶಿವಕೇಶವರಿದ್ದೆಡೆಗೆ ಹೋಗಿ ಅವರಿಗೆರಗಿ ಬಗೆಬಗೆಯಾಗಿ ಸ್ತೋತ್ರಮಾಡಿ ಮಹಿಷಾಸುರನ ವೃತ್ತಾಂತವೆಲ್ಲವನ್ನೂ ಅರಿಕೆ ಮಾಡಿದನು.

೨೮–೩೧. "ಎಲೈ ಪ್ರಭುಗಳಿರಾ! ಮಹಿಷನೆಂಬ ದಾನವನು ಇಂದ್ರಾಗ್ನಿಯಮ ಸೂರ್ಯ ಚಂದ್ರ ಕುಬೇರಾದಿಗಳ ಅಧಿಕಾರಗಳನ್ನೆಲ್ಲ ಕಸಿದುಕೊಂಡು

ನಿರಸ್ತಂ ದೇವವೃಂದಂ ತತ್ ಸ್ವರ್ಲೋಕಾದವನೀತಲೇ ।
ಮನುಷ್ಯವದ್ವಿಚರತೇ ಮಹಿಷಾಸುರಬಾಧಿತಂ ॥ ೩೦ ॥
ಏತದ್ವಾಜ್ಞಾಪಯಿತುಂ ದೇವೌ ಯುವಯೋರಹಮಾಗತಃ ।
ಸಾರ್ಧಂ ದೇವಗಣೈರತ್ರ ರಕ್ಷತಂ ತಾನ್ಸಮಾಗತಾನ್ ॥ ೩೧ ॥
ಬ್ರಹ್ಮಣೋ ವಚನಂ ಶ್ರುತ್ವಾ ರಮೇಶ್ವರಮಹೇಶ್ವರೌ ।
ಕೋಪಾತ್ಕರಾಲವದನೌ ದುಷ್ಪ್ರೇಕ್ಷ್ಯೌ ತೌ ಬಭೂವತುಃ ॥ ೩೨ ॥
ಅತ್ಯಂತಕೋಪಜ್ವಲಿತಾನ್ಮುಖಾದ್ವಿಷ್ಣೋರಥ ದ್ವಿಜಾಃ ।
ನಿಶ್ಚಕ್ರಾಮ ಮಹತ್ತೇಜಃ ಶಂಭೋಃ ಸ್ರಷ್ಟುಸ್ತಥೈವ ಚ ॥ ೩೩ ॥
ಅಪರೇಷಾಂ ಸುರಾಣಾಂ ಚ ದೇಹಾದಿಂದ್ರಶರೀರತಃ ।
ತೇಜಃ ಸಮುದಭೂತ್ಪೂರಂ ತದೇಕಂ ಸಮಜಾಯತ ॥ ೩೪ ॥
ತೇಷಾಂ ತು ತೇಜಸಾಂ ರಾಶಿರ್ಜ್ವಲತ್ಪರ್ವತಸನ್ನಿಭಃ ।
ದದೃಶೇ ದೇವವೃಂದೈಸ್ತೈರ್ಜ್ವಾಲಾವ್ಯಾಪ್ತದಿಗಂತರಃ ॥ ೩೫ ॥
ತೇಜಸಾಂ ಸಮುದಾಯೋಽಸೌ ನಾರೀ ಕಾಚಿದಭೂತ್ತದಾ ।
ಶಿವತೇಜೋಽಮುಖಮಭೂದ್ವಿಷ್ಣುತೇಜೋಭುಜೌ ದ್ವಿಜಾಃ ॥ ೩೬ ॥
ಬ್ರಹ್ಮತೇಜಸ್ತು ಚರಣೌ ಮಧ್ಯಮೈಂದ್ರೇಣ ತೇಜಸಾ ।
ಯಮಸ್ಯ ತೇಜಸಾ ಕೇಶಾಃ ಕುಚೌ ಚಂದ್ರಸ್ಯ ತೇಜಸಾ ॥ ೩೭ ॥

---

ತಾನೇ ಅವುಗಳನ್ನೆಲ್ಲ ನಿರ್ವಹಿಸುತ್ತಿರುವನು. ಇಂತೆಯೇ ಮಿಕ್ಕ ದೇವತೆಗಳ ಗತಿಯೂ ಆಗಿರುವುದು. ಅಲ್ಲಿಂದ ಓಡಿಹೋದ ದೇವವೃಂದವು ಭೂಲೋಕದಲ್ಲಿ ದಿಕ್ಕಿಲ್ಲದ ಮನುಷ್ಯರಂತೆಯೇ ಅಲೆಯುತ್ತಿರುವುದು. ಇದನ್ನು ತಮ್ಮ ನೆನಪಿಗೆ ತರುವುದಕ್ಕಾಗಿಯೇ ಈ ದೇವತೆಗಳೊಡನೆ ನಾನು ಇಲ್ಲಿಗೆ ಬಂದುದು. ಎಲೈ ಪ್ರಭುಗಳೇ! ಇವರನ್ನು ರಕ್ಷಿಸಿರಿ'' ಎಂದು ನುಡಿದನು.

೩೨. ಬ್ರಹ್ಮನ ಈ ಮಾತನ್ನು ಕೇಳಿ ಕೋಪಗೊಂಡ ಶಿವಕೇಶವರ ಮುಖಗಳು ನೋಡಲತಿಭಯಂಕರಗಳಾದುವು.

೩೩–೩೫. ಎಲೈ ವಿಪ್ರರೇ! ಆಗ ಅತ್ಯಂತವಾಗಿ ಕುಪಿತರಾದ ಆ ಬ್ರಹ್ಮ ವಿಷ್ಣು ಮಹೇಶ್ವರರ ಮತ್ತು ಇಂದ್ರಾದಿ ದೇವತೆಗಳ ದೇಹಗಳಿಂದ ಮಹತ್ತರವಾದ ತೇಜಸ್ಸುಗಳು ಹೊರಹೊಮ್ಮಿದುವು. ಅವೆಲ್ಲವೂ ಒಟ್ಟುಸೇರಿ ಒಂದು ಆಕಾರವನ್ನೇ ತಾಳಿ ಭಯಂಕರವಾಗಿ ಉರಿಯುವ ಅಗ್ನಿಪರ್ವತದಂತೆ ದಿಗಂತಗಳನ್ನಾವರಿಸಿತು.

೩೬–೩೭. ಆ ತೇಜಸ್ಸಮುದಾಯವು ಬರುಬರುತ್ತಾ ಒಂದು ನಾರಿಯ ಆಕಾರವನ್ನು ತಾಳಿತು. ಶೈವತೇಜವು ಮುಖವಾಗಿಯೂ, ವೈಷ್ಣವ ತೇಜವು ಭುಜಗಳಾಗಿಯೂ, ಬ್ರಹ್ಮತೇಜವು ಕಾಲುಗಳಾಗಿಯೂ, ಇಂದ್ರತೇಜವು ಸೊಂಟ

ಜಂಘೋರೂ ಕಲ್ಪಿತೌ ವಿಪ್ರಾ ವರುಣಸ್ಯ ತು ತೇಜಸಾ ।
ನಿತಂಬಃ ಪೃಥಿವೀತೇಜಃ ಪಾದಾಂಗುಲ್ಯೋಽರ್ಕತೇಜಸಾ ॥ ೩೮ ॥
ಕರಾಂಗುಲ್ಯೋ ವಸೂನಾಂ ಚ ತೇಜಸಾ ಕಲ್ಪಿತಾಸ್ತಥಾ ।
ಕುಬೇರತೇಜಸಾ ವಿಪ್ರಾ ನಾಸಿಕಾ ಪರಿಕಲ್ಪಿತಾ ॥ ೩೯ ॥
ನವಪ್ರಜಾಪತೀನಾಂ ಚ ತೇಜಸಾ ದಂತಪಂಕ್ತಯಃ ।
ಚಕ್ಷುರ್ದ್ವಯಂ ಸಮುಜನಿ ಹವ್ಯವಾಹನತೇಜಸಾ ॥ ೪೦ ॥
ಉಭೇ ಸಂಧ್ಯೇ ಭ್ರುವೌ ಜಾತೇ ಶ್ರವಣೇ ವಾಯುತೇಜಸಾ ।
ಇತರೇಷಾಂ ಚ ದೇವಾನಾಂ ತೇಜೋಭಿರತಿದಾರುಣೈಃ ॥ ೪೧ ॥
ಕೃತಾನ್ಯಾವಯವಾ ನಾರೀ ದುರ್ಗಾ ಪರಮಭಾಸ್ವರಾ ।
ಬಭೂವ ದುರ್ಧರ್ಷತರಾ ಸರ್ವೈರಪಿ ಸುರಾಽಸುರೈಃ ॥ ೪೨ ॥
ಸರ್ವವೃಂದಾರಕಾಽನೀಕತೇಜಃಸಂಘಸಮುದ್ಭವಾ ।
ತಾಂ ದೃಷ್ಟ್ವಾ ಪ್ರೀತಿಮಾಪುಸ್ತೇ ದೇವಾ ಮಹಿಷ ಚಾರ್ದಿತಾಃ ॥ ೪೩ ॥
ತತೋ ರುದ್ರಾದಯೋ ದೇವಾ ವಿನಿಷ್ಕೃಷ್ಯಾಯುಧಾನ್ನಿಜಾತ್ ।
ಆಯುಧಾನಿ ದದುಸ್ತಸ್ಯೈ ಶೂಲಾದೀನಿ ದ್ವಿಜೋತ್ತಮಾಃ ॥ ೪೪ ॥

---

ವಾಗಿಯೂ ಏರ್ಪಟ್ಟಿತು. ಯಮನ ತೇಜಸ್ಸಿನಿಂದ ಕೂದಲೂ, ಚಂದ್ರನ ತೇಜಸ್ಸಿನಿಂದ ಸ್ತನಗಳೂ ಉಂಟಾದುವು.

೩೮–೩೯. ವರುಣನ ತೇಜಸ್ಸಿನಿಂದ ತೊಡೆಗಳೂ, ಭೂಮಿಯ ತೇಜಸ್ಸಿನಿಂದ ಕಿಬ್ಬೊಟ್ಟೆಯೂ, ಸೂರ್ಯನ ತೇಜಸ್ಸಿನಿಂದ ಕಾಲ್ಬೆರಳುಗಳೂ, ವಸುಗಳ ತೇಜಸ್ಸಿನಿಂದ ಕೈಬೆರಳುಗಳೂ ಏರ್ಪಟ್ಟವು. ಕುಬೇರನ ತೇಜಸ್ಸಿನಿಂದ ಮೂಗೂ ಉಂಟಾಯಿತು.

೪೦–೪೩. ಕಶ್ಯಪಾದಿ ನವಬ್ರಹ್ಮರ ತೇಜಸ್ಸಿನಿಂದ ಹಲ್ಲುಗಳು ಉದಿಸಿದುವು. ಅಗ್ನಿಯ ತೇಜಸ್ಸಿನಿಂದ ಕಣ್ಣುಗಳುಂಟಾದವು. ಉದಯಾಸ್ತಸಂಧ್ಯೆಗಳ ತೇಜಸ್ಸುಗಳೇ ಹುಬ್ಬುಗಳಾದವು. ವಾಯುತೇಜದಿಂದ ಕಿವಿಗಳೇರ್ಪಟ್ಟವು. ಇಂತೆಯೇ ಉಳಿದ ದೇವತೆಗಳ ಅತಿ ಭಯಂಕರವಾದ ತೇಜಸ್ಸುಗಳಿಂದ ಇತರ ಅವಯವಗಳೇರ್ಪಟ್ಟವು. ಹೀಗೆ ಸಮಸ್ತದೇವತೆಗಳ ತೇಜಸ್ಸುಗಳಿಂದ ಬಹುವಾಗಿ ಬೆಳಗುವ ಆ ಸ್ತ್ರೀರೂಪವು ದುರ್ಗೆಯೆನಿಸಿ ದೇವದಾನವರೆಲ್ಲರಿಗೂ ಕೆಣಕಲಾಗದಂತಹುದಾಯಿತು. ಅದನ್ನು ನೋಡಿ ದೇವತೆಗಳೆಲ್ಲರೂ ಸಂತೋಷಗೊಂಡರು.

೪೪. ಎಲೈ ದ್ವಿಜಶ್ರೇಷ್ಠರೇ! ಬಳಿಕ ರುದ್ರಾದಿ ದೇವತೆಗಳೆಲ್ಲರೂ ತಮ್ಮ ತಮ್ಮಲ್ಲಿದ್ದ ಆಯುಧಗಳಿಂದ ಶೂಲಾದ್ಯಾಯುಧಗಳೆಲ್ಲವನ್ನೂ ಆಕೆಗೆ ಒಪ್ಪಿಸಿ ಕೊಟ್ಟರು.

ಭೂಷಣಾನಿ ದದುಸ್ತಸ್ಯೈ ವಸ್ತ್ರಮಾಲ್ಯಾನಿ ಚಂದನಂ ।
ಸಾಽಪಿ ದೇವೀ ತದಾ ವಸ್ತ್ರೈರ್ಭೂಷಣೈಶ್ಚಂದನಾದಿಭಿಃ ॥ ೪೫ ॥
ಕುಸುಮೈರಾಯುಧೈರ್ಹಾರೈರ್ಭೂಷಿತಾ ಪರಿಚಾರಕೈಃ ।
ಸಾಟ್ಟಹಾಸಂ ಪ್ರಮುಂಚಂತೀ ಭೈರವೀ ಭೈರವಸ್ವನಾ ॥ ೪೬ ॥
ನನಾದ ಕಂಪಯಂತೀವ ರೋದಸೀ ದೇವಸೇವಿತಾ ।
ದೇವ್ಯಾ ಭೈರವನಾದೇನ ಚಚಾಲ ಸಕಲಂ ಜಗತ್ ॥ ೪೭ ॥
ಸಿಂಹಾಸನಸಮಾರೂಢಾಂ ದೇವೀಂ ತಾಮಮರಾಸ್ತದಾ ।
ಮುನಯಃ ಸಿದ್ಧಗಂಧರ್ವಾಸ್ತುಷ್ಟುವುರ್ಜಯಶಬ್ದತಃ ॥ ೪೮ ॥
ಅತಿ ಭೀಷಣನಾದೇನ ದೇವ್ಯಾಃ ಕ್ಷುಬ್ಧಂ ಜಗತ್ತ್ರಯಂ ।
ದೃಷ್ಟ್ವಾ ದೇವಾರಯೋ ದೈತ್ಯಾಃ ಸಮುತ್ತಸ್ಥುರುದಾಯುಧಾಃ ॥ ೪೯ ॥
ಮಹಿಷೋಽಪಿ ಮಹಾಕ್ರೋಧಾತ್ಸಮುದ್ಯತಮಹಾಯುಧಃ ।
ತಂ ಶಬ್ದಮವಲಕ್ಷ್ಯಾಽಥ ಯಯಾವಸುರಸಂವೃತಃ ॥ ೫೦ ॥
ವ್ಯಾಲೋಕಯತ್ತತೋ ದೇವೀಂ ತೇಜೋವ್ಯಾಪ್ತಜಗತ್ತ್ರಯೀಂ ।
ಸಾಯುಧಾನಂತಬಾಹ್ವಾಢ್ಯಾಂ ನಾದಕಂಪಿತಭೂತಲಾಂ ॥ ೫೧ ॥
ಕ್ಷೋಭಿತಾಽಶೇಷಶೇಷಾದಿಮಹಾನಾಗಪರಂಪರಾಂ ।
ವಿಲೋಕ್ಯ ದೇವೀಮಸುರಾಃ ಸಮನಹ್ಯನ್ನುದಾಯುಧಾಃ ॥ ೫೨ ॥

---

೪೫–೪೭. ಬಳಿಕ ಪರಿಚಾರಿಕೆಯರು ರುದ್ರಾದಿ ದೇವತೆಗಳರ್ಪಿಸಿದ ವಸ್ತ್ರ ಮಾಲ್ಯ ಚಂದನಾಭರಣಾದಿಗಳಿಂದ ಆ ದೇವಿಯನ್ನಲಂಕರಿಸಲು ಆ ಭೈರವಿಯು ವಿಕಾರವಾದ ಅಟ್ಟಹಾಸವನ್ನು ಬೀರಿ ಒಂದು ಸಲ ಭೂಮ್ಯಾಕಾಶಗಳನ್ನೇ ನಡುಗಿಸುವಂತಹ ಸಿಂಹನಾದವನ್ನು ಮಾಡಿದಳು. ಆ ದುರ್ಗಾದೇವಿಯ ಭಯಂಕರ ಸಿಂಹನಾದದಿಂದ ಸಮಸ್ತ ಪ್ರಪಂಚವೂ ನಡುಗಿಹೋಯಿತು.

೪೮. ತರುವಾಯ ಸಿಂಹವನ್ನೇರಿ ಅಟ್ಟಹಾಸವನ್ನು ಮೆರೆದ ಆ ದೇವಿಯನ್ನು ದೇವತೆಗಳೂ, ಮುನಿಗಳೂ, ಸಿದ್ಧಗಂಧರ್ವಾದಿಗಳೂ ಹೊಗಳಿ ಜಯ ಶಬ್ದವನ್ನು ಮಾಡಿದರು.

೪೯. ಆಗ ಆ ದೇವಿಯ ಭಯಂಕರವಾದ ಸಿಂಹನಾದದಿಂದ ಕಳವಳಗೊಂಡ ಜಗತ್ತನ್ನು ನೋಡಿ ದೈತ್ಯರೆಲ್ಲರೂ ಆಯುಧಗಳೆಲ್ಲವನ್ನೂ ಹಿಡಿದು ಮೇಲಕ್ಕೆದ್ದರು.

೫೦. ಮಹಿಷಾಸುರನೂ ಆಯುಧವನ್ನು ಹಿಡಿದು ಅಸುರರೊಡನೆ ಆ ಧ್ವನಿಯನ್ನು ಸ್ವಲ್ಪವೂ ಲಕ್ಷ್ಯಕ್ಕೆ ತಂದುಕೊಳ್ಳದೆಯೆ ಆ ಕಡೆಗೇ ನುಗ್ಗಿಹೊರಟನು.

೫೧–೫೨. ಬಳಿಕ ಆ ಅಸುರನು ತನ್ನ ತೇಜಸ್ಸಿನಿಂದಲೇ ಮೂರು ಲೋಕಗಳನ್ನೂ ಆವರಿಸಿಕೊಂಡು ಆಯುಧಗಳಿಂದ ಕೂಡಿದ ಅನೇಕ ಕೈಗಳುಳ್ಳವಳಾಗಿ

ತತೋ ದೇವ್ಯಾ ತಯಾ ಸಾರ್ಧಮಸುರಾಣಾಮಭೂದ್ರಣಃ ।
ಅಸ್ತ್ರೈಃ ಶಸ್ತ್ರೈಃ ಶರೈಶ್ಚಕ್ರೈರ್ಗದಾಭಿರ್ಮುಸಲೈರಪಿ ॥ ೫೩ ॥
ಗಜಾಶ್ವರಥಪಾದಾತೈರಸಂಖ್ಯೇಯೈರ್ಮಹಾಬಲಃ ।
ಮಹಿಷೋ ಯುಯುಧೇ ತತ್ರ ದೇವ್ಯಾ ಸಾಕಮರಿಂದಮಃ ॥ ೫೪ ॥
ಲಕ್ಷಕೋಟಿಸಹಸ್ರಾಣಿ ಪ್ರಧಾನಾಃ ಸುರಯೂಥಪಾಃ ।
ಏಕೈಕಸ್ಯತು ಸೇನಾಯಾಸ್ತೇಷಾಂ ಸಂಖ್ಯಾ ನ ವಿದ್ಯತೇ ॥ ೫೫ ॥
ತೇ ಸರ್ವೇ ಯುಗಪದ್ದೇವೀಂ ಶಸ್ತ್ರೈರಾವವ್ರುರೋಜಸಾ ।
ಸಾಽಪಿ ದೇವೀ ತತೋ ಭೀಮಾ ದೈತ್ಯಮುಕ್ತಾಽಸ್ತ್ರಸಂಚಯಂ ॥ ೫೬ ॥
ಬಿಭೇದ ಲೀಲಯಾ ಬಾಣೈಃ ಸ್ವಕಾರ್ಮುಕವಿನಿಃಸೃತೈಃ ।
ಸಸರ್ಜ ದೈತ್ಯಕಾಯೇಷು ಬಾಣಪೂಗಾನ್ಯನೇಕಶಃ ॥ ೫೭ ॥
ದೇವ್ಯಾಶ್ರಯಬಲಾದ್ದೇವಾ ನಿರ್ಭಯಾ ದೈತ್ಯಯೂಥಪೈಃ ।
ಯುಯುಧುಃ ಸಂಯುಗೇ ಶಸ್ತ್ರೈರಸ್ತ್ರೈರಪ್ಯಾಯುಧಾಂತರೈಃ ॥ ೫೮ ॥
ತತೋ ದೇವಾ ಬಲೋತ್ಸಿಕ್ತಾ ದೇವೀಶಕ್ತ್ಯುಪಬೃಂಹಿತಾಃ ।
ನಿಃಶೇಷಮಸುರಾನ್ಸರ್ವಾನಾಯುಧೈರ್ನಿರಮೂಲಯನ್ ॥ ೫೯ ॥

---

ಆದಿಶೇಷನೇ ಮೊದಲಾದ ಸರ್ಪಗಳನ್ನೆಲ್ಲಾ ಕಳವಳಗೊಳಿಸುತ್ತ ಮೆರೆಯುತ್ತಿರುವ ಆ ದೇವಿಯನ್ನು ಕಂಡನು. ಆಗ ದಾನವರೆಲ್ಲರೂ ಆಯುಧಗಳನ್ನು ಮೇಲಕ್ಕೆತ್ತಿ ಹಿಡಿದು ಯುದ್ಧಕ್ಕೆ ಸಿದ್ಧರಾದರು.

೫೩–೫೪. ತರುವಾಯ ಲೆಕ್ಕವಿಲ್ಲದ ಅನೇಕ ಬಗೆಯ ಶಸ್ತ್ರಾಸ್ತ್ರಗಳಿಂದಲೂ, ಬಾಣಗಳಿಂದಲೂ, ಚಕ್ರ, ಗದೆ, ಮುಸಲಗಳಿಂದಲೂ, ರಥ ಗಜಾಶ್ವ ಪದಾತಿಗಳೆಂಬ ಚತುರ್ವಿಧ ಸೈನ್ಯದಿಂದಲೂ ಕೂಡಿದ ಅಸುರ ಸೇನೆಗೂ, ದುರ್ಗಾದೇವಿಗೂ ಭಯಂಕರ ಯುದ್ಧವು ಉಪಕ್ರಮವಾಯಿತು. ಆಗ ಭಯಂಕರನೂ, ಅರಿಮರ್ದನನೂ ಆದ ಮಹಿಷಾಸುರನು ಆ ದೇವಿಯೊಡನೆ ಕಾಳಗಮಾಡಿದನು.

೫೫. ಆ ಅಸುರನ ಬಳಿ ಲಕ್ಷಕೋಟಿ ಸಹಸ್ರಸಂಖ್ಯಾಕರಾದ ಸೈನ್ಯಾಧಿಕಾರಿಗಳಿದ್ದರು. ಅವರಲ್ಲಿ ಒಬ್ಬೊಬ್ಬರ ಅಧಿಕಾರದಲ್ಲಿಯೂ ಅಸಂಖ್ಯಾಕವಾದ ಸೈನ್ಯವಿದ್ದಿತು.

೫೬–೫೭. ಅವರೆಲ್ಲರೂ ಒಂದೇ ಬಾರಿ ಆ ದೇವಿಯನ್ನು ಮುತ್ತಿದರು. ಆಕೆಯು ಅವರೆಲ್ಲರಿಗೂ ಭಯಂಕರಳಾಗಿ, ತನ್ನ ಬಾಣಪರಂಪರೆಗಳಿಂದ ಅವರು ಪ್ರಯೋಗಿಸಿದ ಆಯುಧಗಳನ್ನೆಲ್ಲಾ ನಿರ್ಲಕ್ಷ್ಯವಾಗಿ ಪುಡಿಗುಟ್ಟಿದುದಲ್ಲದೆ ಅವರಮೇಲೂ ಬಾಣಗಳ ಮಳೆಗರೆದಳು.

೫೮–೫೯. ಆಗ ದೇವತೆಗಳೆಲ್ಲರೂ ದೇವಿಯ ಬೆಂಬಲದಿಂದ ಬಲದರ್ಪಿತರಾಗಿ ಬಗೆಬಗೆಯ ಶಸ್ತ್ರಾಸ್ತ್ರಗಳನ್ನು ಹಿಡಿದು ದೈತ್ಯಸೈನ್ಯಾಧಿಪತಿಗಳೊಡನೆ ನಿರ್ಭಯವಾಗಿ ಹೋರಾಡಿ ಅವರನ್ನೆಲ್ಲಾ ನಿರ್ಮೂಲಮಾಡಿದರು.

ಸ್ವಸೈನ್ಯೇತು ಕ್ಷಯಂ ಯಾತೇ ಸಂಕ್ರುದ್ಧೋ ಮಹಿಷಾಸುರಃ ।
ಚಾಪಮಾದಾಯ ವೇಗೇನ ವಿಕೃಷ್ಯ ಚ ಮಹಾಸ್ವನಂ ।
ಸಂಧಾಯ ಮುಮುಚೇ ಬಾಣಾನ್‌ದೇವಸೈನ್ಯೇಷು ಭೂಸುರಾಃ ॥ ೬೦ ॥
ಇಂದ್ರೇತು ದಶಸಾಹಸ್ರಂ ಯಮೇ ಪಂಚ ಸಹಸ್ರಕಂ ॥ ೬೧ ॥
ವರುಣೇಚಾಽಷ್ಟ ಸಾಹಸ್ರಂ ಕುಬೇರೇ ಷಟ್ಸಹಸ್ರಕಂ ।
ಸೂರ್ಯೇ ಚಂದ್ರೇ ಚ ವಹ್ನೌಚ ವಾಯೌ ವಸುಷು ಚಾಽಶ್ವಿನೋಃ ॥
ಅನ್ಯೇಷ್ವಪಿ ಚ ದೇವೇಷು ಮಹಿಷೋ ದಾನವೇಶ್ವರಃ ।
ಪ್ರತ್ಯೇಕಮಯುತಂ ಬಾಣಾನ್ ಮುಮುಚೇ ಬಲಿನಾಂ ವರಃ ॥ ೬೩ ॥
ಪಲಾಯಂತೇ ತತೋ ದೇವಾ ಮಹಿಷಾಸುರಮರ್ದಿತಾಃ ।
ದೇವೀಂ ಶರಣಮಾಜಗ್ಮುಸ್ತ್ರಾಹಿ ತ್ರಾಹೀತಿವಾದಿನಃ ॥ ೬೪ ॥
ತತೋ ದೇವೀಗಣಾನ್ಸ್ವಸ್ಯ ಭೂತವೇತಾಲಕಾದಿಕಾನ್ ।
ಯೂಯಂ ನಾಶಯತ ಕ್ಷಿಪ್ರಮಾಸುರಂ ಬಲಮಿತ್ಯಲಾತ್ ॥ ೬೫ ॥
ಅಹಂತು ಮಹಿಷಂ ಯುದ್ಧೇ ಯೋಧಯಾಮಿ ಬಲೋದ್ಧತಂ ।
ತತೋ ದೇವ್ಯಾ ಗಣೈಃ ಸರ್ವಮಾಸುರಂ ಕ್ಷತಮಾಶು ವೈ ॥ ೬೬ ॥

---

೬೦. ಎಲೈ ವಿಪ್ರರೇ! ತನ್ನ ಸೈನ್ಯವೆಲ್ಲವೂ ಈ ರೀತಿ ನಾಶವಾಗಲು ಕೋಪದಿಂದ ಉರಿದೆದ್ದ ಮಹಿಷನು ಬಿಲ್ಲನ್ನು ಹಿಡಿದು ಗರ್ಜಿಸುತ್ತ ಬಹುಬೇಗನೆ ಆ ದೇವತೆಗಳ ಮೇಲೆ ಬಾಣಗಳನ್ನು ಬಿಟ್ಟನು.

೬೧–೬೩. ಇಂದ್ರನ ಮೇಲೆ ಹತ್ತುಸಾವಿರ ಬಾಣಗಳನ್ನೂ, ಯಮನ ಮೇಲೆ ಐದುಸಾವಿರ ಬಾಣಗಳನ್ನೂ, ವರುಣನ ಮೇಲೆ ಎಂಟುಸಾವಿರವನ್ನೂ, ಕುಬೇರನಮೇಲೆ ಆರುಸಾವಿರವನ್ನೂ, ಸೂರ್ಯ, ಚಂದ್ರ, ಅಗ್ನಿ, ವಾಯು ವಸುಗಳಮೇಲೂ, ಅಶ್ವಿನೀದೇವತೆಗಳಮೇಲೂ, ಮಿಕ್ಕ ಇತರ ದೇವತೆಗಳ ಮೇಲೂ, ಪ್ರತ್ಯೇಕ ಪ್ರತ್ಯೇಕವಾಗಿ ಹತ್ತುಹತ್ತುಸಾವಿರ ಬಾಣಗಳನ್ನೂ ಒಮ್ಮೆಲೇ ಪ್ರಯೋಗಿಸಿದನು.

೬೪. ಬಳಿಕ ಮಹಿಷನ ಬಾಣಗಳಿಂದ ಪೆಟ್ಟುತಿಂದು ದಿಕ್ಕುತೋರದೆ ಓಡಿಹೋದ ದೇವತೆಗಳು 'ತ್ರಾಹಿ, ತ್ರಾಹಿ' ಎಂದು ಆ ದುರ್ಗೆಯನ್ನೇ ಮೊರೆ ಹೊಕ್ಕರು.

೬೫–೬೬. ಆಗ ದೇವಿಯು, ರಾಕ್ಷಸ ಸೈನ್ಯವನ್ನು ನಾಶಗೊಳಿಸಲು ಭೂತ ಭೇತಾಲಾದಿ ಗಣಗಳಿಗೆ ಅಪ್ಪಣೆಯಿತ್ತು ತಾನು ಮಾತ್ರ ಮಹಿಷನೊಂದಿಗೆ ಹೋರಾಡಲು ಹೊರಟಳು. ಕೂಡಲೆ ಆ ಭೂತಗಣಗಳು ಆ ರಾಕ್ಷಸಸೈನ್ಯವನ್ನು ನಾಶಮಾಡಿದುವು.

ತತಃ ಸೈನ್ಯೇ ಕ್ಷಯಂ ನೀತೇ ಗಣೈರ್ದೇವೀಪ್ರಚೋದಿತೈಃ ।
ಯೋದ್ಧುಕಾಮಃ ಸ ಮಹಿಷೋ ಗಣೈಃ ಸಾಕಂ ವ್ಯತಿಷ್ಠತ ॥ ೧೭ ॥
ಅತ್ರಾಂತರೇ ಮಹಾನಾದಃ ಸುಚಕ್ಷುಶ್ಚ ಮಹಾಹನುಃ ।
ಮಹಾಚಂಡೋ ಮಹಾಭಕ್ಷೋ ಮಹೋದರಮಹೋತ್ಕಟೌ ॥ ೧೮ ॥
ಪಂಚಾಸ್ಯಃ ಪಾದಚೂಡಶ್ಚ ಬಹುನೇತ್ರಃ ಪ್ರಬಾಹುಕಃ ।
ಏಕಾಕ್ಷಸ್ತ್ವೇಕಪಾದಶ್ಚ ಬಹುಪಾದೋಽಪ್ಯಪಾದಕಃ ॥ ೧೯ ॥
ಏತೇಚಾಽನ್ಯೇಚ ಬಹವೋ ಮಹಿಷಾಸುರಮಂತ್ರಿಣಃ ।
ಯೋದ್ಧುಕಾಮಾ ರಣೇ ದೇವ್ಯಾಃ ಪುರತಸ್ತ್ವವತಸ್ಥಿರೇ ॥ ೨೦ ॥
ಸಿಂಹವಾಹನಮಾರುಹ್ಯ ತತೋ ದೇವೀ ಮನೋಜವಂ ।
ಪ್ರಲಯಾಂಬುದನಿರ್ಘೋಷಂ ಚಾಪಮಾದಾಯ ಭೈರವಂ ॥ ೨೧ ॥
ವಿಸ್ಫೋಟ್ಯ ಮುಮುಚೇ ಬಾಣಾನ್ವಜ್ರವೇಗಸಮಾನ್ಯುಧಿ ।
ದಶಲಕ್ಷ ಗಜೈಶ್ಚಾಪಿ ಶತಲಕ್ಷೈಶ್ಚ ವಾಜಿಭಿಃ ॥ ೨೨ ॥
ಶತಲಕ್ಷೈರಥೈಶ್ಚಾಽಪಿ ಲಕ್ಷಾಽಯುತಪದಾತಿಭಿಃ ।
ಯುಕ್ತೋ ಮಹಾಹನುರ್ದೈತ್ಯೋ ದೇವ್ಯಾ ಯುಧಿ ನಿಪಾತಿತಃ ॥ ೨೩ ॥
ಸೈನ್ಯೇ ಚ ತಸ್ಯ ನಿಹತಾ ದೇವ್ಯಾ ಬಾಣೈರ್ದ್ವಿಜೋತ್ತಮಾಃ ।
ಲಕ್ಷಕೋಟಿಸಹಸ್ರಾಣಿ ಪ್ರಧಾನಾಽಸುರನಾಯಕಾಃ ॥ ೨೪ ॥

---

೧೭. ತನ್ನ ಸೈನ್ಯವು ನಾಶವಾದುದರಿಂದ ಮಹಿಷನು, ದೇವಿಯು ಪ್ರೇರಿಸಿ ಕಳುಹಿದ ಆ ಭೂತಗಣಗಳ ಮೇಲೆ ಯುದ್ಧಮಾಡಲು ತನ್ನ ಸೇನೆಯೊಡನೆ ಹೊರಟನು.

೧೮–೨೦. ಆಗ ಆತನ ಮಂತ್ರಿಗಳಾದ ಮಹಾನಾದ, ಸುಚಕ್ಷು, ಮಹಾಹನು, ಮಹಾಚಂಡ, ಮಹಾಭಕ್ಷ, ಮಹೋದರ, ಮಹೋತ್ಕಟ, ಪಂಚಾಸ್ಯ, ಪಂಚಚೂಡ, ಬಹುನೇತ್ರ, ಪ್ರಬಾಹುಕ, ಏಕಾಕ್ಷ, ಏಕನಾದ, ಪಹುಪಾದ, ಅಪಾದಕ, ಮುಂತಾದವರು ಯುದ್ಧಮಾಡುವ ಆಸೆಯಿಂದ ಆ ದೇವಿಯನ್ನೆದುರಿಸಿ ಮುಂದೆಬಂದು ನಿಂತರು.

೨೧–೨೩. ಆಗ ಆಕೆಯು ಮನೋವೇಗವುಳ್ಳ ಸಿಂಹವಾಹನವನ್ನೇರಿ ಪ್ರಳಯಕಾಲದ ಮೇಘದಂತೆ ಭಯಂಕರ ನಾದವುಳ್ಳ ಬಿಲ್ಲನ್ನು ಹಿಡಿದು ಹೆದೆಯೇರಿಸಿ ವಜ್ರಾಯುಧದಂತೆ ತೀವ್ರವಾದ ಅಲಗುಗಳ ಮಳೆಗರೆದು ಹತ್ತುಲಕ್ಷ ಆನೆಗಳೊಂದಿಗೂ, ನೂರುಲಕ್ಷ ಕುದುರೆಗಳಿಂದಲೂ, ನೂರುಲಕ್ಷ ತೇರುಗಳಿಂದಲೂ, ಅಯುತಲಕ್ಷ ಕಾಲಾಳುಗಳಿಂದಲೂ ಕೂಡಿದ ಮಹಾಹನುವೆಂಬ ಮಂತ್ರಿಯನ್ನು ಮೊದಲು ಕೆಡವಿ ಕೊಂದಳು.

೨೪–೨೭. ಎಲೈ ಭೂಸುರರೇ! ಬಳಿಕ ಒಂದೇ ಯಾಮದಲ್ಲಿಯೇ ಆ

ಮಹಿಷಸ್ಯಹಿ ವಿದ್ಯಂತೇ ಮಹಾಬಲಪರಾಕ್ರಮಾಃ ।
ಏಕೈಕಸ್ಯ ಪ್ರಧಾನಸ್ಯ ಚತುರಂಗಬಲಂ ತಥಾ ॥ ೭೫ ॥
ಮಹಾಹನೋರ್ಯಥಾ ವಿಪ್ರಾಸ್ತಥೈವಾಽಸ್ತಿ ಮಹದ್ಬಲಂ ।
ತತ್ಸರ್ವಂ ನಿಹತಂ ದೇವೀಶರೈಃ ಕಾಂಚನಪುಂಖಿತೈಃ ॥ ೭೬ ॥
ಯಾಮಮಾತ್ರೇಣ ವಿಪ್ರೇಂದ್ರಾಸ್ತದದ್ಭುತಮಿವಾಽಭವತ್ ॥ ೭೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ದೇವೀಮಹಿಷಾಸುರಯುದ್ಧ ವರ್ಣನಂ"ನಾಮ ಷಷ್ಠೋಽಧ್ಯಾಯಃ

---

ದುರ್ಗಾದೇವಿಯು ಹಿಂದೆ ಹೇಳಿದ ಮಹಾಬಲಪರಾಕ್ರಮಸಂಪನ್ನರಾದ ಲಕ್ಷ ಕೋಟಿಸಹಸ್ರ ಪ್ರಧಾನ ದೈತ್ಯಸೇನಾಪತಿಗಳೊಬ್ಬೊಬ್ಬರ ವಶದಲ್ಲಿಯೂ, ಮಹಾ ಹನುವಿನ ಬಳಿಯಲ್ಲಿಯೂ ಇದ್ದ ಅಪಾರವಾದ ಚತುರಂಗಬಲವೆಲ್ಲವನ್ನೂ ಕೊನೆಗಾಣಿಸಿದಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ದೇವೀಮಹಿಷಾಸುರಯುದ್ಧವರ್ಣನ"ವೆಂಬ ಆರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಮೋಽಧ್ಯಾಯಃ

### ಮಹಿಷಾಸುರಸಂಹಾರವರ್ಣನಂ

ಶ್ರೀ ಸೂತ ಉವಾಚ :—

ಸ್ವಸೈನ್ಯಮವಲೋಕ್ಯಾಽಥ ಮಹಿಷೋ ದಾನವೇಶ್ವರಃ ।
ಹತಂ ದೇವ್ಯಾ ಮಹಾಕ್ರೋಧಾಚ್ಚಂಡಕೋಪಮಥಾಽಬ್ರವೀತ್ ॥ ೧ ॥

ಮಹಿಷ ಉವಾಚ :—

ಚಂಡಕೋಪ ಮಹಾವೀರ್ಯ ಯುಧ್ಯಸ್ವೈನಾಂ ದುರಾತ್ಮಿಕಾಂ ।
ತಥಾಽಸ್ತ್ವಿತಿ ಸ ಚೋಕ್ತ್ವಾಽಥ ಚಂಡಕೋಪಃ ಪ್ರತಾಪವಾನ್ ।
ಅವಾಕಿರದ್ಬಾಣವರ್ಷೈರ್ದೇವೀಂ ಸಮರಮೂರ್ಧನಿ ॥ ೨ ॥
ಬಾಣಜಾಲಾನಿ ತಸ್ಯಾಶು ಚಂಡಕೋಪಸ್ಯ ಲೀಲಯಾ ॥ ೩ ॥
ಛಿತ್ವಾ ಜಘಾನ ಶಸ್ತ್ರೇಣ ಚಂಡಕೋಪಸ್ಯ ಸಾಽಂಬಿಕಾ ।
ಚಕರ್ತ ವಾಜಿನೋಽಪ್ಯಸ್ಯ ಸಾರಥಿಂ ಚ ಧ್ವಜಂ ಧನುಃ ।
ಉನ್ಮಮಾಥ ರಥಂಚಾಽಪಿ ತಂ ಬಾಣೈರ್ಹೃದ್ಯತಾಡಯತ್ ॥ ೪ ॥
ಸ ಭಗ್ನಧನ್ವಾ ವಿರಥೋ ಹತಾಽಶ್ವೋ ಹತಸಾರಥಿಃ ॥ ೫ ॥

---

## ಕನ್ನಡದ ಅನುವಾದ

### ಮಹಿಷಾಸುರಸಂಹಾರವರ್ಣನ

೧–೨. ಸೂತನು ಹೇಳುತ್ತಾನೆ:—ಎಲೈ ವಿಪ್ರರೇ! ಬಳಿಕ ಆ ದುರ್ಗಾ ದೇವಿಯು ತನ್ನ ಸೈನ್ಯವೆಲ್ಲವನ್ನೂ ನಾಶಮಾಡಲು, ದಾನವೇಶ್ವರನಾದ ಆ ಮಹಿಷಾಸುರನು ಬಹಳವಾಗಿ ಕೋಪಗೊಂಡು ಸೇನಾಧಿಪತಿಯಾದ ಚಂಡಕೋಪನನ್ನು ಕುರಿತು, "ಎಲೈ ಮಹಾಬಲಶಾಲಿಯಾದ ಚಂಡಕೋಪನನೇ! ಈ ದುಷ್ಟಳೊಂದಿಗೆ ನೀನು ಯುದ್ಧಮಾಡು'' ಎಂದು ಅಪ್ಪಣೆಮಾಡಿದನು. ಅವನು ಅಂತೆಯೇ ಆಗಲೆಂದು ಒಪ್ಪಿ ರಣಾಂಗದಲ್ಲಿ ಮುನ್ನುಗ್ಗಿ ಹೊರಟು ಆಕೆಯ ಮೇಲೆ ಬಾಣಗಳ ಮಳೆಯನ್ನು ಕರೆದನು.

೩–೪. ಆಕೆಯು ಲೀಲೆಯಿಂದಲೇ ಅವುಗಳೆಲ್ಲವನ್ನೂ ತುಂಡುಮಾಡಿದುದಲ್ಲದೆ, ಆ ಚಂಡಕೋಪನ ಸಾರಥಿಯನ್ನೂ, ಕುದುರೆಗಳನ್ನೂ, ಧ್ವಜವನ್ನೂ, ಬಿಲ್ಲನ್ನೂ, ರಥವನ್ನೂ ಕತ್ತರಿಸಿ ಅನೇಕ ಬಾಣಗಳನ್ನೆಸೆದು ಅವನ ಎದೆಯನ್ನು ತುಂಬಿದಳು.

೫–೬. ಬಿಲ್ಲು, ರಥ, ಕುದುರೆಗಳು ಮತ್ತು ಸಾರಥಿಗಳು ದೇವಿಯ ಬಾಣಗಳಿಂದ ನಾಶವಾದ ಬಳಿಕ ಮಹಾಸುರನಾದ ಆ ಚಂಡಕೋಪನನಾದರೊ ಕತ್ತಿ

ಚಂಡಕೋಪಸ್ತತೋ ದೇವೀಂ ಖಡ್ಗಚರ್ಮಧರೋಽಭ್ಯಗಾತ್ ।
ಖಡ್ಗೇನ ಸಿಂಹಮಾಜಘ್ನೇ ದೇವ್ಯಾ ವಾಹಂ ಮಹಾಸುರಃ ॥ ೬ ॥
ದೇವೀಮಪಿ ಭುಜೇ ಸವ್ಯೇ ಖಡ್ಗೇನ ಪ್ರಜಘಾನ ಸಃ ।
ಖಡ್ಗೋ ದೇವ್ಯಾ ಭುಜೇ ಸವ್ಯೇ ವ್ಯಶೀರ್ಯತ ಸಹಸ್ರಧಾ ॥ ೭ ॥
ತತಃ ಶೂಲೇನ ಮಹತಾ ಚಂಡಕೋಪಂ ತದಾಽಂಬಿಕಾ ।
ಜಘಾನ ಹೃದಯೇ ಸೋಽಪಿ ಪಪಾತ ಚ ಮಮಾರ ಚ ॥ ೮ ॥
ಚಂಡಕೋಪೇ ಹತೇ ತಸ್ಮಿನ್ಮಹಾವೀರ್ಯೇ ಮಹಾಬಲೇ ।
ಚಿತ್ರಭಾನುರ್ಗಜಾರೂಢೋ ದೇವೀಂ ತಾಮಭ್ಯಧಾವತ ॥ ೯ ॥
ದಿವ್ಯಾಂ ಶಕ್ತಿಂ ಸಸರ್ಜಾಽಥ ಮಹಾಘಂಟಾರವಾಕುಲಾಂ ।
ನ್ಯವಾರಯತ ಹುಂಕಾರೈರ್ದೇವೀ ಶಕ್ತಿಂ ನಿರಾಕುಲಾಂ ॥ ೧೦ ॥
ತತಃ ಶೂಲೇನ ಸಾ ದೇವೀ ಚಿತ್ರಭಾನುಂ ವ್ಯದಾರಯತ್ ।
ಮೃತೇ ತಸ್ಮಿಂಸ್ತತೋ ಯುದ್ಧೇ ಕರಾಲೋ ದ್ರುತಮಭ್ಯಗಾತ್ ॥ ೧೧ ॥
ಕರಮುಷ್ಟಿಪ್ರಹಾರೇಣ ಸೋಽಪಿ ದೇವ್ಯಾ ನಿಪಾತಿತಃ ।
ತತೋ ದೇವೀ ಮದೋನ್ಮತ್ತಂ ಗದಯಾ ವ್ಯಾಸುಮಾತನೋತ್ ॥ ೧೨ ॥
ಬಾಷ್ಕಲಂ ಪಟ್ಟಿಶೇನಾಪಿ ಚಕ್ರೇಣಾಽಪಿ ತಥಾಽಂತಕಂ ।
ಪ್ರಾಹಿಣೋದ್ಯಮಲೋಕಾಯ ದುರ್ಗಾದೇವೀ ದ್ವಿಜೋತ್ತಮಾಃ ॥ ೧೩ ॥

---

ಗುರಾಣಿಗಳನ್ನು ಹಿಡಿದು ಮುನ್ನುಗ್ಗಿ ಹೋಗಿ, ಕತ್ತಿಯಿಂದ ಆ ದೇವಿಯ ವಾಹನವಾದ ಸಿಂಹವನ್ನು ಹೊಡೆದನು.

೭. ತರುವಾಯ ಆ ದೈತ್ಯನು ಆ ದುರ್ಗಾದೇವಿಯ ಬಲಭುಜವನ್ನು ಖಡ್ಗದಿಂದ ಹೊಡೆದನು. ದೇವಿಯ ಭುಜಕ್ಕೆ ತಾಕಿದ ಆ ಖಡ್ಗವಾದರೊ ಸಾವಿರಾರು ಚೂರುಗಳಾಗಿ ಮುರಿದುಹೋಯಿತು.

೮. ಇದರಿಂದ ಆಕೆಯು ಬಹಳವಾಗಿ ರೋಷಗೊಂಡು ಮಹತ್ತರವಾದ ಶೂಲದಿಂದ ಆ ಚಂಡಕೋಪನನ ಎದೆಗೆ ಹೊಡೆದಳು. ಆಗ ಆ ದೈತ್ಯನು ಮಡಿದು ನೆಲಕ್ಕುರುಳಿದನು.

೯–೧೩. ಎಲೈ ವಿಪ್ರರೇ! ಹೀಗೆ ಮಹಾಬಲನಾದ ಆ ಚಂಡಕೋಪನನು ಮಡಿದಮೇಲೆ ಚಿತ್ರಭಾನುವೆಂಬ ರಾಕ್ಷಸನು ಆನೆಯನ್ನೇರಿ ಬಂದು ಅನೇಕ ಕಿರುಘಂಟೆಗಳ ಧ್ವನಿಮಾಡುವಂತಹ ಶಕ್ತ್ಯಾಯುಧವನ್ನು ಆಕೆಯಮೇಲೆ ಬೀಸಿದನು. ದೇವಿಯು ಅದನ್ನು ಕೇವಲ ಹುಂಕಾರಮಾತ್ರದಿಂದಲೇ ಹಿಂದೋಡಿಸಿ ಅದೇ ಶೂಲದಿಂದಲೇ ಆತನನ್ನು ಸೀಳಿದಳು. ಬಳಿಕ ಕರಾಳನೆಂಬುವನು ಓಡಿ ಬರಲು ಅವನನ್ನು ಮುಷ್ಟಿಪ್ರಹಾರದಿಂದಲೇ ಕೊನೆಗಾಣಿಸಿದಳು. ಬಳಿಕ ಮದೋನ್ಮತ್ತನನ್ನು ಗದೆಯಿಂದ ಕುಟ್ಟಿ ಕೆಡವಿದಳು. ಬಾಷ್ಕಲನನ್ನು ಪಟ್ಟಿಸಾ

ಏವಮನ್ಯಾನ್ಮಹಾಕಾಯಾನ್ಮಂತ್ರಿಣೋ ಮಹಿಷಸ್ಯ ಚ ।
ಶೂಲೇನ ಪ್ರೋಥಯಿತ್ವಾಽಥ ಪ್ರಾಹಿಣೋದ್ಯಮಸಾದನಂ ॥ ೧೪ ॥
ಆತ್ಮಸೈನ್ಯೇ ಹತೇ ತ್ವೇವಂ ದುರ್ಗಯಾ ಮಹಿಷಾಸುರಃ ।
ಮಾಹಿಷೇಣಾಽಥರೂಪೇಣ ಗಣಾನ್ದೇವ್ಯಾ ಅಭಕ್ಷಯತ್ ॥ ೧೫ ॥
ತುಂಡೇನ ನಿಜಘಾನ್ಯೈಕಾನ್ ಖುರಾಘಾತೈಸ್ತಥಾಽಪರಾನ್ ।
ನಿಃಶ್ವಾಸವಾಯುಭಿಶ್ಚಾನ್ಯಾನ್ ಪಾತಯಾಮಾಸ ರೋಷಿತಃ ॥ ೧೬ ॥
ದೇವ್ಯಾ ಭೂತಗಣಂ ತ್ವೇವಂ ನಿಹತ್ಯ ಮಹಿಷಾಸುರಃ ।
ಸಿಂಹಂ ಮಾರಯಿತುಂ ದೇವ್ಯಾಶ್ಚುಕ್ರೋಧ ಚ ನನಾದ ಚ ॥ ೧೭ ॥
ತತಃ ಸಿಂಹೋಽಭವತ್ಕ್ರುದ್ಧೋ ಮಹಾವೀರ್ಯೋ ಮಹಾಬಲಃ ।
ಖುರಾಭಿಘಾತನಿರ್ಭಿನ್ನಮಹೀತಲಮಹೀಧರಃ ।
ಮಹಿಷಾಸುರಮಾಯಾಂತಂ ನಖೈರೇನಂ ವ್ಯದಾರಯತ್ ॥ ೧೮ ॥
ಚಂಡಿಕಾಽಪಿ ತತಃ ಕ್ರುದ್ಧಾ ವಧೇ ತಸ್ಯಾಽಕರೋನ್ಮತಿಂ ॥ ೧೯ ॥

---

ಯುಧದಿಂದಲೂ, ಅಂತಕನನ್ನು ಚಕ್ರದಿಂದಲೂ ಯಮಲೋಕಕ್ಕೆ ಕಳುಹಿಸಿದಳು.

೧೪. ಇಂತೆಯೇ ಮಹಾಕಾಯರಾದ ಮಹಿಷನ ಮಿಕ್ಕ ಮಂತ್ರಿಗಳನ್ನೂ ಶೂಲದಿಂದಲೇ ಸಿಗಿದೆಸೆದು ಅಂತಕನಬಳಿಗೆ ಬೀಳ್ಕೊಟ್ಟಳು.

೧೫–೧೬. ಈ ಬಗೆಯಾಗಿ ತನ್ನ ಸೈನ್ಯವೆಲ್ಲವೂ ದೇವಿಯದೆಸೆಯಿಂದ ಕೊನೆಗಾಣಲು ಮಹಿಷಾಸುರನು ಮಹಿಷಾಕಾರವನ್ನೇ ತಾಳಿ ರಣರಂಗಕ್ಕೆ ಹೊರಟು ಆಕೆಯ ಕಡೆಯ ಭೂತಗಣಗಳಲ್ಲಿ ಕೆಲವರನ್ನು ತಿನ್ನುತ್ತ ಬಂದನು. ಮತ್ತೆ ಕೆಲವರನ್ನು ಮುಖದಿಂದ ಗುದ್ದಿ ಕೆಡವಿದನು. ಇನ್ನೂ ಕೆಲವರನ್ನು ಗೊರಸುಗಳಿಂದ ತುಳಿದನು. ರೋಷದ ನಿಟ್ಟುಸಿರುಗಳಿಂದಲೇ ಹಲವರನ್ನು ತೂರಿಹೋಗುವಂತೆ ಮಾಡಿದನು.

೧೭. ಹೀಗೆ ಆ ಅಸುರನು ದೇವಿಯ ಭೂತಗಣಗಳನ್ನು ಧ್ವಂಸಮಾಡಿ ಆಕೆಯ ವಾಹನವಾದ ಸಿಂಹವನ್ನು ಕೊಲ್ಲಲು ಮಹಾಸಿಂಹದಂತೆಯೆ ಕೆರಳಿ ಒಮ್ಮೆ ಗರ್ಜಿಸಿದನು.

೧೮. ಇಂತು ಆ ಮಹಿಷನು ಗರ್ಜಿಸುತ್ತಲೇ ಮಹಾಬಲವುಳ್ಳ ಆ ಸಿಂಹವಾದರೊ ತನ್ನ ಪಂಜದ ಏಟುಗಳಿಂದ ಭೂಮಿಯನ್ನೂ, ಬೆಟ್ಟಗಳನ್ನೂ ಸೀಳುತ್ತ ತನ್ನಕಡೆಗೆ ಬರುತ್ತಿದ್ದ ಆ ಮಹಿಷನನ್ನು ಉಗುರುಗಳಿಂದ ಬಗಿಯಿತು.

೧೯–೨೦. ಅದೇ ಸಮಯದಲ್ಲಿಯೆ ಕುಪಿತಳಾದ ದೇವಿಯು ಸಹ ಅವನನ್ನು ಕೊಲ್ಲಲು ನಿಶ್ಚಯಿಸಿ ಪಾಶಗಳಿಂದಾತನನ್ನು ಬಿಗಿದು ಕಟ್ಟಿದಳು. ಮಹಾಬಲ

ಬಬಂಧ ಪಾಶೈರ್ಮಹಿಷಂ ಚಂಡಿಕಾ ಕೋಪಸಮೂರ್ಛಿತಾ ।
ಮೋಚಯಿತ್ವಾ ತತಃ ಪಾಶಾಂಸ್ತ್ಯಕ್ತ್ವಾಮಾಹಿಷವೇಷವಾನ್ ।
ಸಿಂಹವೇಷೋಽಭವದ್ದೈತ್ಯೋ ಮಹಾಬಲಪರಾಕ್ರಮಃ ॥ ೨೦ ॥
ದೇವೀ ತಸ್ಯ ಶಿರೋ ಯಾವಚ್ಛೇತ್ತುಂ ಬುದ್ಧಿಮಧಾರಯತ್ ।
ತಾವತ್ಸಪುರುಷೋ ಭೂತ್ವಾ ಖಡ್ಗಪಾಣಿರದೃಶ್ಯತ ॥ ೨೧ ॥
ಅಥ ತಂ ಪುರುಷಂ ದೇವೀ ಖಡ್ಗಹಸ್ತಂ ಶರೋತ್ಕರೈಃ
ಜಘಾನ ತೀಕ್ಷ್ಣಧಾರಾಗ್ರೈಃ ಪರಮರ್ಮವಿದಾರಣೈಃ । ॥ ೨೨ ॥
ತತಃ ಸ ಪುರುಷೋ ವಿಪ್ರಾ ಗಜೋಽಭೂದ್ಧಸ್ತದಂತವಾನ್ ॥ ೨೩ ॥
ದುರ್ಗಾಯಾ ವಾಹಸಂ ಸಿಂಹಂ ಕರೇಣ ವಿಚಕರ್ಷ ಚ ।
ತತಃ ಸಿಂಹಃ ಕರಂ ತಸ್ಯ ವಿಚಕರ್ತ ನಖಾಂಕುರೈಃ ॥ ೨೪ ॥
ಭೂಯೋ ಮಹಾಸುರೋ ಜಾತೋ ಮಾಹಿಷಂ ವೇಷಮಾಶ್ರಿತಃ ।
ತತಃ ಕ್ರುದ್ಧಾ ಭದ್ರಕಾಲೀ ಮಹತ್ಪಾನಮಸೇವತ ॥ ೨೫ ॥
ತತಃ ಪಾನವಶಾನ್ಮತ್ತಾ ಜಹಾಸಾಽರುಣಲೋಚನಾ ।
ಮಹಿಷಃ ಸೋಽಪಿ ಗರ್ವೇಣ ಶೃಂಗಾಭ್ಯಾಂ ಪರ್ವತೋತ್ಕರಾನ್ ॥ ೨೬ ॥
ಚಂಡಿಕಾಂ ಪ್ರತಿಚಿಕ್ಷೇಪ ಸಾ ಚ ತಾನಚ್ಛಿನಚ್ಛರೈಃ ।
ತತೋ ದೇವೀ ಜಗನ್ಮಾತಾ ಮಹಿಷಾಸುರಮಬ್ರವೀತ್ ॥ ೨೭ ॥

---

ಪರಾಕ್ರಮಿಯಾದ ಆ ರಾಕ್ಷಸನು ಪಾಶಬಂಧನವನ್ನು ಬಿಡಿಸಿಕೊಂಡು ಕೋಣನ ರೂಪವನ್ನು ತೊರೆದು ಸಿಂಹವೇಷವನ್ನು ತಾಳಿದನು.

೨೧. ದೇವಿಯು ಅವನನ್ನು ಕೊಲ್ಲಬೇಕೆನ್ನುವಷ್ಟರಲ್ಲಿಯೇ ಅವನು ಆ ರೂಪವನ್ನೂ ತೊರೆದು, ಮನುಷ್ಯರೂಪವನ್ನು ಧರಿಸಿ ಕತ್ತಿಯನ್ನು ಹಿಡಿದು ನಿಂತನು.

೨೨. ಆಗಲಾ ದುರ್ಗಾದೇವಿಯು ಹರಿತವಾದ ಮೊನೆಗಳುಳ್ಳ ಮರ್ಮ ಭೇದಕಗಳಾದ ಅನೇಕ ಬಾಣಗಳನ್ನವನಮೇಲೆ ಪ್ರಯೋಗಿಸಿದಳು. ಆ ಸಮಯದಲ್ಲಿ ಮಹಿಷನು ಆ ಮಾನವರೂಪವನ್ನೂ ತೊರೆದು ದಂತಗಳೂ, ಸೊಂಡಿಲೂ ಉಳ್ಳ ಮಹಾಗಜವಾದನು.

೨೩–೨೪. ತರುವಾಯ ಆ ದೈತ್ಯನು ಆಕೆಯ ವಾಹನವನ್ನು ಸೊಂಡಲಿನಿಂದೆಳೆಯತೊಡಗಿದನು. ಆಗ ದೇವಿಯ ವಾಹನವಾದ ಸಿಂಹವಾದರೊ ಆ ಆನೆಯ ಸೊಂಡಿಲನ್ನು ಉಗುರುಗಳಿಂದ ಸಿಗಿಯಿತು.

೨೫–೨೭. ತರುವಾಯ ದಾನವನು ತನ್ನ ನಿಜರೂಪವಾದ ಮಹಿಷದೇಹವನ್ನೇ ತಾಳಿದನು. ಆಗ ಭದ್ರಕಾಳಿಯು ಸಹಿಸಲಸದಳವಾದ ಕೋಪವನ್ನು ತಾಳಿ, ವೀರಪಾನದಿಂದ ಮದವೇರಿ ಕೆಂಗಣ್ಣುಳ್ಳವಳಾಗಿ ಅಟ್ಟಹಾಸಮಾಡಿದಳು.

ದೇವ್ಯುವಾಚ :—
ಕುರು ಗರ್ವಂ ಕ್ಷಣಂ ಮೂಢ ಮಧು ಯಾವತ್ಪಿಬಾಮ್ಯಹಂ ।
ನಿವೃತ್ತಮಧುಪಾನಾಽಹಂ ತ್ವಾಂ ನಯಿಷ್ಯೇ ಯಮಕ್ಷಯಂ ॥ ೨೮ ॥
ಹತೇ ತ್ವಯಿ ದುರಾಧರ್ಷೇ ಮಯಾ ದೈವತಕಂಟಕೇ ।
ಸ್ವಂ ಸ್ವಂ ಸ್ಥಾನಂ ಪ್ರಪದ್ಯಂತಾಂ ಸಿದ್ಧಾಃ ಸಾಧ್ಯಾ ಮರುದ್ಗಣಾಃ ॥ ೨೯ ॥
ಉಕ್ತ್ವೇವಂ ತಾಡಯಾಮಾಸ ಮುಷ್ಟಿನಾ ಮಹಿಷಾಸುರಂ ।
ತಾಡಿತೋಽಯಂ ತತೋ ದೇವ್ಯಾ ಮಹಿಷೋ ಭೃಶವಿಹ್ವಲಃ ॥ ೩೦ ॥
ದಕ್ಷಿಣಸ್ಯೋದಧೇಸ್ತೀರೇ ಪ್ರದುದ್ರಾವ ತ್ವರಾನ್ವಿತಃ ।
ಅನುದುದ್ರಾವ ತಂ ದೇವೀ ಸಿಂಹಮಾರುಹ್ಯ ವಾಹನಂ ॥ ೩೧ ॥
ಅನುದ್ರುತಸ್ತತೋ ದೇವ್ಯಾ ಮಹಿಷೋ ದಾನವೇಶ್ವರಃ ।
ಧರ್ಮಪುಷ್ಕರಿಣೀಂ ತೋಯೇ ದಶಯೋಜನಮಾಯತೇ ॥ ೩೨ ॥
ಪ್ರವಿಶ್ಯಾಂತರ್ಹಿತಸ್ತಸ್ಥೌ ದುರ್ಗಾತಾಡನವಿಹ್ವಲಃ ।
ತತೋ ದುರ್ಗಾ ಸಮಾಸಾದ್ಯ ಧರ್ಮಪುಷ್ಕರಿಣೀತಟಂ ॥ ೩೩ ॥
ನ ದದರ್ಶಾಽಸುರಂ ತತ್ರ ಮಹಿಷಂ ಚಂಡಿಕಾ ತದಾ ।
ಅಶರೀರಾ ತತೋ ವಾಣೀ ದುರ್ಗಾದೇವೀಮಭಾಷತ ॥ ೩೪ ॥

---

ಮಹಿಷನು ಕೂಡ ಕೊಬ್ಬಿನಿಂದ ಪರ್ವತಶೃಂಗಗಳಂತಿರುವ ತನ್ನ ಕೊಂಬುಗಳಿಂದಾಕೆಯನ್ನು ತಿವಿಯಬಂದನು. ಆಕೆಯು ಅವುಗಳನ್ನು ಬಾಣಗಳಿಂದಲೇ ಕಡಿದು ಆವನನ್ನು ಕುರಿತು ಹೀಗೆಂದಳು :—

೨೮. ದೇವಿಯು ಹೇಳುತ್ತಾಳೆ:—"ಎಲೆವೊ ಮೂಢನೇ! ಇನ್ನೆಷ್ಟುಹೊತ್ತು ಗರ್ವಿಸುತ್ತೀಯೆ? ಕ್ಷಣಕಾಲ; ನಾನು ಮಧುಪಾನಮಾಡುವವರೆಗೇ ಅಲ್ಲವೆ? ಗರ್ವಿಸು! ಬಳಿಕ ನಿನ್ನನ್ನು ಯಮನ ಮನೆಗಟ್ಟುವೆನು.

೨೯. ಕಂಟಕನಾದ ನಿನ್ನ ಕಾಟವು ತಪ್ಪಿದಬಳಿಕ ಸಿದ್ಧಸಾಧ್ಯಮರುತ್ತುಗಳೇ ಮುಂತಾದ ದೇವತೆಗಳೆಲ್ಲರೂ ತಮ್ಮತಮ್ಮ ಸ್ಥಾನಗಳನ್ನು ಪಡೆದು ಸುಖಪಡೆಯಲಿ."

೩೦–೩೧. ಎಂದು ಹೇಳುತ್ತಾ ಆ ಜಗನ್ಮಾತೆಯು ಮುಷ್ಟಿಯಿಂದಾತನನ್ನು ಗುದ್ದಿದಳು. ಆದರಿಂದ ಅತಿಯಾಗಿ ಕಳವಳಗೊಂಡ ಆ ಮಹಿಷನು ದಕ್ಷಿಣದ ಕಡಲಿನ ದಡಕ್ಕೆ ಒಂದೇ ಸಮನಾಗಿ ಓಡಿದನು. ದೇವಿಯೂ ಸಿಂಹವಾಹನವನ್ನೇರಿ ಆತನನ್ನಟ್ಟಿಹೋದಳು.

೩೨–೩೩. ಆಗ ಮಹಿಷನು ಮತ್ತೆ ಆಕೆಯ ಹೊಡೆತಕ್ಕೆ ಹೆದರಿ ಆಕೆಯಿಂದ ತಪ್ಪಿಸಿಕೊಳ್ಳಲು ಹತ್ತುಗಾವುದದ ಅಗಲವುಳ್ಳ ಧರ್ಮಪುಷ್ಕರಿಣಿಯನ್ನು ಹೊಕ್ಕನು. ದುರ್ಗೆಯೂ ಅಲ್ಲಿಗೆ ಹೋದಳು. ಆತನು ಅಲ್ಲಿ ಕಾಣದಿರಲು ಆದೇ

ಭದ್ರಕಾಲಿ ಮಹಾದೇವಿ ಮಹಿಷೋ ದಾನವಸ್ತ್ವಯಾ ।
ತಾಡಿತೋ ಮುಷ್ಟಿನಾ ಭದ್ರೇ ಧರ್ಮಪುಷ್ಕರಿಣೀಜಲೇ ॥ ೩೫ ॥
ಅಸ್ಮಿನ್ನಂತರ್ಹಿತಃ ಶೇತೇ ಭಯಾತೋರ್ ಮಾರಯಸ್ವ ತಂ ।
ಯೇನ ಕೇನಾಪ್ಯುಪಾಯೇನ ಚೈನಂ ಪ್ರಾಣೈರ್ವಿಯೋಜಯ ॥ ೩೬ ॥
ಏವಂ ವಾಚಾಽಶರೀರಿಣ್ಯಾ ಕಥಿತಾ ಚಂಡಿಕಾ ತದಾ ।
ಪ್ರಾಹ ಸ್ವವಾಹನಂ ಸಿಂಹಂ ಅಸುರೇಂದ್ರವಧೋದ್ಯತಾ ॥ ೩೭ ॥
ಮೃಗೇಂದ್ರ ಸಿಂಹವಿಕ್ರಾಂತ ಮಹಾಬಲಪರಾಕ್ರಮ ।
ಧರ್ಮಪುಷ್ಕರಿಣೀತೋಯಂ ನಿಃಶೇಷಂ ಪೀಯತಾಂ ತ್ವಯಾ ॥ ೩೮ ॥
ದೇವ್ಯೈವಮುಕ್ತಃ ಪಂಚಾಸ್ಯೋ ಧರ್ಮಪುಷ್ಕರಿಣೀಜಲಂ ।
ನಿಃಶೇಷಂ ಚ ಪಪೌ ವಿಪ್ರಾ ಯಥಾ ಪಾಂಸುರ್ಭವೇತ್ತಥಾ ॥ ೩೯ ॥
ನಿರಗಾನ್ಮಹಿಷೋ ದೀನಸ್ತತಸ್ತಸ್ಮಾಜ್ಜಲಾಶಯಾತ್ ।
ಆಯಾಂತಮಸುರಂ ದೇವೀ ಪಾದೇನಾಕ್ರಮ್ಯ ಮೂರ್ಧನಿ ॥ ೪೦ ॥
ಕಂಠಶೂಲೇನ ತೀಕ್ಷ್ಣೇನ ಪೀಡಯಾಮಾಸ ಕೋಪಿತಾ ।
ತತೋ ದೇವ್ಯಸಿಮಾದಾಯ ಚಕರ್ತಾಽಸ್ಯ ಶಿರೋ ಮಹತ್ ॥ ೪೧ ॥
ಏವಂ ಸ ಮಹಿಷೋ ವಿಪ್ರಾಃ ಸ ಭೃತ್ಯಬಲವಾಹನಃ ।
ದುರ್ಗಯಾ ನಿಹತೋ ಭೂಮೌ ಪಪಾತಚ ಮಮಾರ ಚ ॥ ೪೨ ॥

---

ಸಮಯದಲ್ಲಿಯೆ ಅಶರೀರವಾಣಿಯು, "ಓ ಭದ್ರಕಾಳಿ! ಮಹಾದೇವಿ, ಮಹಿಷನು ನಿನ್ನ ಏಟನ್ನು ತಾಳಲಾರದೆ, ಹೆದರಿ ಓಡಿಬಂದು ಈ ಧರ್ಮಪುಷ್ಕರಿಣಿಯಲ್ಲಿ ಅವಿತುಕೊಂಡಿರುವನು. ಹೇಗಾದರೂ ಮಾಡಿ ಅವನನ್ನು ಕೊಲ್ಲು" ಎಂದು ಹೇಳಿತು.

೩೭-೩೮. ಆಗ ಚಂಡಿಕೆಯು ಆ ಮಾತನ್ನು ಕೇಳಿ ಆ ಅಸುರೇಂದ್ರನನ್ನು ವಧಿಸಬಯಸಿ ತನ್ನ ಸಿಂಹವನ್ನು ಕುರಿತು, "ಮಹಾಬಲಸಂಪನ್ನನೂ, ಪರಾಕ್ರಮಿಯೂ ಆದ ಎಲೈ ಮೃಗರಾಜನೇ! ಈ ಧರ್ಮಪುಷ್ಕರಿಣಿಯ ನೀರನ್ನೆಲ್ಲಾ ಕುಡಿಯುವವನಾಗು" ಎಂದು ಅಪ್ಪಣೆಮಾಡಿದಳು.

೩೯. ಎಲೈ ದ್ವಿಜಶ್ರೇಷ್ಠರೇ! ಆಗ ಆ ಪಂಚಾಸ್ಯವು ದೇವಿಯ ಅಪ್ಪಣೆಯಂತೆ ಆ ನೀರನ್ನೆಲ್ಲಾ ಕುಡಿದು ಧೂಳೇಳುವಂತೆ ಮಾಡಿತು.

೪೦-೪೨. ಬಳಿಕ ಮಹಿಷನು ದೀನನಾಗಿ ಮೆಲ್ಲಮೆಲ್ಲಗೆ ಮೆಲಕ್ಕೆದ್ದನು. ಆಗ ದೇವಿಯು ಅವನ ತಲೆಯನ್ನು ತನ್ನ ಕಾಲಿನಿಂದ ಮೆಟ್ಟಿ ಹರಿತವಾದ ಶೂಲದಿಂದಿರಿದು ಕತ್ತಿಯಿಂದಾತನ ಕಂಠವನ್ನು ಕಡಿದಳು. ಒಡನೆಯೆ ಅವನು ನೆಲಕ್ಕುರುಳಿ ಪ್ರಾಣಗಳನ್ನು ಬಿಟ್ಟನು.

ತತೋ ದೇವಾಃ ಸಗಂಧರ್ವಾಃ ಸಿದ್ಧಾಶ್ಚ ಪರಮರ್ಷಯಃ ।
ಸ್ತುತ್ವಾ ದೇವೀಂ ತತಃ ಸ್ತೋತ್ರೈಸ್ತುಷ್ಟ್ವಾ ಜಹೃಷಿರೇ ತದಾ ॥ ೪೩ ॥
ಅನುಜ್ಞಾತಾಸ್ತತೋ ದೇವ್ಯಾ ದೇವಾ ಜಗ್ಮುರ್ಯಥಾಗತಂ ।
ತತೋ ದೇವೀ ಜಗನ್ಮಾತಾ ಸ್ವನಾಮ್ನಾ ಪುರಮುತ್ತಮಂ ॥ ೪೪ ॥
ದಕ್ಷಿಣಸ್ಯ ಸಮುದ್ರಸ್ಯ ತೀರೇ ಚಕ್ರೇ ತದೋತ್ತರೇ ।
ತತೋ ದೇವ್ಯನುಶಿಷ್ಟಾಸ್ತೇ ದೇವಾಃ ಶಕ್ರಪುರೋಗಮಾಃ ॥ ೪೫ ॥
ಪೂರಯಾಮಾಸುರಮೃತೈರ್ಧರ್ಮಪುಷ್ಕರಿಣೀಂ ತದಾ ।
ತತೋಽಪ್ಯಮೃತತೀರ್ಥಾಖ್ಯಾಂ ಲೇಭೇ ತತ್ತೀರ್ಥಮುತ್ತಮಂ ॥ ೪೬ ॥
ತತೋ ದೇವೀ ವರಮದಾತ್ಸ್ವಪುರಸ್ಯ ಮುದಾನ್ವಿತಾ ।
ಪಶವ್ಯಂ ಚಾಪ್ಯರೋಗಂ ಚ ಪುರಮೇತದ್ಭವಿಷ್ಯತಿ ॥ ೪೭ ॥
ದದೌ ತೀರ್ಥಾಯ ಚ ವರಂ ಸ್ನಾತಾನಾಮತ್ರ ವೈ ನೃಣಾಂ ।
ಯಥಾಽಭಿಲಾಷಂ ಸಿದ್ಧಿಃ ಸ್ಯಾದಿತ್ಯುಕ್ತ್ವಾ ಸಾ ದಿವಂ ಯಯೌ ॥ ೪೮ ॥

ಶ್ರೀ ಸೂತ ಉವಾಚ:—

ಯತ್ಸ್ವನಾಮ್ನಾ ಚಕಾರೇದಂ ದೇವೀಪುರಮನುತ್ತಮಂ ।
ದೇವೀಪತ್ತನಮಿತ್ಯುಕ್ತಂ ತೇನ ದೇವ್ಯಾಃ ಪುರೋತ್ತಮಂ ॥ ೪೯ ॥
ದೇವೀಪತ್ತನಮಾರಭ್ಯ ಸುಮುಹೂರ್ತೇ ದಿನೇ ದ್ವಿಜಾಃ ।
ವಿಘ್ನೇಶ್ವರಂ ಪ್ರಣಮ್ಯಾದೌ ಸಲಿಲಸ್ವಾಮಿನಂ ತಥಾ ॥ ೫೦ ॥

---

೪೩—೪೬. ಆ ಸಮಯದಲ್ಲಿ ದೇವತೆಗಳೂ, ಗಂಧರ್ವರೂ, ಸಿದ್ಧರೂ, ಮಹರ್ಷಿಗಳೂ, ಆ ದೇವಿಯನ್ನು ಸಂತೋಷದಿಂದ ಹೊಗಳಿ ಆಕೆಯ ಅಪ್ಪಣೆಯನ್ನು ಪಡೆದು ತಮ್ಮತಮ್ಮ ಸ್ಥಾನಗಳಿಗೆ ಹೊರಟುಹೋದರು. ದೇವಿಯಾದರೊ ಅಲ್ಲಿಯೆ ತನ್ನ ಹೆಸರಿನಿಂದೊಂದು ಪಟ್ಟಣವನ್ನು ನಿರ್ಮಿಸಿದಳು. ಇಂದ್ರಾದಿ ದೇವತೆಗಳು ಆಕೆಯ ಅಪ್ಪಣೆಯಂತೆ ಅಮೃತದಿಂದ ಆ ಪುಷ್ಕರಿಣಿಯನ್ನು ತುಂಬಿಸಿದರು. ಆದುದರಿಂದ ಅದು ಅಮೃತತೀರ್ಥವೆಂದು ಹೆಸರನ್ನು ಪಡೆಯಿತು.

೪೭—೪೮. ಬಳಿಕ ಸಂತುಷ್ಟಳಾದ ದೇವಿಯು, ಆ ಪುರವು ಪಶುಸಮೃದ್ಧವಾಗಿಯೂ, ರೋಗವಿಲ್ಲದುದಾಗಿಯೂ ಇರಲೆಂದು ಹಾರೈಸಿದಳು. ಆ ಪುಷ್ಕರಿಣಿಯಲ್ಲಿ ಸ್ನಾನಮಾಡಿದವರಿಗೆ ಬಯಸಿದ ಇಷ್ಟಾರ್ಥಗಳೆಲ್ಲವೂ ಸಿದ್ಧಿಸುವಂತೆ ವರವಿತ್ತು ಸ್ವರ್ಗಲೋಕಕ್ಕೆ ತೆರಳಿದಳು.

೪೯. ಸೂತನು ಹೇಳುತ್ತಾನೆ:— ಎಲೈ ದ್ವಿಜಶ್ರೇಷ್ಠರೇ! ದೇವಿಯೇ ಆ ಪಟ್ಟಣವನ್ನು ತನ್ನ ಹೆಸರಿನಿಂದ ಕರೆದಳಾದಕಾರಣ ಅದು ದೇವೀಪಟ್ಟಣವೆಂದು ಪ್ರಖ್ಯಾತವಾಯಿತು.

೫೦—೫೨. ಧಾರ್ಮಿಕನಾದ ಶ್ರೀರಾಮಚಂದ್ರನು ಮೊದಲು ಗಣಪತಿಗೆರಗ

ಮಹಾದೇವಾಭ್ಯನುಜ್ಞಾತೋ ರಾಮಚಂದ್ರೋಽತಿಧಾರ್ಮಿಕಃ ।
ಸ್ಥಾಪಯಿತ್ವಾ ಸ್ವಹಸ್ತೇನ ಪಾಷಾಣನವಕಂ ಮುದಾ ॥ ೫೧ ॥
ಸೇತುಮಾರಬ್ಧವಾನ್ವಿಪ್ರಾ ಯಾವಲ್ಲಂಕಾಮತಂದ್ರಿತಃ ।
ಸಿಂಹಾಸನಂ ಸಮಾರುಹ್ಯ ರಾಮೋ ನಲಕೃತಂ ಶುಭಂ ॥ ೫೨ ॥
ವಾನರೈಃ ಕಾರಯಾಮಾಸ ಸೇತುಮಬ್ಧೌ ನಲಾದಿಭಿಃ ।
ಪರ್ವತಾನ್ ಶಾಲಿನೋ ವೃಕ್ಷಾಂದೃಷದಃ ಕಾಷ್ಠಸಂಚಯಾನ್ ॥ ೫೩ ॥
ತೃಣಾನಿ ಚ ಸಮಾಜಹ್ರುರ್ವಾನರಾ ವನಮಧ್ಯತಃ ।
ನಲಸ್ತಾನಿ ಸಮಾದಾಯ ಚಕ್ರೇ ಸೇತುಂ ಮಹೋದಧೌ ॥ ೫೪ ॥
ಪಂಚಭಿರ್ದಿವಸೈಃ ಸೇತುರ್ಯಾವಲ್ಲಂಕಾಸಮೀಪತಃ ।
ದಶಯೋಜನವಿಸ್ತೀರ್ಣಃ ಶತಯೋಜನಮಾಯತಃ ॥ ೫೫ ॥
ಕೃತಃ ಸೇತುರ್ನಲೇನಾಽಬ್ಧೌ ಪುಣ್ಯಃ ಪಾಪವಿನಾಶನಃ ॥ ೫೬ ॥
ದೇವೀಪುರಸ್ಯ ನಿಕಟೇ ನವಪಾಷಾಣರೂಪಕೇ ।
ಸೇತುಮೂಲೇ ನರಃ ಸ್ನಾಯಾತ್ಸ್ವಪಾಪಪರಿಶುದ್ಧಯೇ ।
ಚಕ್ರತೀರ್ಥೇ ತಥಾ ಸ್ನಾಯಾದ್ಭಜೇತ್ಸೇತ್ವಧಿಪಂ ಹರಿಂ ॥ ೫೭ ॥
ದೇವೀಪತ್ತನಮಾರಭ್ಯ ಯತ್ಕೃತಂ ಸೇತುಬಂಧನಂ ।
ತತ್ಸೇತುಮೂಲಂ ವಿಪ್ರೇಂದ್ರಾ ಯಥಾರ್ಥಂ ಪರಿಕಲ್ಪಿತಂ ॥ ೫೮ ॥

---

ಸಮುದ್ರನನ್ನು ವಂದಿಸಿ ಮಹಾದೇವನ ಅಪ್ಪಣೆಯನ್ನು ಪಡೆದು ಸುಮುಹೂರ್ತದಲ್ಲಿ ದೇವೀಪಟ್ಟಣದ ಬಳಿ ತನ್ನ ಕೈಯಿಂದಲೇ ಒಂಬತ್ತು ಕಲ್ಲುಗಳನ್ನಿಟ್ಟು ತಾನೇ ಸೇತುವೆಯನ್ನು ಮೊದಲುಮಾಡಿ, ಸಿಂಹಾಸನವನ್ನೇರಿ ಕುಳಿತು ಎಚ್ಚರಿಕೆಯಿಂದ ಅಲ್ಲಿಂದ ಲಂಕೆಯುವರೆಗೂ, ನಲನೇ ಮೊದಲಾದ ವಾನರರಿಂದ ಆ ಮಹೋದಧಿಯ ಮೇಲೆ ಶುಭಕರವಾದ ಸೇತುವೆಯನ್ನು ಕಟ್ಟಿಸಿದನು.

೫೩–೫೬. ವಾನರರೆಲ್ಲರೂ ಪರ್ವತಗಳನ್ನೂ, ವೃಕ್ಷಗಳನ್ನೂ, ಗುಂಡುಗಳನ್ನೂ, ಕಟ್ಟಿಗೆಗಳನ್ನೂ, ಹುಲ್ಲನ್ನೂ ಕಾಡುಬೆಟ್ಟಗಳಿಂದ ತಂದುಕೊಟ್ಟರು. ನಲನು ಅವುಗಳಿಂದ ಐದು ದಿನಗಳಲ್ಲಿಯೇ ಹತ್ತುಗಾವುದದಗಲವೂ, ನೂರು ಗಾವುದದುದ್ದವೂ ಆಗಿ ಪುಣ್ಯಪ್ರದವೂ, ಪಾಪನಾಶಕವೂ ಆದ ಸೇತುವೆಯನ್ನು ನಿರ್ಮಿಸಿದನು.

೫೭. ಪಾಪವಿಮೋಚನವನ್ನು ಬಯಸುವ ಮಾನವರು ದೇವೀಪಟ್ಟಣದ ಬಳಿಯಿರುವ ನವಪಾಷಾಣರೂಪವಾದ ಇಂತಹ ಸೇತುಮೂಲದಲ್ಲಿ ಸ್ನಾನಮಾಡತಕ್ಕುದು. ಅಂತೆಯೇ ಚಕ್ರತೀರ್ಥದಲ್ಲಿಯೂ ಮಿಂದು ಸೇತುವಿನ ಅಧಿದೇವತೆಯಾದ ಶ್ರೀಹರಿಯನ್ನು ಸೇವಿಸತಕ್ಕುದು.

೫೮–೬೦. ಸೇತುವಿನ ಪಶ್ಚಿಮದ ತುದಿಯು ದರ್ಭಶಯನವೆಂದೂ,

ಸೇತೋಸ್ತು ಪಶ್ಚಿಮಾ ಕೋಟಿರ್ದರ್ಭಶಯ್ಯಾ ಪ್ರಕೀರ್ತಿತಾ ।
ದೇವೀಪುರೀ ಚ ಪ್ರಾಕ್ಕೋಟಿರುಭಯಂ ಸೇತುಮೂಲಕಂ ॥ ೫೯ ॥
ಉಭಯಂ ಪುಣ್ಯಮಾಖ್ಯಾತಂ ಪವಿತ್ರಂ ಪಾಪನಾಶನಂ ॥ ೬೦ ॥
ಯತ್ಸೇತುಮೂಲಂ ಗಚ್ಛಂತಿ ಯೇನ ಮಾರ್ಗೇಣ ಯೇ ನರಾಃ ।
ತತ್ತನ್ಮಾರ್ಗಗತಾಸ್ತೇ ತೇ ತಸ್ಮಿಂಸ್ತಸ್ಮಿನ್ವಿಮುಕ್ತಿದೇ ॥ ೬೧ ॥
ಸ್ನಾತ್ವಾದೌ ಸೇತುಮೂಲೇತು ಚಕ್ರತೀರ್ಥೇ ತಥೈವ ಚ ।
ಸಂಕಲ್ಪಪೂರ್ವಕಂ ಪಶ್ಚಾದ್ಗಚ್ಛೇಯುಃ ಸೇತುಬಂಧನಂ ॥ ೬೨ ॥
ದೇವೀಪುರೇ ತಥಾ ದರ್ಭಶಯ್ಯಾಯಾಮಪಿ ಭೂಸುರಾಃ ।
ಚಕ್ರತೀರ್ಥೇ ಶಿವೇ ಸ್ನಾನಂ ಪುಣ್ಯಂ ಪಾಪವಿನಾಶನಂ ॥ ೬೩ ॥
ಸ್ಮರಣಾದುಭಯತ್ರಾಪಿ ಚಕ್ರತೀರ್ಥಸ್ಯ ವೈ ದ್ವಿಜಾಃ ।
ಭಸ್ಮೀಭವಂತಿ ಪಾಪಾನಿ ಲಕ್ಷಜನ್ಮಕೃತಾನ್ಯಪಿ ॥ ೬೪ ॥
ಜನ್ಮಾಽಪಿ ವಿಲಯಂ ಯಾಯಾನ್ಮುಕ್ತಿಶ್ಚಾಪಿ ಕರೇ ಸ್ಥಿತಾ ।
ಚಕ್ರತೀರ್ಥಸಮಂ ತೀರ್ಥಂ ನ ಭೂತಂ ನ ಭವಿಷ್ಯತಿ ॥ ೬೫ ॥
ಭೂಲೋಕೇ ಯಾನಿ ತೀರ್ಥಾನಿ ಗಂಗಾದೀನಿ ದ್ವಿಜೋತ್ತಮಾಃ ।
ಚಕ್ರತೀರ್ಥಸ್ಯ ತಾನ್ಯದ್ಧಾ ಕಲಾಂ ನಾಽರ್ಹಂತಿ ಷೋಡಶೀಂ ॥ ೬೬ ॥

---

ಪೂರ್ವದ ತುದಿಯೇ ದೇವೀಪಟ್ಟಣವೆಂದೂ ಹೆಸರುಗೊಂಡಿದೆ. ಈ ಎರಡೂ ಸೇರಿರುವುದೇ ಸೇತುಮೂಲವು. ಇವೆರಡೂ ಶುಭಕರವೂ, ಪಾಪನಾಶಕವೂ ಆದುವು.

೬೧–೬೨. ಸೇತುಸ್ನಾನಕ್ಕಾಗಿ ಹೋಗುವ ಪ್ರತಿಯೊಬ್ಬನೂ, ದಾರಿಯಲ್ಲಿ ಸಿಕ್ಕುವ ಪ್ರತಿಯೊಂದು ಪವಿತ್ರತೀರ್ಥದಲ್ಲಿಯೂ ಸ್ನಾನಮಾಡುತ್ತ ಹೋಗಿ ಸೇತುಮೂಲದಲ್ಲಿಯೂ, ಚಕ್ರತೀರ್ಥದಲ್ಲಿಯೂ ಸಂಕಲ್ಪಪೂರ್ವಕವಾಗಿ ಸ್ನಾನ ಮಾಡಿ ಆ ಬಳಿಕ ಸೇತುವನ್ನು ಸೇರತಕ್ಕುದು.

೬೩–೬೫. ದೇವೀಪಟ್ಟಣದ ಬಳಿಯ ದರ್ಭಶಯನ ಮತ್ತು ಚಕ್ರತೀರ್ಥಗಳ ಸ್ನಾನವು ಪುಣ್ಯಪ್ರದವೇ ಅಲ್ಲದೆ ಪಾಪವಿನಾಶಕವೂ ಆಗಿರುತ್ತದೆ. ಇವುಗಳ ಸ್ಮರಣೆಯಿಂದ ಲಕ್ಷಜನ್ಮಗಳಲ್ಲಿ ಮಾಡಿದ ಪಾಪರಾಶಿಗಳಾದರೂ ಸುಟ್ಟು ಬೂದಿಯಾಗುವುವು. ಅಲ್ಲದೆ, ಮತ್ತೆ ಜನ್ಮವನ್ನು ತಾಳಬೇಕಾದ ಕ್ಲೇಶವಿಲ್ಲದೆ ಮುಕ್ತಿಯು ದೊರಕುವುದು. ಆದುದರಿಂದ ಚಕ್ರತೀರ್ಥಕ್ಕೆ ಸಮಾನವಾದ ತೀರ್ಥವು ಮತ್ತೊಂದಿರುವುದಿಲ್ಲ.

೬೬. ಭೂಲೋಕದ ಸಮಸ್ತ ತೀರ್ಥಗಳ ಮಾಹಾತ್ಮ್ಯವೆಲ್ಲವನ್ನೂ ಒಟ್ಟುಗೂಡಿಸಿದರೂ ಚಕ್ರತೀರ್ಥದ ಮಹಿಮೆಯಲ್ಲಿ ಹದಿನಾರನೆಯ ಒಂದು ಅಂಶವನ್ನಾದರೂ ಹೋಲಲಾರದು.

ಆದೌ ತು ನವಪಾಷಾಣಮಧ್ಯೇಽಬ್ಧೌ ಸ್ನಾನಮಾಚರೇತ್ ।
ಕ್ಷೇತ್ರಪಿಂಡೇ ತತಃ ಕುರ್ಯಾಚ್ಚಕ್ರತೀರ್ಥೇ ತಥೈವ ಚ ॥ ೬೭ ॥
ಸೇತುನಾಥಂ ಹರಿಂ ಸೇವೇತ್ಸ್ವಪಾಪಪರಿಶುದ್ಧಯೇ ।
ಏವಂ ಹಿ ದರ್ಭಶಯ್ಯಾಯಾಂ ಕುರ್ಯುಸ್ತನ್ಮಾರ್ಗತೋ ಗತಾಃ ॥ ೬೮ ॥
ಆರೂಢಂ ರಾಮಚಂದ್ರೇಣ ಯೋ ನಮಸ್ಕುರುತೇ ಜನಃ ।
ಸಿಂಹಾಸನಂ ನಲಕೃತಂ ನ ತಸ್ಯ ನರಕಾದ್ಭಯಂ ॥ ೬೯ ॥
ಸೇತುಮಾದೌ ನಮಸ್ಕುರ್ಯಾದ್ರಾಮಂ ಧ್ಯಾಯನ್ಹೃದಾ ತದಾ ।
ರಘುವೀರಪದನ್ಯಾಸಪವಿತ್ರೀಕೃತಪಾಂಸವೇ ।
ದಶಕಂಠಶಿರಚ್ಛೇದ ಹೇತವೇ ಸೇತವೇ ನಮಃ ॥ ೭೦ ॥
ಕೇತವೇ ರಾಮಚಂದ್ರಸ್ಯ ಮೋಕ್ಷಮಾರ್ಗೈಕ ಹೇತವೇ ।
ಸೀತಾಯಾ ಮಾನಸಾಂಭೋಜಭಾನವೇ ಸೇತವೇ ನಮಃ ॥ ೭೧ ॥
ಸಾಽಷ್ಟಾಂಗಂ ಪ್ರಣಿಪತ್ಯಾದೌ ಮಂತ್ರೇಣಾಽನೇನ ವೈ ದ್ವಿಜಾಃ ।
ತತೋ ವೇತಾಲವರದಂ ತೀರ್ಥಂ ಗಚ್ಛೇನ್ಮಹಾಬಲಂ ॥ ೭೨ ॥
ತತ್ರ ಸ್ನಾನಾದವಾಪ್ನೋತಿ ಸಿದ್ಧಿಂ ಪಾರಮಿಕಾಂ ನರಃ ॥ ೭೩ ॥

---

೬೭–೬೮. ಮೊದಲು ನವಪಾಷಾಣಮಧ್ಯದಲ್ಲಿ ಸಮುದ್ರಸ್ನಾನ ಮಾಡಿ ಕ್ಷೇತ್ರವಿಧಿಯಂತೆ ಪಿತೃಗಳಿಗೆ ಪಿಂಡಪ್ರದಾನಮಾಡಬೇಕು. ಬಳಿಕ ಚಕ್ರತೀರ್ಥದಲ್ಲಿಯೂ ಅಂತೆಯೇ ಆಚರಿಸಿ, ಸೇತುನಾಥನಾದ ಶ್ರೀಹರಿಯನ್ನು ಸೇವಿಸತಕ್ಕುದು. ಅನಂತರ ದರ್ಭಶಯನದಲ್ಲಿಯೂ ಇದರಂತೆಯೇ ನೆರವೇರಿಸಬೇಕು.

೬೯. ನಲ ನಿರ್ಮಿತವಾಗಿ ಶ್ರೀರಾಮಚಂದ್ರನೇರಿ ಕುಳಿತಿದ್ದ ಸಿಂಹಾಸನಕ್ಕೆ ಎರಗುವವನಿಗೆ ನರಕದ ಹೆದರಿಕೆಯೇ ಇರುವುದಿಲ್ಲ.

೭೦–೭೩. "ಶ್ರೀರಘುರಾಮನ ಹೆಜ್ಜೆಗಳಿಂದ ಪವಿತ್ರವಾದ ದೂಳುಳ್ಳುದಾಗಿ ದಶಕಂಠನ ಶಿರಚ್ಛೇದಕ್ಕೆ ಕಾರಣವಾದ ಸೇತುವಿಗೆ ನಮಸ್ಕಾರವು. ಮೋಕ್ಷದ ದಾರಿಗೆ ಮೂಲಕಾರಣವಾಗಿ ಸೀತೆಯ ಮಾನಸಕಮಲವನ್ನು ವಿಕಾಸಗೊಳಿಸುವುದರಲ್ಲಿ ಸೂರ್ಯನನ್ನು ಹೋಲುವ ಶ್ರೀರಾಮಸೇತುವನ್ನು ವಂದಿಸುವೆನು" ಎಂಬ ಈ ಮಂತ್ರವನ್ನು ಹೇಳಿಕೊಂಡು ಶ್ರೀರಾಮನನ್ನು ನೆನೆದು ಮೊದಲು ಸೇತುವನ್ನು ನಮಸ್ಕರಿಸಬೇಕು. ಬಳಿಕ ಭೇತಾಳವರದವೆಂಬ ತೀರ್ಥದಲ್ಲಿ ಸ್ನಾನಮಾಡಬೇಕು. ಅಲ್ಲಿಯ ಸ್ನಾನದಿಂದ ಮಾನವನು ಪರಮಪದವನ್ನು ಹೊಂದುತ್ತಾನೆ.

ಯೋಽಧ್ಯಾಯಮೇನಂ ಪಠತೇ ಮನುಷ್ಯಃ
ಶೃಣೋತಿ ವಾ ಭಕ್ತಿಯುತೋ ದ್ವಿಜೇಂದ್ರಾಃ ।
ಸ್ವರ್ಗಾದಯಸ್ತಸ್ಯ ನ ದುರ್ಲಭಾಃ ಸ್ಯುಃ
ಕೈವಲ್ಯಮಪ್ಯಸ್ಯ ಕರಸ್ಥಮೇವ ॥ ೭೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಮಹಿಷಾಸುರ ಸಂಹಾರವರ್ಣನಂ" ನಾಮ ಸಪ್ತಮೋಽಧ್ಯಾಯಃ

---

೭೪. ಎಲೈ ವಿಪ್ರಶ್ರೇಷ್ಠರೇ! ಈ ಅಧ್ಯಾಯವನ್ನು ಓದುವವನಿಗೂ, ಕೇಳುವವನಿಗೂ ಸ್ವರ್ಗಾದಿ ಲೋಕಗಳು ಮಾತ್ರವೇ ಅಲ್ಲದೆ, ಮೋಕ್ಷವೂ ಕರಗತವಾದುದೆಂದರಿಯತಕ್ಕುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಮಹಿಷಾಸುರ ಸಂಹಾರವರ್ಣನ"ವೆಂಬ ಏಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಽಷ್ಟಮೋಽಧ್ಯಾಯಃ

### ಭೇತಾಲವರದತೀರ್ಥಪ್ರಶಂಸನಂ—ಸುದರ್ಶನಸ್ಯ ವೇತಾಲತ್ವಪ್ರಾಪ್ತಿವರ್ಣನಂ

ಋಷಯ ಊಚುಃ :—

ಭಗವನ್ಸೂತ ಸರ್ವಜ್ಞ ಕೃಷ್ಣದ್ವೈಪಾಯನಪ್ರಿಯ ।
ತ್ವನ್ಮುಖಾದ್ವೈ ಕಥಾಃ ಶ್ರುತ್ವಾ ಶೋತ್ರಕಾಽಮೃತವರ್ಷಿಣೀಃ ॥ ೧ ॥
ತೃಪ್ತಿರ್ನಜಾಯತೇಽಸ್ಮಾಕಂ ತ್ವದ್ವಚೋಽಮೃತಸಾಯಿನಾಂ ।
ಅತಃ ಶುಶ್ರೂಷಮಾಣಾನಾಂ ಭೂಯೋ ಬ್ರೂಹಿ ಕಥಾಃ ಶುಭಾಃ ॥ ೨ ॥
ವೇತಾಲವರದಂ ನಾಮ ಚಕ್ರತೀರ್ಥಸ್ಯ ದಕ್ಷಿಣೇ ।
ತೀರ್ಥಮಸ್ತಿ ಮಹಾಪುಣ್ಯಂ ಇತ್ಯವಾದೀದ್ಭವಾನ್ಪುರಾ ॥ ೩ ॥
ವೇತಾಲವರದಾಽಭಿಖ್ಯಾ ತೀರ್ಥಸ್ಯಾಽಸ್ಯಾಗತಾ ಕಥಂ ।
ಕಿಂ ಪ್ರಭಾವಂ ಚ ತತ್ತೀರ್ಥಮೇತನ್ನೋ ವಕ್ತುಮರ್ಹಸಿ ॥ ೪ ॥

ಶ್ರೀ ಸೂತ ಉವಾಚ :—

ಸಾಧು ಪೃಷ್ಟಂ ಹಿ ಯುಷ್ಮಾಭಿರತಿಗುಹ್ಯಂ ಮುನೀಶ್ವರಾಃ ।
ಶೃಣುಧ್ವಂ ಮನಸಾ ಸಾರ್ಧಂ ಬ್ರವೀಮ್ಯತ್ಯದ್ಭುತಾಂ ಕಥಾಂ ॥ ೫ ॥
ಪಾಮರಾ ಅಪಿ ಮೋದಂತೇ ಯಾಂ ವೈ ಶ್ರುತ್ವಾ ಕಥಾಂ ಶುಭಾಂ ।
ಕಥಾ ಚೇಯಂ ಮಹಾಪುಣ್ಯಾ ಪುರಾ ಕೈಲಾಸಪರ್ವತೇ ॥ ೬ ॥

---

## ಕನ್ನಡದ ಅನುವಾದ

### ಭೇತಾಲವರದತೀರ್ಥಪ್ರಶಂಸನೆ—ಸುದರ್ಶನನು ಭೇತಾಳತ್ವವನ್ನು ಪಡೆದುದು

೧-೨. ಮಹರ್ಷಿಗಳು ಕೇಳುತ್ತಾರೆ:—"ಪೂಜ್ಯನೂ, ವ್ಯಾಸಪ್ರಿಯನೂ ಆದ ಎಲೈ ಸೂತಮಹರ್ಷಿಯೇ! ತಮ್ಮ ಮುಖಕಮಲದಿಂದ ಹೊರಬಂದು ಶ್ರೋತೃಗಳಿಗೆ ಕರ್ಣಾಮೃತಪ್ರದವಾದ ಕಥೆಗಳನ್ನು ಕೇಳಿದಬಳಿಕ ನಿಮ್ಮ ವಾಗಮೃತಪಾನವನ್ನು ಮತ್ತಷ್ಟು ಬಯಸುವ ನಮಗಿನ್ನೂ ತೃಪ್ತಿಯಾಗಲಿಲ್ಲ. ಆದುದರಿಂದ ತಮ್ಮನ್ನು ಪೂಜಿಸಿ ಕೇಳುವ ನಮಗೆ ಶ್ರೇಯಸ್ಕರವೂ, ಶುಭಕರವೂ ಆದ ಕಥೆಗಳನ್ನು ಮತ್ತೂ ಮತ್ತೂ ತಿಳಿಸುವ ಅನುಗ್ರಹವಾಗಬೇಕು.

೩-೪. ಚಕ್ರತೀರ್ಥಕ್ಕೆ ದಕ್ಷಿಣದಲ್ಲಿ ಭೇತಾಳವರದವೆಂಬ ತೀರ್ಥವಿರುವುದೆಂದು ತಾವು ಹಿಂದೆ ತಿಳಿಸಿದ್ದಿರಲ್ಲವೆ? ಆದಕ್ಕೆ ಆ ಹೆಸರುಬರಲು ಕಾರಣ ವೇನು? ಅದರ ಮಹಿಮೆಯೇನು? ಇದನ್ನು ನಮಗರುಹಬೇಕು."

೫-೬. ಸೂತನು ಹೇಳುತ್ತಾನೆ:—ಎಲೈ ಮುನಿಶ್ರೇಷ್ಠರೇ! ಒಳ್ಳೆಯ ವಿಚಾರವನ್ನೇ ಕುರಿತು ಪ್ರಶ್ನೆಮಾಡಿದಿರಿ. ಇದು ಬಹಳ ರಹಸ್ಯವಾದುದು;

ಕೇಲಿಕಾಲೇಷು ಪಾರ್ವತ್ಯೈ ಶಂಭುನಾ ಕಥಿತಾ ದ್ವಿಜಾಃ ।
ತಾಂ ಬ್ರವೀಮಿ ಕಥಾಮೇನಾಮತ್ಯದ್ಭುತತರಾಂ ಹಿ ವಃ ॥ ೭ ॥
ಪುರಾ ಹಿ ಗಾಲವೋ ನಾಮ ಮಹರ್ಷಿಃ ಸತ್ಯವಾಕ್ಛುಚಿಃ ।
ಚಿಂತಯಾನಃ ಪರಂ ಬ್ರಹ್ಮ ತಪಸ್ತೇಪೇ ನಿಜಾಶ್ರಮೇ ॥ ೮ ॥
ತಸ್ಯಕನ್ಯಾ ಮಹಾಭಾಗಾ ರೂಪಯೌವನಶಾಲಿನೀ ।
ನಾಮ್ನಾ ಕಾಂತಿಮತೀ ಬಾಲಾ ವ್ಯಚರತ್ಪಿತುರಂತಿಕೇ ॥ ೯ ॥
ಆಹರಂತೀ ಚ ಪುಷ್ಪಾಣಿ ಬಲ್ಯರ್ಥಂ ತಸ್ಯ ವೈ ಮುನೇಃ ।
ವೇದಿಸಂಮಾರ್ಜನಾದೀನಿ ಸಮಿದಾಹರಣಾನಿ ಚ ॥ ೧೦ ॥
ಕುರ್ವಂತೀ ಪಿತರಂ ಬಾಲಾ ಸಮ್ಯಕ್ಪರಿಚಚಾರಹ ।
ಕದಾಚಿತ್ಸಾತು ಬಲ್ಯರ್ಥಂ ಪುಷ್ಪಾಣ್ಯಾಹರ್ತುಮುದ್ಯತಾ ॥ ೧೧ ॥
ತಸ್ಮಿನ್ವನೇ ಕಾಂತಿಮತೀ ಸುದೂರಮಗಮತ್ತದಾ ।
ತತ್ರ ಪುಷ್ಪಾಣಿ ರಮ್ಯಾಣಿ ಸಮಾಹೃತ್ಯ ಚ ಪೇಟಿಕೇ ।
ತೂರ್ಣಂ ನಿವವೃತೇ ಬಾಲಾ ಪಿತೃಶುಶ್ರೂಷಣೇ ರತಾ ॥ ೧೨ ॥

---

ಶುಭಕರವೂ, ಪವಿತ್ರವೂ ಆದುದು; ಧರ್ಮಸೂಕ್ಷ್ಮಗಳನ್ನಿನಿತಾದರೂ ಅರಿಯದವರನ್ನೂ ಆನಂದಗೊಳಿಸುವಂತಹುದು. ಎಲೈ ಮಹರ್ಷಿಗಳಿರಾ! ಅದ್ಭುತವಾದ ಈ ಕಥೆಯನ್ನು ಮನವಿಟ್ಟು ಕೇಳಿರಿ.

೭. ಹಿಂದೆ ಕೈಲಾಸದಲ್ಲಿ ಪರಮೇಶ್ವರನು ಕ್ರೀಡಾಕಾಲದಲ್ಲಿ ಪಾರ್ವತಿಗೆ ಪರಮಮಂಗಳಕರವೂ, ಪುಣ್ಯಸಂಪಾದಕವೂ ಆದ ಈ ಕಥೆಯನ್ನು ತಿಳಿಸಿದನು. ಆ ಅದ್ಭುತ ಕಥೆಯನ್ನೇ ನಿಮಗೀಗ ಹೇಳುವೆನು.

೮. ಮುನ್ನೊಮ್ಮೆ ವಾಕ್ಸಿದ್ಧನಾದ ಗಾಲವಮಹರ್ಷಿಯು ಪರಿಶುದ್ಧನಾಗಿ ತನ್ನ ಆಶ್ರಮದಲ್ಲಿ, ಪರಬ್ರಹ್ಮನಲ್ಲಿ ಮನವನ್ನು ನೆಲೆಗೊಳಿಸಿ ತಪಸ್ಸನ್ನು ಮಾಡುತ್ತಿದ್ದನು.

೯–೧೨. ಆತನಿಗೋರ್ವ ಚೆಲುವೆಯಾದ ಕುವರಿಯಿದ್ದಳು. ಆಕೆಯು ಬಹಳ ಪುಣ್ಯಶಾಲಿನಿ. ಅವಳಿಗೆ ಕಾಂತಿಮತಿಯೆಂಬ ಸಾರ್ಥಕವಾದ ಹೆಸರು. ಆಕೆಯು ತಂದೆಯ ದೇವತಾಪೂಜೆಗೆ ಹೂಗಳನ್ನು ಬಿಡಿಸಿಕೊಡುವುದು, ಸಮಿತ್ತುಗಳನ್ನು ತಂದೊದಗಿಸುವುದು, ಆತನು ಅನುಷ್ಠಾನಕ್ಕೆ ಕೂಡುವ ಸ್ಥಳವನ್ನು ಗುಡಿಸಿ ಸಾರಿಸುವುದು, ಮುಂತಾದ ಕಾರ್ಯಗಳನ್ನು ಪ್ರತಿದಿನವೂ ಮಾಡುತ್ತಿದ್ದಳು. ಈ ರೀತಿ ಅವಳು ಒಂದು ದಿನವಾದರೂ ಸ್ವಲ್ಪವೂ ಬೇಸರವಿಲ್ಲದೆ ಪಿತೃಶುಶ್ರೂಷೆಯನ್ನು ಬಹಳ ಶ್ರದ್ಧೆಯಿಂದ ಮಾಡಿಕೊಂಡಿರುತ್ತಿದ್ದಳು. ಪ್ರಾಯದಲ್ಲೊಂದು ದಿನ ಹೂಗಳನ್ನು ಬಿಡಿಸಲು ಕಾಡಿನಲ್ಲಿ ಬಹುದೂರ ಹೋಗಿ ಅವಳು ಮನೋಹರವಾದ ಬಗೆಬಗೆಯ ಹೂಗಳನ್ನು ಬಿಡಿಸಿ ಬುಟ್ಟಿಯಲ್ಲಿಟ್ಟುಕೊಂಡು ಹಿಂತಿರುಗಿ ಬರುತ್ತಿದ್ದಳು.

ನಿವರ್ತಮಾನಾಂ ತಾಂ ಕನ್ಯಾಂ ವಿದ್ಯಾಧರಕುಮಾರಕೌ ।
ಸುದರ್ಶನ ಸುಕರ್ಣಾಖ್ಯೌ ವಿಮಾನಸ್ಥೌ ದದರ್ಶತುಃ ॥ ೧೩ ॥
ತಾಂ ದೃಷ್ಟ್ವಾ ಗಾಲವಸುತಾಂ ರೂಪಯೌವನಶಾಲಿನೀಂ ॥ ೧೪ ॥
ಕಾಮಸ್ಯ ಪತ್ನೀಂ ಲಲಿತಾಂ ರತಿಂ ಮೂರ್ತಿಮತೀಮಿವ ।
ಸುದರ್ಶನಾಽಭಿಧೋ ಜ್ಯೇಷ್ಠೋ ವಿದ್ಯಾಧರಕುಮಾರಕಃ ।
ಹರ್ಷಸಂಫುಲ್ಲನಯನಶ್ಚ ಕಸ್ಮೇ ಕಾಮಮೋಹಿತಃ ॥ ೧೫ ॥
ಪೂರ್ಣಚಂದ್ರಾನನಾಂ ತಾಂ ವೈ ವೀಕ್ಷಮಾಣೋ ಮುಹುರ್ಮುಹುಃ ॥
ತಯಾ ರಿರಂಸುಕಾಮೋಽಸೌ ವಿಮಾನಾಗ್ರಾದವಾತರತ್ ।
ತಾಮುಪೇತ್ಯ ಮುನೇಃ ಕನ್ಯಾಮಿತ್ಯುವಾಚ ಸುದರ್ಶನಃ ॥ ೧೭ ॥

ಸುದರ್ಶನ ಉವಾಚ :—

ಕಾಽಸಿ ಭದ್ರೇ ಸುತಾ ಕಸ್ಯ ರೂಪಯೌವನಶಾಲಿನೀ ।
ರೂಪಮಪ್ರತಿಮಂ ಹ್ಯೇತದಾಹ್ಲಾದಯತಿ ಮೇ ಮನಃ ॥ ೧೮ ॥
ತ್ವಾಂ ದೃಷ್ಟ್ವಾ ರತಿಸಂಕಾಶಾಂ ಬಾಧತೇ ಮಾಂ ಮನೋಭವಃ ।
ಸುಕಂಠನಾಮಧೇಯಸ್ಯ ವಿದ್ಯಾಧರಪತೇರಹಂ ॥ ೧೯ ॥
ಆತ್ಮಜೋ ರೂಪಸಂಪನ್ನೋ ನಾಮ್ನಾ ಚೈವ ಸುದರ್ಶನಃ ।
ಪ್ರತಿಗೃಹ್ಣೀಷ್ವ ಮಾಂ ಭದ್ರೇ ರಕ್ಷ ಮಾಂ ಕರುಣಾದೃಶಾ ।
ಭರ್ತಾರಂ ಮಾಂ ಸಮಾಸಾದ್ಯ ಸರ್ವಾನ್ಭೋಗಾನವಾಪ್ಸ್ಯಸಿ ॥ ೨೦ ॥

---

೧೩–೧೭. ಆಗ ಸುದರ್ಶನ ಮತ್ತು ಸುವರ್ಣಕರೆಂಬಿಬ್ಬರು ಗಂಧರ್ವರು ವಿಮಾನದಲ್ಲಿ ಕುಳಿತು ಹೋಗುತ್ತ ಆಕೆಯನ್ನು ನೋಡಿದರು. ಹಿರಿಯವನಾದ ಸುದರ್ಶನನು, ಮನ್ಮಥನ ಮಡದಿಯಾದ ರತಿಯಂತೆ ಸುಂದರಿಯಾದ ಆ ಯುವತಿಯಲ್ಲಿ ಮೋಹಗೊಂಡು ಎವೆಯಿಕ್ಕದೆ ಆ ಚಂದ್ರವದನೆಯನ್ನೇ ದಿಟ್ಟಿಸುತ್ತ ಅವಳೊಡನೆ ಕ್ರೀಡಿಸುವ ಬಯಕೆಯಿಂದ ವಿಮಾನದಿಂದಿಳಿದು ಅವಳ ಬಳಿಗೆ ಬಂದು ಹೇಳಿದನು :—

೧೮. ಸುದರ್ಶನನು ಹೇಳುತ್ತಾನೆ:—"ರೂಪಯೌವನಾದಿಗಳಿಂದೊಪ್ಪುವ ಎಲೌ ಸುಂದರಿಯೇ! ನೀನಾರಮಗಳು? ಅಸಾಧಾರಣವಾದ ನಿನ್ನ ಈ ರೂಪಿಗೆ ನನ್ನ ಮನವು ಸೋತಿರುವುದು.

೧೯–೨೦. ರತಿಸಮಾನಳಾದ ನಿನ್ನನ್ನು ನಾನು ಕಂಡಂದಿನಿಂದ ಮದನನು ನನ್ನನ್ನು ಒಂದೇ ಸಮನೆ ಕಾಡುತ್ತಿರುವನು. ನಾನು ಸುಕಂಠನೆಂಬ ವಿದ್ಯಾಧರ ರಾಜನ ಮಗನು. ನನ್ನನ್ನು ಸುದರ್ಶನನೆನ್ನುವರು. ರೂಪವಂತನಾದ ನನ್ನಲ್ಲಿ ದಯೆತೋರಿ ಪತಿಬುದ್ಧಿಯಿಂದ ನನ್ನನ್ನು ಅನುಗ್ರಹಿಸು. ಇದರಿಂದ ನೀನು ಸಮಸ್ತ ಭೋಗಗಳನ್ನೂ ಅನುಭವಿಸುವೆ."

ಇತ್ಯಾಕರ್ಣ್ಯ ವಚಸ್ತಸ್ಯ ವಿದ್ಯಾಧರಸುತಸ್ಯ ಸಾ ।
ತದಾ ಕಾಂತಿಮತೀ ವಾಕ್ಯಂ ಧರ್ಮಯುಕ್ತಮಭಾಷತ ॥ ೨೧ ॥
ಸುದರ್ಶನ ಮಹಾಭಾಗ ವಿದ್ಯಾಧರಪತೇಃ ಸುತ ।
ಆತ್ಮಜಾಂ ಮಾಂ ವಿಜಾನೀಹಿ ಗಾಲವಸ್ಯ ಮಹಾತ್ಮನಃ ॥ ೨೨ ॥
ಕನ್ಯಾ ಚಾಽಹಮನೂಢಾಽಸ್ಮಿ ಪಿತೃಶುಶ್ರೂಷಣೇ ರತಾ ॥ ೨೩ ॥
ಬಲ್ಯರ್ಥಂ ಹಿ ಪಿತುಶ್ಚಾಽಹಂ ಪುಷ್ಪಾಣ್ಯಾಹರ್ತುಮಾಗತಾ ।
ಆಹರಂತ್ಯಾಶ್ಚ ಪುಷ್ಪಾಣಿ ಯಾಮ ಏಕೋ ನ್ಯವರ್ತತ ॥ ೨೪ ॥
ಮದ್ವಿಲಂಬೇನ ಸಮುನಿರ್ದೇವತಾರ್ಚನತತ್ಪರಃ ।
ಕೋಪಂ ವಿಧಾಸ್ಯತೇ ನೂನಂ ತಪಸ್ವೀ ಮುನಿಪುಂಗವಃ ॥ ೨೫ ॥
ತಚ್ಛೀಘ್ರಮದ್ಯ ಗಚ್ಛಾಮಿ ಪುಷ್ಪಾಣ್ಯಾಹೃತಾನಿ ಮೇ ।
ಕನ್ಯಾಶ್ಚ ಪಿತುರಾಧೀನಾ ನಸ್ವತಂತ್ರಾಃ ಕದಾಚನ ।
ಯದಿ ಮಾಮಿಚ್ಛತಿ ಭವಾನ್ ಪಿತರಂ ಮಮ ಯಾಚಯ ॥ ೨೬ ॥
ಇತಿ ವಿದ್ಯಾಧರ ಸುತಮುಕ್ತ್ವಾ ಕಾಂತಿಮತೀ ತದಾ ।
ಪಿತುರಾಶಂಕಿತಾ ತೂರ್ಣಮಾಶ್ರಮಂ ಗಂತುಮುದ್ಯತಾ ॥ ೨೭ ॥

---

೨೧–೨೩. ಕಾಂತಿಮತಿಯು ಸುದರ್ಶನನಾಡಿದ ಮಾತುಗಳನ್ನು ಕೇಳಿ ಅವನನ್ನು ಕುರಿತು ಧರ್ಮಸಮ್ಮತವಾಗಿ ಹೀಗೆ ಹೇಳಿದಳು:—"ಎಲೈ ಪುಣ್ಯ ಶಾಲಿಯೂ, ವಿದ್ಯಾಧರರಾಜಕುವರನೂ ಆದ ಸುದರ್ಶನನೇ! ನಾನು ಗಾಲವ ಮಹರ್ಷಿಯ ಮಗಳು. ಅವಿವಾಹಿತಳಾದ ಕನ್ಯೆ. ತಂದೆಯ ಶುಶ್ರೂಷೆಯಲ್ಲಿ ನಿರತಳು.

೨೪. ನಾನು ದೇವತಾ ಪೂಜೆಗೆ ಹೂಗಳನ್ನು ಬಿಡಿಸಿಕೊಂಡುಹೋಗಲು ಬಂದೆನು. ಈ ಹೂಬಿಡಿಸುವಿಕೆಯಲ್ಲಿಯೆ ಒಂದು ಯಾಮವು ಕಳೆದು ಹೋಯಿತು.

೨೫. ದೇವತಾಪೂಜೆಯಲ್ಲಿ ತುಂಬ ಆಸಕ್ತನಾದ ತಪಸ್ವಿಯೂ, ಋಷಿ ವರ್ಯನೂ ಆದ ನಮ್ಮ ತಂದೆ ಗಾಲವನು ನನ್ನ ಆಲಸ್ಯಕ್ಕೆ ಬಹುವಾಗಿ ಕೋಪ ಗೊಳ್ಳುವನು.

೨೬–೨೭. ಆದುದರಿಂದ ನಾನು ಬೇಗನೆ ಹೋಗಬೇಕು. ಅಲ್ಲದೆ ಕನ್ಯೆ ಯರು ತಂದೆಯ ಅಧೀನರು. ಅವರಿಗೆ ಸ್ವಾತಂತ್ರ್ಯವೆಂದಿಗೂ ಇರುವುದಿಲ್ಲ. ನೀನು ನನ್ನನ್ನು ಬಯಸುವುದಾದರೆ ನಮ್ಮ ತಂದೆಯ ಬಳಿಗೆ ಬಂದು ಆತನನ್ನು ಬೇಡು." ಹೀಗೆ ನುಡಿದು ಆಕೆಯು ತಂದೆಯ ಹೆದರಿಕೆಯಿಂದ ಆಶ್ರಮದ ಕಡೆಗೆ ನಡೆದಳು.

ಗಚ್ಛಂತೀಂ ತಾಂ ಸಮಾಲೋಕ್ಯ ವಿದ್ಯಾಧರಕುಮಾರಕಃ ।
ತೂರ್ಣಂ ಜಗ್ರಾಹ ಕೇಶೇಷು ಧಾವಿತ್ವಾ ಮದನಾರ್ದಿತಃ ॥ ೨೮ ॥
ಅಭ್ಯೇತ್ಯ ನಿಜಕೇಶೇಷು ಗೃಹ್ಣಂತಂ ತಂ ವಿಲೋಕ್ಯ ಸಾ ।
ಉಚ್ಚೈಶ್ಚಕ್ರಂದ ಸಹಸಾ ಕುರರೀವ ಮುನೇಃ ಸುತಾ ॥ ೨೯ ॥
ಅಸ್ಮಾದ್ವಿದ್ಯಾಧರಸುತಾಜ್ಜನಕ ತ್ರಾಹಿ ಮಾಂ ವಿಭೋ ।
ಬಲಾದ್ಗೃಹ್ಣಾತಿ ದುಷ್ಟಾತ್ಮಾ ವಿದ್ಯಾಧರಸುತೋಽದ್ಯಮಾಂ ॥ ೩೦ ॥
ಇತ್ಥಮುಚ್ಚೈಃ ಪ್ರಚುಕ್ರೋಶ ಸ್ವಾಶ್ರಮಾನ್ನಾಽತಿದೂರತಃ ।
ತದಾಕ್ರಂದಿತಮಾಕರ್ಣ್ಯ ಗಂಧಮಾದನವಾಸಿನಃ ॥ ೩೧ ॥
ಮುನಯಸ್ತು ಪುರಸ್ಕೃತ್ಯ ಗಾಲವಂ ಮುನಿಪುಂಗವಂ ।
ಕಿಮೇತದಿತಿ ವಿಜ್ಞಾತುಂ ತಂ ದೇಶಂ ತೂರ್ಣಮಾಯಯುಃ ॥ ೩೨ ॥
ತಂ ದೇಶಂ ತು ಸಮಾಗತ್ಯ ಸರ್ವೇ ತೇ ಋಷಿಪುಂಗವಾಃ ।
ವಿದ್ಯಾಧರಗೃಹೀತಾಂ ತಾಂ ದದೃಶುರ್ಮುನಿಕನ್ಯಕಾಂ ॥ ೩೩ ॥
ವಿದ್ಯಾಧರಸುತಂ ಚಾಽನ್ಯಮಂತಿಕೇ ಸಮುಪಸ್ಥಿತಂ ।
ಏತದ್ದೃಷ್ಟ್ವಾ ಮಹಾಯೋಗೀ ಗಾಲವೋ ಮುನಿಪುಂಗವಃ ॥ ೩೪ ॥
ಗತಃ ಕೋಪವಶಂ ಕಿಂಚಿದ್ದುರಾತ್ಮಾನಂ ಶಶಾಪ ತಂ ॥ ೩೫ ॥

---

೨೮–೩೦. ಆಗ ಕಾಮಪೀಡಿತನಾದ ಸುದರ್ಶನನು ಆಕೆಯ ಹಿಂದೆ ಓಡಿ ಹೋಗಿ ಆಕೆಯ ಕೂದಲನ್ನು ಹಿಡಿದು ನಿಲ್ಲಿಸಿದನು. ಆ ದುಷ್ಟ ವಿದ್ಯಾಧರನು ತನ್ನನ್ನು ಬಲಾತ್ಕಾರದಿಂದ ಹಿಡಿಯಲು ಕಾಂತಿಮತಿಯು, "ಅಪ್ಪಾ! ಈ ವಿದ್ಯಾಧರನಿಂದ ಬಿಡಿಸಿ ನನ್ನನ್ನು ಕಾಪಾಡು. ದುಷ್ಟನಾದ ಈ ವಿದ್ಯಾಧರನ ಮಗನು ನನ್ನನ್ನು ಬಲಾತ್ಕಾರದಿಂದ ಹಿಡಿದೆಳೆಯುತ್ತಿರುವನು" ಎಂದು ಹೆಣ್ಣುಜಿಂಕೆಯಂತೆ ಹೆದರಿ ಗಟ್ಟಿಯಾಗಿ ಅರಚಿಕೊಂಡಳು.

೩೧–೩೨. ಆ ಸ್ಥಳವು ಆಶ್ರಮಕ್ಕೆ ಬಹು ಸಮೀಪವಾಗಿಯೇ ಇದ್ದುದರಿಂದ ಅದನ್ನು ಕೇಳಿ ಗಾಲವನೇ ಮೊದಲಾದ ಗಂಧಮಾದನವಾಸಿಗಳಾದ ಮುನಿಗಳೆಲ್ಲರೂ ಇದೇನಿರಬಹುದೆಂದು ನೋಡಲೋಸುಗ ಬೇಗನೆಯೆ ಅಲ್ಲಿಗೆ ಓಡಿ ಬಂದರು.

೩೩–೩೪. ಗಾಲವನೂ, ಆಶ್ರಮದ ಮುನಿಗಳೂ ಆ ವಿದ್ಯಾಧರನನ್ನೂ, ಅವನ ಕೈಗೆ ಸಿಕ್ಕಿ ತೊಳಲುತ್ತಿರುವ ಕಾಂತಿಮತಿಯನ್ನೂ, ಅವರ ಬಳಿ ನಿಂತಿರುವ ಮತ್ತೊಬ್ಬ ವಿದ್ಯಾಧರನನ್ನೂ ಕಂಡರು.

೩೫–೩೬. ಆತನನ್ನು ಕಂಡು ಮಹಾಯೋಗಿಯಾದ ಗಾಲವಮಹರ್ಷಿಯು ಬಹಳ ಕೋಪಗೊಂಡು ಆ ದುರಾತ್ಮನನ್ನು ಈ ರೀತಿ ಶಪಿಸಿದನು:—"ಎಲಾ ವಿದ್ಯಾಧರಾಧಮನೇ! ನೀನು ರಾಕ್ಷಸಸ್ವಭಾವವುಳ್ಳ ಭೇತಾಳರು ಮಾಡಬಹು

ಕೃತವಾನೀದೃಶಂ ಕಾರ್ಯಂ ಯತ್ತ್ವಂ ವಿದ್ಯಾಧರಾಧಮ ।
ತದ್ಯಾಹಿ ಮಾನುಷೀಂ ಯೋನಿಂ ಸ್ವಸ್ಯ ದುಷ್ಕರ್ಮಣಃ ಫಲಂ ॥ ೩೬ ॥
ಸಂಪ್ರಾಪ್ಯ ಮಾನುಷಂ ಜನ್ಮ ಬಹುದುಃಖಸಮಾಕುಲಂ ।
ಅಚಿರೇಣತು ಕಾಲೇನ ತಸ್ಮಿನ್ನೇವ ತು ಜನ್ಮನಿ ।
ಮನುಷ್ಯೈರಪಿ ನಿಂದ್ಯಂ ತದ್ವೇತಾಲತ್ವಂ ಪ್ರಯಾಸ್ಯಸಿ ॥ ೩೭ ॥
ಮಾಂಸಾನಿ ಶೋಣಿತಂ ಚೈವ ಸರ್ವದಾ ಭಕ್ಷಯಿಷ್ಯಸಿ ॥ ೩೮ ॥
ವೇತಾಲಾ ರಾಕ್ಷಸಪ್ರಾಯಾ ಬಲಾದ್ಗೃಹ್ಣಂತಿ ಯೋಷಿತಃ ।
ತಸ್ಮಾತ್ತ್ವಂ ಮಾನುಷೋ ಭೂತ್ವಾ ವೇತಾಲತ್ವಮವಾಪ್ಸ್ಯಸಿ ॥ ೩೯ ॥
ತವ ದುಷ್ಕರ್ಮಣೋ ಯೋಽಸಾವನುಮಂತಾ ಕನಿಷ್ಠಕಃ ।
ಸುಕರ್ಣ ಇತಿ ವಿಖ್ಯಾತೋ ಭವಿತಾ ಸೋಽಪಿ ಮಾನುಷಃ ॥ ೪೦ ॥
ಕಿಂ ತು ಸಾಕ್ಷಾನ್ನಕೃತವಾನ್ಯತೋಽಸಾವೀದೃಶೀಂ ಕ್ರಿಯಾಂ ।
ತಸ್ಮಾನ್ಮನುಷತ್ವಮೇವಾಸ್ಯ ವೇತಾಲತ್ವಂ ತು ನೋ ಭವೇತ್ ॥ ೪೧ ॥
ವಿಜ್ಞಪ್ತಿಕೌತುಕಾಭಿಖ್ಯಂ ಯದಾ ವಿದ್ಯಾಧರಾಧಿಪಂ ।
ದ್ರಕ್ಷ್ಯತೇಽಸೌ ಕನಿಷ್ಠಸ್ತೇ ತದಾ ಶಾಪಾದ್ವಿಮೋಕ್ಷ್ಯತೇ ॥ ೪೨ ॥
ಈದೃಶ್ಯಸ್ಯ ತು ಯಃ ಕರ್ತಾ ಮಹಾಪಾಪಸ್ಯ ಕರ್ಮಣಃ ।
ಸತ್ವಂ ಸಂಪ್ರಾಪ್ಯ ಮಾನುಷ್ಯಂ ತಸ್ಮಿನ್ನೇವತು ಜನ್ಮನಿ ॥ ೪೩ ॥

---

ದಾದಂತಹ ಅತಿ ನೀಚಕೃತ್ಯವನ್ನು ಮಾಡಿರುವೆ. ದುಷ್ಕರ್ಮದ ಪರಿಣಾಮವಾಗಿ ನೀನು ಬಹು ದುಃಖಭೂಯಿಷ್ಠವಾದ ಮಾನುಷಜನ್ಮವನ್ನು ಪಡೆ.

೩೭–೩೮. ಮಾನುಷಜನ್ಮದಲ್ಲಿಯೂ ಬಹುಕಾಲವಿದ್ದು ಬಳಿಕ ಮನುಷ್ಯರಿಗೂ ಹೇಯವಾದಂತಹ ಭೇತಾಳತ್ವವನ್ನು ಪಡೆದು ರಕ್ತಮಾಂಸಗಳನ್ನಾವಾಗಲೂ ಭಕ್ಷಿಸುತ್ತಿರು.

೩೯–೪೦. ಎಲಾ ದುಷ್ಟಗಂಧರ್ವನೇ! ಭೇತಾಳರು ರಾಕ್ಷಸರಿಗೆ ಸಮಾನರಾದವರು. ಅವರು ಹೆಂಗಸರನ್ನು ಬಲಾತ್ಕಾರವಾಗಿ ಅಪಹರಿಸುತ್ತಾರೆ. ನೀನೂ ಅಂತಹ ಕೆಲಸವನ್ನೇ ಮಾಡಿರುವೆಯಾದುದರಿಂದ ಭೇತಾಳತ್ವವನ್ನೇ ಪಡೆಯುವವನಾಗು. ಈ ನಿನ್ನ ತಮ್ಮನು ನಿನ್ನ ನೀಚಕೃತ್ಯವನ್ನೊಪ್ಪಿ ನೋಡುತ್ತಿದ್ದಕಾರಣ ಅವನೂ ಮನುಷ್ಯಜನ್ಮವನ್ನು ತಾಳುವನು.

೪೧–೪೨. ಆದರೆ ಅವನಿಗೆ ಭೇತಾಳಜನ್ಮವು ಬರುವುದಿಲ್ಲ. ಅದು ದುಷ್ಕರ್ಮಿಯಾದ ನಿನ್ನೊಬ್ಬನಿಗೆಮಾತ್ರವೇ ಬರತಕ್ಕುದು. ಇವನು ವಿಜ್ಞಪ್ತಿಕೌತುಕನೆಂಬ ವಿದ್ಯಾಧರರಾಜನನ್ನು ಕಂಡಾಗ ಶಾಪದಿಂದ ಬಿಡುಗಡೆಹೊಂದುವನು.

೪೩–೪೪. ನೀನು ಇಂತಹ ನೀಚಕೃತ್ಯವನ್ನು ಮಾಡಿರುವೆಯಾಗಿ ಮಾನುಷಜನ್ಮವನ್ನು ಪಡೆದು ಅದೇ ಜನ್ಮದಲ್ಲಿಯೇ ಭೇತಾಳತ್ವವನ್ನೂ ಪಡೆದು ಬಹುಕಾಲ

ವೇತಾಲಜನ್ಮ ಸಂಪ್ರಾಪ್ಯ ಚಿರಂ ಲೋಕೇ ಚರಿಷ್ಯಸಿ ।
ಇತ್ಯುಕ್ತ್ವಾ ಗಾಲವಃ ಕನ್ಯಾಂ ಗೃಹೀತ್ವಾ ಮುನಿಭಿಃ ಸಹ ।
ವಿದ್ಯಾಧರಸುತೌ ಶಪ್ತ್ವಾ ಸ್ವಾಶ್ರಮಂ ಪ್ರತಿನಿರ್ಯಯೌ ॥ ೪೪ ॥
ತತಸ್ತಸ್ಮಿನ್ಮಹಾಭಾಗೇ ನಿರ್ಯಾತೇ ಮುನಿಪುಂಗವೇ ।
ಸುದರ್ಶನ ಸುಕರ್ಣಾಖ್ಯೌ ವಿದ್ಯಾಧರಪತೇಃ ಸುತೌ ॥ ೪೫ ॥
ಮುನಿಶಾಪೇನ ದುಃಖಾರ್ತೌ ಚಿಂತಯಾಮಾಸತುರ್ಭೃಶಂ ॥ ೪೬ ॥
ಕರ್ತವ್ಯಂ ತೌ ವಿನಿಶ್ಚಿತ್ಯ ಸುದರ್ಶನ ಸುಕರ್ಣಕೌ ।
ಗೋವಿಂದಸ್ವಾಮಿನಾಮಾನಂ ಯಮುನಾತಟವಾಸಿನಂ ॥ ೪೭ ॥
ಬ್ರಾಹ್ಮಣಂ ಶೀಲಸಂಪನ್ನಂ ಪಿತೃತ್ವೇ ಪರಿಕಲ್ಪ್ಯ ತೌ ।
ಪರಿತ್ಯಜ್ಯ ಸ್ವಕಂ ರೂಪಮುಜಾಯೇತಾಂ ತದಾತ್ಮಜೌ ॥ ೪೮ ॥
ವಿಜಯಾಽಶೋಕದತ್ತಾಖ್ಯೌ ತಸ್ಯ ಪುತ್ರೌ ಬಭೂವತುಃ ।
ಸುತೋ ವಿಜಯದತ್ತಾಖ್ಯೋ ಜ್ಯೇಷ್ಠೋ ಜಜ್ಞೇ ಸುದರ್ಶನಃ ॥ ೪೯ ॥
ಅಶೋಕದತ್ತನಾಮಾ ತು ಸುಕರ್ಣಶ್ಚ ಕನಿಷ್ಠಕಃ ।
ವಿಜಯಾಶೋಕದತ್ತೌ ತು ಕ್ರಮಾದ್ಯೌವನಮಾಪತುಃ ॥ ೫೦ ॥
ಏತಸ್ಮಿನ್ನೇವ ಕಾಲೇತು ಯಮುನಾಯಾಸ್ತಟೇ ಶುಭೇ ।
ಅನಾವೃಷ್ಟ್ಯಾತು ದುರ್ಭಿಕ್ಷಮಭೂದ್ದ್ವಾದಶವಾರ್ಷಿಕಂ ॥ ೫೧ ॥

---

ಭೂಲೋಕದಲ್ಲಿ ಅಲೆಯುತ್ತಿರುತ್ತೀಯೆ'' ಎಂದು ಶಪಿಸಿ ತನ್ನ ಮಗಳನ್ನು ಕರೆದುಕೊಂಡು ಮುನಿಗಳೊಡನೆ ಆಶ್ರಮಕ್ಕೆ ಬಂದನು.

೪೫–೪೮. ಮಹಾಭಾಗನಾದ ಗಾಲವ ಮುನಿಪುಂಗವನು ಆ ರೀತಿ ತೆರಳಿದ ತರುವಾಯ ಸುದರ್ಶನ ಸುಕರ್ಣರೆಂಬ ಆ ವಿದ್ಯಾಧರಪುತ್ರರು ಮುನಿಶಾಪದಿಂದ ದುಃಖಗೊಂಡು ಕರ್ತವ್ಯವನ್ನು ಕುರಿತು ಬಹಳವಾಗಿ ಯೋಚಿಸಿ, ಕಡೆಗೆ ಯಮುನಾತೀರದಲ್ಲಿ ವಾಸಿಸುತ್ತಿರುವ ಸಾಧುಸ್ವಭಾವದವನಾದ ಗೋವಿಂದ ಸ್ವಾಮಿಯೆಂಬೊಬ್ಬ ಬ್ರಾಹ್ಮಣನ ಮಕ್ಕಳಾಗಿ ಹುಟ್ಟುವಂತೆ ನಿಶ್ಚಯಿಸಿಕೊಂಡು ತಮ್ಮ ರೂಪಗಳನ್ನು ಬಿಟ್ಟು ಆತನ ಮಕ್ಕಳಾಗಿ ಹುಟ್ಟಿದರು.

೪೯–೫೦. ಇವರಿಬ್ಬರೂ ವಿಜಯ ಅಶೋಕದತ್ತರೆಂಬ ಹೆಸರಿನಿಂದ ಆ ವಿಪ್ರನ ಮಕ್ಕಳಾಗಿ ಭೂಲೋಕದಲ್ಲಿ ಜನಿಸಿದರು. ಹಿರಿಯನಾದ ಸುದರ್ಶನನು ವಿಜಯನು. ಕಿರಿಯವನಾದ ಸುಕರ್ಣನು ಅಶೋಕದತ್ತನು. ಇವರಿಬ್ಬರೂ ಕಾಲಕ್ರಮದಲ್ಲಿ ಬೆಳೆದು ಪ್ರಾಯಕ್ಕೆ ಬಂದರು.

೫೧. ಇದೇ ಸಮಯದಲ್ಲಿಯೆ ಪರಮಮಂಗಳಕರವಾದ ಯಮುನಾತೀರದಲ್ಲಿ ಮಳೆಗಳೇ ನಿಂತುಹೋಗಿ ಹನ್ನೆರಡುವರ್ಷದ ಬರಗಾಲವು ಬಂದೊದಗಿತು.

ಗೋವಿಂದಸ್ವಾಮಿನಾಮಾತು ಬ್ರಾಹ್ಮಣೋ ವೇದಪಾರಗಃ ।
ದುರ್ಭಿಕ್ಷೋಪಹತಾಂ ದೃಷ್ಟ್ವಾ ತದಾನೀಂ ಸ ನಿಜಾಂ ಪುರೀಂ ।
ಪ್ರಯಯೌ ಕಾಶೀನಗರಂ ಸಪುತ್ರಃ ಸಹಭಾರ್ಯಯಾ ॥ ೫೨ ॥
ಸ ಪ್ರಯಾಗಂ ಸಮಾಸಾದ್ಯ ಪುಣ್ಯಂ ದೃಷ್ಟ್ವಾ ಮಹಾವಟಂ ।
ಕಪಾಲಮಾಲಾಭರಣಂ ಸೋಽಪಶ್ಯದ್ಯತಿನಂ ಪುರಃ ॥ ೫೩ ॥
ಗೋವಿಂದಸ್ವಾಮಿನಾಮಾ ತು ನಮಶ್ಚಕ್ರೇ ಸತಂ ಮುನಿಂ ॥ ೫೪ ॥
ಸಪುತ್ರಸ್ಯ ಸಭಾರ್ಯಸ್ಯ ಸೋಽವಾದೀದಾಶಿಷೋ ಮುನಿಃ ।
ಇದಂ ಚ ವಚನಂ ಪ್ರಾಹ ಗೋವಿಂದಸ್ವಾಮಿನಂ ಪ್ರತಿ ॥ ೫೫ ॥
ಜ್ಯೇಷ್ಠೇನಾನೇನ ಪುತ್ರೇಣ ಸಾಂಪ್ರತಂ ಬ್ರಾಹ್ಮಣೋತ್ತಮ ।
ಕ್ಷಿಪ್ರಂ ವಿಜಯದತ್ತೇನ ವಿಯೋಗಸ್ತೇ ಭವಿಷ್ಯತಿ ॥ ೫೬ ॥
ಇತಿ ತಸ್ಯ ವಚಃ ಶ್ರುತ್ವಾ ಗೋವಿಂದಸ್ವಾಮಿನಾಮಕಃ ।
ಸೂರ್ಯೇ ಚಾಽಸ್ತಂಗತೇ ತತ್ರ ಸಾಂಧ್ಯಂ ಕರ್ಮ ಸಮಾಪ್ಯಚ ॥ ೫೭ ॥
ಸಭಾರ್ಯಃ ಸಸುತೋ ವಿಪ್ರಃ ಸುದೂರಾಧ್ವಸಮಾಕುಲಃ ।
ಉವಾಸ ತಸ್ಯಾಂ ಶರ್ವರ್ಯಾಂ ಶೂನ್ಯೇ ವೈ ದೇವತಾಲಯೇ ॥ ೫೮ ॥
ತದಾ ತ್ವಶೋಕದತ್ತಶ್ಚ ಬ್ರಾಹ್ಮಣೀ ಚ ಸಮಾಕುಲೌ ।
ವಸ್ತ್ರೇಣಾಸ್ತೀರ್ಯ ಪೃಥಿವೀಂ ರಾತ್ರೌ ನಿದ್ರಾಂ ಸಮಾಪತುಃ ॥ ೫೯ ॥

---

೫೨. ವೇದಪಾರಂಗತನಾದ ಆ ಗೋವಿಂದಸ್ವಾಮಿಯು ದುರ್ಭಿಕ್ಷದಿಂದ ಪೀಡಿತನಾಗಿ ಹೆಂಡತಿ ಮಕ್ಕಳೊಡನೆ ಕಾಶೀಪಟ್ಟಣಕ್ಕೆ ಹೊರಟನು.

೫೩–೫೫. ದಾರಿಯಲ್ಲಿ ಮಹಾವಟವೆಂದು ಸುಪ್ರಸಿದ್ಧವಾದ ಪುಣ್ಯಕರವಾದ ಪ್ರಯಾಗಕ್ಷೇತ್ರವನ್ನು ತಲಪಿದನು. ಅಲ್ಲಿ ಆತನು ಕಪಾಲಮಾಲಾಲಂಕೃತನಾದ ಒಬ್ಬ ಯತಿಯನ್ನು ಕಂಡನು. ಭಕ್ತಿಯಿಂದ ಆತನನ್ನು ನಮಸ್ಕರಿಸಲು ಆ ಯತಿಯು ದಾರಾಪುತ್ರರಿಂದ ಕೂಡಿದ ಅವನನ್ನು ಆಶೀರ್ವದಿಸಿ ಇಂತೆಂದನು:

೫೬. "ಅಯ್ಯಾ ಬ್ರಾಹ್ಮಣನೇ! ನಿನ್ನ ದೊಡ್ಡಮಗನಾದ ವಿಜಯದತ್ತನ ವಿಯೋಗವೀಗಲೇ ನಿನಗೊದಗುವುದು."

೫೭–೫೮. ಗೋವಿಂದಸ್ವಾಮಿಯು ಈ ಮಾತನ್ನು ಕೇಳಿ, ಹೊತ್ತು ಮುಳುಗಲು ಸಾಯಂಕಾಲದ ಸಂಧ್ಯಾದಿಕೃತ್ಯಗಳನ್ನು ಮುಗಿಸಿ ಬಹುದೂರ ನಡೆದು ದಣಿದಿದ್ದುದರಿಂದ ಹೆಂಡತಿ ಮಕ್ಕಳೊಡನೆ ಆ ರಾತ್ರಿ ಅಲ್ಲಿಯೇ ಒಂದು ವಿಗ್ರಹವಿಲ್ಲದ ಪಾಳುದೇವಾಲಯದಲ್ಲಿ ತಂಗಿದನು.

೫೯–೬೦. ಬಳಿಕ ಆತನ ಹೆಂಡತಿಯೂ, ಕಿರಿಯ ಮಗನಾದ ಅಶೋಕದತ್ತನೂ ತುಂಬ ಬಳಲಿ ನೆಲದಮೇಲೆ ಒಂದು ಬಟ್ಟೆಯನ್ನು ಹಾಸಿಕೊಂಡು

ತತೋ ವಿಜಯದತ್ತಸ್ತು ದೂರಮಾರ್ಗವಿಲಂಘನಾತ್ ।
ಬಭೂವಾಽತ್ಯಂತಮಲಸೋ ಭೃಶಂ ಶೀತಜ್ವರಾರ್ದಿತಃ ॥ ೬೦ ॥
ಗೋವಿಂದಸ್ವಾಮಿನಾ ಪಿತ್ರಾ ಶೀತಬಾಧಾನಿವೃತ್ತಯೇ ।
ಗಾಢಮಾಲಿಂಗ್ಯಮಾನೋಽಪಿ ಶೀತಬಾಧಾಂ ನಸೋಽತ್ಯಜತ್ ॥ ೬೧ ॥
ಬಾಧತೇಽತ್ಯರ್ಥಮಧುನಾ ತಾತ ಮಾಂ ಶೀತಲೋ ಜ್ವರಃ ।
ಏತದ್ಬಾಧಾನಿವೃತ್ತ್ಯರ್ಥಂ ವಹ್ನಿಮಾನಯ ಮಾಚಿರಂ ॥ ೬೨ ॥
ಇತಿ ಪುತ್ರವಚಃ ಶ್ರುತ್ವಾ ಸರ್ವತ್ರಾಗ್ನಿಂ ಗವೇಷಯನ್ ।
ಅಲಬ್ಧವಹ್ನಿಃ ಪ್ರೋವಾಚ ಪುನರಭ್ಯೇತ್ಯ ಪುತ್ರಕಂ ॥ ೬೩ ॥
ನ ವಹ್ನಿಂ ಪುತ್ರ ವಿಂದಾಮಿ ಮಾರ್ಗಮಾಣೋಽಪಿ ಸರ್ವಶಃ ।
ರಾತ್ರಿಮಧ್ಯೇತು ಸಂಪ್ರಾಪ್ತೇ ದ್ವಾರೇಷು ಪಿಹಿತೇಷು ಚ ।
ನಿದ್ರಾಪರವಶಾಃ ಪೌರಾಃ ನೈವ ದಾಸ್ಯಂತಿ ಪಾವಕಂ ॥ ೬೪ ॥
ಇತ್ಥಂ ವಿಜಯದತ್ತೋಽಸಾವುಕ್ತಃ ಪಿತ್ರಾ ಜ್ವರಾತುರಃ ॥ ೬೫ ॥
ಯಯಾಚೇ ವಹ್ನಿಮೇವಾಽಸೌ ಪಿತರಂ ದೀನಯಾ ಗಿರಾ ।
ಶೀತಜ್ವರಸಮುದ್ಭೂತಶೀತಬಾಧಾಪ್ರಪೀಡಿತಂ ॥ ೬೬ ॥
ಹಿಮಶೀಕರವಾನ್ವಾಯುರ್ದ್ವಿಗುಣಂ ಬಾಧತೇಽದ್ಯಮಾಂ ।
ವಹ್ನಿರ್ನ ಲಬ್ಧ ಇತಿ ವೈ ಮಿಥ್ಯೈವೋಕ್ತಂ ಪಿತಸ್ತ್ವಯಾ ॥ ೬೭ ॥

---

ಬೇಗನೆಯೆ ನಿದ್ರಿಸಿದರು. ಆಗ ವಿಜಯದತ್ತನಿಗೆ ಬಹುದೂರ ನಡೆದುದರಿಂದ ತೀವ್ರವಾದ ಛಳಿಜ್ವರವು ಬಂದು ಬಾಧಿಸತೊಡಗಿತು.

೬೧. ಅದನ್ನು ನಿಲ್ಲಿಸುವುದಕ್ಕಾಗಿ ಗೋವಿಂದಸ್ವಾಮಿಯು ಆತನನ್ನೆಷ್ಟು ಗಟ್ಟಿಯಾಗಿ ಅಪ್ಪಿ ಹಿಡಿದರೂ ಆ ಶೀತಜ್ವರವು ಬಿಡಲೇ ಇಲ್ಲವು.

೬೨. ಆಗ ಮಗನು ಅಪ್ಪನಿಗೆ ಹೇಳಿದನು: "ಅಪ್ಪಾ! ಈ ಛಳಿಯು ಬಹಳ ಕಾಡುತ್ತಿದೆ; ತಡೆಯಲಾರೆ. ಎಲ್ಲಿಂದಲಾದರೂ ಕಾಯಿಸಿಕೊಳ್ಳಲು ಬೇಗ ಬೆಂಕಿಯನ್ನು ತೆಗೆದುಕೊಂಡುಬಾ."

೬೩–೬೪. ಮಗನ ಈ ಮಾತನ್ನು ಕೇಳಿ ಆತನು ಎಲ್ಲೆಲ್ಲಿ ಹುಡುಕಿದರೂ ಬೆಂಕಿಯನ್ನು ಕಾಣದೆ ಹಿಂತಿರುಗಿ ಬಂದು, "ಮಗು! ಎಲ್ಲೆಲ್ಲಿ ಹುಡುಕಿದರೂ ಬೆಂಕಿಯು ದೊರಕಲಿಲ್ಲ. ನಡುರಾತ್ರಿಯಾದುದರಿಂದ ಎಲ್ಲರೂ ಬಾಗಿಲುಹಾಕಿ ಮಲಗಿರುವರು. ಒಬ್ಬರೂ ಬೆಂಕಿಯನ್ನು ಕೊಡುವುದಿಲ್ಲ" ಎಂದು ಮಗನಿಗೆ ತಿಳಿಸಿದನು.

೬೫–೬೭. ತಂದೆಯು ಈ ರೀತಿ ಹೇಳಿದರೂ, ಜ್ವರದಿಂದ ಬಾಧಿತನಾದ ವಿಜಯದತ್ತನು ಅತಿ ದೈನ್ಯದಿಂದ ಮತ್ತೆಮತ್ತೆ ಬೆಂಕಿಯನ್ನೇ ಬೇಡಿದನು. ಶೀತಜ್ವರದಿಂದ ನರಳುತ್ತಿರುವ ತನ್ನನ್ನು ಇಬ್ಬನಿಯಿಂದ ಕೂಡಿದ ತಂಗಾಳಿಯು

ದೂರಾದೇಷ ಪುರೋಭಾಗೇ ಜ್ವಾಲಾಮಾಲಾಸಮಾಕುಲಃ ।
ಶಿಖಾಭಿರ್ಲೇಲಿಹಾನೋಽಭ್ರಂ ದೃಶ್ಯತೇ ಪಶ್ಯ ಪಾವಕಃ ॥ ೬೮ ॥
ತಂ ವಹ್ನಿಮಾನಯ ಕ್ಷಿಪ್ರಂ ತಾತ ಶೀತನಿವೃತ್ತಯೇ ।
ಇತ್ಯುಕ್ತವಂತಂ ತಂ ಪುತ್ರಂ ಸಪಿತಾ ಪ್ರತ್ಯಭಾಷತ ॥ ೬೯ ॥
ನಾಽನೃತಂ ವಚ್ಮಿ ಪುತ್ರಾಽದ್ಯ ಸತ್ಯಮೇವ ಬ್ರವೀಮ್ಯಹಂ ।
ವಹ್ನಿಮಾನ್ ಯೋಽಯಮುದ್ದೇಶೋ ದೂರಾದೇವ ವಿಲೋಕ್ಯತೇ ॥೭೦॥
ಪಿತೃಕಾನನದೇಶಂ ತಂ ಪುತ್ರ ಜಾನೀಹಿ ಸಾಂಪ್ರತಂ ।
ಯದ್ಯೇಷೋಽಭ್ರಂಲಿಹಜ್ವಾಲಃ ಪುರಸ್ತಾಜ್ಜ್ವಲತೇಽನಲಃ ॥ ೭೧ ॥
ಪುತ್ರ ವಿತ್ರಾಸಜನಕಂ ತಂ ಜಾನೀಹಿ ಚಿತಾಽನಲಂ ।
ಅಮಂಗಲೋ ನ ಸೇವ್ಯೋಽಯಂ ಚಿತಾಽಗ್ನಿಸ್ಪರ್ಶದೂಷಿತಃ ॥ ೭೨ ॥
ತಸ್ಯ ಚಾಯುಃ ಕ್ಷಯಂ ಯಾತಿ ಸೇವತೇ ಯಶ್ಚಿತಾಽನಲಂ ।
ತಸ್ಮಾತ್ತವಾಯುರ್ಹಾನಿರ್ಮಾ ಭೂಯಾದಿತಿ ಮಯಾ ಸುತ ॥ ೭೩ ॥
ಅಮಂಗಲಸ್ತಥಾಽಸ್ಪೃಶ್ಯೋ ನಾನೀತೋಽಯಂ ಚಿತಾನಲಃ ।
ಇತ್ಯುಕ್ತವಂ ತಂ ಪಿತರಂ ಸದೀನಃ ಪ್ರತ್ಯಭಾಷತ ॥ ೭೪ ॥
ಅಯಂ ಶವಾಽನಲೋ ವಾ ಸ್ಯಾದಧ್ವರಾಽನಲ ಏವವಾ ।
ಸರ್ವಥಾಽಽನೀಯತಾಮೇಷ ನೋಚೇನ್ಮೇ ಮರಣಂ ಭವೇತ್ ॥ ೭೫ ॥

---

ಮತ್ತಷ್ಟು ಬಾಧಿಸುತ್ತಿದೆಯೆಂದು ಹೇಳಿ, "ಅಪ್ಪಾ! ಬೆಂಕಿಯು ಸಿಕ್ಕಲಿಲ್ಲ ವೆಂದು ಸುಳ್ಳುಹೇಳುತ್ತೀಯೆ! ಅಗೋ ಅಲ್ಲಿ ಮುಂದೆನೋಡು! ದೂರದಲ್ಲಿ ಜ್ವಾಲೆಗಳಿಂದ ಕೂಡಿ ಆಕಾಶವನ್ನು ಮುಟ್ಟುವಂತೆ ಉರಿಯೇಳುತ್ತಿದೆ. ಅದನ್ನು ತೆಗೆದುಕೊಂಡುಬಾ ಕಾಯಿಸಿಕೊಳ್ಳುತ್ತೇನೆ" ಎಂದು ನುಡಿದನು.

೭೦–೭೪. "ಮಗು, ನಾನು ಸುಳ್ಳುಹೇಳುವುದಿಲ್ಲ. ದೂರದಲ್ಲಿ ಕಾಣುವ ಬೆಂಕಿಯು ಸ್ಮಶಾನದ್ದು. ಆ ಉರಿಯು ಚಿತೆಯದು. ಅದು ಅಮಂಗಳ; ಅದನ್ನು ಮುಟ್ಟಬಾರದು. ಚಿತಾಗ್ನಿಯನ್ನು ಸೇವಿಸುವವನ ಆಯುಸ್ಸು ಕ್ಷೀಣ ವಾಗುತ್ತದೆ. ನಿನ್ನ ಆಯುಸ್ಸು ಕ್ಷೀಣಿಸದಿರಲೆಂದು ನಾನು ಅದನ್ನು ತರಲಿಲ್ಲ. ಅಮಂಗಳಕರವೂ, ಮುಟ್ಟಬಾರದುದೂ ಆದುದರಿಂದ ನಾನು ಅದನ್ನು ತರಬಹುದೆ?" ಎಂದು ಗೋವಿಂದಸ್ವಾಮಿಯು ಮಗನಿಗೆ ಹೇಳಿದನು. ಅದಕ್ಕೆ ಮಗನು ಅತಿ ದೀನನಾಗಿ ಹೇಳುತ್ತಾನೆ:

೭೫. "ಅಪ್ಪಾ! ಅದು ಸ್ಮಶಾನಾಗ್ನಿಯೋ ಯಜ್ಞಾಗ್ನಿಯೋ ಯಾವುದಾ ದರೂ ಆಗಿರಲಿ; ಅದನ್ನು ತರಲೇಬೇಕು. ಇಲ್ಲವಾದರೆ ನಾನುಳಿಯುವುದಿಲ್ಲ."

ಪುತ್ರಸ್ನೇಹಾಭಿಭೂತೋಽಥ ಸಮಾಹರ್ತುಂ ಚಿತಾನಲಂ ।
ಗೋವಿಂದಸ್ವಾಮಿನಾಮಾತು ಶ್ಮಶಾನಂ ಶೀಘ್ರಮಭ್ಯಗಾತ್ ॥ ೭೬ ॥
ಗೋವಿಂದಸ್ವಾಮಿನಿ ಗತೇ ಸಮಾಹರ್ತುಂ ಚಿತಾಽನಲಂ ।
ತೂರ್ಣಂ ವಿಜಯದತ್ತೋಽಪಿ ತದಾ ಗಚ್ಛಂತಮನ್ವಯಾತ್ ॥ ೭೭ ॥
ಸಂಪ್ರಾಪ್ಯ ತಾಪನಿಕಟಂ ವಿಕೀರ್ಣಾಽಸ್ಥಿಚಿತಾಽನಲಂ ।
ಆಲಿಂಗನ್ನಿವ ಸೋದ್ವೇಗಂ ಶನೈರ್ನಿರ್ವೃತಿಮಾಪ್ತವಾನ್ ॥ ೭೮ ॥
ಅಥಾಽವಾದೀತ್ಸ ಪಿತರಂ ತದಿದಂ ಪರಿವರ್ತುಲಂ ।
ಅತಿದೀಪ್ತಂ ವಿಭಾತ್ಯಗ್ನೌ ಕಿಂ ರಕ್ತಾಂಬುಜಸನ್ನಿಭಂ ॥ ೭೯ ॥
ಇತಿ ತಸ್ಯ ವಚಃ ಶ್ರುತ್ವಾ ಪುತ್ರಸ್ಯ ಬ್ರಾಹ್ಮಣೋತ್ತಮಃ ।
ನಿಪುಣಂ ತಂ ನಿರೂಪ್ಯೈತದ್ವಚನಂ ಪುನರಬ್ರವೀತ್ ॥ ೮೦ ॥

ಗೋವಿಂದಸ್ವಾಮ್ಯುವಾಚ :—

ಏತತ್ಕಪಾಲಮನಲಜ್ವಾಲಾವಲಯವರ್ತುಲಂ ।
ವಸಾಕೀಕಸಮಾಂಸಾಢ್ಯಮೇತದ್ರಕ್ತಾಂಬುಜೋಪಮಂ ॥ ೮೧ ॥
ದ್ವಿಜಸ್ಯಸೂನುಃ ಶ್ರುತ್ವೇತಿ ಕಾಷ್ಠಾಗ್ರೇಣ ಜಘಾನ ತತ್ ।
ಯೇನ ತತ್ಸ್ಫುಟನೋದ್ಗೀರ್ಣ ವಸಾಸಿಕ್ತಮುಖೋಽಭವತ್ ॥ ೮೨ ॥

---

೭೬. ಪುತ್ರಸ್ನೇಹದಿಂದ ತುಂಬಿದ ಗೋವಿಂದಸ್ವಾಮಿಯು ಆ ಮಾತನ್ನು ಕೇಳಿ ಆ ಬೆಂಕಿಯನ್ನು ತರಲು ಸ್ಮಶಾನಕ್ಕೆ ಬೇಗ ನಡೆದನು.

೭೭. ಗೋವಿಂದಸ್ವಾಮಿಯು ಆ ಚಿತಾಗ್ನಿಯನ್ನುತರಲು ಮುಂದೆ ಹೋದ ಕೂಡಲೇ ವಿಜಯದತ್ತನೂ ಆತನ ಹಿಂದೆಯೇ ಓಡಿದನು.

೭೮. ಬೆಂಕಿಯನ್ನು ಸಮೀಪಿಸಿ ಚಲ್ಲಾಪಿಲ್ಲಿಯಾದ ಎಲುಬುಗಳುಳ್ಳ ಆ ಚಿತಾಗ್ನಿಯನ್ನು ರಭಸದಿಂದ ಅಪ್ಪಿಕೊಳ್ಳುವಂತೆ ಕಾಯಿಸಿಕೊಂಡು ಆ ವಿಜಯದತ್ತನು ಸ್ವಲ್ಪ ಸ್ವಲ್ಪವಾಗಿ ನೆಮ್ಮದಿಯನ್ನು ಹೊಂದಿದನು.

೭೯. ಬಳಿಕ ಅವನು ಅಪ್ಪನನ್ನು ಕೇಳಿದನು: "ತಂದೆಯೇ! ಇದರಲ್ಲಿ ಕೆಂದಾವರೆಯಂತೆ ಕೆಂಪಗೆ ಹೊಳೆಯುತ್ತ ಗುಂಡಗೆ ಕಾಣುತ್ತಿರುವುದೇನು?"

೮೦. ಈ ಮಾತನ್ನು ಕೇಳಿ ತಂದೆಯು ಅದನ್ನು ಚೆನ್ನಾಗಿ ದೃಷ್ಟಿಸಿ ನೋಡಿ ಮಗನಿಗೆ ಹೇಳಿದನು.

೮೧. ಗೋವಿಂದಸ್ವಾಮಿಯು ಹೇಳುತ್ತಾನೆ:—"ಮಗು, ಇದು ತಲೆಯ ಬುರುಡೆ. ಮಜ್ಜಾಮೇದಸ್ಸುಗಳುಕ್ಕಿರುವುದರಿಂದ ಬೆಂಕಿಯು ಸುತ್ತುಗಟ್ಟಿ ಚೆನ್ನಾಗಿ ಉರಿಯುತ್ತ ಕೆಂದಾವರೆಯಂತೆ ಹೊಳೆಯುತ್ತಿದೆ."

೮೨. ಇದನ್ನು ಕೇಳಿ ಆತನು ಆ ಬುರುಡೆಯನ್ನು ಒಂದು ಕಟ್ಟಿಗೆಯಿಂದೆ ಳೆದುಕೊಂಡು ಗಟ್ಟಿಯಾಗಿ ಹೊಡೆಯಲು ಒಳಗಿನಿಂದ ಹೊರಚಿಮ್ಮಿದ ಮೆದುಳಿನ ಮೇದಸ್ಸಿನಿಂದಾತನ ಮುಖವು ತೊಯ್ದುಹೋಯಿತು.

ಕಪಾಲಘಟ್ಟನಾದ್ರಕ್ತಂ ಯತ್ಸಂಸಕ್ತಂ ಮುಖೇ ತದಾ ।
ಜಿಹ್ವಯಾ ಲೇಲಿಹಾನೋಽಸೌ ಮುಹುಸ್ತದ್ರಕ್ತಮಾಸ್ವದತ್ ॥ ೮೩ ॥
ಆಸ್ವಾದೇವಂ ಸಮಾದಾಯ ತತ್ಕಪಾಲಂ ಸಮಾಕುಲಃ ।
ಪೀತ್ವಾ ವಸಾಂ ಮಹಾಕಾಯೋ ಬಭೂವಾತಿಭಯಂಕರಃ ॥ ೮೪ ॥
ಸದ್ಯೋ ವೇತಾಲತಾಂ ಪ್ರಾಪ ತೀಕ್ಷ್ಣದಂಷ್ಟ್ರಸ್ತದಾ ನಿಶಿ ।
ತಸ್ಯಾಟ್ಟಹಾಸಘೋಷೇಣ ದಿಶಶ್ಚ ಪ್ರದಿಶಸ್ತದಾ ॥ ೮೫ ॥
ದ್ಯಾರಂತರಿಕ್ಷಂ ಭೂಮಿಶ್ಚ ಸ್ಫುಟಿತಾ ಇವ ಸರ್ವಶಃ ।
ತಸ್ಮಿನ್ವೇಗಾತ್ಸಮಾಕೃಷ್ಯ ಪಿತರಂ ಹಂತುಮುದ್ಯತೇ ॥ ೮೬ ॥
ಮಾ ಕೃಥಾಃ ಸಾಹಸಮಿತಿ ಪ್ರಾದುರಾಸೀದ್ವಚೋ ದಿವಿ ।
ಸ ದಿವ್ಯಾಂ ಗಿರಮಾಕರ್ಣ್ಯ ವೇತಾಲೋಽತಿಭಯಂಕರಃ ॥ ೮೭ ॥
ಪಿತರಂ ತು ಪರಿತ್ಯಜ್ಯ ಮಹಾವೇಗಸಮನ್ವಿತಃ ।
ತೂರ್ಣಮಾಕಾಶಮಾವಿಶ್ಯ ಪ್ರಯಯಾವಸ್ಖಲದ್ಗತಿಃ ॥ ೮೮ ॥
ಸ ಗತ್ವಾ ದೂರಮಧ್ವಾನಂ ವೇತಾಲೈಃ ಸಹ ಸಂಗತಃ ।
ತಮಾಗತಂ ಸಮಾಲೋಕ್ಯ ವೇತಾಲಾಃ ಸರ್ವ ಏವ ತೇ ॥ ೮೯ ॥
ಕಪಾಲಸ್ಫೋಟನಾದೇಷ ವೇತಾಲತ್ವಂ ಯದಾಪ್ತವಾನ್ ।
ಕಪಾಲಸ್ಫೋಟನಾಮಾನಮಾಹ್ವಯಾಂಚಕ್ರಿರೇ ತತಃ ॥ ೯೦ ॥

---

೮೩. ಅವನು ಅದನ್ನು ನಾಲಿಗೆಯಿಂದ ಅಡಿಗಡಿಗೂ ನಂಜಿಕೊಳ್ಳುತ್ತ ಚೆನ್ನಾಗಿ ಸವಿದನು.

೮೪. ಹೀಗೆ ಸವಿಯುತ್ತ ಕಡೆಗೆ ಅವನು ಆ ಕಪಾಲವನ್ನೇ ತೆಗೆದುಕೊಂಡು ಅದರೊಳಗಿನ ಮೇದಸ್ಸೆಲ್ಲವನ್ನೂ ಕುಡಿದು ಅತಿಕಾಯನೂ, ಭಯಂಕರನೂ ಆದನು.

೮೫–೮೬. ಆ ಕೂಡಲೇ ಹರಿತವಾದ ಕೋರೆಹಲ್ಲುಗಳು ಮುಂತಾದ ಭೇತಾಳ ರೂಪವು ಆತನನ್ನಾವರಿಸಿತು. ಅವನ ಅಟ್ಟಹಾಸದಿಂದ ದಿಕ್ಕುಗಳೂ, ಭೂಮ್ಯಾಕಾಶಗಳೂ ಸೀಳಿಹೋಗುವಂತಾದುವು. ತರುವಾಯ ಅವನು ತಂದೆಯನ್ನೇ ಎಳೆದು ತಿನ್ನುವುದಕ್ಕೆಹೋದನು.

೮೭–೮೮. ಆಗ ಒಂದು ಆಕಾಶವಾಣಿಯು ಆತನನ್ನು ಆ ಸಾಹಸದಿಂದ ಹಿಂತಿರುಗಿಸಿತು. ಕೂಡಲೇ ಕ್ರೂರಿಯಾದ ಆ ಭೇತಾಳನು ತಂದೆಯನ್ನು ಬಿಟ್ಟು ಆ ಧ್ವನಿಯು ಬಂದೆಡೆಗೆ ಹಾರಿ ಯಾವ ತೊಡಕೂ ಇಲ್ಲದೆ ಆಕಾಶದಲ್ಲಿ ಅತಿ ವೇಗದಿಂದ ಹಾರಿ ಹೊರಟನು.

೮೯–೯೦. ಹಾಗೆ ಬಹುದೂರ ನಡೆದು ಅಲ್ಲಿದ್ದ ಭೇತಾಳರೊಡನೆ ಸೇರಿಕೊಂಡನು. ಅಲ್ಲಿನ ಭೇತಾಳರೆಲ್ಲರೂ, ಇವನು ಕಪಾಲಸ್ಫೋಟನದಿಂದ

ತತಃ ಕಪಾಲ ಸ್ಫೋಟೋಽಸೌ ವೇತಾಲ್ಯೈಃ ಸರ್ವತೋ ವೃತಃ ।
ನರಾಽಸ್ಥಿಭೂಷಣಾಖ್ಯಸ್ಯ ಸದ್ಯೋ ವೇತಾಲಭೂಪತೇಃ ॥ ೯೧ ॥
ಅಂತಿಕಂ ಸಹಸಾ ಪ್ರಾಪ ಮಹಾಬಲಸಮನ್ವಿತಃ ।
ನರಾಽಸ್ಥಿ ಭೂಷಣಶ್ಚೈನಂ ಸೇನಾಪತಿಮಕಲ್ಪಯತ್ ॥ ೯೨ ॥
ತಂ ಕದಾಚಿತ್ತು ಗಂಧರ್ವಶ್ಚಿತ್ರಸೇನಾಽಭಿಧೋ ಬಲೀ ।
ನರಾಸ್ಥಿಭೂಷಣಂ ಸಂಖ್ಯೇ ಸ್ಯವಧೀತ್ಸೋಽಪಿ ಸಂಸ್ಥಿತಃ ॥ ೯೩ ॥
ನರಾಽಸ್ಥಿಭೂಷಣೇ ತಸ್ಮಿನ್ಗಂಧರ್ವೇಣ ಹತೇ ಯುಧಿ ।
ತದಾ ಕಪಾಲಸ್ಫೋಟೋಽಸೌ ತತ್ಪದಂ ಸಮವಾಪ್ತವಾನ್ ॥ ೯೪ ॥
ವಿದ್ಯಾಧರೇಂದ್ರಸ್ಯ ಸುತಃ ಸುದರ್ಶನೋ
ಮನುಷ್ಯತಾಂ ವೈ ಪ್ರಥಮಂ ಸ ಗತ್ವಾ ।
ವೇತಾಲತಾಂ ಪ್ರಾಪ್ಯ ಮಹರ್ಷಿ ಶಾಪಾತ್
ಕ್ರಮಾಚ್ಚ ವೇತಾಲಪತಿರ್ಬಭೂವ ॥ ೯೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ವೇತಾಲವರದತೀರ್ಥಪ್ರಶಂಸನಂ— ಸುದರ್ಶನಸ್ಯ ವೇತಾಲತ್ವಪ್ರಾಪ್ತಿವರ್ಣನಂ "ನಾಮಾಽಷ್ಟಮೋಽಧ್ಯಾಯಃ

---

ಭೇತಾಳತ್ವವನ್ನು ಪಡೆದನಾದುದರಿಂದ ಇವನನ್ನು ಕಪಾಲಸ್ಫೋಟನೆಂದೇ ಕರೆದರು.

೯೧–೯೨. ಬಳಿಕ ಅವರೆಲ್ಲರೂ ಬಲಶಾಲಿಯಾದ ಈ ಕಪಾಲಸ್ಫೋಟನನ್ನು ತಮ್ಮ ಒಡೆಯನಾದ ನರಾಸ್ಥಿಭೂಷಣನ ಬಳಿಗೆ ಕರೆದುಕೊಂಡುಹೋದರು. ಭೇತಾಳಪತಿಯು ಆತನನ್ನು ತನ್ನ ಸೇನಾಪತಿಯನ್ನಾಗಿ ಮಾಡಿಕೊಂಡನು.

೯೩. ಒಮ್ಮೆ ನರಾಸ್ಥಿಭೂಷಣನಿಗೂ, ಚಿತ್ರಸೇನನೆಂಬ ಗಂಧರ್ವನಿಗೂ ಯುದ್ಧ ನಡೆದು ಅದರಲ್ಲಿ ಇಬ್ಬರೂ ಒಬ್ಬರಿಂದೊಬ್ಬರು ಮಡಿದರು.

೯೪. ನರಾಸ್ಥಿಭೂಷಣನು ಮಡಿದಬಳಿಕ ಕಪಾಲಸ್ಫೋಟನು ಆತನ ಗದ್ದುಗೆಯನ್ನೇರಿ ಭೇತಾಳಪತಿಯಾದನು.

೯೫. ಈ ಕ್ರಮದಲ್ಲಿ ವಿದ್ಯಾಧರಪುತ್ರನಾದ ಸುದರ್ಶನನು ಮಹರ್ಷಿಶಾಪದಿಂದ ಮನುಷ್ಯತ್ವವನ್ನೂ, ಆ ಬಳಿಕ ಭೇತಾಳತ್ವವನ್ನೂ ಪಡೆದುದು ಮಾತ್ರವಲ್ಲದೆ, ಭೇತಾಳಚಕ್ರವರ್ತಿಯೂ ಆದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಭೇತಾಳವರದತೀರ್ಥಪ್ರಶಂಸನ—ಸುದರ್ಶನು ಭೇತಾಳತ್ವವನ್ನು ಪಡೆದುದು" ಎಂಬ ಎಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ನವಮೋಽಧ್ಯಾಯಃ

### ಸುದರ್ಶನಸುಕರ್ಣಶಾಪವಿಮೋಕ್ಷಣಂ

ತತಃ ಸ ವಿಪ್ರಃ ಪ್ರತ್ಯೂಷೇ ಪುತ್ರಶೋಕೇನ ಪೀಡಿತಃ ।
ಅಶೋಕದತ್ತಸಂಯುಕ್ತೋ ಭಾರ್ಯಯಾ ವಿಲಲಾಪ ಹ ॥ ೧ ॥
ವಿಲಪಂತಂ ಸಮಾಲೋಕ್ಯ ಗೋವಿಂದಸ್ವಾಮಿನಂ ದ್ವಿಜಾಃ ।
ವಣಿಕ್ಸಮುದ್ರದತ್ತಾಖ್ಯಃ ಸಮಾನಿನ್ಯೇ ನಿಜಂ ಗೃಹಂ ॥ ೨ ॥
ಸಮಾನೀಯ ಸಮಾಶ್ವಸ್ಯ ದಯಾಯುಕ್ತೋ ವಣಿಗ್ವರಃ ।
ಸ್ವಧನಾನಾಂ ಹಿ ಸರ್ವೇಷಾಂ ರಕ್ಷಿತಾರಮಕಲ್ಪಯತ್ ॥ ೩ ॥
ಸ್ಮರನ್ಮಹಾಯತಿವಚಃ ಪುತ್ರದರ್ಶನಲಾಲಸಃ ।
ಸ ತಸ್ಥೌ ವಣಿಜೋ ಗೇಹೇ ಪುತ್ರಭಾರ್ಯಾಸಮನ್ವಿತಃ ॥ ೪ ॥
ಅಶೋಕದತ್ತನಾಮಾತು ದ್ವಿತೀಯೋ ವಿಪ್ರನಂದನಃ ।
ಶಸ್ತ್ರೇ ಚೈವ ತಥಾ ಶಾಸ್ತ್ರೇ ಬಭೂವಾಽತಿವಿಚಕ್ಷಣಃ ॥ ೫ ॥
ತಥಾಽನ್ಯಾಸ್ವಪಿ ವಿದ್ಯಾಸು ನಾಽಸ್ತಿ ತತ್ಸದೃಶೋ ಭುವಿ ।
ಕೃತವಿದ್ಯೋ ದ್ವಿಜಸುತಃ ಪ್ರಖ್ಯಾತೋ ನಗರೇಽಭವತ್ ॥ ೬ ॥

---

## ಕನ್ನಡದ ಅನುವಾದ

### ಸುದರ್ಶನಸುಕರ್ಣರ ಶಾಪಮೋಕ್ಷಣ

೧–೩. ಬಳಿಕ ಪ್ರಾತಃಕಾಲದಲ್ಲಿ ಪುತ್ರವಿಯೋಗದಿಂದ ಖಿನ್ನನಾದ ಗೋವಿಂದಸ್ವಾಮಿಯು ಭಾರ್ಯೆಯೊಡನೆಯೂ, ಪುತ್ರನಾದ ಅಶೋಕದತ್ತನೊಡನೆಯೂ ಬಹಳವಾಗಿ ವಿಲಪಿಸಿದನು. ಆ ಸಮಯದಲ್ಲಿ ಸಮುದ್ರದತ್ತನೆಂಬ ವೈಶ್ಯನು ಆತನನ್ನು ತನ್ನ ಮನೆಗೆ ಕರೆದುಕೊಂಡುಹೋಗಿ ಬಹಳ ಮರುಕದಿಂದ ಸಂತೈಸಿ, ತನ್ನ ಭಂಡಾರಕ್ಕೆ ಅವನನ್ನು ರಕ್ಷಕನನ್ನಾಗಿ ನಿಯಮಿಸಿಕೊಂಡನು.

೪. ಆ ಬ್ರಾಹ್ಮಣನು ಯೋಗಿಯ ಮಾತನ್ನೇ ನೆನೆದು ಮಗನಿಗಾಗಿ ಹಂಬಲಿಸುತ್ತ ಭಾರ್ಯಾಪುತ್ರರೊಡನೆ ಆ ವೈಶ್ಯನ ಮನೆಯಲ್ಲಿಯೇ ವಾಸಮಾಡತೊಡಗಿದನು.

೫. ಕಿರಿಯವನಾದ ಅಶೋಕದತ್ತನು ಕ್ರಮವಾಗಿ ಶಸ್ತ್ರವಿದ್ಯೆಯಲ್ಲಿಯೂ, ಸಕಲ ಶಾಸ್ತ್ರಗಳಲ್ಲಿಯೂ ಅಸದೃಶವಾದ ಪಾಂಡಿತ್ಯವನ್ನು ಪಡೆದು ಬಹಳವಾದ ಕೀರ್ತಿಯನ್ನು ಸಂಪಾದಿಸಿದನು.

೬. ಹಾಗೆಯೆ ಇತರ ವಿದ್ಯೆಗಳಲ್ಲಿಯೂ ಅವನಿಗೆ ಸಮಾನನಾದವನು

ಅತ್ರಾಂತರೇ ನರಪತಿಂ ಪ್ರತಾಪಮುಕುಟಾಭಿಧಂ ।
ಕಾಶೀದೇಶಾಧಿಪೋ ಮಲ್ಲಃ ಕಶ್ಚಿದಭ್ಯಾಯಯೌ ಬಲೀ ॥ ೭ ॥
ಪ್ರತಾಪಮುಕುಟೋ ರಾಜಾ ಮಲ್ಲಸ್ಯಾಽಸ್ಯ ಜಯಾಯ ಸಃ ।
ಬಲಿನಂ ದ್ವಿಜಪುತ್ರಂ ತಮಾಹ್ವಯಾಮಾಸ ಭೃತ್ಯಕೈಃ ॥ ೮ ॥
ತಮಾಗತಂ ಸಮಾಲೋಕ್ಯ ಪ್ರತಾಪಮುಕುಟೋಽಬ್ರವೀತ್ ।
ಅಶೋಕದತ್ತ ಸಹಸಾ ಮಲ್ಲಮೇನಂ ಬಲೋತ್ಕಟಂ ॥ ೯ ॥
ದುರ್ಜಯಂ ಜಹಿ ಸಂಗ್ರಾಮೇ ತ್ವಂ ವೈ ಬಲವತಾಂ ವರಃ ।
ದಾಕ್ಷಿಣಾತ್ಯ ಮಹಾಮಲ್ಲಪತಾವಸ್ಮಿನ್ ಜಿತೇ ತ್ವಯಾ ॥ ೧೦ ॥
ಯದಿಷ್ಟಂ ತವ ತತ್ಸರ್ವಂ ದಾಸ್ಯಾಮ್ಯಹಮಸಂಶಯಃ ।
ಇತಿ ತಸ್ಯ ವಚಃ ಶ್ರುತ್ವಾ ಬಲವಾನ್ ದ್ವಿಜನಂದನಃ ॥ ೧೧ ॥
ದಾಕ್ಷಿಣಾತ್ಯ ಮಹಾಮಲ್ಲನೃಪತಿಂ ಸಮತಾಡಯತ್ ।
ತಾಡಿತೋ ದ್ವಿಜಪುತ್ರೇಣ ಮಲ್ಲಃ ಸ ಬಲಿನಾ ಬಲೀ ।
ಸದ್ಯೋ ವಿವೃತ್ತನಯನಃ ಪರಾಸುರ್ನ್ಯಪತದ್ಭುವಿ ॥ ೧೨ ॥
ದ್ವಿಜಪುತ್ರಸ್ಯ ತತ್ಕರ್ಮ ದೇವೈರಪಿ ಸುದುಷ್ಕರಂ ॥ ೧೩ ॥
ಪ್ರತಾಪ ಮುಕುಟೋ ದೃಷ್ಟ್ವಾ ಪ್ರಸನ್ನಹೃದಯೋಽಭವತ್ ।
ದತ್ವಾ ಬಹುಧನಾನ್ಗ್ರಾಮಾನ್ಸಮೀಪೇಽಸ್ಥಾಪಯತ್ತದಾ ॥ ೧೪ ॥

---

ಭೂಲೋಕದಲ್ಲಿಯೇ ಇರಲಿಲ್ಲ. ಹೀಗೆ ಗೋವಿಂದಸ್ವಾಮಿಯ ಮಗನಾದ ಅಶೋಕದತ್ತನು ಕೃತವಿದ್ಯನಾಗಿ ಆ ನಗರದಲ್ಲೆಲ್ಲ ಬಹು ಪ್ರಸಿದ್ಧನಾದನು.

೭. ಹೀಗಿರಲು ಒಮ್ಮೆ ಕಾಶೀದೇಶವನ್ನಾಳುತ್ತಿದ್ದ ಪ್ರತಾಪಮುಕುಟನೆಂಬ ರಾಜನ ಬಳಿಗೊಬ್ಬ ಬಲಶಾಲಿಯಾದ ಜಟ್ಟಿಯು ಬಂದನು.

೮–೧೨. ಅವನನ್ನು ಗೆಲ್ಲಲು ಕಾಶೀರಾಜನು ಮಹಾ ಬಲಶಾಲಿಯಾದ ಅಶೋಕದತ್ತನನ್ನು ಭೃತ್ಯರಿಂದ ಬರಮಾಡಿಕೊಂಡು, "ಅಯ್ಯಾ ಅಶೋಕದತ್ತ ! ನೀನು ಬಲಶಾಲಿಗಳಲ್ಲಿ ಅಗ್ರಗಣ್ಯನಾಗಿರುವೆ. ಇತರರಿಂದ ಗೆಲ್ಲಲಾಗದವನೂ, ಬಹಳವಾಗಿ ಕೊಬ್ಬಿದವನೂ ಆದ ಈ ಜಟ್ಟಿಯನ್ನು ಕಾಳಗದಲ್ಲಿ ಸೋಲಿಸು. ನೀನು ಕೇಳಿದುದೆಲ್ಲವನ್ನೂ ಕೊಡುವೆನು" ಎಂದನು. ಇದನ್ನು ಕೇಳಿದ ಆ ಬ್ರಾಹ್ಮಣಪುತ್ರನು ದಕ್ಷಿಣ ದೇಶದಿಂದ ಬಂದ ಆ ಮಲ್ಲಾಧಿಪನನ್ನು ಒಂದೇ ಏಟನಿಂದಲೇ ನೆಲಕ್ಕುರುಳಿಸಿದನು. ನೆಲಕ್ಕುರುಳಿದ ಮಲ್ಲನು ಕಣ್ಣುಗಳನ್ನು ಗಿರ್ರನೆ ತಿರುಗಿಸುತ್ತಾ ಕೂಡಲೆ ಪ್ರಾಣಗಳನ್ನು ಬಿಟ್ಟನು.

೧೩–೧೪. ಪ್ರತಾಪಮುಕುಟರಾಜನಾದರೊ, ದೇವತೆಗಳಿಗೂ ಅಸಾಧ್ಯವಾದ ಆ ಬ್ರಾಹ್ಮಣನ ಸಾಹಸಕ್ಕೆ ಮೆಚ್ಚಿ ಬೇಕಾದಷ್ಟು ಹಣವನ್ನೂ, ದತ್ತಿಗಳನ್ನೂ ಬಹುಮತಿ ಕೊಟ್ಟು ಆತನನ್ನು ತನ್ನ ಆಸ್ಥಾನದಲ್ಲಿಯೇ ಇರಿಸಿಕೊಂಡನು.

ಸ ಕದಾಚಿನ್ಮಹಾರಾಜಃ ಸಹಿತೋ ದ್ವಿಜಸೂನುನಾ ।
ಸಂಧ್ಯಾಯಾಂ ವಿಜನೇ ದೇಶೇ ಚಚಾರ ತುರಗೇಣ ವೈ ॥ ೧೫ ॥
ದ್ವಿಜಸೂನುಸಖಸ್ತತ್ರ ದೀನಾಂ ವಾಣೀಮಥಾಽಶೃಣೋತ್ ।
ರಾಜನ್ನಲ್ಪಾಽಪರಾಧೋಽಹಂ ಶತ್ರುಪ್ರೇರಣಯಾ ಸಕೃತ್ ॥ ೧೬ ॥
ದಂಡಪಾಲೇನ ನಿಹಿತಃ ಶೂಲೇ ನಿರ್ಘೃಣಚೇತಸಾ ।
ದಿನಮದ್ಯ ಚತುರ್ಥಂ ಮೇ ಶೂಲಸ್ಥಸ್ಯೈವ ಜೀವತಃ ॥ ೧೭ ॥
ಪ್ರಾಣಾಃ ಸುಖೇನ ನಿರ್ಯಾಂತಿ ನಹಿ ದುಷ್ಕೃತಕರ್ಮಣಾಂ ।
ಭೃಶಂ ಮಾಂ ಬಾಧತೇ ತೃಷ್ಣಾ ತಾಂ ನಿವಾರಯ ಭೂಪತೇ ॥ ೧೮ ॥
ಇತಿ ದೀನಾಂ ಸಮಾಕರ್ಣ್ಯ ವಾಚಂ ರಾಜಾ ದ್ವಿಜಾತ್ಮಜಂ ।
ಅಶೋಕದತ್ತಸಾಮಾಸಂ ಧೈರ್ಯವಂತಮಭಾಷತ ॥ ೧೯ ॥
ಅಸ್ಮೈ ನಿರಪರಾಧಾಯ ಶೂಲಪ್ರೋತಾಯ ಜಂತವೇ ।
ತೃಷ್ಣಾರ್ದಿತಾಯ ದಾತವ್ಯಂ ದ್ವಿಜಸೂನೋ ತ್ವಯಾ ಜಲಂ ॥ ೨೦ ॥
ಇತ್ಯಾದಿಷ್ಟೋ ನರೇಂದ್ರೇಣ ಸಹಸಾ ದ್ವಿಜನಂದನಃ ।
ಜಲಪೂರ್ಣಂ ಸಮಾದಾಯ ಕಲಶಂ ವೇಗವಾನ್ ಯಯೌ ॥ ೨೧ ॥
ತಚ್ಛ್ಮಶಾನಂ ಸಮಾಸಾದ್ಯ ಭೂತವೇತಾಲಸಂಕುಲಂ ।
ಶೂಲಪ್ರೋತಾಯ ವೈ ತಸ್ಮೈ ಜಲಂ ದಾತುಂ ಸಮುತ್ಸುಕಃ ॥ ೨೨ ॥

---

೧೫. ಒಮ್ಮೆ ಸಾಯಂಕಾಲದಲ್ಲಿ ಮಹಾರಾಜನು ಆ ಬ್ರಾಹ್ಮಣನೊಂದಿಗೆ ಕುದುರೆಯನ್ನೇರಿ ನಿರ್ಜನಪ್ರದೇಶದಲ್ಲಿ ಸಂಚರಿಸುತ್ತಿದ್ದನು.

೧೬–೧೮. ಆಗ ವಿಪ್ರಸುತನಾದ ಅಶೋಕದತ್ತನೊಡನಿದ್ದ ಆ ಮಹಾರಾಜನು, "ಮಹಾರಾಜ! ನಾನು ಮಾಡಿದ ಅಲ್ಪಾಪರಾಧಕ್ಕಾಗಿ ಕುಹಕಿಯಾದ ನ್ಯಾಯಾಧೀಶನು ನನ್ನ ಹಗೆಗಳ ಮಾತಿನಿಂದ ನನ್ನನ್ನು ಶೂಲಕ್ಕೇರಿಸಿ ಕಠಿನವಾಗಿ ಶಿಕ್ಷಿಸಿರುತ್ತಾನೆ. ನನ್ನನ್ನು ಶೂಲಕ್ಕೇರಿಸಿ ನಾಲ್ಕುದಿನಗಳಾದರೂ ಪ್ರಾಣವು ಹೋಗದೆ ಕಷ್ಟಪಡುತ್ತಿದ್ದೇನೆ. ಪಾಪಿಗಳಿಗೆ ಪ್ರಾಣವು ತಟ್ಟನೆ ಹೋಗುವುದಿಲ್ಲ ವಷ್ಟೆ? ಈಗ ನನ್ನನ್ನು ಬಹಳವಾಗಿ ಬಾಧಿಸುತ್ತಿರುವ ಈ ದಾಹವನ್ನಾದರೂ ತೀರಿಸು" ಎಂಬೊಂದು ಆರ್ತನಾದವು ಅವರಿಗೆ ಕೇಳಿಸಿತು.

೧೯–೨೦. ಅತಿ ದೀನವಾದ ಈ ಮಾತನ್ನು ಕೇಳಿ, "ಅಯ್ಯಾ ಧೀರನೇ! ನೀನು ಹೋಗಿ ಶೂಲಕ್ಕೇರಿಸಲ್ಪಟ್ಟ ನಿರಪರಾಧಿಯಾದ ಆ ಪ್ರಾಣಿಯ ದಾಹವನ್ನು ತೀರಿಸು" ಎಂದು ಮಹಾರಾಜನು ಆ ದ್ವಿಜಪುತ್ರನಿಗೆ ಅಪ್ಪಣೆಮಾಡಿದನು.

೨೧–೨೨. ಹೀಗೆ ರಾಜನಿಂದಾಜ್ಞಪ್ತನಾದ ಆ ಬ್ರಾಹ್ಮಣನು ಒಂದು ಪಾತ್ರೆಯ ತುಂಬ ನೀರನ್ನು ತೆಗೆದುಕೊಂಡು ಭೂತಪ್ರೇತಾದಿಗಳಿಂದ ತುಂಬಿದ ಸ್ಮಶಾನಕ್ಕೆ ಹೋದನು.

ದದರ್ಶಾಽಥ ಸ್ಥಿತಾಂ ನಾರೀಂ ನವಯೌವನಶಾಲಿನೀಂ ।
ಉಚ್ಚೈಕ್ಷಿತ ಮಹಾಕಾಂತಿಂ ಮೂರ್ತಾಮಿವ ರತಿಂ ದ್ವಿಜಃ ॥ ೨೩ ॥
ತಾಮಾಲೋಕ್ಯ ತತಃ ಪ್ರಾಹ ಧೈರ್ಯವಾನ್ದ್ವಿಜನಂದನಃ ।
ಕಾಽಸಿ ಭದ್ರೇ ವರಾರೋಹೇ ಶ್ಮಶಾನೇ ವಿಜನೇ ಸ್ಥಿತಾ ॥ ೨೪ ॥
ಅಸ್ಯಾಽಧಸ್ತಾತ್ಕಿಮರ್ಥಂ ತ್ವಂ ಶೂಲಪ್ರೋತಸ್ಯ ತಿಷ್ಠಸಿ ।
ಇತಿ ತಸ್ಯ ವಚಃ ಶ್ರುತ್ವಾ ಸಾ ಪ್ರಾಹ ರುಚಿರಾನನಾ ॥ ೨೫ ॥
ಪುರುಷೋ ವಲ್ಲಭೋಽಯಂ ಮೇ ಶೂಲೇ ರಾಜ್ಞಾ ಸಮರ್ಪಿತಃ ।
ಧನಂ ಯಥಾ ಚ ಕೃಪಣಃ ಪಶ್ಯ ಪ್ರಾಣಾನ್ನಮುಂಚತಿ ॥ ೨೬ ॥
ಆಸನ್ನಮರಣಂ ಚೈನಮನುಯಾತುಮಿಹಸ್ಥಿತಾ ।
ತೃಷಿತೋ ಯಾಚತೇ ವಾರಿ ಮಾಮಯಂ ವ್ಯಥತೇ ಮುಹುಃ ॥ ೨೭ ॥
ಶೂಲಪ್ರೋತೋದ್ಧತಗ್ರೀವಂ ಮುಮೂರ್ಷುಂ ಪ್ರಾಣನಾಯಕಂ ।
ನಾಽಸ್ಮಿ ಪಾಯಯಿತುಂ ಶಕ್ತಾ ಜಲಮೇನಮಧಃಸ್ಥಿತಾ ॥ ೨೮ ॥
ಅಶೋಕದತ್ತಸ್ತಚ್ಛ್ರುತ್ವಾ ಕರುಣಾವರುಣಾಲಯಃ ।
ತತ್ಕಾಲಸದೃಶಂ ವಾಕ್ಯಂ ತಾಂ ವಧೂಮಬ್ರವೀತ್ತದಾ ॥ ೨೯ ॥

---

೨೩. ಅಲ್ಲಿ ಅವನು ಶರೀರವನ್ನು ತಾಳಿದ ರತಿಯಂತೆ ಕಂಗೊಳಿಸುವ ತುಂಬುಜವ್ವನೆಯಾದ ಒಬ್ಬ ಸ್ತ್ರೀಯನ್ನು ಕಂಡನು.

೨೪–೨೭. ಧೀರನಾದ ಆ ಬ್ರಾಹ್ಮಣಕುಮಾರನು ಆಕೆಯನ್ನು ಕಂಡು, "ಎಲೆ ಸುಮಂಗಳೆ! ನೀನಾರು? ನಿರ್ಜನವಾದ ಈ ಸ್ಮಶಾನದಲ್ಲಿ ಈ ಶೂಲಾರೋಹಿಯ ಬಳಿ ಏಕೆ ಕುಳಿತಿರುವೆ?" ಎಂದು ಕೇಳಿದನು. ಆ ಸುಮುಖಿಯು ಹೇಳಿದಳು: "ಅಯ್ಯಾ! ರಾಜನಿಂದ ಶೂಲಕ್ಕೇರಿಸಲ್ಪಟ್ಟ ಈತನು ನನ್ನ ಪ್ರಿಯ. ಹಣವನ್ನು ಬಿಟ್ಟರಲಾರದ ಜಿಪುಣನಂತೆ ಪ್ರಾಣಗಳನ್ನು ತೊರೆಯಲಾರದೆ ವ್ಯಥೆ ಪಡುತ್ತಿರುವನು; ನೋಡು. ಸಾವಿಗೀಡಾಗಿರುವ ಪತಿಯನ್ನು ಬಿಡಿಸಲಾರದೆ ನಾನು ಅವನನ್ನು ಹಿಂಬಾಲಿಸಲು ಸಿದ್ಧಳಾಗಿರುವೆನು. ಬಾಯಾರಿದ ಈತನಾದರೊ ನೀರನ್ನು ಬೇಡುತ್ತಾ ವ್ಯಥೆಪಡುತ್ತಿರುವನು:

೨೮. ಮೇಲ್ಮುಖನಾಗಿ ಶೂಲಕ್ಕೇರಿಸಲ್ಪಟ್ಟು ಮೂರ್ಛೆಹೋಗುತ್ತಿರುವ ಈ ನನ್ನ ಇನಿಯನಿಗೆ ನೆಲದಲ್ಲಿರುವ ನಾನು ನೀರನ್ನು ಕುಡಿಸಲು ಕೈಲಾಗದವಳಾಗಿದ್ದೇನೆ."

೨೯. ದಯಾಸಮುದ್ರನಾದ ಅಶೋಕದತ್ತನು ಈ ಮಾತನ್ನು ಕೇಳಿ ತಕ್ಕ ರೀತಿಯಿಂದ ಅವಳನ್ನು ಸಂತೈಸಿ ಇಂತೆಂದನು:

ಅಶೋಕದತ್ತ ಉವಾಚ:—

ಮಾತರ್ಮತ್ಸ್ಕಂಧಮಾರುಹ್ಯ ದೇಹ್ಯಸ್ಮೈ ಶೀತಲಂ ಜಲಂ ।
ಸಾ ತಥೇತಿ ತಮಾಭಾಷ್ಯ ತರುಣೀ ತ್ವರಯಾನ್ವಿತಾ ॥ ೩೦ ॥
ಅನಮ್ರವಪುಷಸ್ತಸ್ಯ ಸ್ಕಂಧಂ ಪದ್ಭ್ಯಾಂ ರುರೋಹ ವೈ ।
ದ್ವಿಜಸೂನುರ್ದದರ್ಶಾಽಥ ಶೋಣಿತಂ ನೂತನಂ ಪತತ್ ॥ ೩೧ ॥
ಕಿಮೇತದಿತಿ ಸೋಽಪಶ್ಯದುನ್ನಮ್ಯ ಸಹಸಾ ಮುಖಂ ।
ಭಕ್ಷ್ಯಮಾಣಂ ತಯಾ ತತ್ರ ವಿಜ್ಞಾಯ ದ್ವಿಜನಂದನಃ ॥ ೩೨ ॥
ಅಶೋಕದತ್ತೋ ಜಗ್ರಾಹ ತಸ್ಯಾಃ ಪಾದಂ ಸನೂಪುರಂ ।
ತತೋಽಗಾನ್ನೂಪುರಂ ತ್ಯಕ್ತ್ವಾ ಬದ್ಧರತ್ನಂ ವಿಹಾಯ ತತ್ ॥ ೩೩ ॥
ಪ್ರತ್ಯುಪ್ತಾನೇಕರತ್ನಾಢ್ಯಂ ತದಾದಾಯ ಚ ನೂಪುರಂ ।
ಅಶೋಕದತ್ತಃ ಪ್ರಯಯೌ ತಚ್ಛ್ಮಶಾನಾನ್ನೃಪಾಂತಿಕಂ ॥ ೩೪ ॥
ಶ್ಮಶಾನವೃತ್ತಂ ತತ್ಸರ್ವಂ ಸ ನೃಪಾಯ ನಿವೇದ್ಯ ವೈ ।
ಮಹಾರ್ಘ್ಯರತ್ನಪ್ರತ್ಯುಪ್ತಂ ನೂಪುರಂ ಚ ದದೌ ತದಾ ॥ ೩೫ ॥
ಜ್ಞಾತ್ವಾ ತದ್ವೀರಚರಿತಂ ವೀರೈರನ್ಯೈಃ ಸುದುಷ್ಕರಂ ।
ದದೌ ಮದನಲೇಖಾಖ್ಯಾಂ ಸುತಾಂ ತಸ್ಮೈ ಮಹೀಪತಿಃ ॥ ೩೬ ॥

---

೩೦–೩೧. ಅಶೋಕದತ್ತನು ಹೇಳುತ್ತಾನೆ:—"ತಾಯೇ! ನನ್ನ ಹೆಗಲೇರಿ ತಣ್ಣಗಿರುವ ಈ ನೀರನ್ನಾತನಿಗೆ ಕೊಡು." ಅವಳದಕ್ಕೆ ಒಪ್ಪಿ ಕೂಡಲೆ ಬಗ್ಗಿ ನಿಂತ ಆತನ ಹೆಗಲನ್ನು ಕಾಲಿನಿಂದಲೇರಿದಳು. ಬ್ರಾಹ್ಮಣನು ಅಧೋಮುಖನಾಗಿ ನೋಡುತ್ತಿರಲು ಹೊಸ ರಕ್ತವು ಮೇಲಿನಿಂದ ಸುರಿಯತೊಡಗಿತು.

೩೨–೩೩. ಕುತೂಹಲಿಯಾದ ಆ ಬ್ರಾಹ್ಮಣನು ಕಷ್ಟದಿಂದ ತಲೆಯನ್ನು ಮೇಲಕ್ಕೆತ್ತಿನೋಡಲು ಅವಳು ಆ ಶೂಲಾರೋಹಿಯನ್ನು ಕಿತ್ತುಮುಕ್ಕುತ್ತಿದ್ದಳು. ಕೂಡಲೇ ಅಶೋಕದತ್ತನು ಅಂದುಗೆಯೊಂದಿಗೆ ಅವಳ ಕಾಲನ್ನು ಹಿಡಿದುಕೊಂಡನು. ಆಗ ಅವಳು ರತ್ನಖಚಿತವಾದ ಕಾಲ್ಬಳೆಯನ್ನು ಬಿಟ್ಟು ಮೇಲಕ್ಕೆ ಹಾರಿಹೋದಳು.

೩೪–೩೫. ತರುವಾಯ ಆ ಅಶೋಕದತ್ತ ಬ್ರಾಹ್ಮಣನು ಬಗೆಬಗೆಯ ರತ್ನಗಳಿಂದೊಪ್ಪುವ ಆ ಕಡಗವನ್ನು ತೆಗೆದುಕೊಂಡು ರಾಜನ ಬಳಿಗೆ ಬಂದು ಅದನ್ನು ಆತನಿಗೆ ಕೊಟ್ಟು ಸ್ಮಶಾನದಲ್ಲಿ ನಡೆದ ವಿಷಯವನ್ನೆಲ್ಲಾ ಅರುಹಿದನು.

೩೬. ರಾಜನು ಮತ್ತೊಬ್ಬರಿಗಸಾಧ್ಯವಾದ ಆತನ ಆ ವೀರಚರಿತ್ರವನ್ನು ಕಂಡು ಸಂತೋಷಗೊಂಡು, ಮದನಲೇಖೆಯೆಂಬ ತನ್ನ ಮಗಳನ್ನಾತನಿಗೆ ಕೊಟ್ಟು ಮದುವೆ ಮಾಡಿದನು.

ಕದಾಚಿದಥ ತದ್ದಿವ್ಯಂ ನೂಪುರಂ ವೀಕ್ಷ್ಯ ಭೂಪತಿಃ ।
ಅಸ್ಯ ನೂಪುರವರ್ಯಸ್ಯ ತುಲ್ಯಂ ವೈ ನೂಪುರಾಂತರಂ ॥ ೩೭ ॥
ಕುತೋ ವಾ ಲಭ್ಯತ ಇತಿ ಸಾದರಂ ಸಮಚಿಂತಯತ್ ।
ಅಶೋಕದತ್ತಸ್ತು ತದಾ ವಿಜ್ಞಾಯ ನೃಪಕಾಂಕ್ಷಿತಂ ॥ ೩೮ ॥
ನೂಪುರಾಂತರಸಿದ್ಧ್ಯರ್ಥಂ ಚಿಂತಯಾಮಾಸ ಚೇತಸಾ ।
ಶ್ಮಶಾನೇ ನೂಪುರಮಿದಂ ಯತಃ ಪ್ರಾಪ್ತಂ ಮಯಾ ಪುರಾ ॥ ೩೯ ॥
ತಾಂ ನೂಪುರಾಂತರಪ್ರಾಪ್ತ್ಯೈ ಕುತ್ರ ದ್ರಕ್ಷ್ಯಾಮಿ ಸಾಂಪ್ರತಂ ।
ಇತ್ಥಂ ವಿತರ್ಕ್ಯ ಬಹುಧಾ ನಿಶ್ಚಿಕಾಯ ಮಹಾಮತಿಃ ॥ ೪೦ ॥
ವಿಕ್ರೇಷ್ಯಾಮಿ ಮಹಾಮಾಂಸಂ ಸಮೇತ್ಯ ಪಿತೃಕಾನನಂ ।
ತತ್ರ ರಾಕ್ಷಸವೇತಾಲಪಿಶಾಚಾದಿಷು ಸರ್ವಶಃ ॥ ೪೧ ॥
ಮಂತ್ರೈರಾಹೂಯಮಾನೇಷು ಸಾ ಪ್ಯಾಯಾಸ್ಯತಿ ರಾಕ್ಷಸೀ ।
ತಮಾಗತಾಂ ಬಲಾದ್ಗೃಹ್ಯ ತದ್ಗ್ರಹೀಷ್ಯಾಮಿ ನೂಪುರಂ ॥ ೪೨ ॥
ರಾಕ್ಷಸಾನಾಂ ಸಹಸ್ರಂ ವಾ ಪಿಶಾಚಾನಾಂ ತಥಾಽಯುತಂ ।
ವೇತಾಲಾನಾಂ ತಥಾ ಕೋಟಿರ್ನ ಲಕ್ಷ್ಯಂ ಬಲಿನೋ ಮಮ ॥ ೪೩ ॥
ಇತಿ ನಿಶ್ಚಿತ್ಯ ಮನಸಾ ಶ್ಮಶಾನಂ ಸಹಸಾ ಯಯೌ ।
ವಿಕ್ರೀಣಾನೋ ಮಹಾಮಾಂಸಂ ಮಂತ್ರೈರಾಹೂಯ ರಾಕ್ಷಸಾನ್ ॥ ೪೪ ॥

---

೩೭–೪೦. ಒಮ್ಮೆ ರಾಜನು ಆ ಕಾಲ್ಕಡಗವನ್ನು ನೋಡಿ ಅಂತಹುದೇ ಮತ್ತೊಂದು ದಿವ್ಯವಾದ ಕಡಗವನ್ನೆಲ್ಲಿಂದಲಾದರೂ ಪಡೆಯಬೇಕೆಂದು ಆಸೆ ಪಟ್ಟನು. ಅಶೋಕದತ್ತನಾತನ ಕೋರಿಕೆಯನ್ನರಿತು ಅಂತಹ ಮತ್ತೊಂದನ್ನು ಎಲ್ಲಿಂದ ಸಂಪಾದಿಸಬಹುದೆಂದು ಬಹಳವಾಗಿ ಯೋಚಿಸಿ, ಕಡೆಗೆ ತಾನು ಅದನ್ನೆಲ್ಲಿಪಡೆದನೋ ಅಲ್ಲಿಂದಲೇ ಮತ್ತೊಂದನ್ನೂ ಸಂಪಾದಿಸಲು ನಿಶ್ಚಯಿಸಿ ಹೀಗೆಂದುಕೊಂಡನು.

೪೧–೪೩. "ಸ್ಮಶಾನಕ್ಕೆ ಹೋಗಿ ಮಹಾಮಾಂಸವನ್ನು ಮಾರುವೆನು. ಮಹಾ ಮಂತ್ರಗಳಿಂದ ರಾಕ್ಷಸ, ಭೂತ, ಭೇತಾಳ, ಪಿಶಾಚಾದಿಗಳನ್ನೆಲ್ಲಾ ಬರಮಾಡುವೆನು. ಅವರೊಂದಿಗೆ ಆ ರಾಕ್ಷಸಿಯೂ ಬರುತ್ತಾಳೆ. ಆಗ ಅವಳನ್ನು ಬಲಾತ್ಕಾರವಾಗಿ ಹಿಡಿದು ಮತ್ತೊಂದು ಕಡಗವನ್ನು ಕಿತ್ತುಕೊಳ್ಳುವೆನು. ಸಾವಿರಮಂದಿ ರಾಕ್ಷಸರೇ ಬರಲಿ, ಹತ್ತುಸಾವಿರ ಮಂದಿ ಪಿಶಾಚಗಳೇ ಬರಲಿ, ಭೇತಾಳಕೋಟಿಯೇ ಬರಲಿ, ನನಗೇನು ಲಕ್ಷ್ಯ? ಅವರು, ಬಲಶಾಲಿಯಾದ ನನ್ನನ್ನೇನುಮಾಡುವರು?"

೪೪–೪೫. ಈ ಪ್ರಕಾರವಾಗಿ ನಿಶ್ಚಯಿಸಿ, ಆ ಅಶೋಕದತ್ತನು ರಾತ್ರಿಯಲ್ಲಿ ಸ್ಮಶಾನಕ್ಕೆ ಜಾಗ್ರತೆಯಾಗಿ ಹೋದನು. ಅಂತೆಯೇ ಅವನು ಅಲ್ಲಿ ಅವರನ್ನು

ಗೃಹಾಣೇತ್ಯುಚ್ಚಯಾ ವಾಚಾ ಚಚಾರ ಶ್ರಾವಯನ್ದಿಶಃ ।
ವಿಕ್ರೀಯತೇ ಮಹಾಮಾಂಸಂ ಗೃಹ್ಯತಾಂ ಗೃಹ್ಯತಾಮಿತಿ ॥ ೪೫ ॥
ತತ್ರ ರಾಕ್ಷಸ ವೇತಾಲಾಃ ಕಂಕಾಲಾಶ್ಚ ಪಿಶಾಚಕಾಃ ।
ಅನ್ಯೇ ಚ ಭೂತನಿವಹಾಃ ಸಮಾಜಗ್ಮುಃ ಪ್ರಹರ್ಷಿತಾಃ ॥ ೪೬ ॥
ಭಕ್ಷಯಿಷ್ಯಾಮಹೇ ಸರ್ವೇ ಮಾಂಸಮಿಷ್ಟತಮಂತ್ವಿತಿ ।
ತತ್ರಾಗಚ್ಛತ್ಸು ಸರ್ವೇಷು ರಕ್ಷಃಕನ್ಯಾಸಮಾವೃತಾ ॥ ೪೭ ॥
ಆಯಯೌ ರಾಕ್ಷಸೀ ಸಾಽಪಿ ಮಾಂಸಭಕ್ಷಣಲಾಲಸಾ ।
ಗವೇಷಯಂಸ್ತದಾ ವಿಪ್ರಸ್ತಾಂ ಸಮುದ್ವೀಕ್ಷ್ಯ ರಾಕ್ಷಸೀಂ ॥ ೪೮ ॥
ಸೇಯಂ ದೃಷ್ಟ್ವಾ ಪುರೇತ್ಯೇಷ ಪ್ರತ್ಯಭಿಜ್ಞಾನಮಾಪ್ತವಾನ್ ।
ತಾಮಾಹ ದ್ವಿಜ ಪುತ್ರೋಽನ್ಯದ್ದೇಹಿ ಮೇ ನೂಪುರಂ ತ್ವಿತಿ ॥ ೪೯ ॥
ಸಾ ತಸ್ಯ ವಚನಂ ಶ್ರುತ್ವಾ ಪ್ರೀತಾ ವಾಕ್ಯಮಥಾಽಬ್ರವೀತ್ ।
ಮನ್ಯೈವ ಚ ತ್ವಯಾ ನೀತಂ ಪುರಾ ವೀರೇಂದ್ರ ನೂಪುರಂ ॥ ೫೦ ॥
ಗೃಹಾಣ ರತ್ನರುಚಿರಂ ದ್ವಿತೀಯಮಪಿ ನೂಪುರಂ ।
ಇತ್ಯುಕ್ತ್ವಾ ನೂಪುರಂ ತಸ್ಮೈ ಸ್ವಸುತಾಂ ಚ ದದೌ ಪ್ರಿಯಾಂ ॥ ೫೧ ॥
ವಿದ್ಯುತ್ಕೇಶ್ಯಾ ತದಾ ದತ್ತಾಂ ಪ್ರಿಯಾಂ ವಿದ್ಯುತ್ಪ್ರಭಾಽಭಿಧಾಂ ।
ವಿಪ್ರಃ ಸಂಪ್ರಾಪ್ಯ ಮುಮುದೇ ರೂಪಯೌವನಶಾಲಿನೀಂ ॥ ೫೨ ॥

---

ಮಂತ್ರಶಕ್ತಿಯಿಂದ ಬರಮಾಡಿ ಗಟ್ಟಿಯಾಗಿ 'ಎಲೆಲೈ! ಮಹಾಮಾಂಸದ ವಿಕ್ರಯ ವಾಗುತ್ತಿದೆ. ಕೊಳ್ಳಿರಿ, ಕೊಳ್ಳಿರಿ!' ಎಂದು ಕೂಗಿ ಕೂಗಿ ಮಹಾಮಾಂಸವನ್ನು ಮಾರುತ್ತಿದ್ದನು.

೪೬–೪೯. ಅಲ್ಲಿಗೆ ರಾಕ್ಷಸರೂ, ಭೇತಾಳರೂ, ಕಂಕಾಳರೂ, ಪಿಶಾಚಿಗಳೂ, ಭೂತಪ್ರೇತಾದಿಗಳೂ, ಎಲ್ಲರೂ ಬಹು ಸಂತೋಷದಿಂದ ಬಂದು ಇಷ್ಟತಮವಾದ ಮಹಾಮಾಂಸವನ್ನು ತಿನ್ನೋಣವೆಂದುಕೊಂಡು ಆ ಮಾಂಸವನ್ನು ಕೊಳ್ಳುತ್ತಿದ್ದರು. ಅವರೊಂದಿಗೆ ನೂರಾರು ರಾಕ್ಷಸಕನ್ಯೆಯರಿಂದಕೂಡಿ ಮಾಂಸದಾಸೆಯಿಂದ ಆ ರಾಕ್ಷಸಿಯೂ ಬಂದಳು. ದ್ವಿಜಕುಮಾರನವಳನ್ನು ಕಂಡು ಪೂರ್ವದಲ್ಲಿ ನಾನು ಕಂಡಿದ್ದವಳು ಇವಳೇ ಎಂದು ಗುರುತುಹಿಡಿದು ಅವಳಲ್ಲಿದ್ದ ಮತ್ತೊಂದು ಕಡಗವನ್ನು ಕೇಳಿದನು.

೫೦–೫೨. ಆಗ ಅವಳು ಹೇಳಿದಳು: "ಅಯ್ಯಾ ವೀರವರ್ಯನೇ! ನೀನೇ ಅಲ್ಲವೇ ನನ್ನ ಒಂದು ಕಡಗವನ್ನು ಹಿಂದೆ ಕಿತ್ತುಕೊಂಡುಹೋದವನು? ನಿನ್ನ ಪರಾಕ್ರಮಕ್ಕೆ ಮೆಚ್ಚಿ ಸಂತೋಷಗೊಂಡೆ. ನನ್ನ ಹೆಸರು ವಿದ್ಯುತ್ಕೇಶಿ. ಇದೋ ಈ ನನ್ನ ಮಗಳನ್ನೂ, ರತ್ನದ ಕಡಗವನ್ನೂ ತೆಗೆದುಕೋ" ಎಂದು ಮಗಳೊಡನೆ ಆ ಕಡಗವನ್ನು ಅಳಿಯನಿಗೆ ಬಳುವಳಿಯಾಗಿ ಕೊಟ್ಟಳು. ಅಶೋಕ

ವಿದ್ಯುತ್ಕೇಶೀತು ಜಾಮಾತ್ರೇ ಹೇಮಾಬ್ಜಮಪಿ ಸಾ ದದೌ ।
ವಿದ್ಯುತ್ಪ್ರಭಾಂ ನೂಪುರಂ ಚ ಹೇಮಾಬ್ಜಮಪಿ ಲಭ್ಯ ಸಃ ॥ ೫೩ ॥
ಶ್ವಶ್ರೂಮಾಭಾಷ್ಯ ಸಹಸಾ ಪುನಃ ಪ್ರಾಯಾನ್ನೃಪಾಂತಿಕಂ ।
ತತಃ ಪ್ರತಾಪ ಮುಕುಟೋ ನೂಪುರಪ್ರಾಪ್ತಿನಂದಿತಃ ।
ಶೌರ್ಯಧೈರ್ಯಸಮಾಯುಕ್ತಂ ಪ್ರಶಶಂಸ ದ್ವಿಜಾತ್ಮಜಂ ॥ ೫೪ ॥
ಅಥ ವಿದ್ಯುತ್ಪ್ರಭಾಂ ವಿಪ್ರಃ ಸೋಽಬ್ರವೀದ್ರಹಸಿ ಪ್ರಿಯಾಂ ॥ ೫೫ ॥
ಮಾತ್ರಾ ತವ ಕುತೋ ಲಬ್ಧಮೇತದ್ಧೇಮಾಂಬುಜಂ ಪ್ರಿಯೇ ।
ಏತತ್ತುಲ್ಯಾನಿ ಚಾಽನ್ಯಾನಿ ಯತಃ ಪ್ರಾಪ್ಸ್ಯೇ ವರಾನನೇ ॥ ೫೬ ॥
ದ್ವಿಜಾತ್ಮಜಂ ತತಃ ಪ್ರಾಹ ಪತಿಂ ವಿದ್ಯುತ್ಪ್ರಭಾ ರಹಃ ।
ಪ್ರಭೋ ಕಪಾಲವಿಸ್ಫೋಟನಾಮ್ನೋ ವೇತಾಲಭೂಪತೇಃ ॥ ೫೭ ॥
ಅಸ್ತಿ ದಿವ್ಯಂ ಸರಃ ಕಿಂಚಿದ್ಧೇಮಾಂಬುಜಪರಿಷ್ಕೃತಂ ।
ತವ ಶ್ವಶ್ರ್ವಾ ಜಲಕ್ರೀಡಾಂ ವಿತನ್ವಂತ್ಯೇದಮಾಹೃತಂ ॥ ೫೮ ॥
ಇತಿ ಶ್ರುತ್ವಾ ವಚಸ್ತತ್ರ ಮಾಂ ನಯೇತಿ ಜಗಾದ ಸಃ ।
ತತಃ ಸಾ ಸಹಸಾ ವಿಪ್ರಂ ನಿನ್ಯೇ ತತ್ಕಾಂಚನಂ ಸರಃ ॥ ೫೯ ॥

---

ದತ್ತನು ಕಡಗದೊಂದಿಗೆ ವಿದ್ಯುತ್ಪ್ರಭೆಯೆಂಬ ಹೆಸರನ್ನು ಸಾರ್ಥಕಗೊಳಿಸುವ ಆ ಯುವತಿಯನ್ನೂ ಪರಿಗ್ರಹಿಸಿ ಸಂತೋಷಗೊಂಡನು.

೫೩–೫೪. ವಿದ್ಯುತ್ಕೇಶಿಯು ಅಳಿಯನಿಗೆ ಚಿನ್ನದ ಕಮಲವನ್ನೂ ಬಳುವಳಿಯಾಗಿ ಕೊಟ್ಟಳು. ಬಳಿಕ ಅಶೋಕದತ್ತನು, ವಿದ್ಯುತ್ಪ್ರಭೆ, ರನ್ನಗಡಗ ಮತ್ತು ಚಿನ್ನದ ಕಮಲಗಳೊಡನೆ ಅತ್ತೆಯನ್ನು ಬೀಳ್ಕೊಟ್ಟು ರಾಜನ ಬಳಿಗೆ ಹಿಂತಿರುಗಿ ಬಂದನು. ರಾಜನದನ್ನು ಪಡೆದು ಸಂತೋಷಗೊಂಡು ಶೌರ್ಯಸಾಹಸಗಳಿಂದೊಪ್ಪುವ ಆತನನ್ನು ಹೊಗಳಿದನು.

೫೫–೫೬. ಒಮ್ಮೆ ಆ ಬ್ರಾಹ್ಮಣನು ಏಕಾಂತದಲ್ಲಿ ವಿದ್ಯುತ್ಪ್ರಭೆಯನ್ನು ಕುರಿತಿಂದೆಂದನು:—“ಪ್ರಿಯೇ! ನಿನ್ನ ತಾಯಿಯು ಚಿನ್ನದ ಕಮಲವನ್ನೆಲ್ಲಿಂದ ತಂದಳು? ಓ ವರಾನನೇ! ಇಂತಹ ಮತ್ತೆ ಕೆಲವು ಕಮಲಗಳು ಬೇಕಾದರೆ ನಾನೆಲ್ಲಿಂದ ಪಡೆಯಬಹುದು?”

೫೭–೫೮. ಇಂತು ಕೇಳಿದ ಇನಿಯನಿಗೆ ವಿದ್ಯುತ್ಪ್ರಭೆಯು ಗುಟ್ಟಾಗಿ ಹೇಳುತ್ತಾಳೆ: “ಸ್ವಾಮಿಯೇ! ಕಪಾಲವಿಸ್ಫೋಟನೆಂಬ ಭೇತಾಳರಾಜನ ಬಳಿ ಚಿನ್ನದ ಕಮಲಗಳಿಂದೊಪ್ಪುವ ಸರೋವರವೊಂದಿರುವುದು. ನಿಮ್ಮ ಅತ್ತೆಯು ಅಲ್ಲಿ ಜಲಕ್ರೀಡೆಯಾಡುವಾಗ ಅದನ್ನು ತಂದಳು.”

೫೯. ಅದನ್ನು ಕೇಳಿ ಬ್ರಾಹ್ಮಣನು ತನ್ನನ್ನಲ್ಲಿಗೆ ಕರೆದುಕೊಂಡುಹೋಗುವಂತೆ ಕೇಳಿದನು. ಆ ಕೂಡಲೇ ಅವಳು ತನ್ನ ಪ್ರಿಯನನ್ನು ಆ ಕಾಂಚನ ಸರೋವರಕ್ಕೊಯ್ದಳು.

ತತಃ ಸ ಹೇಮ ಪದ್ಮಾನಾಮಾಜಿಹೀರ್ಷುರ್ದ್ವಿಜಾತ್ಮಜಃ ।
ತದ್ವಿಘ್ನಕಾರಿಣಃ ಸರ್ವಾನ್ವೇತಾಲಾದೀಂಸ್ತತೋಽವಧೀತ್ ॥ ೬೦ ॥
ಸ್ವಯಂ ಕಪಾಲವಿಸ್ಫೋಟಂ ನಿಹತಾಽಶೇಷಸೈನಿಕಂ ।
ದದರ್ಶ ವೇತಾಲಪತಿಂ ತಂಚ ಹಂತುಂ ಪ್ರಚಕ್ರಮೇ ॥ ೬೧ ॥
ಅತ್ರಾಂತರೇ ಮಹಾತೇಜಾ ನಾಮ್ನಾ ವಿಜ್ಞಪ್ತಿಕೌತುಕಃ ।
ವಿದ್ಯಾಧರಪತಿಃ ಪ್ರಾಪ್ಯ ವಿಮಾನೇನೈನಮಬ್ರವೀತ್ ॥ ೬೨ ॥
ಅಶೋಕದತ್ತ ವಿಪ್ರೇಂದ್ರ ಸಾಹಸಂ ಮಾ ಕೃಥಾ ಇತಿ ।
ತದಾಕರ್ಣ್ಯ ದ್ವಿಜಸುತೋ ವಿಮಾನವರಸಂಸ್ಥಿತಂ ।
ದದರ್ಶ ಪ್ರಭಯಾ ಯುಕ್ತಂ ವಿದ್ಯಾಧರಪತಿಂ ದಿವಿ ॥ ೬೩ ॥
ತಸ್ಯ ದರ್ಶನ ಮಾತ್ರೇಣ ಶಾಪಾನ್ಮುಕ್ತೋ ದ್ವಿಜಾತ್ಮಜಃ ।
ಸಂತ್ಯಜ್ಯ ಮಾನುಷಂ ರೂಪಂ ದಿವ್ಯಂ ರೂಪಮವಾಪ್ತವಾನ್ ॥ ೬೪ ॥
ವಿಮಾನವರಮಾರೂಢಂ ದಿವ್ಯಾಭರಣಭೂಷಿತಂ ।
ಶಾಪಾನ್ಮುಕ್ತಂ ಸುಕರ್ಣಂ ತಂ ಪ್ರಾಹ ವಿಜ್ಞಪ್ತಿಕೌತುಕಃ ॥ ೬೫ ॥
ಅಯಂ ಸುಕರ್ಣ ತೇ ಭ್ರಾತಾ ಗಾಲವಸ್ಯ ಮಹಾಮುನೇಃ ।
ಶಾಪಾದ್ವೇತಾಲತಾಂ ಪ್ರಾಪ ತತ್ಕನ್ಯಾಸ್ಪರ್ಶಪಾತಕೀ ॥ ೬೬ ॥
ತ್ವಂಚ ಶಪ್ತಃ ಪುರಾ ತೇನ ತತ್ಪಾಪಸ್ಯಾಽನುಮೋದಕಃ ॥ ೬೭ ॥

---

೬೦. ಬಳಿಕ ಬಂಗಾರದ ಕಮಲಗಳನ್ನು ಪಡೆಯಲಪೇಕ್ಷೆಯುಳ್ಳ ಆತನು ತನ್ನನ್ನು ತಡೆದ ಭೇತಾಳರೆಲ್ಲರನ್ನೂ ಕೊಂದುಹಾಕಿದನು.

೬೧. ಅಲ್ಲದೆ ಹತಸೈನಿಕನೂ, ಭೇತಾಳಪತಿಯೂ ಆದ ಕಪಾಲಸ್ಫೋಟನನ್ನು ಕಂಡು ಅವನನ್ನೂ ಕೊಲ್ಲಲುದ್ಯುಕ್ತನಾದನು.

೬೨. ಅಷ್ಟರಲ್ಲಿ ತೇಜಸ್ಸಂಪನ್ನನಾದ ವಿಜ್ಞಪ್ತಿಕೌತುಕನೆಂಬ ವಿದ್ಯಾಧರಾಧಿಪನು ವಿಮಾನವನ್ನೇರಿ ಅಲ್ಲಿಗೆ ಬಂದವನು ಅವನನ್ನು ಕುರಿತು ಹೀಗೆ ಹೇಳಿದನು:

೬೩. "ಅಯ್ಯಾ ಬ್ರಾಹ್ಮಣನೇ! ಅಶೋಕದತ್ತ, ಸಾಹಸಮಾಡಬೇಡ." ಆತನಿಂತು ಹೇಳಲು ಆ ಬ್ರಾಹ್ಮಣಕುಮಾರನದನ್ನು ಕೇಳಿ, ಶ್ರೇಷ್ಠವಾದ ವಿಮಾನದಲ್ಲಿ ಕುಳಿತಿರುವ ತೇಜಸ್ವಿಯಾದ ಆ ವಿದ್ಯಾಧರನನ್ನು ಕಂಡನು.

೬೪–೬೫. ಒಡನೆಯೆ ಅವನು ಶಾಪದಿಂದ ಮುಕ್ತನಾಗಿ ಮನುಷ್ಯರೂಪವನ್ನು ತೊರೆದು ದಿವ್ಯವಾದ ರೂಪವನ್ನು ಪಡೆದನು. ಹೀಗೆ ಶಾಪಮುಕ್ತನಾಗಿ ದಿವ್ಯವಾದ ವಿಮಾನವನ್ನೇರಿ ಸಕಲಾಭರಣಗಳಿಂದೊಪ್ಪುವ ಆ ಸುಕರ್ಣನನ್ನು ಕುರಿತು ವಿಜ್ಞಪ್ತಿಕೌತುಕನಿಂತೆಂದನು :—

೬೬–೬೭. "ಎಲೈ ಸುಕರ್ಣನೇ! ಇವನು ನಿನ್ನ ಸೋದರನಾದ ವಿಜಯದತ್ತ. ಗಾಲವಮಹರ್ಷಿಯ ಮಗಳನ್ನು ಮುಟ್ಟಿದ ಪಾತಕಿ. ಆತನಿಂದ

ತವಾಯಮಲ್ಪಪಾಪಸ್ಯ ಶಾಪೋ ಮದ್ದರ್ಶನಾಽವಧಿಃ ।
ಕಲ್ಪಿತಸ್ತೇಽನ ಮುನಿನಾ ಶಾಪಾಂತೋ ನಾಽಸ್ಯಕಲ್ಪಿತಃ ॥ ೬೮ ॥
ತದೇಹಿ ಮುಕ್ತಶಾಪೋಽಸಿ ಸುಕರ್ಣ ಸ್ವರ್ಗಮಾರುಹ ।
ತತಃ ಸುಕರ್ಣಸ್ತಂ ಪ್ರಾಹ ವಿದ್ಯಾಧರಕುಲಾಧಿಪಂ ॥ ೬೯ ॥
ವಿದ್ಯಾಧರಪತೇ ಭ್ರಾತ್ರಾ ವಿನಾ ಜ್ಯೇಷ್ಠೇನ ಸಾಂಪ್ರತಂ ।
ಸರ್ವಭೋಗಯುತಂ ಸ್ವರ್ಗಂ ನೈವ ಗಂತುಂ ಸಮುತ್ಸಹೇ ।
ಶಾಪಸ್ಯಾಂತೋ ಯಥಾ ಭೂಯಾನ್ಮಮ ಭ್ರಾತುಸ್ತಥಾ ವದ ॥ ೭೦ ॥
ತಮುವಾಚ ಮಹಾತೇಜಾಸ್ತಥಾ ವಿಜ್ಞಪ್ತಿಕೌತುಕಃ ।
ದುರ್ನಿವಾರಮಿಮಂ ಶಾಪಮನ್ಯಃ ಕೋವಾ ನಿವಾರಯೇತ್ ॥ ೭೧ ॥
ಕಿಂ ತು ಗುಹ್ಯತಮಂ ಕಿಂಚಿತ್ತವ ವಕ್ಷ್ಯಾಮಿ ಸಾಂಪ್ರತಂ ।
ಬ್ರಹ್ಮಣಾ ಸನಕಾದಿಭ್ಯೋ ಮುನಿಭ್ಯಃ ಕಥಿತಂ ಪುರಾ ॥ ೭೨ ॥
ಸರ್ವತೀರ್ಥಾಽಽಶ್ರಯೇ ಪುಣ್ಯೇ ದಕ್ಷಿಣಸ್ಯೋದಧೇಸ್ತಟೇ ।
ನಶ್ಯಂತಿ ತತ್ಕ್ಷಣಾದೇವ ನಜಾನೇ ಸ್ನಾನಜಂ ಫಲಂ ॥ ೭೩ ॥
ತತ್ರ ಗತ್ವಾ ತವ ಜ್ಯೇಷ್ಠೋ ಯದಿ ಸ್ನಾಯಾನ್ಮಹತ್ತರೇ ।
ಚಕ್ರತೀರ್ಥಸಮೀಪೇ ತು ತೀರ್ಥಮಸ್ತಿ ಮಹತ್ತರಂ ॥ ೭೪ ॥

---

ಶಾಪವನ್ನು ಹೊಂದಿದವನು. ಆ ಪಾಪಕೃತ್ಯವನ್ನೊಪ್ಪಿದ ನೀನೂ ಕೂಡ ಶಪಿಸಲ್ಪಟ್ಟೆ.

೬೮. ಆ ಮುನಿಯು, ಅಲ್ಪಪಾತಕಿಯಾದಿ ನಿನ್ನ ಶಾಪಕ್ಕೆ ನನ್ನ ದರ್ಶನವೇ ಕಡೆಮಾಡಿದ್ದನೇ ಹೊರತು, ಈತನ ಶಾಪಕ್ಕೆ ಯಾವ ಅವಧಿಯೂ ಏರ್ಪಡಲಿಲ್ಲ.

೬೯–೭೦. ಆದುದರಿಂದೆಲೈ ಸುಕರ್ಣನೆ! ಬಾ. ಇದೀಗ ನೀನು ಮುಕ್ತಶಾಪನಾಗಿದ್ದೀಯೆ, ಸ್ವರ್ಗವನ್ನೇರು'' ಎಂದನು. ಆಗ ಸುಕರ್ಣನು, ''ಎಲೈ ವಿದ್ಯಾಧರಾಧಿಪನೇ! ನನ್ನ ಅಣ್ಣನನ್ನು ಬಿಟ್ಟು ಸಕಲೋಪಭೋಗಗಳಿಂದ ತುಂಬಿದ್ದರೂ ಆ ಸ್ವರ್ಗಕ್ಕೆ ನಾನು ಬರಲಾರೆ. ಅಣ್ಣನಿಗೂ ಶಾಪವು ಬಿಟ್ಟು ಹೋಗುವ ಉಪಾಯವನ್ನರುಹು'' ಎಂದಾತನನ್ನು ಕೇಳಿಕೊಂಡನು.

೭೧–೭೨. ಮಹಾತೇಜಸ್ಸಂಪನ್ನನಾದ ವಿಜ್ಞಪ್ತಿಕೌತುಕನು, ''ಅಯ್ಯಾ! ಇದು ಅಸಾಧ್ಯವು. ಯಾವನುತಾನೆ ಇದನ್ನು ಹೋಗಲಾಡಿಸಬಲ್ಲನು? ಆದರೆ ಹಿಂದೆ ಬ್ರಹ್ಮದೇವನು ಸನಕಾದಿ ಮುನಿಗಳಿಗೆ ತಿಳಿಸಿದ ಒಂದು ರಹಸ್ಯವನ್ನೀಗ ಅರುಹುವೆನು.

೭೩–೭೪. ಸಕಲ ತೀರ್ಥಗಳಿಗೂ ಆಶ್ರಯವಾಗಿ ದಕ್ಷಿಣಸಮುದ್ರತೀರದ ಚಕ್ರತೀರ್ಥದ ಬಳಿ ಅಮೋಘವಾದ ತೀರ್ಥವೊಂದಿರುವುದು. ಆದರ ದರ್ಶನಮಾತ್ರದಿಂದಲೇ ಸಮಸ್ತ ಪಾಪಗಳೂ ನಶಿಸುವುವು. ಇನ್ನೂ ಅದರ ಸ್ನಾನ

ಮಹಾಪಾತಕಸಂಘಾಶ್ಚ ಯಸ್ಯ ದರ್ಶನಮಾತ್ರತಃ ।
ವೇತಾಲತ್ವಂ ತ್ಯಜೇನ್ನೂನಂ ತದಾ ಗಾಲವಶಾಪಜಂ ॥ ೭೫ ॥
ಸುಕರ್ಣಸ್ತದ್ವಚಃ ಶ್ರುತ್ವಾ ಭ್ರಾತ್ರಾ ವೇತಾಲರೂಪಿಣಾ ।
ಸಹಿತಃ ಸಹಸಾ ಪ್ರಾಯಾದ್ದಕ್ಷಿಣಸ್ಯೋದಧೇಸ್ತಟಂ ॥ ೭೬ ॥
ದಕ್ಷಿಣಂ ಚಕ್ರತೀರ್ಥಾಖ್ಯಾದುತ್ತರಂ ಗಂಧಮಾದನಾತ್ ।
ಬ್ರಹ್ಮಣಾ ಸನಕಾದಿಭ್ಯಃ ಕಥಿತಂ ತೀರ್ಥಮಭ್ಯಗಾತ್ ॥ ೭೭ ॥
ತತ್ತೀರ್ಥಕೂಲಮಾಸಾದ್ಯ ಭ್ರಾತರಂ ಚೇದಮಬ್ರವೀತ್ ॥ ೭೮ ॥
ಭ್ರಾತರ್ಗಾಲವ ಶಾಪಸ್ಯ ಘೋರಸ್ಯಾಸ್ಯ ನಿವೃತ್ತಯೇ ।
ತೀರ್ಥೇಽಸ್ಮಿನ್ನಚಿರಾತ್ಸ್ನಾಹಿ ಸರ್ವತೀರ್ಥೋತ್ತಮೋತ್ತಮೇ ॥ ೭೯ ॥
ತಸ್ಮಿನ್ನವಸರೇ ವಿಪ್ರಾಸ್ತಸ್ಯ ತೀರ್ಥಸ್ಯ ಶೀಕರಾಃ ।
ನ್ಯಪತಂಸ್ತಸ್ಯ ಗಾತ್ರೇಷು ವಾಯುನಾ ವೈ ಸಮಾಹೃತಾಃ ॥ ೮೦ ॥
ಸ ತಚ್ಛೀಕರಸಂಸ್ಪರ್ಶಾತ್ತ್ಯಕ್ತ್ವಾ ವೇತಾಲತಾಂ ತದಾ ।
ತದೇವ ಮಾನುಷಂ ಭಾವಂ ದ್ವಿಜಪುತ್ರತ್ವಮಾಪ್ತವಾನ್ ॥ ೮೧ ॥
ತತಃ ಸಂಕಲ್ಪ್ಯ ಸಹಸಾ ತಸ್ಮಿಂಸ್ತೀರ್ಥೋತ್ತಮೋತ್ತಮೇ ।
ಮನುಷ್ಯತ್ವನಿವೃತ್ತ್ಯರ್ಥಂ ನಿಮಮಜ್ಜ ದ್ವಿಜಾತ್ಮಜಃ ॥ ೮೨ ॥
ಉತ್ತಿಷ್ಠನ್ನೇವ ಸಹಸಾ ದಿವ್ಯಂ ರೂಪಮವಾಪ್ತವಾನ್ ।
ವಿಮಾನವರಮಾರೂಢೋ ದೇವಸ್ತ್ರೀಪರಿವಾರಿತಃ ॥ ೮೩ ॥

---

ದಿಂದಾಗುವ ಫಲವೆಂತಹುದೆಂದು ಬೇರೆ ಹೇಳಬೇಕೆ?" ಆದುದರಿಂದೆಲೈ ಸುಕರ್ಣನೇ! ನಿನ್ನ ಅಣ್ಣನನ್ನಲ್ಲಿಗೆ ಕರೆದುಕೊಂಡುಹೋಗಿ ಸ್ನಾನಮಾಡಿಸಿದಲ್ಲಿ ನಿಜವಾಗಿಯೂ ಗಾಲವ ಶಾಪದಿಂದೊದಗಿರುವ ಈ ಭೇತಾಳಜನ್ಮವು ತೊಲಗುವುದು" ಎಂದುತ್ತರವಿತ್ತನು.

೭೬–೭೮. ಸುಕರ್ಣನದನ್ನು ಕೇಳಿ ಭೇತಾಳರೂಪಿಯಾದ ಅಣ್ಣನೊಂದಿಗೆ ತೆಂಕಲುಕಡಲಿನ ದಡವನ್ನು ಸೇರಿ ಚಕ್ರತೀರ್ಥಕ್ಕೆ ದಕ್ಷಿಣದಲ್ಲಿಯೂ, ಗಂಧಮಾದನಕ್ಕೆ ಉತ್ತರದಲ್ಲಿಯೂ ಇರುವುದಾಗಿ, ಬ್ರಹ್ಮನು ಸನಕಾದಿಗಳಿಗೆ ತಿಳಿಸಿದ ಪುಣ್ಯತಮವಾದ ತೀರ್ಥವನ್ನು ಸಮೀಪಿಸಿ ಅಣ್ಣನನ್ನು ಕುರಿತು ಹೇಳಿದನು :

೭೯. "ಅಣ್ಣಾ! ಗಾಲವಮಹರ್ಷಿಯ ಘೋರ ಶಾಪವನ್ನು ನೀಗಲೋಸುಗ ಉತ್ತಮೋತ್ತಮವಾದ ಈ ತೀರ್ಥದಲ್ಲಿ ಬೇಗನೆ ಮುಳುಗಿ ಸ್ನಾನಮಾಡು."

೮೦–೮೧. ಹೀಗೆ ಹೇಳುತ್ತಿರುವಲ್ಲಿಯೇ ಗಾಳಿಯಿಂದ ಹಾರಿಬಂದ ಆ ತೀರ್ಥದ ತುಂತುರುಗಳಾತನ ಮೇಲೆ ಬಿದ್ದು ಕೂಡಲೇ ಆತನ ಭೇತಾಳಜನ್ಮವು ತೊಲಗಿತು. ಒಡನೆಯೆ ಆತನು ಮನುಷ್ಯತ್ವವನ್ನು ಪಡೆದನು.

೮೨–೮೪. ಬಳಿಕ ಆ ಬ್ರಾಹ್ಮಣನು ಮನುಷ್ಯತ್ವವನ್ನು ನೀಗಲು ಸಂಕಲ್ಪಪೂರ್ವಕವಾಗಿ ಅದರಲ್ಲಿ ಮಿಂದೆದ್ದೊಡನೆಯೇ ದಿವ್ಯರೂಪವನ್ನು ಪಡೆದಿದ್ದನು.

ಸರ್ವಾಭರಣಸಂಯುಕ್ತಃ ಸಹಭ್ರಾತ್ರಾ ಸುದರ್ಶನಃ ।
ಶ್ಲಾಘಮಾನಶ್ಚ ತತ್ತೀರ್ಥಂ ನಮಸ್ಕೃತ್ಯ ಪುನಃ ಪುನಃ ।
ವಿಜ್ಞಪ್ತಿಕೌತುಕಂ ಚಾಽಪಿ ಪುರಸ್ಕೃತ್ಯ ದಿವಂ ಯಯೌ ॥ ೮೪ ॥
ತದಾಪ್ರಭೃತಿ ತತ್ತೀರ್ಥಂ ವೇತಾಲವರದಾಽಭಿಧಂ ।
ವೇತಾಲತ್ವಂ ವಿನಷ್ಟಂ ಯಚ್ಛೀಕರಸ್ಪರ್ಶಮಾತ್ರತಃ ॥ ೮೫ ॥
ಯ ಇದಂ ತೀರ್ಥಮಾಸಾದ್ಯ ಚಕ್ರತೀರ್ಥಸ್ಯ ದಕ್ಷಿಣೇ ।
ಸ್ನಾನಂ ಕದಾಚಿತ್ಕುರ್ವಂತಿ ಜೀವನ್ಮುಕ್ತಾ ಭವಂತಿ ತೇ ॥ ೮೬ ॥
ಏತತ್ತೀರ್ಥಸಮಂ ಪುಣ್ಯಂ ನ ಭೂತಂ ನ ಭವಿಷ್ಯತಿ ॥ ೮೭ ॥
ಘೋರಾಂ ವೇತಲತಾಂ ತ್ಯಕ್ತ್ವಾ ದಿವ್ಯತಾಂ ಸ ಯದಾಪ್ತವಾನ್ ॥ ೮೮ ॥
ಅತ್ರ ಸಂಕಲ್ಪ್ಯ ಚ ಸ್ನಾತ್ವಾ ವೇತಾಲವರದೇ ಶುಭೇ ।
ಪಿತೃಭ್ಯಃ ಪಿಂಡದಾನಂ ಚ ಕುರ್ಯಾದ್ವೈ ನಿಯಮಾನ್ವಿತಃ ॥ ೮೯ ॥
ಏವಂ ವಃ ಕಥಿತಂ ವಿಪ್ರಾಸ್ತಸ್ಯ ತೀರ್ಥಸ್ಯ ವೈಭವಂ ।
ವೇತಾಲವರದಾಭಿಖ್ಯಾ ಯಥಾ ಚಾಸ್ಯ ಸಮಾಗತಾ ॥ ೯೦ ॥

---

ತರುವಾಯ ದಿವ್ಯವಾದ ವಿಮಾನವನ್ನೇರಿ ದೇವತಾಸ್ತ್ರೀಯರಿಂದಾವೃತನಾಗಿ ವಿಜ್ಞಪ್ತಿಕೌತುಕನನ್ನು ಮುಂದುವರಿಸಿಕೊಂಡು ಆ ತೀರ್ಥವನ್ನು ಹೊಗಳುತ್ತ ಅನೇಕಬಾರಿ ಅದಕ್ಕೆ ನಮಸ್ಕರಿಸಿ ತಮ್ಮನಾದ ಸುಕರ್ಣನೊಡನೆ ಸ್ವರ್ಗಲೋಕಕ್ಕೆ ತೆರಳಿದನು.

೮೫. ಕೇವಲ ಜಲಶೀಕರಗಳ ಸ್ಪರ್ಶದಿಂದಲೇ ವಿಜಯದತ್ತನೆಂಬ ಬ್ರಾಹ್ಮಣನಾಗಿ ಜನಿಸಿದ್ದ ಆ ಸುದರ್ಶನನ ಭೇತಾಳತ್ವವನ್ನು ಹೋಗಲಾಡಿಸಿದ ಕಾರಣ ಆಗಿನಿಂದಲೂ ಆ ತೀರ್ಥವು ಭೇತಾಳವರದವೆಂದು ಖ್ಯಾತಿಗೊಂಡಿತು.

೮೬–೮೭. ಚಕ್ರತೀರ್ಥಕ್ಕೆ ದಕ್ಷಿಣದಲ್ಲಿರುವ ಈ ತೀರ್ಥದಲ್ಲಿ ಯಾರು ಒಮ್ಮೆಯಾದರೂ ಸ್ನಾನಮಾಡುವರೋ ಅವರು ಜೀವನ್ಮುಕ್ತರಾಗುತ್ತಾರೆ. ಅಯ್ಯಾ ಮುನಿಗಳಿರಾ! ಈ ತೀರ್ಥಕ್ಕೆ ಸಮನಾದ ತೀರ್ಥವು ಹಿಂದಿರಲಿಲ್ಲ. ಮುಂದಿರುವುದಿಲ್ಲ.

೮೮–೮೯. ಘೋರವಾದ ಭೇತಾಳತ್ವವನ್ನು ಬಿಟ್ಟು ದಿವ್ಯರೂಪವನ್ನು ಧರಿಸಿದನಾದುದರಿಂದ ಪುಣ್ಯತಮವಾದ ಈ ಭೇತಾಳವರದದಲ್ಲಿ ಎಲ್ಲರೂ ಸಂಕಲ್ಪಪೂರ್ವಕವಾಗಿ ಸ್ನಾನಮಾಡಿ ಪಿತೃಗಳಿಗೆ ಪಿಂಡದಾನವನ್ನು ಮಾಡತಕ್ಕುದು.

೯೦. ಅಯ್ಯಾ ವಿಪ್ರವರ್ಯರೆ! ಇದಕ್ಕೆ ಭೇತಾಳವರದವೆಂಬ ಹೆಸರು ಬಂದ ರೀತಿಯನ್ನೂ, ಇವರ ವೈಭವವನ್ನೂ ಇಂತು ನಿಮಗೆ ತಿಳಿಸಿರುವೆನು.

ಯಃ ಪಠೇದಿಮಮಧ್ಯಾಯಂ ಶೃಣುಯದ್ವಾ ಸ ಮುಚ್ಯತೇ ॥ ೯೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಸುದರ್ಶನಸುಕರ್ಣಶಾಪ
ಮೋಕ್ಷಣಂ" ನಾಮ ನವಮೋಽಧ್ಯಾಯಃ

---

೯೧. ಯಾರು ಈ ಅಧ್ಯಾಯವನ್ನೋದುವರೋ, ಯಾರು ಕೇಳುವರೋ ಅವರೆಲ್ಲರೂ ಮುಕ್ತಿಯನ್ನು ಪಡೆಯುತ್ತಾರೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ
"ಸುದರ್ಶನಸುಕರ್ಣರ ಶಾಪಮೋಕ್ಷಣ" ವೆಂಬ
ಒಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದಶಮೋಽಧ್ಯಾಯಃ

### ಗಂಧಮಾದನಗಿರಿ ಪ್ರಶಂಸನಂ—ಪಾಪವಿನಾಶಪ್ರಭಾವಕಥನಂ

ಶ್ರೀ ಸೂತ ಉವಾಚ :—

ವೇತಾಲವರದೇ ತೀರ್ಥೇ ನರಃ ಸ್ನಾತ್ವಾ ದ್ವಿಜೋತ್ತಮಾಃ ।
ತತಃ ಶನೈಃ ಶನೈರ್ಗಚ್ಛೇದ್ಗಂಧಮಾದನಪರ್ವತಂ ॥ ೧ ॥
ಯೋಽಂಬುಧೌ ಸೇತುರೂಪೇಣ ವರ್ತತೇ ಗಂಧಮಾದನಃ ।
ಸ ಮಾರ್ಗೋ ಬ್ರಹ್ಮಲೋಕಸ್ಯ ವಿಶ್ವಕರ್ತ್ರಾ ವಿನಿರ್ಮಿತಃ ॥ ೨ ॥
ಲಕ್ಷಕೋಟಿಸಹಸ್ರಾಣಿ ಸರಾಂಸಿ ಸರಿತಸ್ತಥಾ ।
ಸಮುದ್ರಾಶ್ಚ ಮಹಾಪುಣ್ಯಾ ವನಾನ್ಯಪ್ಯಾಶ್ರಮಾಣಿ ಚ ॥ ೩ ॥
ಪುಣ್ಯಾನಿ ಕ್ಷೇತ್ರಜಾತಾನಿ ವೇದಾರಣ್ಯಾದಿಕಾನಿ ಚ ।
ಮುನಯಶ್ಚ ವಸಿಷ್ಠಾದ್ಯಾಃ ಸಿದ್ಧಚಾರಣಕಿನ್ನರಾಃ ॥ ೪ ॥
ಲಕ್ಷ್ಮ್ಯಾ ಸಹ ಧರಣ್ಯಾ ಚ ಭಗವಾನ್ಮಧುಸೂದನಃ ।
ಸಾವಿತ್ರ್ಯಾ ಚ ಸರಸ್ವತ್ಯಾ ಸಹೈವ ಚತುರಾನನಃ ॥ ೫ ॥
ಹೇರಂಬಃ ಷಣ್ಮುಖಶ್ಚೈವ ದೇವಾಶ್ಚೇಂದ್ರಪುರೋಗಮಾಃ ।
ಆದಿತ್ಯಾದಿಗ್ರಹಾಶ್ಚೈವ ತಥಾಽಷ್ಟೌ ವಸವೋ ದ್ವಿಜಾಃ ॥ ೬ ॥

---

## ಕನ್ನಡದ ಅನುವಾದ

### ಗಂಧಮಾಧನಗಿರಿಪ್ರಶಂಸೆ—ಪಾಪವಿನಾಶಪ್ರಭಾವಕಥನ

೧. ಸೂತನು ಹೇಳುತ್ತಾನೆ:—“ಎಲೈ ದ್ವಿಜಶ್ರೇಷ್ಠರೇ! ಯಾತ್ರಿಕನಾದವನು ಭೇತಾಲವರದತೀರ್ಥದಲ್ಲಿ ಸ್ನಾನಮಾಡಿದಬಳಿಕ ಮೆಲ್ಲಮೆಲ್ಲನೆ ಗಂಧಮಾದನಪರ್ವತಕ್ಕೆ ತೆರಳಬೇಕು.

೨. ಯಾವುದು ಸಮುದ್ರದಲ್ಲಿ ಸೇತುವಿನಂತಿದೆಯೋ, ಆ ಗಂಧಮಾದನಪರ್ವತವನ್ನು ಸೃಷ್ಟಿಕರ್ತನು ಬ್ರಹ್ಮಲೋಕದ ಹಾದಿಯನ್ನಾಗಿ ನಿರ್ಮಿಸಿರುವನು.

೩–೮. ಲಕ್ಷಕೋಟಿಸಹಸ್ರ ಸರೋವರಗಳೂ, ಅಷ್ಟೇ ಸಂಖ್ಯೆಯ ಮಹಾನದಿಗಳೂ, ಮಹಾಪುಣ್ಯಸಮುದ್ರಗಳೂ, ವನಗಳೂ, ಆಶ್ರಮಗಳೂ, ಪುಣ್ಯಪ್ರದಗಳಾದ ವೇದಾರಣ್ಯವೇ ಮೊದಲಾದ ಕ್ಷೇತ್ರಸಮೂಹಗಳೂ, ವಸಿಷ್ಠಾದಿ ಮಹರ್ಷಿಗಳೂ, ಸಿದ್ಧಚಾರಣ ಕಿನ್ನರಾದಿಗಳೂ, ಶ್ರೀಭೂಸಮೇತನಾದ ಮಹಾವಿಷ್ಣುವೂ, ಸಾವಿತ್ರೀ ಸರಸ್ವತೀ ಸಹಿತನಾದ ಬ್ರಹ್ಮನೂ, ಗಣೇಶನೂ, ಕುಮಾರಸ್ವಾಮಿಯೂ, ಇಂದ್ರಾದಿದೇವತೆಗಳೂ, ಆದಿತ್ಯಾದಿ ಗ್ರಹಗಳೂ, ಅಷ್ಟವಸು

ಪಿತರೋ ಲೋಕಪಾಲಾಶ್ಚ ತಥಾಽನ್ಯೇ ದೇವತಾಗಣಾಃ ।
ಮಹಾಪಾತಕಸಂಘಾನಾಂ ನಾಶನೇ ಲೋಕಪಾವನೇ ॥ ೭ ॥
ದಿವಾನಿಶಂ ವಸಂತ್ಯತ್ರ ಪರ್ವತೇ ಗಂಧಮಾದನೇ ।
ಅತ್ರ ಗೌರೀ ಸದಾ ತುಷ್ಟಾ ಹರೇಣ ಸಹ ವರ್ತತೇ ॥ ೮ ॥
ಅತ್ರ ಕಿನ್ನರಕಾಂತಾನಾಂ ಕ್ರೀಡಾ ಜಾಗರ್ತಿ ನಿತ್ಯಶಃ ।
ತಸ್ಯ ದರ್ಶನಮಾತ್ರೇಣ ಬುದ್ಧಿಸೌಖ್ಯಂ ನೃಣಾಂ ಭವೇತ್ ॥ ೯ ॥
ತನ್ಮೂರ್ಧನಿ ಕೃತಾವಾಸಾಃ ಸಿದ್ಧಚಾರಣಯೋಷಿತಃ ।
ಪೂಜಯಂತಿ ಸದಾಕಾಲಂ ಶಂಕರಂ ಗಿರಿಜಾಪತಿಂ ॥ ೧೦ ॥
ಕೋಟಯೋ ಬ್ರಹ್ಮಹತ್ಯಾನಾಂ ಅಗಮ್ಯಾಗಮಕೋಟಯಃ ।
ಅಂಗಲಗ್ನೈರ್ವಿನಶ್ಯಂತಿ ಗಂಧಮಾದನಮಾರುತೈಃ ॥ ೧೧ ॥
ಅಸಾವಲ್ಲೋಲಕಲ್ಲೋಲೇ ತಿಷ್ಠನ್ಮಧ್ಯೇ ಮಹಾಂಬುಧೌ ।
ಆಸೀನ್ಮುನಿಗಣೈಃ ಸೇವ್ಯಃ ಪುರಾ ವೈ ಗಂಧಮಾದನಃ ॥ ೧೨ ॥
ತತೋ ನಲೇನ ಸೇತೌ ತು ಬದ್ಧೇ ತನ್ಮಧ್ಯಗೋಚರಃ ।
ರಾಮಾಜ್ಞಯಾಽಖಿಲೈಃ ಸೇವ್ಯೋ ಬಭೂವ ಮನುಜೈರಪಿ ॥ ೧೩ ॥

---

ಗಳೂ, ಪಿತೃದೇವತೆಗಳೂ, ಲೋಕಪಾಲಕರೂ, ಇತರ ದೇವತೆಗಳೂ, ಮಹಾಪಾತಕಗಳ ಸಂಘವನ್ನು ಹೋಗಲಾಡಿಸುವಂತಹ ಈ ಗಂಧಮಾದನಪರ್ವತದಲ್ಲಿ ಹಗಲಿರುಳೂ ವಾಸವಾಗಿರುತ್ತಾರೆ. ಪಾರ್ವತಿಯು ಸಹ ಯಾವಾಗಲೂ ಸಂತೋಷಚಿತ್ತಳಾಗಿ ಪರಮೇಶ್ವರನೊಂದಿಗೆ ಅಲ್ಲಿಯೇ ವಾಸಿಸುತ್ತಿರುತ್ತಾಳೆ.

೯. ಇಲ್ಲಿ ಕಿನ್ನರಸ್ತ್ರೀಯರಾವಾಗಲೂ ಕ್ರೀಡಿಸುತ್ತಿರುತ್ತಾರೆ. ಇಂತಹ ಗಂಧಮಾದನಪರ್ವತದ ದರ್ಶನಮಾತ್ರದಿಂದಲೇ ಮಾನವರಿಗೆ ಶಾಶ್ವತವಾದ ಮನಃಪ್ರಸಾದವುಂಟಾಗುವುದು.

೧೦. ಅದರ ಶಿಖರದಲ್ಲಿ ವಾಸಮಾಡುವ ಸಿದ್ಧಚಾರಣಾದಿಗಳ ಸ್ತ್ರೀಯರು ಯಾವಾಗಲೂ ಗಿರಿಜಾಪತಿಯೂ, ಕಾಲಕಾಲನೂ ಆದ ಶ್ರೀಶಂಕರನನ್ನು ಪೂಜಿಸುವರು.

೧೧. ಮೈಗೆ ಸೋಕಿದಮಾತ್ರದಿಂದಲೆ ಗಂಧಮಾದನಗಿರಿಯ ಗಾಳಿಯು ಬ್ರಹ್ಮಹತ್ಯಾದಿ ಕೋಟಿಪಾತಕಗಳನ್ನಾದರೂ, ಅಗಮ್ಯಾಗಮನಕೋಟಿಗಳನ್ನಾದರೂ ಕೊನೆಗಾಣಿಸುವುದು.

೧೨. ಮುನ್ನ ಈ ಗಂಧಮಾದನವು ಅಲ್ಲೋಲಕಲ್ಲೋಲವಾದ ತೆರೆಗಳುಳ್ಳ ಸಮುದ್ರದ ಮಧ್ಯದಲ್ಲಿದ್ದು ಮುನಿಗಳಿಗೆ ಮಾತ್ರವೇ ಸೇವ್ಯವಾಗಿದ್ದಿತು.

೧೩. ನಲನು ಸೇತುವನ್ನು ನಿರ್ಮಿಸುವಾಗ ಶ್ರೀರಾಮನ ಅಪ್ಪಣೆಯಂತೆ ಇಲ್ಲಿ ಕಾಣಿಸಿಕೊಂಡು ಸಮಸ್ತ ಮನುಜರಿಗೂ ಸೇವ್ಯವಾಯಿತು.

ಸೇತುರೂಪಂ ಗಿರಿಂ ತಂ ತು ಪ್ರಾರ್ಥಯೇದ್ಗಂಧಮಾದನಂ ।
ಕ್ಷಮಾಧರ ಮಹಾಪುಣ್ಯ ಸರ್ವದೇವನಮಸ್ಕೃತ ॥ ೧೪ ॥
ವಿಷ್ಣ್ವಾದಯೋಽಪಿ ಯಂ ದೇವಾಸ್ಸೇವಂತೇ ಶ್ರದ್ಧಯಾ ಸಹ ।
ತಂ ಭವಂತಮಹಂ ಪದ್ಭ್ಯಾಮಾಕ್ರಮಾಮಿ ನಗೋತ್ತಮ ॥ ೧೫ ॥
ಕ್ಷಮಸ್ವ ಪಾದಘಾತಂ ಮೇ ದಯಯಾ ಪಾಪಚೇತಸಃ ।
ತ್ವನ್ಮೂರ್ಧನಿ ಕೃತಾವಾಸಂ ಶಂಕರಂ ದರ್ಶಯಸ್ವ ಮೇ ॥ ೧೬ ॥
ಪ್ರಾರ್ಥಯಿತ್ವಾ ನರಸ್ತ್ವೇವಂ ಸೇತುರೂಪಂ ನಗೋತ್ತಮಂ ।
ತತೋ ಮೃದುಪದಂ ಗಚ್ಛೇತ್ಪಾವನಂ ಗಂಧಮಾದನಂ ॥ ೧೭ ॥
ಅಬ್ಧೌ ತತ್ರ ನರಃ ಸ್ನಾತ್ವಾ ಪರ್ವತೇ ಗಂಧಮಾದನೇ ।
ಪಿಂಡದಾನಂ ತತಃ ಕುರ್ಯಾದಪಿ ಸರ್ಷಪಮಾತ್ರಕಂ ॥ ೧೮ ॥
ತೃಪ್ತಿಂ ಪ್ರಯಾಂತಿ ಪಿತರಸ್ತಸ್ಯ ಯಾವದ್ಯುಗಕ್ಷಯಃ ।
ಶಮೀದಲಸಮಾನಾನ್ವಾ ದದ್ಯಾತ್ಪಿಂಡಾನ್ ಪಿತೄನ್ಪ್ರತಿ ।
ಸ್ವರ್ಗಸ್ಥಾ ಮೋಕ್ಷಮಾಯಾಂತಿ ಸ್ವರ್ಗಂ ನರಕವಾಸಿನಃ ॥ ೧೯ ॥
ತತಸ್ತಸ್ಯೋಪರಿ ಮಹಾತೀರ್ಥಂ ಲೋಕೇಷು ವಿಶ್ರುತಂ ॥ ೨೦ ॥

---

೧೪–೧೬. ಸೇತುರೂಪವನ್ನು ಹೊಂದಿದ ಈ ಗಂಧಮಾದನವನ್ನಿಂತು ಪ್ರಾರ್ಥಿಸತಕ್ಕುದು. "ಮಹಾಪುಣ್ಯಕರವಾದ ಎಲೈ ಗಂಧಮಾದನ ಮಹೀಧರನೇ! ಸಮಸ್ತ ದೇವತೆಗಳಿಂದಲೂ ಪೂಜಿತನಾದ ನಿನ್ನನ್ನು ವಿಷ್ಣುವೇ ಮೊದಲಾದ ದೇವತೆಗಳೆಲ್ಲರೂ ಶ್ರದ್ಧೆಯಿಂದ ಪೂಜಿಸುವರು. ಎಲೈ ನಗೋತ್ತಮನೆ! ಅಂತಹ ನಿನ್ನನ್ನು ನಾನು ಕಾಲುಗಳಿಂದ ತುಳಿಯುತ್ತಿದ್ದೇನೆ. ಪಾಪಿಯಾದ ನನ್ನ ಈ ತುಳಿತವನ್ನು ಕ್ಷಮಿಸು. ನಿನ್ನ ಶಿಖರದಲ್ಲಿ ವಾಸಿಸುವ ಶಂಕರನ ಸಂದರ್ಶನವನ್ನು ನನಗೆ ಅನುಗ್ರಹಿಸು."

೧೭. ಸ್ವರ್ಗಕ್ಕೆ ಸೇತುರೂಪವಾದ ಆ ಪರ್ವತಶ್ರೇಷ್ಠನನ್ನು ಇಂತು ಪ್ರಾರ್ಥಿಸಿದ ಬಳಿಕ ಮಾನವನು ಮೆದುವಾಗಿ ಹೆಜ್ಜೆಗಳಿಟ್ಟು ಮುಂದೆ ನಡೆಯತಕ್ಕದ್ದು.

೧೮. ಸಮುದ್ರಸ್ನಾನವನ್ನು ಮಾಡಿ ಆ ಗಂಧಮಾದನದಲ್ಲಿ ಸಾಸಿವೆಯ ಕಾಳಿನಷ್ಟಾದರೂ ಪಿತೃಗಳಿಗೆ ಪಿಂಡದಾನ ಮಾಡಬೇಕು.

೧೯. ಅಂತಹವನ ಪಿತೃದೇವತೆಗಳು ಯುಗಾಂತದವರೆಗೂ ತೃಪ್ತರಾಗಿರುತ್ತಾರೆ. ಶಮೀಪತ್ರಪ್ರಮಾಣದ ಪಿಂಡಗಳನ್ನಾದರೂ ಕೊಡತಕ್ಕುದು. ಅವನ ಪಿತೃದೇವತೆಗಳು ಸ್ವರ್ಗಸ್ಥರಾಗಿದ್ದರೆ ಮೋಕ್ಷವನ್ನು ಪಡೆಯುತ್ತಾರೆ. ನರಕವಾಸಿಗಳಾಗಿದ್ದರೆ ಸ್ವರ್ಗವನ್ನು ಹೊಂದುವರು.

೨೦–೨೧. ಎಲೈ ವಿಪ್ರರೇ! ಮಹಾತೀರ್ಥವೆಂದು ಮೂರು ಲೋಕಗಳ

ಸರ್ವತೀರ್ಥೋತ್ತಮಂ ಪುಣ್ಯಂ ನಾಮ್ನಾ ಪಾಪವಿನಾಶನಂ ।
ಅಸ್ತಿ ಪುಣ್ಯತಮಂ ವಿಪ್ರಾಃ ಪವಿತ್ರೇ ಗಂಧಮಾದನೇ ॥ ೨೧ ॥
ಯಸ್ಯ ಸಂಸ್ಮರಣಾದೇವ ಗರ್ಭವಾಸೋ ನ ವಿದ್ಯತೇ ।
ತತ್ಪ್ರಾಪ್ಯ ತು ನರಃ ಸ್ನಾಯಾತ್ಸ್ವದೇಹಮಲನಾಶನಂ ।
ತತ್ರ ಸ್ನಾನಾನ್ನರೋ ಯಾತಿ ವೈಕುಂಠಂ ನಾಽತ್ರ ಸಂಶಯಃ ॥ ೨೨ ॥

ಋಷಯ ಊಚುಃ:—

ಸೂತ ಪಾಪವಿನಾಶಾಖ್ಯತೀರ್ಥಸ್ಯ ಬ್ರೂಹಿ ವೈಭವಂ ।
ವ್ಯಾಸೇನ ಬೋಧಿತಸ್ತ್ವಂ ಹಿ ವೇತ್ಸಿ ಸರ್ವಂ ಮಹಾಮುನೇ ॥ ೨೩ ॥

ಶ್ರೀ ಸೂತ ಉವಾಚ:—

ಬ್ರಹ್ಮಾಶ್ರಮಪದೇ ವೃತ್ತಂ ಪಾರ್ಶ್ವೇ ಹಿಮವತಃ ಶುಭೇ ।
ವಕ್ಷ್ಯಾಮಿ ಬ್ರಾಹ್ಮಣಶ್ರೇಷ್ಠಾ ಯುಷ್ಮಾಕಂ ತು ಕಥಾಂ ಶುಭಾಂ ॥ ೨೪ ॥
ಅಸ್ತ್ಯಾಶ್ರಮಪದಂ ಪುಣ್ಯಂ ಬ್ರಹ್ಮಾಶ್ರಮಪದೇ ಶುಭೇ ।
ನಾನಾವೃಕ್ಷಗಣಾಕೀರ್ಣಂ ಪಾರ್ಶ್ವೇ ಹಿಮವತಃ ಶುಭೇ ॥ ೨೫ ॥
ಬಹುಗುಲ್ಮಲತಾಕೀರ್ಣಂ ಮೃಗದ್ವಿಪನಿಷೇವಿತಂ ।
ಸಿದ್ಧಚಾರಣಸಂಘುಷ್ಟಂ ರಮ್ಯಂ ಪುಷ್ಪಿತಕಾನನಂ ॥ ೨೬ ॥

---

ಲ್ಲಿಯೂ ಸುಪ್ರಸಿದ್ಧವಾದುದೂ, ಪುಣ್ಯಪ್ರದವಾದುದೂ ಆದ ಪಾಪನಾಶಿನಿಯೆಂಬ ತೀರ್ಥವೂ ಪವಿತ್ರವಾದ ಗಂಧಮಾದನದಲ್ಲಿಯೇ ಇರುವುದು.

೨೨. ಯಾವುದರ ಸ್ಮರಣೆಯಿಂದ ಮತ್ತೆ ಗರ್ಭವಾಸದ ಕ್ಲೇಶವು ತೊಲಗುವುದೋ ಅಂತಹ ಪಾಪನಾಶಿನಿಗೆ ಹೋಗಿ ಪಾಪಶುದ್ಧಿಗಾಗಿ ಅದರಲ್ಲಿ ಸ್ನಾನ ಮಾಡಬೇಕು. ಆದರ ಸ್ನಾನದಿಂದ ಮಾನವನು ವೈಕುಂಠವನ್ನು ಪಡೆಯುವುದರಲ್ಲಿ ಸಂಶಯವಿಲ್ಲವು."

೨೩. ಋಷಿಗಳು ಹೇಳುತ್ತಾರೆ:—"ಎಲೈ ಸೂತಮಹರ್ಷಿಯೇ! ನೀನು ವ್ಯಾಸರಿಂದ ಬೋಧಿತನಾದುದರಿಂದ ಎಲ್ಲವನ್ನೂ ಅರಿತಿದ್ದೀಯೆ. ಆದುದರಿಂದ ಈಗ ಪಾಪನಾಶಿನಿಯ ವೈಭವವನ್ನು ನಮಗರುಹು."

೨೪. ಶ್ರೀಸೂತನು ಹೇಳುತ್ತಾನೆ:—"ಎಲೈ ಬ್ರಾಹ್ಮಣಶ್ರೇಷ್ಠರೇ! ಹಿಮವತ್ಪರ್ವತದ ತಪ್ಪಲಿನ ಶುಭಕರವಾದ ಬ್ರಹ್ಮಾಶ್ರಮದಲ್ಲಿ ನಡೆದ ವಿಚಾರವೊಂದನ್ನು ನಿಮಗೆ ಹೇಳುವೆನು.

೨೫–೩೦. ಹಿಮವತ್ಪರ್ವತದ ತಪ್ಪಲಿನ ಶುಭಕರವಾದ ಬ್ರಹ್ಮಾಶ್ರಮಸ್ಥಾನದಲ್ಲಿ ಪುಣ್ಯಪ್ರದವಾದೊಂದು ಆಶ್ರಮವಿರುವುದು. ಅದು ಬಗೆ ಬಗೆಯ ತರುಗುಲ್ಮಲತೆಗಳಿಂದ ಆವೃತವಾಗಿಯೂ, ಜಿಂಕೆ, ಆನೆ ಮುಂತಾದ ಪ್ರಾಣಿಗಳಿಗೆ ಆವಾಸವಾಗಿಯೂ, ಸಿದ್ಧಚಾರಣರಿಂದ ಕೂಡಿಯೂ, ಬಗೆಬಗೆಯ ಹೂಗಳಿಂದ

ವ್ರತಿಭಿರ್ಬಹುಭಿಃ ಕೀರ್ಣಂ ತಾಪಸೈರುಪಶೋಭಿತಂ ।
ಬ್ರಾಹ್ಮಣೈಶ್ಚ ಮಹಾಭಾಗೈಃ ಸೂರ್ಯಜ್ವಲನಸನ್ನಿಭೈಃ ॥ ೨೭ ॥
ನಿಯಮವ್ರತಸಂಪನ್ನೈಃ ಸಮಾಕೀರ್ಣಂ ತಪಸ್ವಿಭಿಃ ।
ದೀಕ್ಷಿತೈರ್ಯಾಗಹೇತೋಶ್ಚ ಯತಾಹಾರೈಃ ಕೃತಾತ್ಮಭಿಃ ॥ ೨೮ ॥
ವೇದಾಧ್ಯಯನ ಸಂಪನ್ನೈರ್ವೈದಿಕೈಃ ಪರಿವೇಷ್ಟಿತಂ ।
ವರ್ಣಿಭಿಶ್ಚ ಗೃಹಸ್ಥೈಶ್ಚ ವಾನಪ್ರಸ್ಥೈಶ್ಚ ಭಿಕ್ಷುಭಿಃ ॥ ೨೯ ॥
ಸ್ವಾಶ್ರಮಾಚಾರನಿರತೈಃ ಸ್ವವರ್ಣೋಕ್ತವಿಧಾಯಿಭಿಃ ।
ವಾಲಖಿಲ್ಯೈಶ್ಚ ಮುನಿಭಿಃ ಸಂಪ್ರಾಪ್ತೈಶ್ಚ ಮರೀಚಿಭಿಃ ॥ ೩೦ ॥
ತತ್ರಾಶ್ರಮೇ ಪುರಾ ಕಶ್ಚಿಚ್ಛೂದ್ರೋ ದೃಢಮತಿರ್ದ್ವಿಜಾಃ ।
ಸಾಹಸೀ ಬ್ರಾಹ್ಮಣಾಭ್ಯಾಶಮಾಜಗಾಮ ಮುದಾನ್ವಿತಃ ॥ ೩೧ ॥
ಆಗತೋ ಹ್ಯಾಶ್ರಮಪದಂ ಪೂಜಿತಶ್ಚ ತಪಸ್ವಿಭಿಃ ।
ನಾಮ್ನಾ ದೃಢಮತಿಃ ಶೂದ್ರಃ ಸಾಷ್ಟಾಂಗಂ ಪ್ರಣನಾಮ ವೈ ॥ ೩೨ ॥
ತಾನ್ಸ ದೃಷ್ಟ್ವಾ ಮುನಿಗಣಾನ್ದೇವಕಲ್ಪಾನ್ಮಹೌಜಸಃ ।
ಕುರ್ವತೋ ವಿವಿಧಾನ್ಯಜ್ಞಾನ್ಸಂಪ್ರಹೃಷ್ಟಃ ಸ ಶೂದ್ರಕಃ ॥ ೩೩ ॥
ಅಥಾಽಸ್ಯ ಬುದ್ಧಿರಭವತ್ತಪಃ ಕರ್ತುಮನುತ್ತಮಂ ।
ತತೋಽಬ್ರವೀತ್ಕುಲಪತಿಂ ಮುನಿಮಾಗತ್ಯ ತಾಪಸಂ ॥ ೩೪ ॥

---

ಕಂಗೊಳಿಸುವುದಾಗಿಯೂ, ಅನೇಕ ವ್ರತಿಗಳಿಂದಲೂ, ತಾಪಸರಿಂದಲೂ, ಸೂರ್ಯತೇಜೋವಿರಾಜಿತರಾದ ಬ್ರಾಹ್ಮಣಶ್ರೇಷ್ಠರಿಂದಲೂ, ನಿಯಮಾಚಾರವುಳ್ಳ ತಪಸ್ವಿಗಳಿಂದಲೂ, ಆಹಾರನಿಯಮವುಳ್ಳ ಕೃತಕೃತ್ಯರಾದ ಯಾಗದೀಕ್ಷಿತರಿಂದಲೂ, ವೇದಾಧ್ಯಯನಸಂಪನ್ನರಾದ ವೈದಿಕರಿಂದಲೂ, ತುಂಬಿ ತುಳುಕುತ್ತಿರುವುದು. ತಮ್ಮ ತಮ್ಮ ವರ್ಣಾಶ್ರಮಾಚಾರಗಳಲ್ಲಿ ನಿರತರಾದ ಬ್ರಹ್ಮಚಾರಿ, ಗೃಹಿ, ವಾನಪ್ರಸ್ಥ, ಭಿಕ್ಷುಗಳಿಂದಲೂ, ಆಗಂತುಕರಾದ ಮರೀಚ್ಯಾದಿ ವಾಲಖಿಲ್ಯಮುನಿಗಳಿಂದಲೂ ಸಂಶೋಭಿತವಾಗಿರುವುದು.

೩೧. ಅಯ್ಯಾ ದ್ವಿಜರೇ! ಹಿಂದೊಮ್ಮೆ ದೃಢಮತಿಯೆಂಬ ಸಾಹಸಿಕನಾದ ಶೂದ್ರನೊಬ್ಬನು ಸಂತೋಷದಿಂದ ಆ ಪ್ರದೇಶಕ್ಕೆ ಬಂದನು.

೩೨–೩೪. ಮುನಿಗಳು ಆತನನ್ನು ಸನ್ಮಾನಿಸಿದರು. ದೃಢಮತಿಯು ಅವರಿಗೆ ಸಾಷ್ಟಾಂಗವಾಗಿ ಎರಗಿದನು. ದೇವತಾಸದೃಶರೂ, ಮಹಾತೇಜಸ್ವಿಗಳೂ ಆದ ಆ ಬ್ರಾಹ್ಮಣರು ಬಗೆಬಗೆಯ ಯಜ್ಞಗಳನ್ನು ಮಾಡುತ್ತಿರುವುದನ್ನು ಕಂಡು ಅವನು ಬಹಳ ಸಂತುಷ್ಟನಾದನು. ತಾನೂ ತಪವನ್ನಾಚರಿಸಬೇಕೆಂಬ ಬುದ್ಧಿಯು ಅವನಿಗೆ ಹುಟ್ಟಿತು. ಆಗ ಕುಲಪತಿಯಾದ ಮಹಾಮುನೀಶನನ್ನು ಕಂಡು ಅವನು ಈ ರೀತಿ ಅರಿಕೆ ಮಾಡಿದನು :—

ದೃಢಮತಿರುವಾಚ :—

ತಪೋಧನ ನಮಸ್ತೇಽಸ್ತು ರಕ್ಷ ಮಾಂ ಕರುಣಾನಿಧೇ ।
ತವ ಪ್ರಸಾದಾದಿಚ್ಛಾಮಿ ಧರ್ಮಂ ಚರ್ತುಂ ದ್ವಿಜರ್ಷಭ ॥ ೩೫ ॥
ತಸ್ಮಾದಭಿಗತಂ ಮಾಂ ತ್ವಂ ಯಾಗೇ ದೀಕ್ಷಯ ಸುವ್ರತ ।
ಬ್ರಹ್ಮನ್ನವರವರ್ಣೋಽಹಂ ಶೂದ್ರೋ ಜಾತ್ಯಾಽಸ್ಮಿ ಸತ್ತಮ ॥ ೩೬ ॥
ಶುಶ್ರೂಷಾಂ ಕರ್ತುಮಿಚ್ಛಾಮಿ ಪ್ರಪನ್ನಾಯ ಪ್ರಸೀದ ಮೇ ।
ಏವಮುಕ್ತೇ ತು ಶೂದ್ರೇಣ ತಮಾಹ ಬ್ರಾಹ್ಮಣಸ್ತದಾ ॥ ೩೭ ॥

ಕುಲಪತಿರುವಾಚ :—

ಯಾಗೇ ದೀಕ್ಷಯಿತುಂ ಶಕ್ಯೋ ನ ಶೂದ್ರೋ ಹೀನಜನ್ಮಭಾಕ್ ।
ಶ್ರೂಯತಾಂ ಯದಿ ತೇ ಬುದ್ಧಿಃ ಶುಶ್ರೂಷಾನಿರತೋ ಭವ ॥ ೩೮ ॥
ಉಪದೇಶೋ ನ ಕರ್ತವ್ಯೋ ಜಾತಿಹೀನಸ್ಯ ಕರ್ಹಿಚಿತ್ ।
ಉಪದೇಶೇ ಮಹಾನ್ದೋಷ ಉಪಾಧ್ಯಾಯಸ್ಯ ವಿದ್ಯತೇ ॥ ೩೯ ॥
ನಾಽಧ್ಯಾಪಯೇದ್ಬುಧಃ ಶೂದ್ರಂ ತಥಾ ನೈವ ಚ ಯಾಜಯೇತ್ ।
ನ ಪಾಠಯೇತ್ತಥಾ ಶೂದ್ರಂ ಶಾಸ್ತ್ರಂ ವ್ಯಾಕರಣಾದಿಕಂ ॥ ೪೦ ॥

---

೩೫. "ಎಲೈ ತಪೋಧನನೇ! ನಿನಗೆ ನಮಸ್ಕಾರ. ಕರುಣಾನಿಧಿಯೆ! ನನ್ನನ್ನು ರಕ್ಷಿಸು. ಓ ದ್ವಿಜಪುಂಗವಾ! ನಿನ್ನ ಅನುಗ್ರಹದಿಂದ ನಾನೂ ಧರ್ಮವನ್ನಾಚರಿಸಲು ಬಯಸುತ್ತೇನೆ.

೩೬. ಸುವ್ರತಿಯಾದ ಎಲೈ ಯೋಗಿವರ್ಯನೇ! ಅದಕ್ಕಾಗಿಯೆ ಬಂದಿರುವ ನನಗೆ ದೀಕ್ಷೆಯನ್ನು ದಯಪಾಲಿಸು. ಓ ಬ್ರಾಹ್ಮಣೋತ್ತಮನೇ! ನಾನು ಶೂದ್ರಜಾತಿಯವನು.

೩೭. ತಮ್ಮ ಸೇವೆಯನ್ನು ಸಲ್ಲಿಸಿಕೊಂಡಿರುವೆನು. ತಮ್ಮನ್ನೇ ಮರೆಹೊಕ್ಕಿರುವೆನು. ತಾವು ನನಗೆ ಪ್ರಸನ್ನರಾಗಬೇಕು" ಎಂದು ಪ್ರಾರ್ಥಿಸಲು ಬ್ರಾಹ್ಮಣನಾತನನ್ನು ಕುರಿತು ಹೇಳಿದನು.

೩೮. "ಅಯ್ಯಾ! ಕೀಳು ಜಾತಿಯವನನ್ನು ಯಾಗದೀಕ್ಷಿತನನ್ನಾಗಿ ಮಾಡಲು ಸಾಧ್ಯವಿಲ್ಲ, ಕೇಳು. ನಿನಗೆ ಧರ್ಮವನ್ನು ಗಳಿಸುವ ಆಸೆಯಿದ್ದರೆ ಶುಶ್ರೂಷೆ ಮಾಡಿಕೊಂಡಿರು.

೩೯. ಹೀನಜಾತಿಯವನಿಗಾರೂ ಉಪದೇಶಮಾಡುವುದಿಲ್ಲ. ಹಾಗೆ ಮಾಡಿದರೆ ಉಪದೇಶಕನಿಗೆ ಬಹು ದೋಷವೊದಗುವುದು.

೪೦. ತಿಳಿದವನು ಮಾತ್ರ ನಿನಗೆ ವೇದಾಧ್ಯಯನವನ್ನಾಗಲಿ, ವ್ಯಾಕರಣಾದಿ ಶಾಸ್ತ್ರಗಳ ಪಾಠವನ್ನಾಗಲೀ ಹೇಳಿಕೊಡುವುದಿಲ್ಲ. ಯಾಗವನ್ನೂ ಮಾಡಿಸುವುದಿಲ್ಲ,

ಕಾವ್ಯಂ ವಾ ನಾಟಕಂ ವಾಽಪಿ ತಥಾಽಲಂಕಾರಮೇವ ಚ ।
ಪುರಾಣಮಿತಿಹಾಸಂ ಚ ಶೂದ್ರಂ ನೈವ ತು ಪಾಠಯೇತ್ ॥ ೪೧ ॥
ಯದಿ ಚೋಪದಿಶೇದ್ವಿಪ್ರಃ ಶೂದ್ರಂ ಚೈತಾನಿ ಕರ್ಹಿಚಿತ್ ।
ತ್ಯಜೇಯುರ್ಬ್ರಾಹ್ಮಣಾ ವಿಪ್ರಂ ತಂ ಗ್ರಾಮಾದ್ಬ್ರಹ್ಮಸಂಕುಲಾತ್ ॥ ೪೨ ॥
ಶೂದ್ರಾಯ ಚೋಪದೇಷ್ಟಾರಂ ದ್ವಿಜಂ ಚಂಡಾಲವತ್ತ್ಯಜೇತ್ ।
ಶೂದ್ರಂ ಚಾಽಕ್ಷರಸಂಯುಕ್ತಂ ದೂರತಃ ಪರಿವರ್ಜಯೇತ್ ॥ ೪೩ ॥
ಅತಃ ಶುಶ್ರೂಷ ಭದ್ರಂ ತೇ ಬ್ರಾಹ್ಮಣಾನ್ಶ್ರದ್ಧಯಾ ಸಹ ।
ಶೂದ್ರಸ್ಯ ದ್ವಿಜಶುಶ್ರೂಷಾ ಮನ್ವಾದಿಭಿರುದೀರಿತಾ ॥ ೪೪ ॥
ನ ಹಿ ನೈಸರ್ಗಿಕಂ ಕರ್ಮ ಪರಿತ್ಯಕ್ತುಂ ತ್ವಮರ್ಹಸಿ ।
ಏವಮುಕ್ತಸ್ತು ಮುನಿನಾ ಸ ಶೂದ್ರೋಽಚಿಂತಯತ್ತದಾ ॥ ೪೫ ॥
ಕಿಂ ಕರ್ತವ್ಯಂ ಮಯಾ ತ್ವದ್ಯ ವ್ರತೇ ಶ್ರದ್ಧಾ ಹಿ ಮೇ ಪರಾ ।
ಯಥಾಸ್ಯಾನ್ಮಮ ವಿಜ್ಞಾನಂ ಯತಿಷ್ಯೇಽಹಂ ತಥಾಽದ್ಯ ವೈ ॥ ೪೬ ॥
ಇತಿ ನಿಶ್ಚಿತ್ಯ ಮನಸಾ ಶೂದ್ರೋ ದೃಢಮತಿಸ್ತದಾ ।
ಗತ್ವಾಽಽಶ್ರಮಪದಾದ್ದೂರಂ ಕೃತವಾನುಟಜಂ ಶುಭಂ ॥ ೪೭ ॥
ತತ್ರ ವೈ ದೇವತಾಗಾರಂ ಪುಣ್ಯಾನ್ಯಾಯತನಾನಿ ಚ ।
ಪುಷ್ಪಾರಾಮಾದಿಕಂ ಚಾಪಿ ತಟಾಕಖನನಾದಿಕಂ ॥ ೪೮ ॥

---

೪೧. ಅಂತೆಯೇ ಕಾವ್ಯ, ನಾಟಕ, ಅಲಂಕಾರ, ಪುರಾಣ, ಇತಿಹಾಸಗಳನ್ನಾದರೂ ಹೇಳುವುದಿಲ್ಲ.

೪೨. ಯಾವನಾದರೊಂದುವೇಳೆ ಹಾಗೆ ಹೇಳಿಕೊಟ್ಟಲ್ಲಿ ಅಂತಹವನನ್ನು ಬ್ರಾಹ್ಮಣಾಗ್ರಹಾರದಿಂದ ಹೊರದೂಡುವರು.

೪೩. ಶೂದ್ರನಿಗೆ ಉಪದೇಶಮಾಡಿದವನನ್ನು ಚಂಡಾಲನಂತೆ ಬಹಿಷ್ಕರಿಸಬೇಕಲ್ಲದೆ ಅಕ್ಷರಸ್ಥನಾದ ಶೂದ್ರನನ್ನೂ ದೂರೀಕರಿಸಬೇಕು.

೪೪. ಅಯ್ಯಾ! ಆದುದರಿಂದ ಬ್ರಾಹ್ಮಣರನ್ನು ಶ್ರದ್ಧೆಯಿಂದ ಸೇವಿಸಿಕೊಂಡಿರು. ಅದು ಶೂದ್ರರಿಗೆ ಮನ್ವಾದಿಗಳಿಂದ ವಿಹಿತವಾಗಿಯೇ ಇದೆ.

೪೫–೫೧. ಸ್ವಭಾವವಾಗಿ ವಿಹಿತವಾದ ಕರ್ಮವನ್ನು ಬಿಡುವುದು ಯೋಗ್ಯವಲ್ಲ." ಕುಲಪತಿಯು ಇಂತು ಉಪದೇಶಿಸಲು ಆ ಶೂದ್ರನು "ನನಗೆ ಕರ್ಮದಲ್ಲಿ ಶ್ರದ್ಧೆಹುಟ್ಟಿದೆ. ಏನುಮಾಡಲಿ? ಹೇಗಾದರೂ ವಿಜ್ಞಾನವನ್ನು ಪಡೆಯಲು ಯತ್ನಿಸಬೇಕು" ಎಂದು ಮನದಲ್ಲಿ ನಿಶ್ಚಯಮಾಡಿಕೊಂಡು ಆಶ್ರಮಕ್ಕೆ ಬಹಳ ದೂರದಲ್ಲೊಂದು ಗುಡಿಸಲನ್ನೇರ್ಪಡಿಸಿಕೊಂಡು ಅಲ್ಲಿಯೇ ಒಂದು ದೇವಸ್ಥಾನವನ್ನೂ, ಪುಣ್ಯವಾದ ಪ್ರದೇಶವನ್ನೂ, ಪುಷ್ಪೋದ್ಯಾನವನ್ನೂ, ಒಂದು ಕೊಳವನ್ನೂ ಅಕ್ಕರೆಯಿಂದೇರ್ಪಡಿಸಿಕೊಂಡನು. ತಪಸ್ಸಿಗಾಗಿ ಅವಗಾಹನಸ್ನಾನ

ಶ್ರದ್ಧಯಾ ಕಾರಯಾಮಾಸ ತಪಸ್ಸಿದ್ಧ್ಯರ್ಥಮಾತ್ಮನಃ ।
ಅಭಿಷೇಕಾಂಶ್ಚ ನಿಯಮಾನುಪವಾಸಾದಿಕಾನಪಿ ॥ ೪೯ ॥
ಬಲಿಂ ಚ ಕೃತ್ವಾ ಹುತ್ವಾ ಚ ದೈವತಾನ್ಯಭ್ಯಪೂಜಯತ್ ।
ಸಂಕಲ್ಪನಿಯಮೋಪೇತಃ ಫಲಾಹಾರೋ ಜಿತೇಂದ್ರಿಯಃ ॥ ೫೦ ॥
ನಿತ್ಯಂ ಕಂದೈಶ್ಚ ಮೂಲೈಶ್ಚ ಪುಷ್ಪೈರಪಿ ತಥಾ ಫಲೈಃ ।
ಅತಿಥೀನ್ಪೂಜಯಾಮಾಸ ಯಥಾವತ್ಸಮುಪಾಗತಾನ್ ॥ ೫೧ ॥
ಏವಂ ಹಿ ಸುಮಹಾನ್ ಕಾಲೋ ವ್ಯತಿಚಕ್ರಾಮ ತಸ್ಯ ವೈ ।
ಅಥಾಶ್ರಮಮಗಾತ್ತಸ್ಯ ಸುಮತಿರ್ನಾಮ ನಾಮತಃ ॥ ೫೨ ॥
ದ್ವಿಜೋ ಗರ್ಗಕುಲೋದ್ಭೂತಃ ಸತ್ಯವಾದೀ ಜಿತೇಂದ್ರಿಯಃ ।
ಸ್ವಾಗತೇನ ಮುನಿಂ ಪೂಜ್ಯ ತೋಷಯಿತ್ವಾ ಫಲಾದಿಕೈಃ ॥ ೫೩ ॥
ಕಥಯನ್ವೈ ಕಥಾಃ ಪುಣ್ಯಾಃ ಕುಶಲಂ ಪರ್ಯಪೃಚ್ಛತ ।
ಇತ್ಥಂ ಸ ಪ್ರಣಿಪಾತಾದ್ಯೈರುಪಚಾರೈಸ್ತು ಪೂಜಿತಃ ॥ ೫೪ ॥
ಆಶೀರ್ಭಿರಭಿನಂದ್ಯೈನಂ ಪ್ರತಿಗೃಹ್ಯ ಚ ಸತ್ಕ್ರಿಯಾಂ ।
ತಮಾಪೃಚ್ಛ್ಯ ಪ್ರಹೃಷ್ಟಾತ್ಮಾ ಸ್ವಾಶ್ರಮಂ ಪುನರಾಯಯೌ ॥ ೫೫ ॥
ಏವಂ ದಿನೇ ದಿನೇ ವಿಪ್ರಃ ಶೂದ್ರೇಽಸ್ಮಿನ್ಸ್ನೇಹಪಾತವಾನ್ ।
ಆಗಚ್ಛದಾಶ್ರಮಂ ತಸ್ಯ ದ್ರಷ್ಟುಂ ತಂ ಶೂದ್ರಯೋನಿಜಂ ॥ ೫೬ ॥

---

ಉಪವಾಸಾದಿ ವ್ರತಗಳು, ವೈಶ್ವದೇವ, ಬಲಿಹರಣ, ದೇವತಾಪೂಜೆ ಮುಂತಾದ ನಿತ್ಯಕರ್ಮಗಳನ್ನು ನೆರವೇರಿಸಿಕೊಳ್ಳುತ್ತಾ ನಿಯಮವನ್ನು ಪಾಲಿಸಿಕೊಂಡು ಫಲಾಹಾರಿಯೂ, ಜಿತೇಂದ್ರಿಯನೂ ಆಗಿ, ಪ್ರತಿದಿನವೂ ಕಂದಮೂಲಫಲಗಳಿಂದ ಅತಿಥಿಪೂಜೆಯನ್ನು ವಿಧಿವತ್ತಾಗಿ ಮಾಡಿಕೊಂಡಿರುತ್ತಿದ್ದನು.

೫೨–೫೪. ಹೀಗೆ ಬಹುಕಾಲ ಕಳೆಯಲು ಸುಮತಿಯೆಂಬೊಬ್ಬ ಬ್ರಾಹ್ಮಣನು ಅವನ ಆಶ್ರಮಕ್ಕೆ ಬಂದನು. ಆತನು ಗರ್ಗಕುಲದಲ್ಲಿ ಜನಿಸಿದವನು. ಸತ್ಯವಾದಿಯೂ, ಜಿತೇಂದ್ರಿಯನೂ ಆಗಿದ್ದನು. ಆ ಶೂದ್ರನಾತನನ್ನು ಸ್ವಾಗತಿಸಿ ಫಲಾದಿಗಳನ್ನಾತನಿಗೆ ಸಮರ್ಪಿಸಿ ತೃಪ್ತಿಪಡಿಸಿ, ಕುಶಲವನ್ನು ಕೇಳಿ, ಪುಣ್ಯಕಥಾಲಾಪದಿಂದಲೂ, ನಮಸ್ಕಾರಾದ್ಯುಪಚಾರಗಳಿಂದಲೂ ತೃಪ್ತಿಗೊಳಿಸಿದನು.

೫೫. ಮಹರ್ಷಿಯೂ ಆಶೀರ್ವಾದಗಳಿಂದಾತನನ್ನು ಸಂತೋಷಗೊಳಿಸಿ ಆತನ ಉಪಚಾರವನ್ನು ಸಂತೋಷದಿಂದ ಕೈಗೊಂಡು ಆತನನ್ನು ಬೀಳ್ಕೊಟ್ಟು ಮತ್ತೆ ತನ್ನ ಆಶ್ರಮಕ್ಕೆ ಹಿಂತಿರುಗಿದನು.

೫೬. ಹೀಗೆ ಪ್ರತಿದಿನವೂ ಆ ಬ್ರಾಹ್ಮಣನು ಶೂದ್ರನಲ್ಲಿ ಪ್ರೀತಿ ಅಭಿಮಾನಗಳುಳ್ಳವನಾಗಿ ಅವನ ಆಶ್ರಮಕ್ಕೆ ಬರುತ್ತಿದ್ದನು.

ಬಹುಕಾಲಂ ದ್ವಿಜಸ್ಯಾಭೂತ್ಸಂಸರ್ಗಃ ಶೂದ್ರಯೋನಿನಾ ।
ಸ್ನೇಹಸ್ಯ ವಶಮಾಪನ್ನಃ ಶೂದ್ರೋಕ್ತಂ ನಾತಿಚಕ್ರಮೇ ॥ ೫೭ ॥
ಅಥಾಗತೌ ದ್ವಿಜೌ ಶೂದ್ರಃ ಪ್ರಾಹ ಸ್ನೇಹವಶೀಕೃತಂ ।
ಹವ್ಯಕವ್ಯವಿಧಾನಂ ಮೇ ಕೃತ್ಸ್ನಂ ಬ್ರೂಹಿ ಮುನೀಶ್ವರ ॥ ೫೮ ॥
ಪಿತೃಕಾರ್ಯವಿಧಾನಾರ್ಥಂ ದೇವಕಾರ್ಯಾರ್ಥಮೇವ ಚ ।
ಮಂತ್ರಾನುಪದಿಶ ತ್ವಂ ಮೇ ಮಹಾಲಯವಿಧಿಂ ತಥಾ ॥ ೫೯ ॥
ಅಷ್ಟಕಾಶ್ರಾದ್ಧಕೃತ್ಯಂ ಚ ವೈದಿಕಂ ಯಚ್ಚ ಕಿಂಚನ ।
ಸರ್ವಮೇತದ್ರಹಸ್ಯಂ ಮೇ ಬ್ರೂಹಿ ತ್ವಂ ವೈ ಗುರುರ್ಮತಃ ॥ ೬೦ ॥
ಏವಮುಕ್ತಃ ಸ ಶೂದ್ರೇಣ ಸರ್ವಮೇತದುಪಾದಿಶತ್ ।
ಕಾರಯಾಮಾಸ ತಸ್ಯಾಽಯಂ ಪಿತೃಕಾರ್ಯಾದಿಕಂ ತಥಾ ॥ ೬೧ ॥
ಪಿತೃಕಾರ್ಯೇ ಕೃತೇ ತೇನ ವಿಸೃಷ್ಟಃ ಸ ದ್ವಿಜೋ ಗತಃ ।
ಅಥ ದೀರ್ಘೇಣ ಕಾಲೇನ ಪೋಷಿತಃ ಶೂದ್ರಯೋನಿನಾ ॥ ೬೨ ॥
ತ್ಯಕ್ತೋ ವಿಪ್ರಗಣೈಃ ಸೋಽಯಂ ಪಂಚತ್ವಮಗಮದ್ದ್ವಿಜಃ ।
ವೈವಸ್ವತಭಟೈರ್ನೀತ್ವಾ ಪಾತಿತೋ ನರಕೇಷ್ವಪಿ ॥ ೬೩ ॥
ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ।
ಭುಕ್ತ್ವಾ ಕ್ರಮೇಣ ನರಕಾಂಸ್ತದಂತೇ ಸ್ಥಾವರೋಽಭವತ್ ॥ ೬೪ ॥

---

೫೭. ಹೀಗೆ ಬಹುಕಾಲ ಆ ಬ್ರಾಹ್ಮಣನಿಗೆ ಆ ಶೂದ್ರನ ಸಂಪರ್ಕ ವುಂಟಾಗಲು ಆತನ ಸ್ನೇಹಕ್ಕೆ ಸಿಲುಕಿ ಅವನ ಮಾತನ್ನು ಮೀರದವನಾದನು.

೫೮-೬೦. ಸ್ನೇಹಕ್ಕೆ ಸಿಲುಕಿಬಿದ್ದ ಆ ಬ್ರಾಹ್ಮಣನನ್ನು ಕುರಿತು ಒಂದುದಿನ ಆ ಶೂದ್ರನು "ಮುನೀಶ್ವರ! ಹವ್ಯಕವ್ಯವಿಧಿಯನ್ನೂ, ಅವುಗಳ ಮಂತ್ರಗಳನ್ನೂ, ಮಹಾಲಯವಿಧಿಯನ್ನೂ, ಅಷ್ಟಕಶ್ರಾದ್ಧಾದಿಕೃತ್ಯಗಳನ್ನೂ, ಅಂತೆಯೇ ಸಮಸ್ತ ವೈದಿಕಪ್ರಕ್ರಿಯೆಗಳನ್ನೂ ನನಗರುಹು. ನೀನೇ ನನಗೆ ಗುರುವು" ಎಂದು ಬೇಡಿದನು.

೬೧. ಹೀಗೆ ಕೇಳಲ್ಪಟ್ಟ ಆ ಬ್ರಾಹ್ಮಣನು ಅವನಿಗೆ ಎಲ್ಲವನ್ನೂ ಉಪದೇಶ ಮಾಡಿ ಹವ್ಯಕವ್ಯಾದಿ ಕರ್ಮಗಳೆಲ್ಲವನ್ನೂ ಅವನಿಂದ ಮಾಡಿಸಿದನು.

೬೨-೬೩. ಎಲ್ಲವೂ ಮಾಡಿದ ಬಳಿಕ ಅವನು ತನ್ನ ಆಶ್ರಮಕ್ಕೆ ಬಂದುಬಿಟ್ಟನು. ಈ ರೀತಿ ಬಹುಕಾಲ ಆ ಶೂದ್ರನಿಂದ ಪೋಷಿತನಾದ ಆ ಬ್ರಾಹ್ಮಣನು ಇತರ ದ್ವಿಜರೆಲ್ಲರಿಂದಲೂ ಬಹಿಷ್ಕೃತನಾಗಿ ಕಡೆಗೆ ಪಂಚತ್ವವನ್ನೈದಿ ಯಮಭಟರಿಂದ ನರಕಕ್ಕೊಯ್ಯಲ್ಪಟ್ಟನು.

೬೪. ಅಲ್ಲಿ ಒಂದುಸಾವಿರದ ಒಂದುನೂರು ಕಲ್ಪಗಳು ಕ್ರಮವಾಗಿ ನರಕಗಳನ್ನನುಭವಿಸಿ ಕಡೆಗೆ ಒಂದು ಸ್ಥಾವರವಾಗಿ ಹುಟ್ಟಿದನು.

ಗರ್ದಭಸ್ತು ತತೋ ಜಜ್ಞೇ ವಿಡ್ವರಾಹಸ್ತತಃಪರಂ ।
ಜಜ್ಞೇಽಥ ಸಾರಮೇಯೋಽಸೌ ಪಶ್ಚಾದ್ವಾಯಸತಾಂ ಗತಃ ॥ ೬೫ ॥
ಅಥ ಚಂಡಾಲತಾಂ ಪ್ರಾಪ ಶೂದ್ರಯೋನಿಮಗಾತ್ತತಃ ।
ಗತವಾನ್ವೈಶ್ಯತಾಂ ಪಶ್ಚಾತ್ಕ್ಷತ್ರಿಯಸ್ತದನಂತರಂ ॥ ೬೬ ॥
ಪ್ರಬಲೈರ್ಬಾಧ್ಯಮಾನೋಽಸೌ ಬ್ರಾಹ್ಮಣೋ ವೈ ತದಾಽಭವತ್ ।
ಉಪನೀತಃ ಸ ಪಿತ್ರಾ ತು ವರ್ಷೇ ಗರ್ಭಾಷ್ಟಮೇ ದ್ವಿಜಃ ॥ ೬೭ ॥
ವರ್ತಮಾನಃ ಪಿತುರ್ಗೇಹೇ ಸ್ವಾಚಾರಾಭ್ಯಾಸತತ್ಪರಃ ।
ಗಚ್ಛನ್ಕದಾಚಿದ್ಗಹನೇ ಗೃಹೀತೋ ಬ್ರಹ್ಮರಕ್ಷಸಾ ॥ ೬೮ ॥
ರುದನ್ ಭ್ರಮನ್ ಸ್ಖಲನ್ಮೂಢಃ ಪ್ರಹಸನ್ವಿಲಪನ್ನಸೌ ।
ಶಶ್ವದ್ಧಾಹೇತಿ ಚ ವದನ್ವೈದಿಕಂ ಕರ್ಮ ಸೋಽತ್ಯಜತ್ ॥ ೬೯ ॥
ದೃಷ್ಟ್ವಾ ಸುತಂ ತಥಾಭೂತಂ ಪಿತಾ ದುಃಖೇನ ಪೀಡಿತಃ ।
ಸುತಮಾದಾಯ ಚ ಸ್ನೇಹಾದಗಸ್ತ್ಯಂ ಶರಣಂ ಯಯೌ ॥ ೭೦ ॥
ಭಕ್ತ್ಯಾ ಮುನಿಂ ಪ್ರಣಮ್ಯಾಽಸೌ ಪಿತಾ ತಸ್ಯ ಸುತಸ್ಯ ವೈ ।
ತಸ್ಮೈ ನಿವೇದಯಾಮಾಸ ಸ್ವಪುತ್ರಸ್ಯ ವಿಚೇಷ್ಟಿತಂ ॥ ೭೧ ॥
ಅಬ್ರವೀಚ್ಚ ತದಾ ವಿಪ್ರಃ ಕುಂಭಜಂ ಮುನಿಪುಂಗವಂ ।
ಏಷ ಮೇ ತನಯೋ ಬ್ರಹ್ಮನ್ಗೃಹೀತೋ ಬ್ರಹ್ಮರಕ್ಷಸಾ ॥ ೭೨ ॥

---

೬೫–೬೭. ಬಳಿಕ ಕತ್ತೆ, ಹಂದಿ, ನಾಯಿ, ಕಾಗೆಗಳ ಜನ್ಮಗಳನ್ನು ಕ್ರಮವಾಗಿ ತಾಳಿದ ಬಳಿಕ ಚಂಡಾಲ, ಶೂದ್ರ, ವೈಶ್ಯ, ಕ್ಷತ್ರಿಯರ ಯೋನಿಗಳಲ್ಲಿ ಹುಟ್ಟಿ ಅನೇಕ ಕಷ್ಟಗಳನ್ನನುಭವಿಸಿ, ತರುವಾಯ ಬ್ರಾಹ್ಮಣನಾಗಿ ತಂದೆಯಿಂದ ಗರ್ಭಾಷ್ಟಮದಲ್ಲಿ ಉಪನೀತನಾದನು.

೬೮. ಹೀಗೆ ತಂದೆಯ ಮನೆಯಲ್ಲಿ ತನ್ನ ಆಶ್ರಮಧರ್ಮವನ್ನು ನಡೆಸಿಕೊಳ್ಳುತ್ತ ಒಮ್ಮೆ ಕಾಡಿನಲ್ಲಿ ಹೋಗುತ್ತಿರಲು ಬ್ರಹ್ಮರಾಕ್ಷಸನೊಬ್ಬನು ಆತನನ್ನು ಹಿಡಿದನು.

೬೯. ಆದರಿಂದಾತನು ಒಮ್ಮೆ ಅಳುತ್ತಲೂ, ಒಮ್ಮೆ ಸುತ್ತುತ್ತಲೂ, ಒಮ್ಮೊಮ್ಮೆ ಮೂರ್ಛೆಯಿಂದ ಬೀಳುತ್ತಲೂ, ಒಮ್ಮೆ ನಗುತ್ತಲೂ, ಅಳುತ್ತಲೂ, ಮತ್ತೊಮ್ಮೆ ಬಾರಿಬಾರಿಗೂ ಹಾ! ಹಾ! ಎಂದು ಕೂಗಿಕೊಳ್ಳುತ್ತಲೂ ಇದ್ದು, ಬರಬರುತ್ತ ತನ್ನ ವೈದಿಕಕರ್ಮವನ್ನೇ ತೊರೆದುಬಿಟ್ಟನು.

೭೦. ತಂದೆಯು ಅಂತಹ ಮಗನನ್ನು ಕಂಡು ದುಃಖಗೊಂಡು ಅವನನ್ನು ಕರೆದುಕೊಂಡುಹೋಗಿ ಅಗಸ್ತ್ಯನನ್ನು ಮರೆಹೊಕ್ಕನು.

೭೧–೭೩. ಭಕ್ತಿಯಿಂದಾತನಿಗೆ ನಮಸ್ಕರಿಸಿ ತನ್ನ ಮಗನ ನಡವಳಿಕೆಯನ್ನಾತನಿಗೆ ಅರಿಕೆಮಾಡಿದನು. "ಬ್ರಹ್ಮನ್! ಕುಂಭಸಂಭವ! ಈ ನನ್ನ ಪುತ್ರನನ್ನು

ಸುಖಂ ನ ಭಜತೇ ಬ್ರಹ್ಮರಕ್ಷ ತಂ ಕರುಣಾದೃಶಾ ।
ನಾಸ್ತಿ ಮೇ ತನಯೋಽಪ್ಯನ್ಯಃ ಪಿತೃಣಾಮೃಣಮುಕ್ತಯೇ ॥ ೭೩ ॥
ಅಸ್ಯ ಪೀಡಾವಿನಾಶಾರ್ಥಮುಪಾಯಂ ಬ್ರೂಹಿ ಕುಂಭಜ ।
ತ್ವತ್ಸಮಸ್ತ್ರಿಷು ಲೋಕೇಷು ತಪಃಶೀಲೋ ನ ವಿದ್ಯತೇ ॥ ೭೪ ॥
ಅಗ್ರಣೀಃ ಶಿವಭಕ್ತಾನಾಮುಕ್ತಸ್ತ್ವಂ ಹಿ ಮಹರ್ಷಿಭಿಃ ।
ತ್ವಾಂ ವಿನಾಽಸ್ಯ ಪರಿತ್ರಾಣಂ ನ ಮೇ ಪುತ್ರಸ್ಯ ವಿದ್ಯತೇ ।
ಪುತ್ರೇ ಕೃಪಾಂ ಕುರುಷ್ವ ತ್ವಂ ದಯಾಶೀಲಾ ಹಿ ಸಾಧವಃ ॥ ೭೫ ॥
ಶ್ರೀ ಸೂತ ಉವಾಚ :—
ಏವಮುಕ್ತಸ್ತದಾ ತೇನ ಕುಂಭಜೋ ಧ್ಯಾನಮಾಸ್ಥಿತಃ ॥ ೭೬ ॥
ಧ್ಯಾತ್ವಾ ತು ಸುಚಿರಂ ಕಾಲಂ ಅಬ್ರವೀದ್ಬ್ರಾಹ್ಮಣಂ ತತಃ ।
ಅಗಸ್ತ್ಯ ಉವಾಚ :—
ಪೂರ್ವಜನ್ಮನಿ ತೇ ಪುತ್ರೋ ಬ್ರಾಹ್ಮಣೋಽಯಂ ಮಹಾಮತೇ ॥ ೭೭ ॥
ಸುಮತಿರ್ನಾಮ ವಿಪ್ರೋಽಯಂ ಮತಿಂ ಶೂದ್ರಾಯ ವೈ ದದೌ ।
ಕರ್ಮಾಣಿ ವೈದಿಕಾನ್ಯೇಷ ಸರ್ವಾಣ್ಯುಪದಿದೇಶ ವೈ ॥ ೭೮ ॥
ಅತೋಽಯಂ ನರಕಾನ್ ಭುಕ್ತ್ವಾ ಕಲ್ಪಕೋಟಿಸಹಸ್ರಕಂ ।
ಜಾತೋ ಭುವಿ ತದಂತೇಷು ಸ್ಥಾವರಾದಿಷು ಯೋನಿಷು ।
ಇದಾನೀಂ ಬ್ರಾಹ್ಮಣೋ ಜಾತಃ ಕರ್ಮಶೇಷೇಣ ತೇ ಸುತಃ ॥ ೭೯ ॥

---

ಬ್ರಹ್ಮರಾಕ್ಷಸನು ಹಿಡಿದಿರುವನು. ಇದರಿಂದ ನನಗೆ ಇನಿತಾದರೂ ಸುಖವಿಲ್ಲ. ದಯೆಯಿಂದೀತನನ್ನು ಸಲಹು. ಪಿತೃಗಳ ಋಣವನ್ನು ನೀಗಿಸುವ ಮತ್ತೊಬ್ಬ ಮಗನಾದರೂ ನನಗಿಲ್ಲ.

೭೪–೭೫. ಎಲೈ ಕುಂಭಜನೇ! ಇವನ ಪೀಡೆಯ ಪರಿಹಾರಕ್ಕೆ ಉಪಾಯವನ್ನರುಹು. ನಿನಗೆ ಸಮನಾದ ತಪಸ್ಸಂಪನ್ನನು ಮೂರು ಲೋಕಗಳಲ್ಲಿಯೂ ಇರುವುದಿಲ್ಲ. ಶಿವಭಕ್ತರಲ್ಲಿ ಅಗ್ರಗಣ್ಯನೆಂದು ಮಹರ್ಷಿಗಳೆಲ್ಲರೂ ನಿನ್ನನ್ನು ಕೊಂಡಾಡುವರು. ನಿನ್ನ ಹೊರತು ಮತ್ತಾರೂ ಈ ನನ್ನ ಪುತ್ರನನ್ನು ಕಾಪಾಡಲಾರರು. ಇವನ ತಂದೆಯಾದ ನನ್ನಲ್ಲಾದರೂ ದಯೆತೋರು. ದಯೆಯೇ ಸತ್ಪುರುಷರ ಮುಖ್ಯಗುಣವಲ್ಲವೇ?'' ಎಂದು ಬೇಡಿದನು.

೭೬–೭೮. ಇದನ್ನು ಕೇಳಿದ ಬಳಿಕ, ಅಗಸ್ತ್ಯನು ಬಹುಕಾಲ ಧ್ಯಾನಾಸಕ್ತನಾಗಿದ್ದು, "ಅಯ್ಯಾ ಮಹಾಮತಿಯೇ! ನಿನ್ನ ಮಗನು ಹಿಂದಿನ ಜನ್ಮದಲ್ಲಿ ಸುಮತಿಯೆಂಬ ಬ್ರಾಹ್ಮಣನಾಗಿದ್ದು ಶೂದ್ರನಿಗೆ ಜ್ಞಾನವನ್ನೂ, ಸಮಸ್ತ ವೈದಿಕ ಕರ್ಮಗಳನ್ನೂ ಉಪದೇಶಿಸಿದನು.

೭೯. ಆ ದುಷ್ಕರ್ಮಪರಿಪಾಕದಿಂದ ಇವನು ಸಾವಿರಾರುಕಲ್ಪಗಳಕಾಲ

ಯಮೇನ ಪ್ರೇಷಿತೇನಾऽತ್ರ ಗೃಹೀತೋ ಬ್ರಹ್ಮರಕ್ಷಸಾ ॥ ೮೦ ॥
ಕ್ರೂರೇಣ ಪಾತಕೇನಾದ್ಧಾ ಪೂರ್ವಜನ್ಮಕೃತೇನ ವೈ ।
ಉಪಾಯಂ ತೇ ಪ್ರವಕ್ಷ್ಯಾಮಿ ಬ್ರಹ್ಮರಕ್ಷೋವಿನಾಶನೇ ।
ಶೃಣುಷ್ವ ಶ್ರದ್ಧಯಾ ಯುಕ್ತಃ ಸಮಾಧಾಯ ಚ ಮಾನಸಂ ॥ ೮೧ ॥
ದಕ್ಷಿಣಾಂಭೋನಿಧೌ ವಿಪ್ರ ಸೇತುರೂಪೋ ಮಹಾಗಿರಿಃ ।
ವರ್ತತೇ ದೇವಶ್ಯೈಃ ಸೇವ್ಯಃ ಪಾವನೋ ಗಂಧಮಾದನಃ ॥ ೮೨ ॥
ತಸ್ಯೋಪರಿ ಮಹಾತೀರ್ಥಂ ನಾಮ್ನಾ ಪಾಪವಿನಾಶನಂ ॥ ೮೩ ॥
ಅಸ್ತಿ ಪುಣ್ಯಂ ಪ್ರಸಿದ್ಧಂ ಚ ಮಹಾಪಾತಕನಾಶನಂ ।
ಭೂತಪ್ರೇತಪಿಶಾಚಾನಾಂ ವೇತಾಲಬ್ರಹ್ಮರಕ್ಷಸಾಂ ॥ ೮೪ ॥
ಮಹತಾಂ ಚೈವ ರೋಗಾಣಾಂ ತೀರ್ಥಂ ತನ್ನಾಶಕಂ ಸ್ಮೃತಂ ।
ಸುತಮಾದಾಯ ಗಚ್ಛ ತ್ವಂ ತತ್ತೀರ್ಥಂ ಸೇತುಮಧ್ಯಗಂ ॥ ೮೫ ॥
ಪ್ರಯತಃ ಸ್ನಾಪಯ ಸುತಂ ತೀರ್ಥೇ ಪಾಪವಿನಾಶನೇ ।
ಸ್ನಾನೇನ ತ್ರಿದಿನಂ ತತ್ರ ಬ್ರಹ್ಮರಕ್ಷೋ ವಿನಶ್ಯತಿ ॥ ೮೬ ॥
ನೈವೋಪಾಯಾಂತರಂ ತಸ್ಯ ವಿನಾಶೇ ವಿದ್ಯತೇ ಭುವಿ ।
ತಸ್ಮಾಚ್ಛೀಘ್ರಂ ಪ್ರಯಾಹಿ ತ್ವಂ ರಾಮಸೇತುಂ ವಿಮುಕ್ತಿದಂ ॥ ೮೭ ॥

---

ನರಕವನ್ನನುಭವಿಸಿ ಕ್ರಮವಾಗಿ ಸ್ಥಾವರಾದಿ ಜನ್ಮಗಳನ್ನೆತ್ತುತ್ತ ಈಗ ಕರ್ಮ ಶೇಷದಿಂದ ಬ್ರಾಹ್ಮಣನಾದ ನಿನಗೆ ಮಗನಾಗಿ ಜನಿಸಿರುವನು.

೮೦–೮೧. ಯಮನಿಂದ ಕಳುಹಲ್ಪಟ್ಟ ಕ್ರೂರವಾದ ಬ್ರಹ್ಮರಾಕ್ಷಸರೂಪ ವಾದ ಪೂರ್ವಜನ್ಮದ ಪಾಪಕರ್ಮವು ಇವನನ್ನು ಹಿಡಿದಿರುವದು. ಈ ಬ್ರಹ್ಮ ರಾಕ್ಷಸನ ಬಾಧೆಯು ತೊಲಗಲು ಉಪಾಯವನ್ನು ಹೇಳುವೆನು. ಮನಸ್ಸನ್ನು ಶ್ರದ್ಧೆಯಿಂದ ಬಿಗಿಹಿಡಿದು ಕೇಳು.

೮೨. ಅಯ್ಯಾ ಬ್ರಾಹ್ಮಣನೇ! ದಕ್ಷಿಣಸಮುದ್ರದ ದಡದಲ್ಲಿ ಸೇತು ರೂಪವೂ, ಸಮಸ್ತ ದೇವತಾಸೇವ್ಯವೂ, ಪರಮಪಾವನವೂ ಆದ ಗಂಧಮಾದನ ವೆಂಬ ಮಹಾಪರ್ವತವೊಂದಿರುವುದು.

೮೩–೮೫. ಅದರಮೇಲೆ ಪರಮಪಾವನವಾದ ಪಾಪನಾಶನವೆಂಬ ಮಹಾ ತೀರ್ಥವಿರುವುದು. ಅದು ಭೂತ, ಪ್ರೇತ, ಪಿಶಾಚ, ಬ್ರಹ್ಮರಾಕ್ಷಸ, ಭೇತಾಳ ಮತ್ತು ಸಕಲ ರೋಗಗಳ ಬಾಧೆಗಳನ್ನೂ ತೊಲಗಿಸುವುದರಲ್ಲಿ ಬಹಳ ಹೆಸರು ಗೊಂಡಿರುವುದು. ನಿನ್ನ ಮಗನನ್ನು ಆ ಸೇತುವಿನ ಮಧ್ಯದಲ್ಲಿರುವ ತೀರ್ಥಕ್ಕೆ ಕರೆದುಕೊಂಡುಹೋಗು.

೮೬–೮೮. ಪರಿಶುದ್ಧನಾಗಿ ಅದರಲ್ಲಿವನನ್ನು ಮುಳುಗಿಸು. ಮೂರು ದಿನಗಳಲ್ಲಿ ಇವನನ್ನು ಹಿಡಿದಿರುವ ಬ್ರಹ್ಮರಕ್ಷಸ್ಸು ಬಿಟ್ಟುಹೋಗುವುದು.

ತತ್ರ ಪಾಪವಿನಾಶಾಖ್ಯತೀರ್ಥೇ ಸ್ನಾಪಯ ತೇ ಸುತಂ ।
ಮಾ ವಿಲಂಬಂ ಕುರುಷ್ವಾಽತ್ರ ತ್ವರಯಾ ಯಾಹಿ ವೈ ದ್ವಿಜ ॥ ೮೮ ॥
ಇತ್ಯುಕ್ತಃ ಸ ದ್ವಿಜೋಽಗಸ್ತ್ಯಂ ಪ್ರಣಮ್ಯ ಭುವಿ ದಂಡವತ್ ।
ಅನುಜ್ಞಾತಶ್ಚ ತೇನಾಽಸೌ ಪ್ರಯಯೌ ಗಂಧಮಾದನಂ ॥ ೮೯ ॥
ಸುತೇನ ಸಾಕಂ ವಿಪ್ರೇಂದ್ರೋ ಗತ್ವಾ ಪಾಪವಿನಾಶನಂ ।
ಸಂಕಲ್ಪಪೂರ್ವಂ ಸಂಸ್ನಾಪ್ಯ ದಿನತ್ರಯಮಸೌ ಸುತಂ ॥ ೯೦ ॥
ಸಸ್ನೌ ಸ್ವಯಂ ಚ ವಿಪ್ರೇಂದ್ರಃ ಪಿತಾ ಪಾಪವಿನಾಶನೇ ।
ಅಥ ತಸ್ಯ ಸುತಸ್ತತ್ರ ವಿಮುಕ್ತೋ ಬ್ರಹ್ಮರಕ್ಷಸಾ ॥ ೯೧ ॥
ಸಮಜಾಯತ ನೀರೋಗಃ ಸ್ವಸ್ಥಃ ಸುಂದರರೂಪಧೃಕ್ ।
ಸರ್ವಸಂಪತ್ಸಮೃದ್ಧೋಽಸೌ ಭುಕ್ತ್ವಾ ಭೋಗಾನನೇಕಶಃ ॥ ೯೨ ॥
ದೇಹಾಂತೇ ಪ್ರಯಯೌ ಮುಕ್ತಿಂ ಸ್ನಾನಾತ್ಪಾಪವಿನಾಶನೇ ।
ಪಿತಾಪಿ ತತ್ರ ಸ್ನಾನೇನ ದೇಹಾಂತೇ ಮುಕ್ತಿಮಾಪ್ತವಾನ್ ॥ ೯೩ ॥
ತೇನೋಪದಿಷ್ಟೋ ಯಃ ಶೂದ್ರಃ ಸ ಭುಕ್ತ್ವಾ ನರಕಾನ್ಕ್ರಮಾತ್ ।
ಅನೇಕಾಸು ಜನಿತ್ವಾ ಚ ಕುತ್ಸಿತಾಸ್ವಪಿ ಯೋನಿಷು ॥ ೯೪ ॥

---

ಇದು ಹೊರತು ಬೇರಾವ ಉಪಾಯವೂ ಈ ಭೂಲೋಕದಲ್ಲಿಯೇ ಇರುವುದಿಲ್ಲ. ಆದುದರಿಂದ ತಡಮಾಡದೆ ಇವನನ್ನು ಕರೆದುಕೊಂಡು ಬೇಗನೆ ಹೋಗು. ಆ ಗಂಧಮಾದನದ ಪಾಪನಾಶನತೀರ್ಥದಲ್ಲಿ ಬೇಗನೆ ಮುಳುಗಿಸು'' ಎಂದು ಹೇಳಿದನು.

೮೯. ಬಳಿಕ ಬ್ರಾಹ್ಮಣನಿಂತು ಹೇಳಿದ ಅಗಸ್ತ್ಯನಿಗೆರಗಿ ಆತನ ಅಪ್ಪಣೆಯನ್ನು ಪಡೆದು ಗಂಧಮಾದನಕ್ಕೆ ಹೊರಟನು.

೯೦–೯೧. ಮಗನೊಡನೆ ಪಾಪನಾಶನವೆಂಬ ಆ ತೀರ್ಥವನ್ನು ಸೇರಿ ಸಂಕಲ್ಪಪೂರ್ವಕವಾಗಿ ಅದರಲ್ಲಿ ಮೂರು ದಿನಗಳು ಮಗನನ್ನು ಸ್ನಾನಮಾಡಿಸಿ ತಾನೂ ಸ್ನಾನಮಾಡಿದನು. ಬಳಿಕ ಬ್ರಹ್ಮರಕ್ಷಸ್ಸು ಆತನ ಮಗನನ್ನು ಬಿಟ್ಟು ತೊಲಗಿತು.

೯೨–೯೩. ಒಡನೆಯೆ ಅವನು ನಿರೋಗಿಯೂ, ಸ್ವಸ್ಥಚಿತ್ತನೂ, ಸುಂದರರೂಪನೂ, ಸಕಲೈಶ್ವರ್ಯಸಮನ್ವಿತನೂ ಆಗಿ ಅನೇಕ ವಿಧವಾದ ಭೋಗಗಳನ್ನೂ ಅನುಭವಿಸಿ ಆ ಪಾಪನಾಶಿನಿಯ ಸ್ನಾನದಿಂದ ದೇಹಾಂತ್ಯದಲ್ಲಿ ಮುಕ್ತಿಯನ್ನೂ ಪಡೆದನು. ಅಂತೆಯೇ ಆ ಪುಣ್ಯಕರ್ಮದಿಂದ ಅವನ ತಂದೆಯೂ ಮುಕ್ತನಾದನು.

೯೪–೯೫. ಆ ಬ್ರಾಹ್ಮಣನಿಂದ ಉಪದೇಶವನ್ನು ಪಡೆದ ಆ ಶೂದ್ರ

ಗೃಧ್ರಜನ್ಮಾಽಭವತ್ಪಶ್ಚಾದ್ಗಂಧಮಾದನಪರ್ವತೇ ।
ಸ ಕದಾಚಿಜ್ಜಲಂ ಪಾತುಂ ತೀರ್ಥೇ ಪಾಪವಿನಾಶನೇ ।
ಸಮಾಗತಃ ಪಪೌ ತೋಯಂ ಸಿಷಿಂಚೇ ಚಾತ್ಮನಸ್ತನುಂ ॥ ೯೫ ॥
ತದೈವ ದಿವ್ಯದೇಹಃ ಸನ್ಸರ್ವಾಭರಣಭೂಷಿತಃ ॥ ೯೬ ॥
ದಿವ್ಯಮಾಲ್ಯಾಂಬರಧರೋ ರಕ್ತಚಂದನರೂಷಿತಃ ।
ದಿವ್ಯಂ ವಿಮಾನಮಾರುಹ್ಯ ಶೋಭಿತಶ್ಛತ್ರಚಾಮರೈಃ ॥ ೯೭ ॥
ಉತ್ತಮಸ್ತ್ರೀಪರಿವೃತಃ ಪ್ರಯಯೌ ಅಮರಾಲಯಂ ॥ ೯೮ ॥

ಶ್ರೀ ಸೂತ ಉವಾಚ :—

ಏವಂಪ್ರಭಾವಮೇತದ್ಧಿ ತೀರ್ಥಂ ಪಾಪವಿನಾಶನಂ ।
ಸ್ವರ್ಗದಂ ಮೋಕ್ಷದಂ ಪುಣ್ಯಂ ಪ್ರಾಯಶ್ಚಿತ್ತಕರಂ ತಥಾ ।
ಬ್ರಹ್ಮವಿಷ್ಣುಮಹೇಶಾದ್ಯೈಃ ಸೇವಿತಂ ಸುರಸೇವಿತಂ ॥ ೯೯ ॥
ಪಾಪಾನಾಂ ನಾಶನಾದ್ವಿಪ್ರಾಃ ಪಾಪನಾಶಾಽಭಿಧಂ ಹಿ ತತ್ ।
ಶ್ರೇಯೋಽರ್ಥೀ ಪುರುಷಸ್ತಸ್ಮಾತ್ ಸ್ನಾಯಾತ್ಪಾಪವಿನಾಶನೇ ॥ ೧೦೦ ॥

---

ನಾದರೂ ಅನೇಕ ನರಕಗಳನ್ನು ಒಂದೊಂದಾಗಿ ಅನುಭವಿಸಿ ಬಳಿಕ ನಿಂದಿತವಾದ ಬಗೆ ಬಗೆಯ ಯೋನಿಗಳಲ್ಲಿ ಹುಟ್ಟುತ್ತ ಕಡೆಗೆ ಗಂಧಮಾದನದಲ್ಲಿ ಹದ್ದಿನ ಜನ್ಮವನ್ನು ಪಡೆದನು. ಒಮ್ಮೆ ಅದು ನೀರು ಕುಡಿಯಲು ಪಾಪನಾಶಿನಿಗೆ ಬಂದು ನೀರು ಕುಡಿದು ಮೈಗೆರಚಿಕೊಂಡಿತು.

೯೬–೯೮. ಕೂಡಲೇ ದಿವ್ಯವಾದ ದೇವತಾದೇಹವನ್ನು ಪಡೆದು ಆ ಶೂದ್ರನು ದಿವ್ಯಾಭರಣಭೂಷಿತನಾಗಿ, ದಿವ್ಯಮಾಲ್ಯಗಳನ್ನು ಧರಿಸಿ, ದಿವ್ಯವಾದ ವಿಮಾನವನ್ನೇರಿ, ಛತ್ರಚಾಮರಾದಿಗಳಿಂದೊಪ್ಪಿ ಉತ್ತಮರಾದ ಸ್ತ್ರೀಯರೊಡನೆ ದೇವಲೋಕವನ್ನೇರಿದನು.

೯೯. ಸೂತನು ಹೇಳುತ್ತಾನೆ:— ಅಯ್ಯಾ ಬ್ರಾಹ್ಮಣರೇ! ಪಾಪನಾಶನ ತೀರ್ಥವು ಇಂತಹ ಪ್ರಭಾವವುಳ್ಳುದು. ಸ್ವರ್ಗಪ್ರದವೂ, ಮೋಕ್ಷಪ್ರದವೂ, ಪುಣ್ಯಪ್ರದವೂ ಆದುದು. ಸಕಲ ಪ್ರಾಯಶ್ಚಿತ್ತರೂಪವಾದುದು. ಬ್ರಹ್ಮವಿಷ್ಣು ಮಹೇಶ್ವರಾದಿ ದೇವತೆಗಳಿಂದ ಸೇವಿತವಾದುದು.

೧೦೦. ಪಾಪಗಳನ್ನೆಲ್ಲ ನಾಶಪಡಿಸುವುದರಿಂದ ಇದು ಪಾಪನಾಶನವೆಂಬ ಹೆಸರನ್ನು ಪಡೆದಿರುವುದು. ಶ್ರೇಯಸ್ಕಾಮನಾದ ಪುರುಷನು ಈ ಪಾಪನಾಶನ ದಲ್ಲಿ ಸ್ನಾನಮಾಡತಕ್ಕುದು.

ಇತ್ಥಂ ರಹಸ್ಯಂ ಕಥಿತಂ ಮುನೀಂದ್ರಾಃ
ತದ್ವೈಭವಂ ಪಾಪವಿನಾಶನಸ್ಯ ।
ಯತ್ರಾಽಭಿಷೇಕಾತ್ಸಹಸಾ ವಿಮುಕ್ತೌ
ದ್ವಿಜಶ್ಚ ಶೂದ್ರಶ್ಚ ವಿನಿಂದ್ಯಕೃತ್ಯೌ ॥ ೧೦೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಗಂಧಮಾದನಗಿರಿಪ್ರಶಂಸನಂ—ಪಾಪವಿನಾಶತೀರ್ಥಪ್ರಭಾವಕಥನಂ"ನಾಮ ದಶಮೋಽಧ್ಯಾಯಃ

---

೧೦೧. ಎಲೈ ದ್ವಿಜೇಂದ್ರರೇ! ನಿಂದ್ಯವಾದ ಕೆಲಸವನ್ನು ಮಾಡಿದ ಬ್ರಾಹ್ಮಣ ಶೂದ್ರರಿಬ್ಬರೂ ಯಾವುದರಿಂದ ಮುಕ್ತರಾದರೋ, ಆ ಪಾಪ ನಾಶನದ ಪರಮ ರಹಸ್ಯವಾದ ವೈಭವವನ್ನರುಹಿದೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಗಂಧಮಾದನಗಿರಿಪ್ರಶಂಸೆ—ಪಾಪವಿನಾಶತೀರ್ಥಪ್ರಭಾವಕಥನ"ವೆಂಬ ಹತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕಾದಶೋಽಧ್ಯಾಯಃ

### ಸೀತಾಸರಃಪ್ರಶಂಸನಂ— ಇಂದ್ರಸ್ಯ ಬ್ರಹ್ಮಹತ್ಯಾವಿಮೋಕ್ಷಣಂ

ಶ್ರೀ ಸೂತ ಉವಾಚ :—

ಪಾಪನಾಶೇ ನರಃ ಸ್ನಾತ್ವಾ ಸರ್ವಪಾಪನಿಬರ್ಹಣೇ ।
ತತಃ ಸೀತಾಸರೋ ಗಚ್ಛೇತ್ಸ್ನಾತುಂ ನಿಯಮಪೂರ್ವಕಂ ॥ ೧ ॥
ಯಾನಿ ಕಾನಿ ಚ ಪುಣ್ಯಾನಿ ಬ್ರಹ್ಮಾಂಡಾಂತರ್ಗತಾನಿ ವೈ ।
ತಾನಿ ಗಂಗಾದಿತೀರ್ಥಾನಿ ಸ್ವಪಾಪಪರಿಶುದ್ಧಯೇ ॥ ೨ ॥
ಸೀತಾಸರಸಿ ವರ್ತಂತೇ ಮಹಾಪಾತಕನಾಶನೇ ।
ಕ್ಷೇತ್ರಾಣ್ಯಪಿ ಮಹಾರ್ಹಾಣಿ ಕಾಶ್ಯಾದೀನಿ ದಿವಾನಿಶಂ ॥ ೩ ॥
ಸೀತಾಸರೋಽತ್ರ ಸೇವಂತೇ ಸ್ವಸ್ವಕಲ್ಮಷಶಾಂತಯೇ ।
ತಸ್ಯಾಂ ಸರಸಿ ಸಂಗೀತಗುಣೇನಾಕೃಷ್ಯ ಬಾಲಿಶಃ ॥ ೪ ॥
ಪಂಚಾನನೋಽಪಿ ವಸತೇ ಪಂಚಪಾತಕನಾಶನಃ ।
ತದೇತತ್ತೀರ್ಥಮಾಗತ್ಯ ಸ್ನಾತ್ವಾ ವೈ ಶ್ರದ್ಧಯಾಸಹ ।
ಪುರಂದರಃ ಪುರಾ ವಿಪ್ರಾ ಮುಮುಚೇ ಬ್ರಹ್ಮಹತ್ಯಯಾ ॥ ೫ ॥

---

### ಕನ್ನಡದ ಅನುವಾದ

#### ಸೀತಾಸರೋವರ ಪ್ರಶಂಸೆ— ಇಂದ್ರನ ಬ್ರಹ್ಮಹತ್ಯಾವಿಮೋಕ್ಷಣ

೧. ಸೂತನು ಹೇಳುತ್ತಾನೆ:— ಇಂತು ಸಮಸ್ತ ಪಾಪಗಳನ್ನೂ ತೊಲಗಿಸುವ ಪಾಪನಾಶಿನಿಯಲ್ಲಿ ಸ್ನಾನಮಾಡಿದ ಬಳಿಕ ಮನುಜನು, ನಿಯಮಪೂರ್ವಕವಾಗಿ ಸ್ನಾನಮಾಡಲು ಸೀತಾಸರೋವರಕ್ಕೆ ಹೋಗಬೇಕು.

೨-೫. ಬ್ರಹ್ಮಾಂಡದಲ್ಲಿ ಗಂಗಾದಿ ಯಾವ ಯಾವ ತೀರ್ಥಗಳಿರುವುವೋ, ಅವೆಲ್ಲವೂ ತಮ್ಮ ತಮ್ಮ ಪಾಪಗಳನ್ನು ಕಳೆದುಕೊಳ್ಳಲು ಮಹಾಪಾತಕನಾಶಿನಿಯಾದ ಸೀತಾಸರೋವರಕ್ಕೆ ಬಂದು ವಾಸಮಾಡುತ್ತವೆ. ಮಹಾಮಹಿಮೆಯುಳ್ಳ ಕಾಶ್ಯಾದಿ ಮಹಾಕ್ಷೇತ್ರಗಳು ಕೂಡ ತಮ್ಮ ತಮ್ಮ ಪಾಪಗಳನ್ನು ನೀಗಲು ಹಗಲಿರುಳೂ ಈ ಮಹಾಕ್ಷೇತ್ರವನ್ನು ಸೇವಿಸಿಕೊಂಡಿರುತ್ತವೆ. ಎಲೈ ವಿಪ್ರರೇ! ಆ ಸೀತಾಸರೋವರದಲ್ಲಿಯ ಸಂಗೀತಗುಣದಿಂದ ಆಕರ್ಷಿತನಾಗಿ, ಬ್ರಹ್ಮಹತ್ಯಾದಿ ಪಂಚಮಹಾಪಾತಕಗಳನ್ನು ಕಳೆಯುವ ಮಹಾಮಹಿಮನಾದ ಪಂಚಮುಖ ಪರಮೇಶ್ವರನೂ ಅಲ್ಲಿಯೇ ನೆಲಸಿರುತ್ತಾನೆ. ಪೂರ್ವದಲ್ಲಿ ಸ್ವರ್ಗಾಧಿಪನಾದ ಪುರಂದರನು ಬ್ರಹ್ಮಹತ್ಯೆಯ ನಿವಾರಣೆಗಾಗಿ ಈ ಸರೋವರಕ್ಕೆ ಬಂದು ಶ್ರದ್ಧೆಯಿಂದ ಸ್ನಾನಮಾಡಿ ಅದರಿಂದ ವಿಮುಕ್ತನಾದನು.

ಋಷಯ ಊಚುಃ:—
ಬ್ರಹ್ಮಹತ್ಯಾ ಕಥಮಭೂದ್ವಾಸವಸ್ಯ ಪುರಾ ಮುನೇ ।
ಸೀತಾಸರಸಿ ಸ ಸ್ನಾನಾತ್ಕಥಂ ಮುಕ್ತೋಽಭವತ್ತಯಾ ॥ ೭ ॥
ಶ್ರೀ ಸೂತ ಉವಾಚ:—
ಕಪಾಲಾಭರಣೋ ನಾಮ ರಾಕ್ಷಸೋಽಭೂತ್ಪುರಾ ದ್ವಿಜಾಃ ॥ ೭ ॥
ಅವಧ್ಯಃ ಸರ್ವದೇವಾನಾಂ ಸೋಽಭವದ್ಬ್ರಹ್ಮಣೋ ವರಾತ್ ।
ಶವಭಕ್ಷಣನಾಮಾ ತು ತಸ್ಯಾಸೀನ್ಮಂತ್ರಿಸತ್ತಮಃ ॥ ೮ ॥
ಅಕ್ಷೌಹಿಣೀಶತಂ ತಸ್ಯ ಹಯೇಭರಥಸಂಕುಲಂ ।
ಅಸ್ತಿ ತಸ್ಯ ಪುರಂ ಚಾಽಪಿ ವೈಜಯಂತಮಿತಿ ಶ್ರುತಂ ॥ ೯ ॥
ವಸತ್ಯಸ್ಮಿನ್ಪುರೇ ಸೋಽಯಂ ಕಪಾಲಾಭರಣೋ ಬಲೀ ।
ಶವಭಕ್ಷಂ ಸಮಾಹೂಯ ಬಭಾಷೇ ಮಂತ್ರಿಣಂ ದ್ವಿಜಾಃ ॥ ೧೦ ॥
ಶವಭಕ್ಷ ಮಹಾವೀರ್ಯ ಮಂತ್ರಶಾಸ್ತ್ರೇಷು ಕೋವಿದ ।
ವಯಂ ದೇವಪುರೀಂ ಗತ್ವಾ ವಿನಿರ್ಜಿತ್ಯ ಸುರಾನ್ರಣೇ ॥ ೧೧ ॥
ಶಕ್ರಸ್ಯ ಭವನೇ ರಮ್ಯೇ ಸ್ಥಾಸ್ಯಾಮಃ ಸೈನಿಕೈಃ ಸಹ ।
ರಮಾಮೋ ನಂದನೇ ತಸ್ಯ ರಂಭಾದ್ಯಪ್ಸರಸಾಂ ಗಣೈಃ ॥ ೧೨ ॥

---

೭. ಋಷಿಗಳು ಕೇಳುತ್ತಾರೆ:—"ಎಲೈ ಮುನಿಯೆ! ಪುರಂದರನಿಗೆ ಬ್ರಹ್ಮಹತ್ಯೆಯು ಏಕೆ ಬಂದಿತು? ಅದು ಸೀತಾಸರೋವರದ ಸ್ನಾನದಿಂದ ಹೇಗೆ ತೊಲಗಿತು?"

೭-೯. ಸೂತನು ಹೇಳುತ್ತಾನೆ:— ಅಯ್ಯಾ ಬ್ರಾಹ್ಮಣರೇ! ಹಿಂದೆ ಕಪಾಲಾಭರಣನೆಂಬೊಬ್ಬ ರಾಕ್ಷಸನಿದ್ದನು. ಬ್ರಹ್ಮನ ವರದಿಂದ ಅವನು ಸಮಸ್ತ ದೇವತೆಗಳಿಗೂ ಅವಧ್ಯನಾಗಿದ್ದನು. ಅವನಿಗೆ ಶವಭಕ್ಷನೆಂಬ ಮಂತ್ರಿಯಿದ್ದನು. ಚತುರಂಗಬಲಸಮೇತವಾದ ನೂರು ಅಕ್ಷೌಹಿಣಿಗಳ ಸೈನ್ಯವೂ ಆತನ ಬಳಿಯಿದ್ದಿತು. ವೈಜಯಂತವೆಂಬ ಪಟ್ಟಣವೇ ಆತನ ರಾಜಧಾನಿ.

೧೦-೧೨. ಕಪಾಲಾಭರಣನೊಮ್ಮೆ ತನ್ನ ರಾಜಧಾನಿಯಲ್ಲಿ ಮಂತ್ರಿಯಾದ ಶವಭಕ್ಷನನ್ನು ಕರೆದು, "ಮಹಾಪರಾಕ್ರಮಿಯೂ, ಮಂತ್ರಶಾಸ್ತ್ರಪ್ರವೀಣನೂ ಆದ ಎಲೈ ಶವಭಕ್ಷನೇ! ನಾವು ದೇವಪುರಿಗೆ ಹೋಗಿ ದೇವತೆಗಳನ್ನು ಗೆದ್ದು ರಮ್ಯವಾದ ಇಂದ್ರನ ಅರಮನೆಯಲ್ಲಿ ಈ ನಮ್ಮ ಸೈನ್ಯದೊಂದಿಗೆ ವಾಸ ಮಾಡೋಣ. ನಂದನೋದ್ಯಾನದಲ್ಲಿ ರಂಭಾದ್ಯಪ್ಸರೆಯರೊಡನೆ ಕ್ರೀಡಿಸೋಣ" ಎಂದು ಹೇಳಿದನು.

ಕಪಾಲಾಭರಣಸ್ಯೇದಂ ನಿಶಮ್ಯ ವಚನಂ ತದಾ ।
ಶವಭಕ್ಷೋಽಬ್ರವೀದ್ವಿಪ್ರಾ ವಚಸ್ತತ್ರ ತಥಾಽಸ್ತ್ವಿತಿ ॥ ೧೩ ॥
ತತಃ ಕಪಾಲಾಭರಣಃ ಪುತ್ರಂ ದುರ್ಮೇಧಸಂ ಬಲೀ ।
ಪ್ರತಿಷ್ಠಾಪ್ಯ ಪುರೇ ಶೂರಂ ಸೇನಯಾ ಪರಿವಾರಿತಃ ॥ ೧೪ ॥
ಯುಯುತ್ಸುರಮರೈಃ ಸಾಕಂ ಪ್ರಯಯಾವಮರಾವತೀಂ ।
ಗಜಾಽಶ್ವರಥಪಾದಾತ್ಯೈರೇಣುಘಟ್ಟನಸಂಚಯೈಃ ॥ ೧೫ ॥
ಶೋಷಯನ್ಜಲಧೀನ್ಸಿಂಧೂಂಶ್ಚೂರ್ಣಯನ್ಪರ್ವತಾನಪಿ ।
ನಿಃಸಾಣಧ್ವನಿನಾ ವಿಪ್ರಾ ನಾದಯನ್ರೋದಸೀ ತಥಾ ॥ ೧೬ ॥
ಅಶ್ವಾನಾಂ ಹೇಷಿತರವೈರ್ಗಜಾನಾಮಪಿ ಬೃಂಹಿತೈಃ ।
ರಥನೇಮಿಸ್ವನೈರುಗ್ರೈಃ ಸಿಂಹನಾದೈಃ ಪದಾತಿನಾಂ ॥ ೧೭ ॥
ಶ್ರೋತ್ರಾಣಿ ದಿಗ್ಗಜಾನಾಂ ಚ ವಿತನ್ವನ್ಬಧಿರಾಣಿ ಸಃ ।
ಅಗಮದ್ದೇವನಗರೀಂ ಯುಯುತ್ಸುರಮರೈಃ ಸಹ ॥ ೧೮ ॥
ತತ ಇಂದ್ರಾದಯೋ ದೇವಾಃ ಸೇನಾಕಲಕಲಧ್ವನಿಂ ।
ಶ್ರುತ್ವಾಽಭಿನಿರ್ಯಯುಃ ಪುರ್ಯಾ ಯುದ್ಧಾಭಿಮನಸೋ ದ್ವಿಜಾಃ ॥
ತತೋ ಯುದ್ಧಂ ಸಮಭವದ್ದೇವಾನಾಂ ರಾಕ್ಷಸೈಃ ಸಹ ।
ಅದೃಷ್ಟಪೂರ್ವಂ ಜಗತಿ ತಥೈವಾಽಶ್ರುತಪೂರ್ವಕಂ ॥ ೨೦ ॥

---

೧೩. ತನ್ನ ಒಡೆಯನಾದ ಕಪಾಲಾಭರಣನು ಹೇಳಿದ ಈ ಮಾತನ್ನು ಕೇಳಿ ಅವನ ಮಂತ್ರಿಯಾದ ಶವಭಕ್ಷನು ಅಂತೆಯೆ ಆಗಲೆಂದೊಪ್ಪಿಗೆಯಿತ್ತನು.

೧೪–೧೮. ಬಳಿಕ ಕಪಾಲಾಭರಣನು ಬಲಶಾಲಿಯಾದ ದುರ್ಮೇಧಸನೆಂಬ ತನ್ನ ಮಗನನ್ನು ಪಟ್ಟಣದಲ್ಲಿರಿಸಿ, ಸೈನ್ಯದೊಂದಿಗೆ ಹೊರಟು ದೇವತೆಗಳೊಡನೆ ಯುದ್ಧಮಾಡಲು ಉತ್ಸಾಹದಿಂದ ಅಮರಾವತಿಗೆ ತೆರಳಿದನು. ಆಗಲವನು ಚತುರಂಗಬಲದ ಘಟ್ಟನೆಯಿಂದೆದ್ದ ಧೂಳಿನಿಂದ ಸಪ್ತಸಮುದ್ರಗಳನ್ನು ಇಂಗಿಸುತ್ತಲೂ, ಪರ್ವತಗಳನ್ನು ಪುಡಿಗುಟ್ಟುತ್ತಲೂ, ರಣವಾದ್ಯಗಳಿಂದ ಭೂವ್ಯಾಕಾಶಗಳನ್ನು ತುಂಬಿಸುತ್ತಲೂ, ಕುದುರೆಗಳ ಹೇಷಾರವದಿಂದಲೂ, ಆನೆಗಳ ಘೀಂಕಾರದಿಂದಲೂ, ರಥಗಳ ನೇಮಿಸ್ವನಗಳಿಂದಲೂ, ಕಾಲಾಳುಗಳ ಸಿಂಹನಾದಗಳಿಂದಲೂ, ದಿಗ್ಗಜಗಳ ಕಿವಿಗಳನ್ನು ಕಿವಿಡುಗೊಳಿಸುತ್ತಲೂ, ಅಮರರೊಡನೆ ಯುದ್ಧಮಾಡಲು ಅಮರಾವತಿಗೈತಂದನು.

೧೯. ಎಲೈ ಬ್ರಾಹ್ಮಣರೇ! ಬಳಿಕ ಇಂದ್ರಾದಿದೇವತೆಗಳೆಲ್ಲರೂ ಈ ಅಸುರ ಸೈನ್ಯದ ಕಲಕಲಧ್ವನಿಯನ್ನು ಕೇಳಿ ಯುದ್ಧಮಾಡಬಯಸಿ ಪಟ್ಟಣದಿಂದ ಹೊರಕ್ಕೆ ಬಂದರು.

೨೦. ಆಗ ದೇವತೆಗಳಿಗೂ, ರಾಕ್ಷಸರಿಗೂ, ಹಿಂದೆಂದೂ ಕಂಡು ಕೇಳದಂತಹ ಭಯಂಕರವಾದ ಯುದ್ಧವು ನಡೆಯಿತು.

ತತ ಇಂದ್ರಾದಯೋ ದೇವಾ ರಾಕ್ಷಸಾನ್ಜಘ್ನುರಾಹವೇ ।
ರಾಕ್ಷಸಾಶ್ಚ ಸುರಾನ್ಜಘ್ನುಃ ಸಮರೇ ವಿಜಿಗೀಷವಃ ॥ ೨೧ ॥
ದ್ವಂದ್ವಯುದ್ಧಂ ಚ ಸಮಭೂದನ್ಯೋನ್ಯಂ ಸುರರಕ್ಷಸಾಂ ।
ಕಪಾಲಾಭರಣೇನಾಜೌ ಯುಯುಧೇ ಬಲವೃತ್ರಹಾ ॥ ೨೨ ॥
ಯಮೇನ ಶವಭಕ್ಷಶ್ಚ ವರುಣೇನ ಚ ಕೌಶಿಕಃ ।
ಕುಬೇರೋ ರುಧಿರಾಕ್ಷೇಣ ಯುಯುಧೇ ಬ್ರಾಹ್ಮಣೋತ್ತಮಾಃ ॥ ೨೩ ॥
ಮಾಂಸಪ್ರಿಯೋ ಮದ್ಯಸೇವೀ ಕ್ರೂರದೃಷ್ಟಿರ್ಭಯಾವಹಃ ।
ಚತ್ವಾರ ಏತೇ ವಿಕ್ರಾಂತಾಃ ಕಪಾಲಾಭರಣಾನುಜಾಃ ॥ ೨೪ ॥
ಅಶ್ವಿಭ್ಯಾಮಗ್ನಿವಾಯುಭ್ಯಾಂ ಯುದ್ಧೇ ಯುಯುಧಿರೇ ಮಿಥಃ ।
ತತೋ ಯಮೋ ಮಹಾವೀರ್ಯಃ ಕಾಲದಂಡೇನ ವೇಗವಾನ್ ॥ ೨೫ ॥
ಶವಭಕ್ಷಂ ನಿಹತ್ಯಾಜಾವನಯದ್ಯಮಸಾದನಂ ।
ತಸ್ಯ ಚಾಕ್ಷೌಹಿಣೀಸ್ತ್ರಿಂಶನ್ನಿಜಘ್ನೇ ಸಮರೇ ಯಮಃ ॥ ೨೬ ॥
ವರುಣಃ ಕೌಶಿಕಸ್ಯಾಜೌ ಪ್ರಾಸೇನ ಪ್ರಾಹರಚ್ಛಿರಃ ।
ಕುಬೇರೋ ರುಧಿರಾಕ್ಷಸ್ಯ ಕುಂತೇನಾಭ್ಯಹರಚ್ಛಿರಃ ॥ ೨೭ ॥
ಅಶ್ವಿಭ್ಯಾಮಗ್ನಿವಾಯುಭ್ಯಾಂ ಕಪಾಲಾಭರಣಾನುಜಾಃ ।
ನಿಹತಾಃ ಸಮರೇ ವಿಪ್ರಾಃ ಪ್ರಯಯುರ್ಯಮಸಾದನಂ ॥ ೨೮ ॥

---

೨೧. ಪರಸ್ಪರವಾಗಿ ಜಯವನ್ನು ಬಯಸುವ ಇಂದ್ರಾದಿ ದೇವತೆಗಳೂ, ರಾಕ್ಷಸರೂ, ಎರಡು ಕಡೆಗಳಲ್ಲಿಯೂ ಅನೇಕರನ್ನು ಕೊಂದರು.

೨೨–೨೩. ಉಭಯಪಕ್ಷದವರಿಗೂ ಪರಸ್ಪರವಾಗಿ ದ್ವಂದ್ವಯುದ್ಧವೂ ನಡೆಯಿತು. ಕಪಾಲಾಭರಣನೊಂದಿಗೆ ಇಂದ್ರನೂ, ಶವಭಕ್ಷನೊಂದಿಗೆ ಯಮನೂ, ಕೌಶಿಕನೊಂದಿಗೆ ವರುಣನೂ, ರುಧಿರಾಕ್ಷನೊಂದಿಗೆ ಕುಬೇರನೂ ಯುದ್ಧಮಾಡಿದರು.

೨೪–೨೬. ಮಾಂಸಪ್ರಿಯ, ಮದ್ಯಸೇವಿ, ವಕ್ರದೃಷ್ಟಿ, ಭಯಾವಹ ಎಂಬ ಕಪಾಲಾಭರಣನ ನಾಲ್ವರು ತಮ್ಮಂದಿರೊಡನೆ ಅಶ್ವಿನೀದೇವತೆಗಳೂ, ಅಗ್ನಿ ವಾಯುಗಳೂ ಹೋರಿದರು. ಬಳಿಕ ಮಹಾಪರಾಕ್ರಮಿಯಾದ ಯಮನು ತನ್ನ ಕಾಲದಂಡದಿಂದ ಶವಭಕ್ಷನನ್ನು ಕೊಂದು ತನ್ನ ಬಳಿಗೇನೆ ಕರೆದು ಕೊಂಡುದಲ್ಲದೆ ಅವನ ಮೂವತ್ತು ಅಕ್ಷೌಹಿಣೀಸೈನ್ಯವನ್ನೂ ನಾಶಗೊಳಿಸಿದನು.

೨೭. ವರುಣನು ಪ್ರಾಸಾಯುಧದಿಂದ ಕೌಶಿಕನ ಶಿರವನ್ನು ಸೀಳಿದನು. ಕುಬೇರನು ರುಧಿರಾಕ್ಷನ ಶಿರವನ್ನು ತನ್ನ ಕುಂತಕ್ಕೆ ಬಲಿಗೊಟ್ಟನು.

೨೮. ಅಶ್ವಿನೀದೇವತೆಗಳಿಂದಲೂ, ಅಗ್ನಿವಾಯುಗಳಿಂದಲೂ, ಕಪಾಲಾ ಭರಣನ ನಾಲ್ವರು ತಮ್ಮಂದಿರೂ ಯಮಪುರಿಗೆ ಕಳುಹಿಸಲ್ಪಟ್ಟರು.

ಅಕ್ಷೌಹಿಣೀಶತಂ ಚಾಽಪಿ ದೇವೇಂದ್ರೇಣ ಮೃಧೇ ದ್ವಿಜಾಃ ।
ಯಾಮಾರ್ಧೇನ ಹತಂ ಯುದ್ಧೇ ಪ್ರಯಯೌ ಯಮಸಾದನಂ ॥ ೨೯ ॥
ತತಃ ಕಪಾಲಾಭರಣಃ ಪ್ರೇಕ್ಷ್ಯ ಸೇನಾಂ ನಿಜಾಂ ಹತಾಂ ।
ಚಾಪಮಾದಾಯ ನಿಶಿತಾನ್ ಶರಾಂಶ್ಚಾಽಪಿ ಮಹಾಜವಾನ್ ॥ ೩೦ ॥
ಅಭ್ಯಯಾತ್ಸಮರೇ ಶಕ್ರಂ ತಿಷ್ಠ ತಿಷ್ಠೇತಿ ಚಾಽಬ್ರವೀತ್ ।
ತತಃ ಶಕ್ರಸ್ಯ ಶಿರಸಿ ವ್ಯಧಮಚ್ಛರಪಂಚಕೈಃ ॥ ೩೧ ॥
ತಾನಪ್ರಾಪ್ತಾನ್ ಪ್ರಚಿಚ್ಛೇದ ಶರೈರ್ಯುದ್ಧೇ ಸ ವೃತ್ರಹಾ ।
ತತಃ ಶೂಲಂ ಸಮಾದಾಯ ಕಪಾಲಾಭರಣೋ ಮೃಧೇ ॥ ೩೨ ॥
ದೇವೇಂದ್ರಾಯ ಪ್ರಚಿಕ್ಷೇಪ ತಂ ಶಕ್ತ್ಯಾ ನಿಜಘಾನ ಸಃ ।
ತತಃ ಕಪಾಲಾಭರಣಃ ಶತಹಸ್ತಾಯತಾಂ ಗದಾಂ ॥ ೩೩ ॥
ಆಯಸೀಂ ಪಂಚಸಾಹಸ್ರಪಲಭಾರೇಣ ನಿರ್ಮಿತಾಂ ।
ಆದದೇ ಸಮರೇ ಶಕ್ರಂ ವಕ್ಷೋದೇಶೇ ಜಘಾನ ಚ ॥ ೩೪ ॥
ತತಃ ಸ ಮೂರ್ಛಿತಃ ಶಕ್ರೋ ರಥೋಪಸ್ಥ ಉಪಾವಿಶತ್ ।
ಮೃತಸಂಜೀವಿನೀಂ ವಿದ್ಯಾಂ ಜಪಿತ್ವಾಽಥ ಬೃಹಸ್ಪತಿಃ ॥ ೩೫ ॥
ಪುಲೋಮಜಾಪತಿಂ ಯುದ್ಧೇ ಸಮಜೀವಯದದ್ಭುತಂ ।
ಐರಾವತಂ ತದಾರುಹ್ಯ ಕಪಾಲಾಭರಣಾಂತಿಕಂ ॥ ೩೬ ॥

---

೨೯. ಬಳಿಕ ಇಂದ್ರನು ಕಪಾಲಾಭರಣನ ನೂರು ಅಕ್ಷೌಹಿಣೀಸೈನ್ಯವನ್ನೂ ಅರ್ಧಜಾವದಲ್ಲಿಯೆ ಮೃತ್ಯುವಿಗೆ ತುತ್ತುಮಾಡಿದನು.

೩೦–೩೧. ಅನಂತರ ಕಪಾಲಾಭರಣನು ತನ್ನ ಸೈನ್ಯವು ಹತವಾದುದನ್ನು ಕಂಡು ಬಿಲ್ಲನ್ನೂ, ಹರಿತವಾದ ಬಾಣಗಳನ್ನೂ ಹಿಡಿದು, "ಎಲೆವೋ ಇಂದ್ರನೇ! ನಿಲ್ಲು, ನಿಲ್ಲು!" ಎಂದು ಹೇಳುತ್ತ ಆತನಮೇಲೆ ಯುದ್ಧಮಾಡಲು ಅತಿವೇಗವಾಗಿ ಓಡಿ ಅವನ ತಲೆಗೆ ಗುರಿಯಿಟ್ಟು ಐದು ಬಾಣಗಳನ್ನು ಪ್ರಯೋಗಿಸಿದನು.

೩೨–೩೪. ಇಂದ್ರನವುಗಳನ್ನು ಮಧ್ಯದಲ್ಲಿಯೇ ಕತ್ತರಿಸಿದನು. ಬಳಿಕ ಕಪಾಲಾಭರಣನು ಶೂಲವನ್ನೆಸೆಯಲು ಇಂದ್ರನದನ್ನು ಶಕ್ತ್ಯಾಯುಧದಿಂದ ಮುರಿದನು. ತರುವಾಯ ಕಪಾಲಾಭರಣನು ನೂರುಮಾರುಗಳುದ್ದವೂ, ಐದು ಸಾವಿರ ಮಣಗಳ ಭಾರವೂ ಉಳ್ಳ ಕಬ್ಬಿಣದ ಗದೆಯಿಂದ ಇಂದ್ರನ ಎದೆಗೆ ಹೊಡೆದನು.

೩೫–೩೬. ಅದರಿಂದ ಇಂದ್ರನು ರಥದ ಮೇಲೆಯೆ ಮೂರ್ಛಿತನಾಗಲು ಬೃಹಸ್ಪತಿಯು ಮೃತಸಂಜೀವಿನೀಮಂತ್ರವನ್ನು ಜಪಿಸಿ ಆ ಪುಲೋಮಜಾಪತಿಯನ್ನು ಆಶ್ಚರ್ಯಕರವಾದ ರೀತಿಯಲ್ಲಿ ಬದುಕಿಸಿದನು. ಆಗ ಮಹೇಂದ್ರನು

ಆಜಗಾಮ ಶಚೀಭರ್ತಾ ಪ್ರಹರ್ತುಂ ಕುಲಿಶೇನ ತಂ ।
ಏಕಪ್ರಹಾರೇಣ ತದಾ ಮಹೇಂದ್ರಃ ಪಾಕಶಾಸನಃ ॥ ೩೭ ॥
ಕಪಾಲಾಭರಣಂ ಯುದ್ಧೇ ವಜ್ರೇಣ ಸರಥಾಽಶ್ವಕಂ ।
ಸ ಚಾಪಂ ಸಧ್ವಜಂ ಚೈವ ಸತೂಣೀರಂ ಸವರ್ಮಕಂ ।
ಚೂರ್ಣಯಾಮಾಸ ಕುಪಿತಸ್ತಿಲಶಃ ಕಣಶಸ್ತಥಾ ॥ ೩೮ ॥
ಹತೇ ತಸ್ಮಿನ್ಮಹಾವೀರೇ ಕಪಾಲಾಭರಣೇ ರಣೇ ।
ಸುಖಂ ಸರ್ವಸ್ಯ ಲೋಕಸ್ಯ ಬಭೂವ ಚಿರದುಃಖಿನಃ ॥ ೩೯ ॥
ರಾಕ್ಷಸಸ್ಯ ವಧೋತ್ಪನ್ನಾ ಬ್ರಹ್ಮಹತ್ಯಾ ಪುರಂದರಂ ।
ಅನ್ವಧಾವತ್ತದಾ ಭೀಮಾ ನಾದಯಂತೀ ದಿಶೋ ದಶ ॥ ೪೦ ॥

ಋಷಯ ಊಚುಃ:—

ನ ವಿಪ್ರೋ ರಾಕ್ಷಸಃ ಸೂತ ಕಪಾಲಾಭರಣೋ ಮುನೇ ।
ತತ್ಕಥಂ ಬ್ರಹ್ಮಹತ್ಯೇಂದ್ರಂ ತದ್ವಧಾತ್ಸಮುಪಾದ್ರವತ್ ॥ ೪೧ ॥

ಶ್ರೀ ಸೂತ ಉವಾಚ:—

ವಕ್ಷ್ಯಾಮಿ ಪರಮಂ ಗುಹ್ಯಂ ಮುನೀಂದ್ರಾಃ ಪರಮಾದ್ಭುತಂ ।
ಶೃಣುತ ಶ್ರದ್ಧಯಾ ಯೂಯಂ ಸಮಾಧಾಯ ಸ್ವಮಾನಸಂ ॥ ೪೨ ॥

---

ಐರಾವತವನ್ನೇರಿ ವಜ್ರಾಯುಧದಿಂದ ಆ ಕಪಾಲಾಭರಣನನ್ನು ಕೊಲ್ಲಲು ಮುನ್ನುಗ್ಗಿ ಬಂದನು. ಬಳಿಕ ಪಾಕಶಾಸನನಾದ ಆ ಮಹೇಂದ್ರನು ಕುಪಿತನಾಗಿ ವಜ್ರಾಯುಧದಿಂದ ಒಂದೇ ಏಟಿಗೆ ಕಪಾಲಾಭರಣನನ್ನು ರಥ, ತುರಗ, ಧ್ವಜ, ಧನಸ್ಸು, ಬಾಣ, ಬತ್ತಳಿಕೆಗಳು, ಕವಚಗಳೊಂದಿಗೆ ನುಚ್ಚುನುರಿಯಾಗಿ ಕತ್ತರಿಸಿದನು.

೩೯–೪೦. ಪರಾಕ್ರಮಿಯಾದ ಕಪಾಲಾಭರಣನು ಮಡಿಯಲು ಅವನಿಂದ ದುಃಖಪಡುತ್ತಿದ್ದ ಲೋಕಕ್ಕೆಲ್ಲ ಬಹಳ ಸಂತೋಷವುಂಟಾಯಿತು. ಆ ಬಳಿಕ ಲಾದರೊ ಆತನ ವಧೆಯಿಂದುಂಟಾದ ಭಯಂಕರವಾದ ಬ್ರಹ್ಮಹತ್ಯೆಯು ದಶ ದಿಕ್ಕುಗಳೂ ಪ್ರತಿಧ್ವನಿ ಮಾಡುವಂತೆ ಗರ್ಜಿಸುತ್ತಾ ಇಂದ್ರನನ್ನಟ್ಟಬಂದಿತು.

೪೧. ಋಷಿಗಳು ಕೇಳುತ್ತಾರೆ:—"ಎಲೈ ಸೂತಮಹರ್ಷಿಯೇ! ಕಪಾಲಾಭರಣನು ರಾಕ್ಷಸನು; ಬ್ರಾಹ್ಮಣನಲ್ಲ. ಅವನ ವಧೆಯಿಂದ ಬ್ರಹ್ಮಹತ್ಯೆಯು ಇಂದ್ರನನ್ನು ಹಿಂಬಾಲಿಸಿದ ಬಗೆ ಹೇಗೆ?"

೪೨. ಸೂತನು ಹೇಳುತ್ತಾನೆ:—ಎಲೈ ಮುನಿಶ್ರೇಷ್ಠರೇ! ಅತ್ಯಾಶ್ಚರ್ಯಕರವೂ, ಬಹು ರಹಸ್ಯವೂ ಆದ ಈ ವೃತ್ತಾಂತವನ್ನು ಹೇಳುವೆನು. ಮನಸ್ಸಮಾಧಾನದಿಂದ ಕೇಳಿರಿ.

ಪುರಾ ವಿಂಧ್ಯಪ್ರದೇಶೇಷು ತ್ರಿವಕ್ರೋ ನಾಮ ರಾಕ್ಷಸಃ ॥ ೪೩ ॥
ತಸ್ಯ ಭಾರ್ಯಾ ಗುಣೋಪೇತಾ ಸೌಂದರ್ಯಗುಣಶಾಲಿನೀ ।
ಸುಶೀಲಾ ನಾಮ ಸುಶ್ರೋಣೀ ಸರ್ವಲಕ್ಷಣಲಕ್ಷಿತಾ ॥ ೪೪ ॥
ಸಾ ಕದಾಚಿನ್ಮನೋಜ್ಞಾಂಗೀ ಸುವೇಷಾ ಚಾರುಹಾಸಿನೀ ।
ವಿಂಧ್ಯಪಾದವನೋದ್ದೇಶೇ ವಿಚಚಾರ ವಿಲಾಸಿನೀ ॥ ೪೫ ॥
ತಸ್ಮಿನ್ವನೇ ಶುಚಿರ್ನಾಮ ವರ್ತತೇ ಸ್ಮ ಮಹಾಮುನಿಃ ।
ತಪಃಸಮಾಧಿಸಂಯುಕ್ತೋ ವೇದಾಽಧ್ಯಯನತತ್ಪರಃ ॥ ೪೬ ॥
ತಸ್ಯಾಶ್ರಮಸಮೀಪಂ ತು ಸಾ ಯಯೌ ವರವರ್ಣಿನೀ ।
ತಾಂ ದೃಷ್ಟ್ವಾ ಸ ಮುನಿರ್ಧೈರ್ಯಂ ಮುಮೋಚಾಽನಂಗಪೀಡಿತಃ ।
ತಾಮಾಸಾದ್ಯ ವರಾರೋಹಾಂ ಬಭಾಷೇ ಮುನಿಸತ್ತಮಃ ॥ ೪೭ ॥

ಶುಚಿರುವಾಚ :—

ಲಲನೇ ಸ್ವಾಗತಂ ತೇಽಸ್ತು ಕಸ್ಯ ಭಾರ್ಯಾ ಶುಚಿಸ್ಮಿತೇ ॥ ೪೮ ॥
ಕಿಮಾಗಮನಕೃತ್ಯಂ ತೇ ವನೇಽಸ್ಮಿನ್ನತಿಭೀಷಣೇ ।
ಶ್ರಾಂತಾಸಿ ತ್ವಂ ವರಾರೋಹೇ ವಸಾಽಸ್ಮಿನ್ನುಟಜೇ ಮಮ ॥ ೪೯ ॥

---

೪೩–೪೪. ಹಿಂದೆ ವಿಂಧ್ಯಪರ್ವತದ ಪ್ರಾಂತದಲ್ಲಿ ತ್ರಿವಕ್ರನೆಂಬ ರಾಕ್ಷಸನಿದ್ದನು. ಆತನಿಗೆ ಸರ್ವಗುಣಸಂಪನ್ನಳೂ, ಸೌಂದರ್ಯವತಿಯೂ, ಸುಲಕ್ಷಣೆಯೂ, ಸುಶ್ರೋಣಿಯೂ ಆದ ಸುಶೀಲೆಯೆಂಬ ಮಡದಿಯಿದ್ದಳು.

೪೫. ಒಮ್ಮೆ ಸುವೇಷೆಯೂ, ಮನೋಹರವಾದ ಕಿರುನಗೆಯುಳ್ಳವಳೂ, ವಿಲಾಸವತಿಯೂ ಆದ ಆ ಮನೋಹರಾಂಗಿಯು ವಿಂಧ್ಯಪರ್ವತದ ತಪ್ಪಲಿನ ವನದಲ್ಲಿ ಸಂಚರಿಸುತ್ತಿದ್ದಳು.

೪೬. ಆ ವನದಲ್ಲಿ ವೇದಾಧ್ಯಯನನಿರತನಾದ ಶುಚಿ ಎಂಬ ಮಹಾಮುನಿಯು ತಪಸ್ಸಮಾಧಿಮಗ್ನನಾಗಿದ್ದನು.

೪೭. ಆ ವರವರ್ಣಿನಿಯು ಆ ವನದಲ್ಲಿ ಸಂಚರಿಸುತ್ತಲೇ ಆತನ ಆಶ್ರಮವನ್ನು ಪ್ರವೇಶಿಸಿದಳು. ಆ ಮುನಿಯು ಅವಳನ್ನು ಕಂಡು ಮೋಹಗೊಂಡು ಧೈರ್ಯಚ್ಯುತನಾಗಿ ಅವಳ ಬಳಿಗೆ ಬಂದು ಹೀಗೆಂದನು:—

೪೮. ಶುಚಿಯು ಹೇಳುತ್ತಾನೆ:—“ಎಲೌ ಲಲನೆಯೇ! ನಿನಗೆ ಸ್ವಾಗತವು. ಎಲೆ ಶುಚಿಸ್ಮಿತೇ! ನೀನಾರಮಡದಿ?

೪೯. ಭಯಂಕರವಾದ ಈ ಕಾಡಿಗೆ ಬರಲು ಕಾರಣವೇನು? ಎಲೌ ವರಾರೋಹೆಯೇ! ನೀನು ತುಂಬ ಬಳಲಿರುವೆ. ಈ ನನ್ನ ಪರ್ಣಶಾಲೆಯಲ್ಲಿ ವಿಶ್ರಮಿಸಿಕೋ.”

ತಥೋಕ್ತಾ ಸಾ ತು ಸುಶ್ರೋಣೀ ತಂ ಮುನಿಂ ಪ್ರತ್ಯಭಾಷತ ।
ತ್ರಿವಕ್ರರಕ್ಷೋಭಾರ್ಯಾಽಹಂ ಸುಶೀಲಾ ನಾಮತೋ ಮುನೇ ॥ ೫೦ ॥
ಪುಷ್ಪಾಽಪಚಯಕಾಮೇನ ವನಮೇತತ್ಸಮಾಗತಾ ।
ಅಪುತ್ರಾಽಹಂ ಮುನೇ ಭರ್ತ್ರಾ ಪ್ರೇರಿತಾ ಪುತ್ರಮಿಚ್ಛತಾ ॥ ೫೧ ॥
ಶುಚಿಂ ಮುನಿಂ ಸಮಾರಾಧ್ಯ ತಸ್ಮಾತ್ಪುತ್ರಮವಾಪ್ನುಹಿ ।
ಇತಿ ಪ್ರತಿಸಮಾದಿಷ್ಟಾ ಪತಿನಾ ತ್ವಾಂ ಸಮಾಗತಾ ॥ ೫೨ ॥
ಪುತ್ರಮುತ್ಪಾದಯ ತ್ವಂ ಮೇ ಕೃಪಾಂ ಕುರು ಮುನೇ ಮಯಿ ।
ಏವಮುಕ್ತಃ ಸ ತು ಶುಚಿಃ ಸುಶೀಲಾಂ ತಾಮಭಾಷತ ॥ ೫೩ ॥

ಶುಚಿರುವಾಚ :—

ತ್ವಾಂ ದೃಷ್ಟ್ವಾ ಮಮ ಚ ಪ್ರೀತಿಃ ಸುಶೀಲೇ ವಿದ್ಯತೇಽಧುನಾ ।
ಮನೋರಥಮಹಾಂಭೋಧಿಂ ತ್ವಮಾಪೂರಯ ಮಾಮಕಂ ॥ ೫೪ ॥
ಇತ್ಯುಕ್ತ್ವಾ ಸ ಮುನಿಸ್ತತ್ರ ತಯಾ ರೇಮೇ ದಿನತ್ರಯಂ ।
ತಾಮುವಾಚ ಮುನಿಃ ಪ್ರೀತಃ ಸುಶೀಲಾಂ ಸುಂದರಾಕೃತಿಂ ॥ ೫೫ ॥
ತವೋದರೇ ಮಹಾವೀರ್ಯಃ ಕಪಾಲಾಭರಣಾಽಭಿಧಃ ।
ಭವಿಷ್ಯತಿ ಚಿರಂ ರಾಜ್ಯಂ ಪಾಲಯಿಷ್ಯತಿ ಮೇದಿನೀಂ ॥ ೫೬ ॥
ಸಹಸ್ರಂ ವತ್ಸರಾನ್ಸತ್ಯಸ್ತಪಸಾ ಪ್ರೀಣಯನ್ನಿಧಿಂ ।
ಪುರಂದರಂ ವಿನಾಽನ್ಯೇಭ್ಯೋ ದೇವೇಭ್ಯೋ ನಾಽಸ್ಯ ವಧ್ಯತಾ ॥ ೫೭ ॥

---

೫೦. ಇಂತು ಹೇಳಲ್ಪಟ್ಟ ಆ ಸುಶ್ರೋಣಿಯು ಆ ಮುನಿಯನ್ನು ಕುರಿತು "ಮುನಿಯೇ! ನಾನು ತ್ರಿವಕ್ರರಾಕ್ಷಸನ ಮಡದಿ. ನನ್ನ ಹೆಸರು ಸುಶೀಲೆ.

೫೧. ಹೂವನ್ನು ಬಿಡಿಸಬಯಸಿ ಈ ವನಕ್ಕೆ ಬಂದೆನು. ಎಲೈ ಮುನಿಯೇ! ಅಪುತ್ರಳಾದ ನಾನು ಪುತ್ರಾರ್ಥಿಯಾದ ನನ್ನ ಪತಿಯ ಪ್ರೇರಣೆಯಿಂದ ತಮ್ಮನ್ನು ಸೇವಿಸಿ ಪುತ್ರನನ್ನು ಪಡೆಯಲು ನಿಮ್ಮ ಬಳಿಗೆ ಬಂದಿರುವೆನು.

೫೨–೫೩. ನನ್ನಲ್ಲಿ ದಯೆತೋರಿ ಪುತ್ರನನ್ನನುಗ್ರಹಿಸು!" ಎಂದು ಬೇಡಿದಳು. ಇಂತು ಬೇಡಿದ ಆ ಸುಶೀಲೆಯನ್ನು ಕುರಿತು ಆ ಮುನಿಯು ಹೇಳುತ್ತಾನೆ:—

೫೪. ಶುಚಿಯು ಹೇಳುತ್ತಾನೆ:—"ಎಲೆ ಸುಶೀಲೆ! ನಿನ್ನನ್ನು ಕಂಡು ನನಗೂ ಅನುರಾಗವುಂಟಾಗಿರುವುದು. ನನ್ನ ಇಷ್ಟಾರ್ಥಸುಧಾಸಮುದ್ರವನ್ನು ನೀನು ಪೂರ್ತಿಮಾಡು."

೫೫–೫೮. ಹೀಗೆ ನುಡಿದು, ಆ ಮುನಿಯು ಅವಳೊಂದಿಗೆ ಮೂರುದಿನಗಳು ಕ್ರೀಡಿಸಿದನು. ಬಳಿಕ ತೃಪ್ತನಾದ ಶುಚಿಯು ಸುಂದರಿಯಾದ ಆ ಸುಶೀಲೆಯನ್ನು ಕುರಿತು, "ಸುಶೀಲೆ! ನಿನ್ನ ಉದರದಲ್ಲಿ ಮಹಾಪರಾಕ್ರಮಿಯೋರ್ವನು

ಈದೃಶಸ್ತೇ ಸುತೋ ಭೂಯಾದಿಂದ್ರತುಲ್ಯಪರಾಕ್ರಮಃ ।
ಇತ್ಯುಕ್ತ್ವಾ ಸ ಮುನಿರ್ನಾರೀಂ ಕಾಶೀಂ ಶಿವಪುರೀಂ ಯಯೌ ॥ ೫೮ ॥
ಸುಶೀಲಾ ಸಾಽಪಿ ಸುಷುವೇ ಕಪಾಲಾಭರಣಂ ಸುತಂ ।
ತಂ ಜಘಾನ ಮೃಧೇ ಶಕ್ರೋ ವಜ್ರೇಣ ಮುನಿಪುಂಗವಾಃ ॥ ೫೯ ॥
ಶುಚೇರ್ಬೀಜಸಮುದ್ಭೂತಂ ತಮಿಂದ್ರೋ ನ್ಯವಧೀದ್ಯತಃ ।
ತತಃ ಪುರಂದರಃ ಶಕ್ರೋ ಜಗೃಹೇ ಬ್ರಹ್ಮಹತ್ಯಯಾ ॥ ೬೦ ॥
ಧಾವತಿ ಸ್ಮ ತದಾ ಶಕ್ರಃ ಸರ್ವಾನ್ಲ್ಲೋಕಾನ್ಭಯಾಕುಲಃ ।
ಧಾವಂತಮನುಧಾವಂತೀ ಬ್ರಹ್ಮಹತ್ಯಾ ತಮನ್ವಗಾತ್ ॥ ೬೧ ॥
ಅನುದ್ರುತೋ ಹಿ ವಿಪ್ರೇಂದ್ರಾಃ ಶಕ್ರೋಽಯಂ ಬ್ರಹ್ಮಹತ್ಯಯಾ ।
ಪಿತಾಮಹಸದಃ ಪ್ರಾಪ ಸಂತಪ್ತಹೃದಯೋ ಭೃಶಂ ॥ ೬೨ ॥
ನ್ಯವೇದಯದ್ಬ್ರಹ್ಮಹತ್ಯಾಂ ಬ್ರಹ್ಮಣೇ ಸ ಪುರಂದರಃ ।
ಭಗವನ್ ಲೋಕನಾಥೇಯಂ ಬ್ರಹ್ಮಹತ್ಯಾಽತಿಭೀಷಣಾ ॥ ೬೩ ॥
ಬಾಧತೇ ಮಾಂ ಪ್ರಜಾನಾಥ ತಸ್ಯಾ ನಾಶಂ ಬ್ರವೀಹಿ ಮೇ ।
ಪುರಂದರೇಣೈವಮುಕ್ತೋ ಬ್ರಹ್ಮಾ ಪ್ರಾಹ ದಿವಸ್ಪತಿಂ ॥ ೬೪ ॥

---

ಜನಿಸಿ ಕಪಾಲಾಭರಣನೆಂಬ ಹೆಸರನ್ನು ಪಡೆಯುವನು. ಅವನು ಬಹುಕಾಲ ರಾಜ್ಯವನ್ನು ಪಾಲಿಸುವನು. ಮತ್ತು ಸಾವಿರವರ್ಷಗಳಕಾಲ ತಪಸ್ಸನ್ನುಮಾಡಿ ಬ್ರಹ್ಮನನ್ನು ಸಂತೋಷಗೊಳಿಸಿ ಇಂದ್ರನನ್ನುಳಿದು ಮತ್ತಾರಿಂದಲೂ ಸಾವಿಲ್ಲ ದಂತೆ ಆತನಿಂದ ವರವನ್ನು ಪಡೆದು ಇಂದ್ರನಿಗೆ ಸಮವಾಗಿ ಬಾಳುವನು" ಎಂದು ಹೇಳಿ ಶಿವಪುರಿಯಾದ ಕಾಶೀಪಟ್ಟಣಕ್ಕೆ ತೆರಳಿದನು.

೫೯. ಬಳಿಕ ಸುಶೀಲೆಯು ಕಾಲಕ್ರಮದಲ್ಲಿ ಕಪಾಲಾಭರಣನೆಂಬ ಮಗ ನನ್ನು ಹಡೆದಳು. ಇಂದ್ರನು ಆತನನ್ನು ಯುದ್ಧದಲ್ಲಿ ತನ್ನ ವಜ್ರಾಯುಧ ದಿಂದ ಸಂಹರಿಸಿದನು.

೬೦. ಎಲೈ ದ್ವಿಜರೇ! ಮುನಿಯಾದ ಶುಚಿಯ ಬೀಜೋತ್ಪನ್ನನಾದ ಅವನನ್ನು ಕೊಂದುದರಿಂದ ಬ್ರಹ್ಮಹತ್ಯೆಯು ಇಂದ್ರನನ್ನು ಕಾಡತೊಡಗಿತು.

೬೧. ಇಂದ್ರನು ಭಯಾಕುಲನಾಗಿ ಮೂರು ಲೋಕಗಳಲ್ಲೆಲ್ಲ ಅಲೆದನು. ಬ್ರಹ್ಮಹತ್ಯೆಯು ಆತನನ್ನು ಬಿಡದೆಯೇ ಬೆನ್ನಟ್ಟಿ ಓಡಿತು.

೬೨-೬೪. ಇದರಿಂದ ಬಹಳವಾಗಿ ಸಂತಾಪಗೊಂಡ ಇಂದ್ರನು ಬ್ರಹ್ಮನ ಸಭೆಗೆ ಹೋಗಿ, "ಭಗವನ್! ಭೀಷಣವಾದ ಈ ಬ್ರಹ್ಮಹತ್ಯೆಯು ನನ್ನನ್ನು ಬಹಳ ಪೀಡಿಸುತ್ತಿದೆ. ಓ ಲೋಕನಾಥ! ಇದರ ವಿಮೋಚನೆಯ ಬಗೆಯನ್ನು ಅರುಹು" ಎಂದು ಮೊರೆಯಿಟ್ಟನು.

ಬ್ರಹ್ಮೋವಾಚ :—

ಸೀತಾಕುಂಡಂ ಪ್ರಯಾಹೀಂದ್ರ ಗಂಧಮಾದನಪರ್ವತೇ ।
ಸೀತಾಕುಂಡಸ್ಯ ತೀರೇ ತ್ವಂ ಇಷ್ಟ್ವಾ ಯಾಗೈಃ ಸದಾಶಿವಂ ॥ ೬೫ ॥
ತಸ್ಮಿನ್ಸರಸಿ ಚ ಸ್ನಾಯಾಃ ಸರ್ವಪಾಪಹರೇ ಶುಭೇ ।
ತತಃ ಪೂತೋ ಭವೇಶ್ಶಕ್ರ ಬ್ರಹ್ಮಹತ್ಯಾವಿಮೋಚಿತಃ ॥ ೬೬ ॥
ದೇವಲೋಕಂ ಪುನರ್ಯಾಯಾಃ ಸರ್ವದುಃಖವಿವರ್ಜಿತಃ ।
ಸರ್ವಪಾಪಹರಂ ಪುಣ್ಯಂ ಸೀತಾಕುಂಡಂ ವಿಮುಕ್ತಿದಂ ॥ ೬೭ ॥
ಮಹಾಪಾತಕಸಂಘಾನಾಂ ನಾಶಕಂ ಪರಮಾಮೃತಂ ।
ಸರ್ವದುಃಖಪ್ರಶಮನಂ ಸರ್ವದಾರಿದ್ರ್ಯನಾಶನಂ ॥ ೬೮ ॥
ಧನಧಾನ್ಯಪ್ರದಂ ಶುದ್ಧಂ ವೈಕುಂಠಾದಿಪದಪ್ರದಂ ।
ತಸ್ಮಾತ್ತತ್ರ ಕುರುಷ್ವೇಷ್ಟಿಂ ಸೀತಾಸರಸಿ ವೃತ್ರಹನ್ ॥ ೬೯ ॥
ಇತ್ಯುಕ್ತಃ ಸುರರಾಜೋಽಸೌ ಪ್ರಯಯೌ ಗಂಧಮಾದನಂ ।
ಪ್ರಾಪ್ಯ ಸೀತಾಸರೋ ವಿಪ್ರಾಃ ಸ್ನಾತ್ವೇಷ್ಟ್ವಾ ಚ ತದಂತಿಕೇ ॥ ೭೦ ॥
ಪ್ರಯಯೌ ಸ್ವಪುರೀಂ ಭೂಯೋ ಬ್ರಹ್ಮಹತ್ಯಾವಿಮೋಚಿತಃ ।
ಏವಂಪ್ರಭಾವಂ ತತ್ತೀರ್ಥಂ ಸೀತಾಯಾಃ ಕುಂಡಮುತ್ತಮಂ ॥ ೭೧ ॥

---

೬೫–೬೬. ಬ್ರಹ್ಮದೇವನು ದಿವಸ್ಪತಿಯಾದ ಆ ಮಹೇಂದ್ರನನ್ನು ಕುರಿತು "ಅಯ್ಯಾ ಇಂದ್ರನೇ! ಗಂಧಮಾದನಪರ್ವತದ ಮೇಲಿರುವ ಸೀತಾಕುಂಡವೆಂಬ ತೀರ್ಥಕ್ಕೆ ಹೋಗಿ ಅಲ್ಲಿ ಯಾಗಗಳಿಂದ ಪರಮೇಶ್ವರನನ್ನು ಸಂತೋಷಗೊಳಿಸು. ಸರ್ವಪಾಪಗಳನ್ನೂ ನಾಶಪಡಿಸುವ ಆ ಕುಂಡದಲ್ಲಿ ಸ್ನಾನಮಾಡು. ಅದರಿಂದ ಬ್ರಹ್ಮಹತ್ಯೆಯು ತೊಲಗುವುದು. ನೀನೂ ಶುದ್ಧನಾಗುವೆ.

೬೭–೬೯. ಮಹೇಂದ್ರ! ಹೀಗೆ ಮಾಡಿದರೆ ನೀನು ಸಮಸ್ತ ದುಃಖಗಳಿಂದಲೂ ಬಿಡುಗಡೆ ಹೊಂದಿ ಮತ್ತೆ ದೇವರಾಜ್ಯವನ್ನು ಹೊಂದುವೆ. ಸೀತಾಕುಂಡವು ಸಕಲ ಪಾತಕಗಳನ್ನೂ, ಸಕಲ ದುಃಖಗಳನ್ನೂ ತೊಲಗಿಸುವಂತಹುದು; ಅಮೃತಮಯವಾದುದು; ಮುಕ್ತಿಯನ್ನು ನೀಡುವುದು; ದಾರಿದ್ರ್ಯವನ್ನು ನೀಗುವುದು; ಧನಧಾನ್ಯಗಳನ್ನು ಕೊಡುವಂತಹುದು; ಪರಿಶುದ್ಧವಾದುದು; ವೈಕುಂಠಾದಿ ಪುಣ್ಯಲೋಕಗಳನ್ನು ಒದಗಿಸುವುದು. ಎಲೈ ವೃತ್ರಘಾತಿಯಾದ ಇಂದ್ರನೇ! ಆದುದರಿಂದ ನೀನಲ್ಲಿ ಯಾಗವನ್ನು ಮಾಡು."

೭೦–೭೧. ಎಂದುತ್ತರವೀಯಲು ಸುರರಾಜನು ಗಂಧಮಾದನಕ್ಕೆ ಹೋಗಿ ಸೀತಾಕುಂಡದಲ್ಲಿ ಸ್ನಾನಮಾಡಿ ಅದರ ಬಳಿ ಯಾಗಗಳನ್ನು ಮಾಡಿ ಬಳಿಕ ಬ್ರಹ್ಮಹತ್ಯೆಯಿಂದ ಮುಕ್ತನಾಗಿ ನಿಜಪುರಕ್ಕೆ ತೆರಳಿದನು. ಆಯ್ಯಾ ಬ್ರಾಹ್ಮಣರುಗಳಿರಾ! ಸೀತಾಕುಂಡವು ಇಂತಹ ಮಹಿಮೆಯುಳ್ಳುದು.

ರಾಘವಪ್ರತ್ಯಯಾರ್ಥಂ ಹಿ ಪ್ರವಿಶ್ಯ ಹುತವಾಹನಂ ।
ಸನ್ನಿಧೌ ಸರ್ವದೇವಾನಾಂ ಮೈಥಿಲೀ ಜನಕಾತ್ಮಜಾ ॥ ೭೨ ॥
ವಿನಿರ್ಗತಾ ಪುನರ್ವಹ್ನೇಃ ಸ್ಥಿತಾ ಸರ್ವಾಂಗಶೋಭನಾ ।
ನಿರ್ಮಮೇ ಲೋಕರಕ್ಷಾರ್ಥಂ ಸ್ವನಾಮ್ನಾ ತೀರ್ಥಮುತ್ತಮಂ ॥ ೭೩ ॥
ತತ್ರ ಸಸ್ನೌ ಸ್ವಯಂ ಸೀತಾ ತೇನ ಸೀತಾಸರಃ ಸ್ಮೃತಂ ।
ತತ್ರ ಯೋ ಮಾನವಃ ಸ್ನಾತಿ ಸರ್ವಾನ್ಕಾಮಾನ್ಸ ಲಭೇತ ಸಃ ॥ ೭೪ ॥

ತಸ್ಮಿನ್ನುಪಸ್ಪೃಶ್ಯ ನರೋ ದ್ವಿಜೇಂದ್ರಾಃ
ದತ್ವಾ ಚ ದಾನಾನಿ ಪೃಥಗ್ವಿಧಾನಿ ।
ಕೃತ್ವಾ ಚ ಯಜ್ಞಾನ್ ಬಹುದಕ್ಷಿಣಾಭಿಃ
ಲೋಕಂ ಪ್ರಯಾಯಾತ್ಪರಮೇಶ್ವರಸ್ಯ ॥ ೭೫ ॥
ಯುಷ್ಮಾಕಮೇವಂ ಪ್ರಥಿತಂ ಮುನೀಂದ್ರಾಃ
ಸೀತಾಸರೋವೈಭವಮೇತದುಕ್ತಂ ।
ಶೃಣ್ವನ್ಪಠನ್ವೈ ತದಿಹೈವ ಭೋಗಾನ್
ಭುಕ್ತ್ವಾ ಪರತ್ರಾಽಪಿ ಸುಖಂ ಲಭೇತ ॥ ೭೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಸೀತಾಸರಃಪ್ರಶಂಸನಂ—ಇಂದ್ರಸ್ಯ ಬ್ರಹ್ಮಹತ್ಯಾವಿಮೋಕ್ಷಣಂ" ನಾಮೈಕಾದಶೋಽಧ್ಯಾಯಃ

---

೭೨—೭೪. ಸೀತೆಯು ಶ್ರೀರಾಮಚಂದ್ರನಿಗೆ ನಂಬಿಕೆಯನ್ನುಂಟುಮಾಡುವುದಕ್ಕಾಗಿ ಅಗ್ನಿಯನ್ನು ಪ್ರವೇಶಿಸಿ ಸರ್ವಾಂಗಶೋಭಿತಳಾಗಿ ಮತ್ತೆ ಹೊರಗೆ ಬಂದು, ಲೋಕರಕ್ಷಾರ್ಥವಾಗಿ ತನ್ನ ಹೆಸರಿನಿಂದೊಂದು ಸರೋವರವನ್ನೇರ್ಪಡಿಸಿ ಮೊದಲು ತಾನು ಸ್ನಾನಮಾಡಿದಳು. ಆದುದರಿಂದ ಅದು ಸೀತಾಸರೋವರವೆಂದು ಖ್ಯಾತಿಗೊಂಡಿತು. ಅದರಲ್ಲಿ ಸ್ನಾನಮಾಡುವವನು ಸಮಸ್ತ ಇಷ್ಟಾರ್ಥಗಳನ್ನೂ ಹೊಂದುವನು.

೭೫. ಎಲೈ ದ್ವಿಜಶ್ರೇಷ್ಠರೇ! ಅದರಲ್ಲಿ ಆಚಮನ ಮಾಡಿ, ಬಹುವಿಧ ದಾನಗಳನ್ನು ಮಾಡಿ, ಬಹು ದಕ್ಷಿಣೆಗಳಿಂದ ಯಜ್ಞಗಳನ್ನು ಮಾಡುವ ನರನು ಪರಮೇಶ್ವರನ ಲೋಕವನ್ನೇ ಹೊಂದುತ್ತಾನೆ.

೭೬. ಓ ಮುನೀಂದ್ರರೆ! ಇಂತು ನಿಮಗೆ ಹೇಳಿದ ಈ ಸೀತಾಸರೋವರದ ವೈಭವವನ್ನು ಕೇಳುವವನೂ, ಓದುವವನೂ ಈ ಲೋಕದಲ್ಲಿ ಸಕಲ ಭೋಗಗಳನ್ನೂ ಅನುಭವಿಸಿ, ಪರಲೋಕದಲ್ಲಿಯೂ ಸುಖಪಡುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಸೀತಾಸರೋವರಪ್ರಶಂಸೆ—ಇಂದ್ರನ ಬ್ರಹ್ಮಹತ್ಯಾವಿಮೋಕ್ಷಣ"ವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾದಶೋಽಧ್ಯಾಯಃ

### ಮಂಗಲತೀರ್ಥಪ್ರಶಂಸನಂ—ಮನೋಜವಾಽಲಕ್ಷ್ಮೀವಿನಾಶತೀರ್ಥವರ್ಣನಂ

ಶ್ರೀ ಸೂತ ಉವಾಚ :—

ಸೀತಾಕುಂಡೇ ಮಹಾಪುಣ್ಯೇ ನರಃ ಸ್ನಾತ್ವಾ ದ್ವಿಜೋತ್ತಮಾಃ ।
ತತಸ್ತು ಮಂಗಲಂ ತೀರ್ಥಂ ಅಭಿಗಚ್ಛೇತ್ಸಮಾಹಿತಃ ॥ ೧ ॥
ಸನ್ನಿಧತ್ತೇ ಸದಾ ಯತ್ರ ಕಮಲಾ ವಿಷ್ಣುವಲ್ಲಭಾ ।
ಅಲಕ್ಷ್ಮೀಪರಿಹಾರಾಯ ಯಸ್ಮಿನ್ಸರಸಿ ವೈ ಸುರಾಃ ॥ ೨ ॥
ಶತಕ್ರತುಮುಖಾಃ ಸರ್ವೇ ಸಮಾಗಚ್ಛಂತಿ ನಿತ್ಯಶಃ ।
ತದೇತತ್ತೀರ್ಥಮುದ್ದಿಶ್ಯ ಋಷಯೋ ಲೋಕಪಾವನಂ ।
ಇತಿಹಾಸಂ ಪ್ರವಕ್ಷ್ಯಾಮಿ ಪುಣ್ಯಂ ಪಾಪವಿನಾಶನಂ ॥ ೩ ॥
ಪುರಾ ಮನೋಜವೋ ನಾಮ ರಾಜಾ ಸೋಮಕುಲೋದ್ಭವಃ ॥ ೪ ॥
ಪಾಲಯಾಮಾಸ ಧರ್ಮೇಣ ಧರಾಂ ಸಾಗರಮೇಖಲಾಂ ।
ಅಯಷ್ಟ ಸ ಸುರಾನ್ ಯಜ್ಞೈರ್ಬ್ರಾಹ್ಮಣಾನನ್ನಸಂಚಯೈಃ ॥ ೫ ॥
ತರ್ಪಯಾಮಾಸ ಕವ್ಯೇನ ಪ್ರತ್ಯಬ್ದಂ ಪಿತೃದೇವತಾಃ ।
ತ್ರಯೀಮಧ್ಯೈಷ್ಟ ಸತತಮುಪಾಶೀಚ್ಛಾಸ್ತ್ರಮರ್ಥವತ್ ॥ ೬ ॥

---

## ಕನ್ನಡದ ಅನುವಾದ

### ಮಂಗಲತೀರ್ಥಪ್ರಶಂಸೆ—ಮನೋಜವಾಲಕ್ಷ್ಮೀವಿನಾಶತೀರ್ಥವರ್ಣನ

೧. ಸೂತನು ಹೇಳುತ್ತಾನೆ:—ಅಯ್ಯಾ ದ್ವಿಜರೇ ! ಮನುಜನು ಮಹಾ ಪುಣ್ಯಪ್ರದವಾದ ಈ ಸೀತಾಸರೋವರದಲ್ಲಿ ಸ್ನಾನಮಾಡಿದ ಬಳಿಕ, ಸಮಾಹಿತ ಚಿತ್ತನಾಗಿ ಮಂಗಳತೀರ್ಥಕ್ಕೆ ಹೋಗಬೇಕು.

೨-೩. ಯಾವ ಸರೋವರದಲ್ಲಿ ಲಕ್ಷ್ಮೀದೇವಿಯು ಯಾವಾಗಲೂ ವಾಸ ಮಾಡುತ್ತಾಳೆಯೊ, ಯಾವ ತೀರ್ಥದಲ್ಲಿ ಇಂದ್ರಾದಿ ದೇವತೆಗಳೂ, ಋಷಿಗಳೂ ಅಲಕ್ಷ್ಮೀಪರಿಹಾರಕ್ಕಾಗಿ ಪ್ರತಿದಿನವೂ ಬರುತ್ತಾರೆಯೋ ಅಂತಹ ಪವಿತ್ರ ವಾದ ಮತ್ತು ಪಾಪಾಪನೋದಕವಾದ ಆ ತೀರ್ಥದ ಇತಿಹಾಸವನ್ನು ನಿಮಗೆ ಅರುಹುವೆನು ; ಕೇಳಿರಿ.

೪-೬. ಹಿಂದೆ ಸೋಮವಂಶದಲ್ಲಿ ಹುಟ್ಟಿದ ಮನೋಜವನೆಂಬ ರಾಜನು ಧರ್ಮದಿಂದ ರಾಜ್ಯವಾಳುತ್ತಿದ್ದನು. ಅವನು ದೇವತೆಗಳನ್ನು ಕುರಿತು ಯಜ್ಞ ಗಳನ್ನು ಮಾಡಿದನು. ಅನ್ನರಾಶಿಗಳಿಂದ ಬ್ರಾಹ್ಮಣರನ್ನು ತೃಪ್ತಿಗೊಳಿಸಿದನು. ಪ್ರತಿವರ್ಷವೂ ಕವ್ಯಗಳಿಂದ ಪಿತೃದೇವತೆಗಳನ್ನು ಸಂತುಷ್ಟರನ್ನಾಗಿ ಮಾಡಿದನು.

ನೃಜೇಷ್ಟ ಶತ್ರೂನ್ನ್ರಿಯೇರ್ಣಣ ಪ್ರಾಣಂಸೀದೀಶಕೇಶವೌ ।
ಅರಂಸ್ತ ನೀತಿಶಾಸ್ತ್ರೇಷು ತಥಾಽಪಾರೀನ್ಮಹಾಮನೂನ್ ॥ ೭ ॥
ಏವಂ ಸ ಧರ್ಮತೋ ರಾಜಾ ಪಾಲಯಾಮಾಸ ಮೇದಿನೀಂ ।
ರಕ್ಷತಸ್ತಸ್ಯ ರಾಜ್ಞೋಽಭೂದ್ರಾಜ್ಯಂ ನಿಹತಕಂಟಕಂ ॥ ೮ ॥
ಅಹಂಕಾರೋಽಭವತ್ತಸ್ಯ ಪುತ್ರಸಂಪದ್ವಿನಾಶನಃ ।
ಅಹಂಕಾರೋ ಭವೇದ್ಯತ್ರ ತತ್ರ ಲೋಭೋ ಮದಸ್ತಥಾ ॥ ೯ ॥
ಕಾಮಃ ಕ್ರೋಧಶ್ಚ ಹಿಂಸಾ ಚ ತಥಾಽಸೂಯಾ ವಿಮೋಹಿನೀ ।
ಭವಂತ್ಯೇತಾನಿ ವಿಪ್ರೇಂದ್ರಾಃ ಸಂಪದಾಂ ನಾಶಹೇತವಃ ॥ ೧೦ ॥
ಏತಾನಿ ಯತ್ರ ವಿದ್ಯಂತೇ ಪುರುಷೇ ಸ ವಿನಶ್ಯತಿ ।
ಕ್ಷಣೇನ ಪುತ್ರಪೌತ್ರೈಶ್ಚ ಸಾರ್ಧಂ ಚಾಽಖಿಲಸಂಪದಾ ॥ ೧೧ ॥
ಬಭೂವ ತಸ್ಯಾಽಸೂಯಾ ಚ ಜನವಿದ್ವೇಷಿಣೀ ತದಾ ।
ಅಸೂಯಾಕುಲಚಿತ್ತಸ್ಯ ವೃಥಾಽಹಂಕಾರಿಣಸ್ತಥಾ ॥ ೧೨ ॥
ಲುಬ್ಧಸ್ಯ ಕಾಮದುಷ್ಟಸ್ಯ ಮತಿರೇವಂ ಬಭೂವ ಹ ।
ವಿಪ್ರಗ್ರಾಮೇ ಕರಾದಾನಂ ಕರಿಷ್ಯಾಮೀತಿ ನಿಶ್ಚಿತಃ ॥ ೧೩ ॥

---

ಯಾವಾಗಲೂ ವೇದಾಧ್ಯಯನವನ್ನೂ, ಅರ್ಥದೊಂದಿಗೆ ಶಾಸ್ತ್ರಾಧ್ಯಾಯನ ವನ್ನೂ ಮಾಡಿದ್ದನು.

೭. ಪರಾಕ್ರಮದಿಂದ ಹಗೆಗಳನ್ನು ಗೆದ್ದಿದ್ದನು. ಶಿವಕೇಶವರಿಗೆ ಅತ್ಯಂತ ಪ್ರೀತಿಪಾತ್ರನಾಗಿದ್ದನು. ನೀತಿಶಾಸ್ತ್ರಗಳನ್ನು ಪ್ರೀತಿಸುತ್ತಿದ್ದನು. ಅಂತೆಯೇ ಮನ್ವಾದಿ ಧರ್ಮಶಾಸ್ತ್ರಗಳನ್ನು ಪಠಿಸುತ್ತಿದ್ದನು.

೮. ಆ ರಾಜನು ಈ ಬಗೆಯಾಗಿ ತನ್ನ ರಾಜ್ಯವನ್ನು ಧರ್ಮದಿಂದಾಳು ತ್ತಿದ್ದನು. ಆತನ ರಾಜ್ಯವು ನಿಷ್ಕಂಟಕವಾಗಿದ್ದಿತು.

೯–೧೦. ಹೀಗಿರಲು ಪುತ್ರೈಶ್ವರ್ಯನಾಶಕರವಾದಂತಹ ದುರಹಂಕಾರವು ಆತನನ್ನಾವರಿಸಿತು. ಎಲ್ಲಿ ದುರಹಂಕಾರವಿರುವುದೊ ಅಲ್ಲಿ ಮದಲೋಭಗಳೂ, ಕಾಮವೂ, ಹಿಂಸೆಯೂ, ವಿನೋದವೂ ವಾಸಮಾಡಿಕೊಂಡಿರುತ್ತವೆ. ವಿಪ್ರ ವರ್ಯರೇ! ಇವು ಸಂಪತ್ತಿನ ನಾಶಕ್ಕೆ ಕಾರಣಗಳು.

೧೧. ಇವು ಯಾವ ಮನುಷ್ಯನಲ್ಲಿರುವುವೊ ಅವನಿಗೆ ನಾಶವುಂಟಾಗು ವುದಲ್ಲದೆ, ಪುತ್ರಪೌತ್ರಾದಿಗಳೊಡನೆ ಅವನ ಐಶ್ವರ್ಯವೂ ತೊಲಗುವುದು.

೧೨–೧೩. ಅವನಿಗೆ ಜನರಲ್ಲಿ ದ್ವೇಷವನ್ನುಂಟುಮಾಡುವ ಅಸೂಯೆಯು ಪ್ರಬಲಿಸಿತು. ಹೀಗೆ ಅಸೂಯೆಯಿಂದ ತುಂಬಿದ, ನಿಷ್ಪ್ರಯೋಜನವಾಗಿ ಅಹಂಕಾರಪಡುವ, ಲೋಭಿಯೂ, ದುಷ್ಕಾಮಿಯೂ ಆದ ಆ ಮನೋಜವನಿಗೆ

ಅಕರೋಚ್ಚ ತಥಾ ರಾಜಾ ನಿಶ್ಚಿತ್ಯ ಮನಸಾ ತದಾ ।
ಧನಂ ಧಾನ್ಯಂ ಚ ವಿಪ್ರಾಣಾಂ ಜಹಾರ ಕಿಲ ಲೋಭತಃ ॥ ೧೪ ॥
ಶಿವವಿಷ್ಣ್ವಾದಿದೇವಾನಾಂ ವಿತ್ತಾನಾದತ್ತ ರಾಗತಃ ।
ಶಿವವಿಷ್ಣ್ವಾದಿದೇವಾನಾಂ ವಿಪ್ರಾಣಾಂ ಚ ಮಹಾತ್ಮನಾಂ ॥ ೧೫ ॥
ಕ್ಷೇತ್ರಾಣ್ಯಪಜಹಾರಾಽಯಮಹಂಕಾರವಿಮೂಢಧೀಃ ।
ಏವಮನ್ಯಾಯಯುಕ್ತಸ್ಯ ದೇವದ್ವಿಜವಿರೋಧಿನಃ ॥ ೧೬ ॥
ದುಷ್ಕರ್ಮಪರಿಪಾಕೇನ ಕ್ರೂರೇಣ ದ್ವಿಜಪುಂಗವಾಃ ।
ಪುರಂ ರುರೋಧ ಬಲವಾನ್ಪರದೇಶಾಧಿಪೋ ರಿಪುಃ ॥ ೧೭ ॥
ಗೋಲಭೋ ನಾಮ ವಿಪ್ರೇಂದ್ರಾಶ್ಚತುರಂಗಬಲೈರ್ಯುತಃ ।
ಷಣ್ಮಾಸಂ ಯುದ್ಧಮಭವದ್ಗೋಲಭೇನ ದುರಾತ್ಮನಃ ॥ ೧೮ ॥
ಮನೋಜವಸ್ಯ ನೃಪತೇರಹಂಕಾರರತಾತ್ಮನಃ ।
ತತಃ ಸಗೋಲಭೇನಾಜೌ ಜಿತೋ ರಾಜ್ಯಾತ್ಪರಿಚ್ಯುತಃ ॥ ೧೯ ॥
ವನಂ ಸ ಪುತ್ರದಾರಃ ಸನ್ಪ್ರಪೇದೇ ಸ ಮನೋಜವಃ ।
ಗೋಲಭಃ ಪಾಲಯನ್ನಾಸ್ತೇ ಮನೋಜವಪುರೇ ಚಿರಂ ।
ಚತುರಂಗಬಲೋಪೇತಸ್ತಮುದ್ವಾಸ್ಯ ರಣೇ ಬಲೀ ॥ ೨೦ ॥

---

ಬ್ರಾಹ್ಮಣಾಗ್ರಹಾರಗಳಲ್ಲಿ ಕಂದಾಯವನ್ನು ಪಡೆಯಬೇಕೆಂಬ ಸಂಕಲ್ಪವು ಹುಟ್ಟಿತು.

೧೪. ಆ ರಾಜನು ಅದರಂತೆಯೇ ನಿಶ್ಚಯಿಸಿ, ಲೋಭದಿಂದ ಬ್ರಾಹ್ಮಣರ ಧನಧಾನ್ಯಾದಿಗಳನ್ನೆಲ್ಲ ಅಪಹರಿಸಿದನು.

೧೫. ಅಹಂಕಾರದಿಂದ ಮತಿಹೀನನಾಗಿ ಆ ರಾಜನು ಶಿವವಿಷ್ಣ್ವಾಲಯಗಳ ದ್ರವ್ಯವನ್ನೂ, ದೇವಬ್ರಾಹ್ಮಣರ ದತ್ತಿಗಳನ್ನೂ ಕಸಿದುಕೊಂಡನು.

೧೬–೧೭. ಅನ್ಯಾಯಯುಕ್ತನೂ, ದೇವಬ್ರಾಹ್ಮಣದ್ವೇಷಿಯೂ ಆದ ಅವನ ದುಷ್ಕರ್ಮಪರಿಪಾಕದಿಂದ ಮಹಾ ಬಲಶಾಲಿಯಾದ ಪರದೇಶದ ಶತ್ರುವೊಬ್ಬನು ಆತನ ಪಟ್ಟಣವನ್ನು ಮುತ್ತಿದನು.

೧೮–೨೦. ಎಲೈ ವಿಪ್ರಶ್ರೇಷ್ಠರೇ! ಚತುರಂಗಬಲೋಪೇತನಾದ ಗೋಲಭನೆಂಬ ಆ ಶತ್ರುವಿನೊಡನೆ ದುರಾತ್ಮನೂ, ದುರಹಂಕಾರಿಯೂ ಆದ ಮನೋಜವ ರಾಜನಿಗೆ ಆರುತಿಂಗಳಕಾಲ ಯುದ್ಧವು ನಡೆಯಿತು. ಬಳಿಕ ಗೋಲಭನಿಂದ ಯುದ್ಧದಲ್ಲಿ ಜಿತನಾಗಿ ಮನೋಜವನು ರಾಜ್ಯವನ್ನು ಕಳೆದುಕೊಂಡು ದಾರಾಪುತ್ರರೊಡನೆ ಕಾಡಿಗೆ ಓಡಿಹೋದನು. ಬಲಶಾಲಿಯಾದ ಗೋಲಭನು ಚತುರಂಗಬಲದಿಂದ ಕೂಡಿ ಮನೋಜವನಪುರಿಯಲ್ಲಿ ಬಹುಕಾಲ ರಾಜ್ಯವಾಳುತ್ತಿದ್ದನು.

ಮನೋಜವೋಽಪಿ ವಿಪ್ರೇಂದ್ರಾಃ ಶೋಚನ್ ಸ್ತ್ರೀಪುತ್ರಸಂಯುತಃ ।
ಕ್ಷುತ್ಕ್ಷಾಮಃ ಪ್ರಸ್ಖಲನ್ ಶಶ್ವತ್ಪ್ರವಿವೇಶ ಮಹಾವನಂ ॥ ೨೧ ॥
ಝಿಲ್ಲಿಕಾಗಣಸಂಘುಷ್ಟಂ ವ್ಯಾಘ್ರಶ್ವಾಪದಭೀಷಣಂ ।
ವ್ಯಾಪ್ತದ್ವಿರದಚೀತ್ಕಾರಂ ವರಾಹಮಹಿಷಾಕುಲಂ ॥ ೨೨ ॥
ತಸ್ಮಿನ್ವನೇ ಮಹಾಘೋರೇ ಕ್ಷುಧಯಾ ಪರಿಪೀಡಿತಃ ।
ಅಯಾಚತಾನ್ನಂ ಪಿತರಂ ಮನೋಜವಸುತಃ ಶಿಶುಃ ॥ ೨೩ ॥
ಅಂಬ ಮೇಽನ್ನಂ ಪ್ರಯಚ್ಛ ತ್ವಂ ಕ್ಷುಧಾ ಮಾಂ ಬಾಧತೇ ಭೃಶಂ ।
ಏವಂ ಸ್ವಜನನೀಂ ಚಾಽಪಿ ಪ್ರಾರ್ಥಯಾಮಾಸ ಬಾಲಕಃ ॥ ೨೪ ॥
ತನ್ಮಾತಾಪಿತರೌ ತತ್ರ ಶ್ರುತ್ವಾ ಪುತ್ರಸ್ಯ ಭಾಷಿತಂ ॥ ೨೫ ॥
ಶೋಕಾಽಭಿಭೂತೌ ಸಹಸಾ ಮೋಹಂ ಸಮುಪಜಗ್ಮತುಃ ।
ಭಾರ್ಯಾಮಥಾಽಬ್ರವೀದ್ರಾಜಾ ಸುಮಿತ್ರಾಂ ನಾಮ ನಾಮತಃ ॥ ೨೬ ॥
ಮುಹ್ಯಮಾನಶ್ಚ ಸ ಮುಹುಃ ಶುಷ್ಕಕಂಠೌಷ್ಠತಾಲುಕಃ ।
ಸುಮಿತ್ರೇ ಕಿಂ ಕರಿಷ್ಯಾಮಿ ಕುತ್ರ ಯಾಸ್ಯಾಮಿ ಕಾ ಗತಿಃ ॥ ೨೭ ॥
ಮರಿಷ್ಯತ್ಯಚಿರಾದೇಷ ಸುತೋ ಮೇ ಕ್ಷುಧಯಾರ್ದಿತಃ ।
ಕಿಮರ್ಥಂ ಸಸೃಜೇ ವೇಧಾ ದುರ್ಭಾಗ್ಯಂ ಮಾಂ ವೃಥಾ ಪ್ರಿಯೇ ॥ ೨೮ ॥
ಕೋ ವಾ ಮೋಚಯಿತಾ ದುಃಖಮೇತದ್ದುಷ್ಕರ್ಮಜಂ ಮಮ ।
ನ ಪೂಜಿತೋ ಮಯಾ ಶಂಭುರ್ಹರಿರ್ವಾ ಪೂರ್ವಜನ್ಮಸು ॥ ೨೯ ॥

---

೨೧–೨೨. ದಾರಾಪುತ್ರರೊಡನೆ ಕಾಡುಪಾಲಾದ ಮನೋಜವನು, ಜೇಡರ ಹುಳುಗಳಿಂದ ಆವೃತವೂ, ಹುಲಿ ಮುಂತಾದ ಕ್ರೂರಮೃಗಗಳಿಂದ ಭಯಂಕರವೂ, ಆನೆಗಳ ಘೀಂಕಾರದಿಂದ ತುಂಬಿದುದೂ, ಕಾಡುಹಂದಿ, ಕೋಣ ಮುಂತಾದವುಗಳಿಂದ ವ್ಯಾಪ್ತವೂ ಆದ ಒಂದು ಗೊಂಡಾರಣ್ಯವನ್ನು ಸೇರಿ ಅಲ್ಲಿ ಹಸಿವಿನಿಂದ ಬಳಲಿ ದುಃಖಿಸುತ್ತಿದ್ದನು.

೨೩–೨೪. ಅಲ್ಲಿ ಹಸಿವನ್ನು ತಾಳಲಾರದೆಹೋದ ಆತನ ಚಿಕ್ಕಮಗನು "ಅಮ್ಮ! ಹಸಿವು ನನ್ನನ್ನು ಬಹಳ ಬಾಧಿಸುತ್ತಿದೆ. ಇದನ್ನು ತಾಳಲಾರೆನು. ಅನ್ನವನ್ನು ಕೊಡು" ಎಂದು ತನ್ನ ತಾಯಿಯನ್ನೂ, ತಂದೆಯನ್ನೂ ಬೇಡಿದನು.

೨೫–೩೧. ಅವನ ತಂದೆತಾಯಿಗಳಿದನ್ನು ಕೇಳಿ ಬಹಳವಾಗಿ ವ್ಯಥೆಗೊಂಡು ಮೂರ್ಛಿತರಾದರು. ಬಳಿಕ ಮನೋಜವನು ಸ್ವಲ್ಪಹೊತ್ತಿಗೆ ಎಚ್ಚತ್ತು, ಒಣಗಿದ ಬಾಯುಳ್ಳವನಾಗಿ ತನ್ನ ಹೆಂಡತಿಯಾದ ಸುಮಿತ್ರೆಯನ್ನು ಕುರಿತು, "ಸುಮಿತ್ರೆ! ಏನುಮಾಡಲಿ, ಎಲ್ಲಿಹೋಗಲಿ, ಏನು ಗತಿ! ಈ ನನ್ನ ಚಿಕ್ಕಮಗನು ಹಸಿವಿಗೆ ಸಿಲುಕಿ ತಾಳಲಾರದೆ ಬೇಗನೆ ತೀರಿಕೊಳ್ಳುವನು. ಪ್ರಿಯಳೆ! ದುರ್ಭಾಗ್ಯನಾದ ನನ್ನನ್ನು ಬ್ರಹ್ಮದೇವನೇಕೆ ಸೃಷ್ಟಿಸಿದನೊ! ನನ್ನ ದುಷ್ಕರ್ಮದಿಂದ ಪ್ರಾಪ್ತವಾದ ಈ ದುಃಖವನ್ನು ಹೋಗಲಾಡಿಸುವವರಾರು? ಹಿಂದಿನ

ತಥಾಽನ್ಯಾ ದೇವತಾಃ ಸೂರ್ಯವಿಭಾವಸುಮುಖಾಃ ಪ್ರಿಯೇ ।
ತೇನ ಪಾಪೇನ ಚಾಽದ್ಯಾಹಮಸ್ಮಿನ್ಜನ್ಮನಿ ಶೋಭನೇ ॥ ೩೦ ॥
ಅಹಂಕಾರಾಽಭಿಭೂತೋಽಸ್ಮಿ ವಿಪ್ರಕ್ಷೇತ್ರಾಣ್ಯಪಾಹರಂ ।
ಶಿವವಿಷ್ಣ್ವಾದಿದೇವಾನಾಂ ವಿತ್ತಂ ಚಾಽಪಹೃತಂ ಮಯಾ ॥ ೩೧ ॥
ಏವಂ ದುಷ್ಕರ್ಮಬಾಹುಲ್ಯಾದ್ಗೋಲಭೇನ ಪರಾಜಿತಃ ।
ವನಂ ಯಾತೋಽಸ್ಮಿ ವಿಜನಂ ತ್ವಯಾ ಸಹ ಸುತೇನ ಚ ॥ ೩೨ ॥
ನಿರನ್ನೋ ನಿರ್ಧನೋ ದುಃಖೀ ಕ್ಷುಧಿತೋಽಹಂ ಪಿಪಾಸಿತಃ ।
ಕಥಮನ್ನಂ ಪ್ರದಾಸ್ಯಾಮಿ ಕ್ಷುಧಿತಾಯ ಸುತಾಯ ಮೇ ॥ ೩೩ ॥
ನ ಮಯಾಽನ್ನಾಽನಿ ದತ್ತಾನಿ ಬ್ರಾಹ್ಮಣೇಭ್ಯಃ ಶುಚಿಸ್ಮಿತೇ ।
ನ ಮಯಾ ಪೂಜಿತಃ ಶಂಭುರ್ವಿಷ್ಣುರ್ವಾ ದೇವತಾಂತರಂ ॥ ೩೪ ॥
ತೇನ ಪಾಪೇನ ಮೇ ತ್ವದ್ಯ ದುಃಖಮೇತತ್ಸಮಾಗತಂ ।
ನ ಮಯಾಗ್ನೌ ಹುತಂ ಪೂರ್ವಂ ನ ತೀರ್ಥಮಪಿ ಸೇವಿತಂ ॥ ೩೫ ॥
ಮಾತೃಶ್ರಾದ್ಧಂ ಪಿತೃಶ್ರಾದ್ಧಂ ಮೃತಾಽಹದಿವಸೇ ತಯೋಃ ।
ನೈಕೋದ್ದಿಷ್ಟವಿಧಾನೇನ ಪಾರ್ವಣೇನಾಪಿ ವೈ ಪ್ರಿಯೇ ॥ ೩೬ ॥
ಕೃತಂ ನ ಹಿ ಮಯಾ ಭದ್ರೇ ಭೂರಿಭೋಜನಮೇವವಾ ।
ತೇನ ಪಾಪೇನ ಮೇ ತ್ವದ್ಯ ದುಃಖಮೇತತ್ಸಮಾಗತಂ ॥ ೩೭ ॥

---

ಜನ್ಮಗಳಲ್ಲಿ ನಾನು ಶಿವನನ್ನಾಗಲೀ, ಕೇಶವನನ್ನಾಗಲೀ ಪೂಜಿಸಲಿಲ್ಲ. ಅಂತೆಯೇ ಸೂರ್ಯಾಗ್ನ್ಯಾದಿಗಳನ್ನಾರಾಧಿಸಲಿಲ್ಲ. ಆ ಪಾಪದಿಂದ ಶುಭಕರವಾದ ಈ ಜನ್ಮದಲ್ಲಿಯೂ ಅಹಂಕಾರದಿಂದ ತುಂಬಿದವನಾಗಿ ದೇವಬ್ರಾಹ್ಮಣರ ಕ್ಷೇತ್ರಗಳನ್ನೂ, ಶಿವಕೇಶವ ದೇವಾಲಯಗಳ ದ್ರವ್ಯವನ್ನೂ ಅಪಹರಿಸಿದೆನು.

೩೨. ಆ ಪಾಪದ ಪರಾಕಾಷ್ಠತೆಯಿಂದ ರಾಜ್ಯವನ್ನು ಗೋಲಭನಿಗೆ ಸೋತು ನಿಮ್ಮೊಡನೆ ಈ ನಿರ್ಜನವಾದ ಕಾಡಿನಪಾಲಾದೆ.

೩೩. ಅನ್ನವಿಲ್ಲದವನೂ, ಧನವಿಲ್ಲದವನೂ, ದುಃಖಿಯೂ, ಕ್ಷುಧಾರ್ತನೂ, ಬಾಯಾರಿದವನೂ ಆದ ನಾನು, ಹಸಿದ ಈ ನನ್ನ ಕುವರನಿಗೆ ಆಹಾರವನ್ನೆಂತು ಕೊಡಬಲ್ಲೆನು ?

೩೪–೩೫. ಶುಚಿಸ್ಮಿತೆ! ನಾನು ಬ್ರಾಹ್ಮಣರಿಗೆ ಅನ್ನದಾನವನ್ನು ಮಾಡಿಲ್ಲ. ಹರಿಹರಾದಿ ದೇವತೆಗಳ ಅರ್ಚನೆಯನ್ನು ಮಾಡಿಲ್ಲ. ಆ ಪಾಪದಿಂದಲೇ ನನಗೆ ಈ ದುಃಖವೊದಗಿರುವುದು. ನಾನು ಅಗ್ನಿಯಲ್ಲಿ ಆಹುತಿ ಕೊಟ್ಟಿಲ್ಲ. ಪುಣ್ಯ ತೀರ್ಥವನ್ನೆಂದಿಗೂ ಸೇವಿಸಿಲ್ಲ.

೩೬–೩೭. ಮೃತಾಹಗಳಲ್ಲಿ ಮಾತಾಪಿತೃಗಳ ಶ್ರಾದ್ಧಗಳನ್ನು ಮಾಡಿಲ್ಲ.

ಚೈತ್ರಮಾಸೇ ಪ್ರಿಯೇ ಚಿತ್ರಾನಕ್ಷತ್ರೇ ಪಾನಕಂ ಮಯಾ ।
ಪನಸಾನಾಂ ಫಲಂ ಸ್ವಾದು ಕದಲೀಫಲಮೇವ ವಾ ॥ ೩೮ ॥
ತಥಾ ಛತ್ರಂ ಸದಂಡಂ ಚ ರಮ್ಯಂ ಪಾದುಕಯೋರ್ದ್ವಯಂ ।
ತಾಂಬೂಲಾನಿ ಚ ಪುಷ್ಪಾಣಿ ಚಂದನಂ ಚಾನುಲೇಪನಂ ॥ ೩೯ ॥
ನ ದತ್ತಂ ವೇದವಿದ್ಭ್ಯಸ್ತು ಚಿತ್ರಗುಪ್ತಸ್ಯ ತುಷ್ಟಯೇ ।
ತೇನ ಪಾಪೇನ ಮೇ ತ್ವದ್ಯ ದುಃಖಮೇತತ್ಸಮಾಗತಂ ॥ ೪೦ ॥
ನಾಽಶ್ವತ್ಥಶ್ಚೂತವೃಕ್ಷೋ ವಾ ನ್ಯಗ್ರೋಧಸ್ತಿಂತ್ರಿಣೀ ತಥಾ ।
ಪಿಚುಮಂದಃ ಕಪಿತ್ಥೋ ವಾ ತಥೈವಾಮಲಕೀತರುಃ ॥ ೪೧ ॥
ನಾರಿಕೇಲತರುರ್ವಾಽಪಿ ಸ್ಥಾಪಿತೋಽಧ್ವಗಶಾಂತಯೇ ।
ತೇನ ಪಾಪೇನ ಮೇ ತ್ವದ್ಯ ದುಃಖಮೇತತ್ಸಮಾಗತಂ ॥ ೪೨ ॥
ಸಮ್ಮಾರ್ಜನಂ ಚ ನ ಕೃತಂ ಶಿವವಿಷ್ಣ್ವಾಲಯೇ ಮಯಾ ।
ನ ಖಾನಿತಂ ತಟಾಕಂ ಚ ನ ಕೂಪೋಽಪಿ ಹ್ರದೋಽಪಿ ವಾ ॥ ೪೩ ॥
ನ ರೋಪಿತಂ ಪುಷ್ಪವನಂ ತಥೈವ ತುಲಸೀವನಂ ।
ಶಿವ ವಿಷ್ಣ್ವಾಲಯೌ ವಾಽಪಿ ನಿರ್ಮಿತೋ ನ ಮಯಾ ಪ್ರಿಯೇ ।
ತೇನ ಪಾಪೇನ ಮೇ ತ್ವದ್ಯ ದುಃಖಮೇತತ್ಸಮಾಗತಂ ॥ ೪೪ ॥

---

ಭದ್ರೇ! ಬ್ರಾಹ್ಮಣರಿಗೆ ಭೂರಿಭೋಜನವನ್ನು ಮಾಡಿಸಿಲ್ಲ. ಆ ಪಾಪದಿಂದಲೇ ಈ ದುಃಖವೀಗ ನನ್ನನ್ನು ಪೀಡಿಸುತ್ತಿದೆ.

೩೮–೪೦. ಪ್ರಿಯೇ! ಚೈತ್ರಮಾಸದಲ್ಲಿ ಚಿತ್ರಾಪೂರ್ಣಿಮೆಯ ದಿನ ಪಾನಕವನ್ನೂ, ಮಧುರವಾದ ಹಲಸು, ಬಾಳೆ ಮುಂತಾದ ಫಲಗಳನ್ನೂ, ಸೊಗಸಾದ ಛತ್ರಿ, ಪಾದುಕೆಗಳು, ತಾಂಬೂಲ, ಹೂವು, ಗಂಧ, ಅನುಲೇಪನ ದ್ರವ್ಯ ಮುಂತಾದವುಗಳನ್ನೂ ಚಿತ್ರಗುಪ್ತನ ಪ್ರೀತಿಗಾಗಿ ವೇದವಿದರಾದ ಬ್ರಾಹ್ಮಣರಿಗೆ ದಾನ ಮಾಡಿದವನಲ್ಲ. ಆ ಪಾಪದಿಂದೀ ದುಃಖವೀಗ ನನಗೆ ಒದಗಿಬಂದಿದೆ.

೪೧–೪೨. ದಾರಿಯಲ್ಲಿ ಅಶ್ವತ್ಥವೃಕ್ಷವನ್ನಾಗಲೀ, ಮಾವು, ಆಲ, ಹುಣಿಸೆ, ಬೇವು, ಬೇಲ, ನೆಲ್ಲಿ, ತೆಂಗು ಮುಂತಾದ ವೃಕ್ಷಗಳನ್ನಾಗಲೀ ದಾರಿಗರ ವಿಶ್ರಾಂತಿಗಾಗಿ ನೆಡಸಲಿಲ್ಲ. ಆ ಪಾಪದಿಂದೀಗ ಈ ದುಃಖವೊದಗಿರುತ್ತದೆ.

೪೩. ಶಿವವಿಷ್ಣ್ವಾಲಯಗಳನ್ನು ಗುಡಿಸಿ ಸಾರಿಸಿಲ್ಲ. ಬಾವಿ, ಕೊಳ, ಕೆರೆ ಮುಂತಾದುವುಗಳನ್ನು ತೋಡಿಸಲಿಲ್ಲ.

೪೪. ಪುಷ್ಪೋದ್ಯಾನ, ತುಲಸೀವನಗಳನ್ನು ಹಾಕಿಸಲಿಲ್ಲ. ಹರಿಹರಾಲಯಗಳನ್ನು ಕಟ್ಟಿಸಲಿಲ್ಲ. ಪ್ರಿಯೇ! ಆ ಪಾಪದಿಂದೀದುಃಖಕ್ಕೆ ತುತ್ತಾಗಿರುವೆನು.

ನ ಮಯಾ ಪೈತೃಕೇ ಮಾಸಿ ಪಿತೄನುದ್ದಿಶ್ಯ ಶೋಭನೇ ।
ಮಹಾಲಯಂ ಕೃತಂ ಶ್ರಾದ್ಧಮಷ್ಟಕಾಶ್ರಾದ್ಧಮೇವ ವಾ ॥ ೪೫ ॥
ನಿತ್ಯಶ್ರಾದ್ಧಂ ತಥಾ ಕಾಮ್ಯಂ ಶ್ರಾದ್ಧಂ ನೈಮಿತ್ತಿಕಂ ಪ್ರಿಯೇ ।
ನ ಕೃತಾಃ ಕ್ರತವಶ್ಚಾಽಪಿ ವಿಧಿವದ್ಭೂರಿದಕ್ಷಿಣಾಃ ॥ ೪೬ ॥
ಮಾಸೋಪವಾಸೋ ನ ಕೃತಃ ಏಕಾದಶ್ಯಾಮುಪೋಷಣಂ ।
ಧನುರ್ಮಾಸೇಽಪ್ಯುಷಃಕಾಲೇ ಶಂಭುವಿಷ್ಣ್ವಾದಿದೇವತಾಃ ॥ ೪೭ ॥
ಸಂಪೂಜ್ಯ ವಿಧಿವದ್ಭದ್ರೇ ನೈವೇದ್ಯಂ ನ ಕೃತಂ ಮಯಾ ।
ತೇನ ಪಾಪೇನ ಮೇ ತ್ವದ್ಯ ದುಃಖಮೇತತ್ಸಮಾಗತಂ ॥ ೪೮ ॥
ಹರಿಶಂಕರಯೋರ್ನಾಮ್ನಾಂ ಕೀರ್ತನಂ ನ ಮಯಾ ಕೃತಂ ।
ಉದ್ಧೂಲನಂ ತ್ರಿಪುಂಡ್ರಂ ಚ ಜಾಬಾಲೋಕ್ತೈಶ್ಚ ಸಪ್ತಭಿಃ ॥ ೪೯ ॥
ನ ಧೃತಂ ಭಸ್ಮನಾ ಭದ್ರೇ ರುದ್ರಾಕ್ಷಂ ನ ಧೃತಂ ಮಯಾ ।
ಜಪಶ್ಚ ರುದ್ರಸೂಕ್ತಾನಾಂ ಪಂಚಾಕ್ಷರಜಪಸ್ತಥಾ ॥ ೫೦ ॥
ತಥಾ ಪುರುಷಸೂಕ್ತಸ್ಯ ಜಪೋಽಪ್ಯಷ್ಟಾಕ್ಷರಸ್ಯ ಚ ।
ನೈವಾಕಾರಿ ಮಯಾ ಭದ್ರೇ ನೈವಾಽನ್ಯೋ ಧರ್ಮಸಂಚಯಃ ।
ತೇನ ಪಾಪೇನ ಮೇ ತ್ವದ್ಯ ದುಃಖಮೇತತ್ಸಮಾಗತಂ ॥ ೫೧ ॥

---

೪೫–೪೬. ಎಲೌ ಸುಶೋಭನೆಯೆ! ಪಿತೃಪಕ್ಷದಲ್ಲಿ ಪಿತೃದೇವತೆಗಳನ್ನು ಉದ್ದೇಶಿಸಿ ಮಹಾಲಯ, ಅಷ್ಟಕಾಶ್ರಾದ್ಧ, ನಿತ್ಯಶ್ರಾದ್ಧ, ನೈಮಿತ್ತಿಕವಾದ ಕಾಮ್ಯಶ್ರಾದ್ಧ ಮುಂತಾದವುಗಳನ್ನು ನಡೆಸಲಿಲ್ಲ. ಬಹುದಕ್ಷಿಣಾಕವಾದ ಮಹಾ ಕ್ರತುಗಳನ್ನೂ ವಿಧಿವತ್ತಾಗಿ ನೆರವೇರಿಸಲಿಲ್ಲ.

೪೭–೪೮. ಮಾಸೋಪವಾಸ, ಏಕಾದಶೀ ಮುಂತಾದ ವ್ರತಗಳನ್ನಾಚರಿಸಲಿಲ್ಲ. ಧನುರ್ಮಾಸದಲ್ಲಿ ಉಷಃಕಾಲದಲ್ಲಿ ಶಿವವಿಷ್ಣ್ವಾದಿ ದೇವತೆಗಳನ್ನರ್ಚಿಸಿ ನೈವೇದ್ಯವನ್ನು ಸಮರ್ಪಿಸಲಿಲ್ಲ. ಆ ಪಾಪದಿಂದೀಗ ಈ ದುಃಖಕ್ಕೆ ಗುರಿಯಾಗಿರುವೆನು.

೪೯–೫೧. ಹರಿಶಂಕರರನ್ನು ಕೀರ್ತಿಸಲಿಲ್ಲ. ಜಾಬಾಲಿಯಿಂದ ಉಕ್ತವಾದ ಏಳು ಮಂತ್ರಗಳಿಂದ ಭಸ್ಮೋದ್ಧೂಳನ, ತ್ರಿಪುಂಡ್ರಗಳನ್ನೂ, ರುದ್ರಾಕ್ಷಿಗಳನ್ನೂ ಧರಿಸಲಿಲ್ಲ. ರುದ್ರಸೂಕ್ತಪಾರಾಯಣ ಪಂಚಾಕ್ಷರ ಜಪಗಳನ್ನೂ, ಪುರುಷಸೂಕ್ತ, ಅಷ್ಟಾಕ್ಷರೀ ಜಪಗಳನ್ನೂ ಮಾಡಲಿಲ್ಲ. ಭದ್ರೇ! ಅಂತೆಯೇ ಇನ್ನಾವಬಗೆಯ ಧರ್ಮವನ್ನಾಗಲಿ ಆಚರಿಸಲಿಲ್ಲ. ಆ ಪಾಪದಿಂದೀಗ ಈ ದುಃಖಕ್ಕೀಡಾಗಿರುವೆನು.”

ಏವಂ ಸ ವಿಲಪನ್ರಾಜಾ ಭಾರ್ಯಾಮಾಭಾಷ್ಯ ಖಿನ್ನಧೀಃ ।
ಮೂರ್ಛಾಮುಪಾಯಯೌ ವಿಪ್ರಾಃ ಪಪಾತ ಚ ಧರಾತಲೇ ॥ ೫೨ ॥
ಸುಮಿತ್ರಾ ಪತಿತಂ ದೃಷ್ಟ್ವಾ ಭಾರ್ಯಾ ಸಾ ಪತಿಮಂಗನಾ ॥ ೫೩ ॥
ಆಲಿಂಗ್ಯ ವಿಲಲಾಪಾಽಥ ಸಪುತ್ರಾ ಭೃಶದುಃಖಿತಾ ।
ಮಮ ನಾಥ ಮಹಾರಾಜ ಸೋಮಾನ್ವಯಧುರಂಧರ ॥ ೫೪ ॥
ಮಾಂ ವಿಹಾಯ ಕ್ವ ಯಾತೋಽಸಿ ಸಪುತ್ರಾಂ ವಿಜನೇ ವನೇ ।
ಅನಾಥಾಂ ತ್ವಾಮನುಗತಾಂ ಸಿಂಹತ್ರಸ್ತಾಂ ಮೃಗೀಮಿವ ॥ ೫೫ ॥
ಮೃತೋಽಸಿ ಯದಿ ರಾಜೇಂದ್ರ ತರ್ಹಿ ತ್ವಾಮಹಮಪ್ಯರಂ ।
ಅನುವ್ರಜಾಮಿ ವಿಧವಾ ನ ಸ್ಥಾಸ್ಯೇ ಕ್ಷಣಮಪ್ಯುತ ॥ ೫೬ ॥
ಪಿತರಂ ಪಶ್ಯ ಪತಿತಂ ಚಂದ್ರಕಾಂತ ಸುತ ಕ್ಷಿತೌ ।
ಇತ್ಯುಕ್ತಶ್ಚಂದ್ರಕಾಂತೋಽಪಿ ಸುತೋ ರಾಜ್ಞಃ ಕ್ಷುಧಾರ್ದಿತಃ ।
ಪಿತರಂ ಪರಿರಭ್ಯಾಽಥ ನಿಃಶಬ್ದಂ ಪ್ರರುರೋದ ಸಃ ॥ ೫೭ ॥
ಏತಸ್ಮಿನ್ನಂತರೇ ವಿಪ್ರಾ ಜಟಾವಲ್ಕಲಸಂವೃತಃ ॥ ೫೮ ॥
ಭಸ್ಮೋದ್ಧೂಲಿತಸರ್ವಾಂಗಸ್ತ್ರಿಪುಂಡ್ರಾಂಕಿತಮಸ್ತಕಃ ।
ರುದ್ರಾಕ್ಷಮಾಲಾಭರಣಃ ಸಿತಯಜ್ಞೋಪವೀತವಾನ್ ॥ ೫೯ ॥

---

೫೨. ಅಯ್ಯಾ ಬ್ರಾಹ್ಮಣರುಗಳಿರಾ! ರಾಜನು ಖಿನ್ನಮಾನಸನಾಗಿ ಈ ಬಗೆಯಾಗಿ ವಿಲಪಿಸುತ್ತ ನೆಲದಮೇಲೆ ಬಿದ್ದು ಮೂರ್ಛೆಗೊಂಡನು.

೫೩–೫೫. ಅವನ ಭಾರ್ಯೆಯಾದ ಸುಮಿತ್ರೆಯು ಹೀಗೆ ಮೂರ್ಛಿತನಾದ ಪತಿಯನ್ನು ಕಂಡು ಅವನನ್ನು ಅಪ್ಪಿಕೊಂಡು ಬಹಳ ದುಃಖದಿಂದ "ಹಾ ಪ್ರಾಣನಾಥ! ಮಹಾರಾಜ! ಸೋಮವಂಶಧುರಂಧರ! ನಿರ್ಜನವಾದೀ ಕಾಡಿನಲ್ಲಿ, ಅನಾಥಳೂ, ನಿನ್ನನ್ನೇ ಅನುವರ್ತಿಸುವಂತಹವಳೂ, ಸಿಂಹದ ದೆಸೆಯಿಂದ ಹೆದರಿರುವ ಹೆಣ್ಣುಜಿಂಕೆಯಂತಿರುವವಳೂ, ಪುತ್ರಸಹಿತಳೂ ಆದ ನನ್ನನ್ನು ಬಿಟ್ಟು ಎಲ್ಲಿಗೆ ತೆರಳಿದೆ?

೫೬. ನೀನು ಮೃತನಾಗಿದ್ದಲ್ಲಿ ನಾನು ಕ್ಷಣವಾದರೂ ವಿಧವೆಯಾಗಿರಲಾರೆನು. ಖಂಡಿತವಾಗಿಯೂ ನಿನ್ನನ್ನೇ ಹಿಂಬಾಲಿಸುತ್ತೇನೆ.

೫೭. ಮಗೂ, ಚಂದ್ರಕಾಂತ! ನೆಲದಮೇಲೆ ಬಿದ್ದಿರುವ ನಿಮ್ಮ ತಂದೆಯನ್ನು ನೋಡು" ಎಂದು ಹೇಳಿ ವಿಲಪಿಸುತ್ತಿರಲು ಮಗುವಾದ ಚಂದ್ರಕಾಂತನು ಹಸಿವಿನಿಂದ ಬಳಲಿದವನೂ, ದುಃಖಗೊಂಡವನೂ ಆಗಿ ತಂದೆಯನ್ನಪ್ಪಿಕೊಂಡು ನಿಶ್ಶಬ್ದವಾಗಿ ಅಳುತ್ತಿದ್ದನು.

೫೮–೬೦. ಬ್ರಾಹ್ಮಣರುಗಳಿರಾ! ಈ ಸಮಯಕ್ಕೆ ಸರಿಯಾಗಿ ಜಟಾವಲ್ಕಲ

ಪರಾಶರೋ ನಾಮ ಮುನಿರಾಜಗಾಮ ಯದೃಚ್ಛಯಾ ।
ತಂ ಶಬ್ದಮಭಿಲಕ್ಷ್ಯಾಽಸೌ ಸಾಧುಸಜ್ಜನಸಮ್ಮತಃ ॥ ೬೦ ॥
ತತಃ ಸುಮಿತ್ರಾ ತಂ ದೃಷ್ಟ್ವಾ ಪರಾಶರಮುಪಾಗತಂ ।
ವವಂದೇ ಚರಣೌ ತಸ್ಯ ಸಪುತ್ರಾ ಸಾ ಪತಿವ್ರತಾ ॥ ೬೧ ॥
ತತಃ ಪರಾಶರೇಣೇಯಂ ಸುಮಿತ್ರಾ ಪರಿಸಾಂತ್ವಿತಾ ।
ಆಶ್ವಾಸಿತಾ ಚ ಮುನಿನಾ ಮಾ ಶೋಚಸ್ವೇತಿ ಭಾಮಿನಿ ।
ತತಃ ಸುಮಿತ್ರಾಂ ಪಪ್ರಚ್ಛ ಶಕ್ತಿಪುತ್ರೋ ಮಹಾಮುನಿಃ ॥ ೬೨ ॥

ಪರಾಶರ ಉವಾಚ :—

ಕಾ ತ್ವಂ ಸುಶ್ರೋಣಿ ಕಶ್ಚಾಽಸೌ ಯಶ್ಚಾಽಯಂ ಪತಿತೋಽಗ್ರತಃ ॥ ೬೩ ॥
ಅಯಂ ಶಿಶುಶ್ಚ ಕಸ್ತೇ ಸ್ಯಾದ್ವದ ತತ್ವೇನ ಮೇ ಶುಭೇ ।
ಪೃಷ್ಟೈವಂ ಮುನಿನಾ ಸಾಧ್ವೀ ತಮುವಾಚ ಮಹಾಮುನಿಂ ॥ ೬೪ ॥

ಸುಮಿತ್ರೋವಾಚ :—

ಪತಿರ್ಮಮಾಯಮಸ್ಯಾಽಹಂ ಭಾರ್ಯಾ ವೈ ಮುನಿಸತ್ತಮ ।
ಆವಾಭ್ಯಾಂ ಜನಿತಶ್ಚಾಽಯಂ ಚಂದ್ರಕಾಂತಾಽಭಿಧಃ ಸುತಃ ॥ ೬೫ ॥
ಅಯಂ ಮನೋಜವೋ ನಾಮ ರಾಜಾ ಸೋಮಕುಲೋದ್ಭವಃ ।
ವಿಕ್ರಮಾಢ್ಯಸ್ಯ ತನಯಃ ಶೌರ್ಯೇ ವಿಷ್ಣುಸಮೋ ಬಲೀ ॥ ೬೬ ॥

---

ಧಾರಿಯೂ, ಭಸ್ಮೋದ್ಧೂಳಿತದೇಹನೂ, ತ್ರಿಪುಂಡ್ರಾಂಕಿತಫಾಲನೂ, ರುದ್ರಾಕ್ಷ ಮಾಲಾಲಂಕೃತನೂ, ಶುಭ್ರವಾದ ಯಜ್ಞೋಪವೀತವನ್ನು ಧರಿಸಿದವನೂ ಆದ ಪರಾಶರನೆಂಬ ಮಹರ್ಷಿಯು ಆ ಶಬ್ದವನ್ನು ಕೇಳಿ ಆಕಸ್ಮಿಕವಾಗಿ ಅಲ್ಲಿಗೆ ಬಿಜ ಮಾಡಿದನು.

೬೧. ಆಗ ಪತಿವ್ರತೆಯಾದ ಸುಮಿತ್ರೆಯು ಅಲ್ಲಿಗೆ ಬಂದ ಪರಾಶರನನ್ನು ಕಂಡು ಸಪುತ್ರಳಾಗಿ ಆತನ ಪಾದಗಳಿಗೆರಗಿದಳು.

೬೨. ಬಳಿಕ ಪರಾಶರನು "ಎಲೌ ಭಾಮಿನಿ! ವ್ಯಸನಗೊಳ್ಳಬೇಡ" ಎಂದು ಹೇಳಿ ಆ ಸುಮಿತ್ರೆಯನ್ನು ಸಮಾಧಾನಪಡಿಸಿ ಆಕೆಯನ್ನು ಪ್ರಶ್ನೆಮಾಡಿದನು.

೬೩. ಪರಾಶರನು ಹೇಳುತ್ತಾನೆ:—ಸುಶ್ರೋಣಿ! ನೀನಾರು? ನಿನ್ನ ಮುಂದೆ ಬಿದ್ದಿರುವ ಈತನಾರು?

೬೪. ಈ ಮಗುವಾರು? ನಿಜವನ್ನರುಹು." ಇಂತು ಕೇಳಿದಾಮುನಿಗೆ ಸುಮಿತ್ರೆಯು ಹೇಳುತ್ತಾಳೆ.

೬೫. "ಮುನಿಪುಂಗವನೆ! ಈತನು ನನ್ನ ಇನಿಯನು. ನಾನೀತನ ಮಡದಿ. ಈ ಮಗುವು ನಮ್ಮ ಮಗನಾದ ಚಂದ್ರಕಾಂತನು.

೬೬. ಈತನು ಸೋಮವಂಶತಿಲಕನೂ, ವಿಕ್ರಮಾಢ್ಯನ ಮಗನೂ ಆದ

ಸುಮಿತ್ರಾ ನಾಮ ತಸ್ಯಾಹಂ ಭಾರ್ಯಾ ಪತಿಮನುವ್ರತಾ ।
ಯುದ್ಧೇ ವಿನಿರ್ಜಿತೋ ರಾಜಾ ಗೋಲಭೇನ ಮನೋಜವಃ ॥ ೬೭ ॥
ರಾಜ್ಯಾದ್ಭ್ರಷ್ಟೋ ನಿರಾಲಂಬೋ ಮಯಾ ಪುತ್ರೇಣ ಚಾನ್ವಿತಃ ।
ವನಂ ವಿವೇಶ ಬ್ರಹ್ಮರ್ಷೇ ಕ್ರೂರಸತ್ತ್ವಭಯಾನಕಂ ॥ ೬೮ ॥
ಕ್ಷುಧಯಾ ಪೀಡಿತಃ ಪುತ್ರೋ ಹ್ಯಾವಾಮನ್ನಮಯಾಚತ ।
ನಿರನ್ನೋ ವಿಧುರೋ ರಾಜಾ ದೃಷ್ಟ್ವಾ ಪುತ್ರಂ ಕ್ಷುಧಾರ್ದಿತಂ ॥ ೬೯ ॥
ಶೋಕಾಕುಲಮನಾ ಬ್ರಹ್ಮನ್ಮೂರ್ಛಿತಃ ಪತಿತೋ ಭುವಿ ।
ಇತಿ ತದ್ವಚನಂ ಶ್ರುತ್ವಾ ಶೋಕಪರ್ಯಾಕುಲಾಕ್ಷರಂ ॥ ೭೦ ॥
ಶಕ್ತಿಪುತ್ರೋ ಮುನಿಃ ಪ್ರಾಹ ಸುಮಿತ್ರಾಂ ತಾಂ ಪತಿವ್ರತಾಂ ।
ಮನೋಜವಸ್ಯ ನೃಪತೇರ್ಭಾರ್ಯಾಮಗ್ನಿಶಿಖೋಪಮಾಂ ॥ ೭೧ ॥

ಪರಾಶರ ಉವಾಚ:—

ಮನೋಜವಸ್ಯ ಭಾರ್ಯೇ ತೇ ಮಾ ಭೀರ್ಭೂಯಾತ್ಕಥಂಚನ ।
ಯುಷ್ಮಾಕಮಶುಭಂ ಸತ್ಯಮಚಿರಾನ್ನಾಶಮೇಷ್ಯತಿ ॥ ೭೨ ॥

---

ಮನೋಜವನೆಂಬುವ ರಾಜನು. ಶೌರ್ಯಧೈರ್ಯಗಳಲ್ಲೀತನು ವಿಷ್ಣುವಿಗೆ ಸಮಾನನು.

೬೭–೬೮. ನಾನು ಪತಿಯನ್ನೇ ಅನುವರ್ತಿಸುವ ಈತನ ಮಡದಿ. ನನ್ನ ಹೆಸರು ಸುಮಿತ್ರೆ. ಎಲೈ ಮಹರ್ಷಿಯೇ! ಈ ಮನೋಜವನು ಗೋಲಭನಿಂದ ಯುದ್ಧದಲ್ಲಿ ಸೋಲಿಸಲ್ಪಟ್ಟು ರಾಜ್ಯಭ್ರಷ್ಟನಾಗಿ ನನ್ನ ಮತ್ತು ಈ ಸುತನೊಡನೆ ನಿರಾಶ್ರಯನಾಗಿ ಕ್ರೂರಮೃಗಗಳಿಂದಾವೃತವಾದ ಭಯಂಕರವಾದ ಈ ಕಾಡಿಗೆ ಬಂದನು.

೬೯. ಹಸಿವಿನಿಂದ ಬಳಲಿದ ಈ ಮಗುವು ನಮ್ಮನ್ನು ಆಹಾರವನ್ನು ಕೇಳಲು ಅನ್ನಕ್ಕಿಲ್ಲದವನೂ, ನಿರಾಶ್ರಯನೂ ಆದ ರಾಜನು ಕ್ಷುಧಾರ್ದಿತನಾದ ಮಗನನ್ನು ಕಂಡು, ಶೋಕದಿಂದ ಆತುರನಾಗಿ ಮೂರ್ಛೆಯಿಂದ ಕೆಳಗೆ ಬಿದ್ದನು."

೭೦–೭೧. ಇಂತು ನುಡಿದ ಆಕೆಯ ಮಾತನ್ನು ಕೇಳಿ ಶಕ್ತಿಯ ಮಗನಾದ ಪರಾಶರಮುನಿಯು ಶೋಕದಿಂದ ಗದ್ಗದಕಂಠನಾಗಿ ಮನೋಜವನ ಮಡದಿಯೂ, ಅಗ್ನಿಶಿಖೆಯಂತೆ ದೀಪ್ತಳೂ ಆದ ಸುಮಿತ್ರೆಯನ್ನು ಕುರಿತು ಹೇಳುತ್ತಾನೆ.

೭೨. "ಮನೋಜವನ ಮಡದಿಯೇ! ನಿಜವಾಗಿಯೂ ಹೆದರಬೇಡ. ನಿಮ್ಮ ದುಃಖವು ಶೀಘ್ರದಲ್ಲಿಯೇ ಅಡಗುವುದು.

ಮೂರ್ಛಾಂ ವಿಹಾಯ ತೇ ಭದ್ರೇ ಕ್ಷಣಾದುತ್ಥಾಸ್ಯತೇ ಪತಿಃ ।
ತತಃ ಪರಾಶರೋ ವಿಪ್ರಃ ಪಾಣಿನಾ ತಂ ನರಾಧಿಪಂ ॥ ೨೩ ॥
ಪಸ್ಪರ್ಶ ಮಂತ್ರಂ ಪ್ರಜಪನ್ ಧ್ಯಾತ್ವಾ ದೇವಂ ತ್ರಿಯಂಬಕಂ ।
ತತೋ ಮನೋಜವೋ ರಾಜಾ ಕರಸ್ಪೃಷ್ಟೋ ಮಹಾಮುನೇಃ ॥ ೨೪ ॥
ಉತ್ಥಿತಃ ಸಹಸಾ ತತ್ರ ತ್ಯಕ್ತ್ವಾ ಮೂರ್ಛಾಂ ತಮೋಮಯೀಂ ।
ತತಃ ಪರಾಶರಮುನಿಂ ಪ್ರಣಮ್ಯ ಜಗತೀಪತಿಃ ।
ಉವಾಚ ಪರಮಪ್ರೀತಃ ಪ್ರಾಂಜಲಿರ್ವಿಪ್ರಸತ್ತಮಂ ॥ ೨೫ ॥

ಮನೋಜವ ಉವಾಚ :—

ಪರಾಶರಮುನೇ ತ್ವದ್ಯ ತ್ವತ್ಪಾದಾಬ್ಜನಿಷೇವಣಾತ್ ॥ ೨೬ ॥
ಮೂರ್ಛಾ ಮೇ ವಿಗತಾ ಸದ್ಯಃ ಪಾತಕಂ ಚೈವ ನಾಶಿತಂ ।
ತ್ವದ್ದರ್ಶನಮಪುಣ್ಯಾನಾಂ ನೈವ ಸಿಧ್ಯೇತ್ಕದಾಚನ ॥ ೨೭ ॥
ರಕ್ಷ ಮಾಂ ಕರುಣಾದೃಷ್ಟ್ಯಾ ಚ್ಯಾವಿತಂ ಶತ್ರುಭಿಃ ಪುರಾತ್ ।
ಇತ್ಯುಕ್ತಃ ಸ ಮುನಿಃ ಪ್ರಾಹ ರಾಜಾನಂ ತಂ ಮನೋಜವಂ ॥ ೨೮ ॥

ಪರಾಶರ ಉವಾಚ :—

ಉಪಾಯಂ ತೇ ಪ್ರವಕ್ಷ್ಯಾಮಿ ರಾಜನ್ ಶತ್ರುಜಯಾಯ ವೈ ।
ರಾಮಸೇತೌ ಮಹಾಪುಣ್ಯೇ ಗಂಧಮಾದನಪರ್ವತೇ ॥ ೨೯ ॥
ವಿದ್ಯತೇ ಮಂಗಲಂ ತೀರ್ಥಂ ಸರ್ವೈಶ್ವರ್ಯಪ್ರದಾಯಕಂ ।
ಸರ್ವಲೋಕೋಪಕಾರಾಯ ತಸ್ಮಿನ್ಸರಸಿ ರಾಘವಃ ॥ ೩೦ ॥

---

೨೩. ಭದ್ರೇ! ನಿನ್ನ ಪತಿಯು ಕ್ಷಣದಲ್ಲಿಯೇ ಮೂರ್ಛೆಯಿಂದೇಳು ವನು" ಎಂದು ನುಡಿದು ಪರಾಶರಮಹರ್ಷಿಯು ಪರಮೇಶ್ವರನನ್ನು ಧ್ಯಾನಿಸುತ್ತ, ಮಂತ್ರದೊಂದಿಗೆ ಆ ರಾಜನನ್ನು ಕೈಯಿಂದ ತಡವಿದನು.

೨೪–೨೫. ಬಳಿಕ ಆತನ ಕರಸ್ಪರ್ಶದಿಂದ ಮಹಾರಾಜನು ತಮೋಮಯ ವಾದ ಮೂರ್ಛೆಯನ್ನು ಬಿಟ್ಟು ಕೂಡಲೇ ಮೇಲಕ್ಕೆದ್ದು ಪರಾಶರನಿಗೆರಗಿ ಕೈಮುಗಿದು ಸಂತೋಷದಿಂದಾತನನ್ನು ಸ್ತುತಿಸತೊಡಗಿದನು.

೨೬–೨೭. ಮನೋಜವನು ಹೇಳುತ್ತಾನೆ:— "ಪರಾಶರಮಹರ್ಷಿಯೇ! ನಿನ್ನಡಿದಾವರೆಗಳ ಸೇವನೆಯಿಂದ ಈಗ ನನ್ನ ಮೂರ್ಛೆ ತೊಲಗಿದುದು ಮಾತ್ರ ವಲ್ಲದೆ, ನನ್ನ ಸಮಸ್ತ ಪಾತಕಗಳೂ ನಾಶಹೊಂದಿದುವು. ಪುಣ್ಯಮಾಡದವರಿಗೆ ನಿನ್ನ ದರ್ಶನವೆಂದೆಂದಿಗೂ ದೊರೆಯಲಾರದು.

೨೮. ಶತ್ರುಗಳಿಂದ ಪಟ್ಟಣದಿಂದೋಡಿಸಲ್ಪಟ್ಟ ನನ್ನನ್ನು ಕರುಣಾಕಟಾಕ್ಷ ದಿಂದ ರಕ್ಷಿಸು." ಇಂತು ಬೇಡಿದಾ ನೃಪತಿಗೆ ಪರಾಶರಮುನಿಯು ಹೇಳುತ್ತಾನೆ.

೨೯–೩೧. "ರಾಜನೇ! ಶತ್ರುವನ್ನು ಜಯಿಸಲೊಂದುಪಾಯವನ್ನು ಹೇಳು

ಸನ್ನಿಧತ್ತೇ ಸತಾ ಲಕ್ಷ್ಮ್ಯಾ ಸೀತಯಾ ರಾಜಸತ್ತಮ ।
ಸಪುತ್ರಭಾರ್ಯಸ್ತ್ವಂ ತತ್ರ ಗತ್ವಾ ಸ್ನಾತ್ವಾ ಸಭಕ್ತಿಕಂ ॥ ೬೧ ॥
ಕ್ಷೇತ್ರಶ್ರಾದ್ಧಾದಿಕಂ ಚಾಽಪಿ ತತ್ತೀರೇ ಕುರು ಭೂಪತೇ ।
ಏವಂ ಕೃತೇ ತ್ವಯಾ ರಾಜನ್ನಲಕ್ಷ್ಮೀಃ ಕ್ಲೇಶಕಾರಿಣೀ ॥ ೬೨ ॥
ವೈಭವಾತ್ತಸ್ಯ ತೀರ್ಥಸ್ಯ ನಾಶಂ ಯಾಸ್ಯತ್ಯಸಂಶಯಂ ।
ಮಂಗಲಾನಿ ಚ ಸರ್ವಾಣಿ ಪ್ರಾಪ್ಸ್ಯಸೇ ನಚಿರಾನ್ನೃಪ ॥ ೬೩ ॥
ವಿಜಿತ್ಯ ಶತ್ರೂಂಶ್ಚ ರಣೇ ಪುನರ್ಭೂಮಿಂ ಪ್ರಪತ್ಸ್ಯಸೇ ।
ಅತಸ್ತ್ವಂ ಭಾರ್ಯಯಾ ಸಾರ್ಧಂ ಪುತ್ರೇಣ ಚ ಮನೋಜವ ॥ ೬೪ ॥
ಗಚ್ಛ ಮಂಗಲತೀರ್ಥಂ ತದ್ಗಂಧಮಾದನಪರ್ವತೇ ।
ಅಹಮಪ್ಯಾಗಮಿಷ್ಯಾಮಿ ತವಾಽನುಗ್ರಹಕಾಮ್ಯಯಾ ॥ ೬೫ ॥
ಪರಾಶರಸ್ತ್ವೇವಮುಕ್ತ್ವಾ ರಾಜಮುಖ್ಯೈಸ್ತ್ರಿಭಿಃ ಸಹ ।
ಪ್ರಾಯಾತ್ಸೇತುಂ ಸಮುದ್ದಿಶ್ಯ ಸ್ನಾತುಂ ಮಂಗಲತೀರ್ಥಕೇ ॥ ೬೬ ॥
ರಾಜಾದಿಭಿಃ ಸಹ ಮುನಿರ್ವಿಲಂಘ್ಯ ವಿವಿಧಂ ವನಂ ।
ವನಪ್ರದೇಶದೇಶಾಂಶ್ಚ ದಸ್ಯುಗ್ರಾಮಾನನೇಕಶಃ ॥ ೬೭ ॥

---

ವೆನು; ಕೇಳು. ಶ್ರೀರಾಮನ ಸೇತುವಿನಲ್ಲಿರುವ ಪವಿತ್ರವಾದ ಗಂಧಮಾದನ ಪರ್ವತದಲ್ಲಿ ಸಕಲೈಶ್ವರ್ಯಗಳನ್ನೂ ನೀಡುವ ಮಂಗಳತೀರ್ಥವೆಂಬುದಿರುವುದು. ಅದರಲ್ಲಿ ಶ್ರೀರಾಘವನು ಸೀತಾರೂಪಿಣಿಯಾದ ಲಕ್ಷ್ಮಿಯೊಡನೆ ಲೋಕೋಪ ಕಾರಕ್ಕಾಗಿ ವಾಸಮಾಡುತ್ತಿರುವನು. ಭಾರ್ಯಾಪುತ್ರರೊಡನೆ ನೀನಲ್ಲಿಗೆ ಹೋಗಿ ಭಕ್ತಿಯಿಂದದರಲ್ಲಿ ಸ್ನಾನಮಾಡು.

೬೨–೬೩. ಎಲೈ ಭೂಪತಿಯೇ! ಅದರ ತೀರದಲ್ಲಿ ಕ್ಷೇತ್ರಶ್ರಾದ್ಧಾದಿ ಗಳನ್ನು ಮಾಡು. ಹೀಗೆ ಮಾಡಿದಲ್ಲಿ ಅದರ ಮಹಿಮೆಯಿಂದ ಕ್ಲೇಶಪ್ರದವಾದ ಅಲಕ್ಷ್ಮಿಯು ತೊಲಗುವುದು; ಸಂಶಯವಿಲ್ಲ. ಬಹುಕಾಲ ಸಮಸ್ತ ಶ್ರೇಯಸ್ಸು ಗಳನ್ನೂ ಅನುಭವಿಸಿಕೊಂಡಿರುವೆ.

೬೪–೬೫. ಶತ್ರುಗಳನ್ನು ಗೆಲ್ಲುವೆ. ಎಲೈ ಮನೋಜವನೆ! ಆದುದರಿಂದ ದಾರಾಪುತ್ರರೊಡನೆ ಗಂಧಮಾದನದಲ್ಲಿನ ಆ ಮಂಗಳತೀರ್ಥಕ್ಕೆ ನಡೆ. ನಿನ್ನ ಮೇಲಿನ ಅನುಗ್ರಹದಿಂದ ನಾನೂ ಅಲ್ಲಿಗೆ ಬರುವೆನು.''

೬೬. ಪರಾಶರನಿಂತು ನುಡಿದು, ಆ ಮೂವರೊಂದಿಗೆ ಕೂಡಿ ಮಂಗಳ ತೀರ್ಥದಲ್ಲಿ ಸ್ನಾನಮಾಡುವ ಆಸೆಯಿಂದ ರಾಮಸೇತುವಿಗೆ ತೆರಳಿದನು.

೬೭–೬೯. ಹೀಗೆ ನಡೆಯುತ್ತ ಅನೇಕ ವನಗಳನ್ನೂ, ಕಾಡುಪ್ರದೇಶ ಗಳನ್ನೂ, ಕಳ್ಳಕಾಕರ ಹಳ್ಳಿಗಳನ್ನೂ ಕಳೆದು, ಗಂಧಮಾದನಪರ್ವತದಲ್ಲಿನ

ಪ್ರಯಯೌ ಮಂಗಲಂ ತೀರ್ಥಂ ಗಂಧಮಾದನಪರ್ವತೇ ।
ತತ್ರ ಸಂಕಲ್ಪ್ಯ ವಿಧಿವತ್ಸಸ್ನೌ ಸ ಮುನಿಪುಂಗವಃ ॥ ೮೮ ॥
ತಾನಪಿ ಸ್ನಾಪಯಾಮಾಸ ರಾಜಾದೀನ್ವಿಧಿಪೂರ್ವಕಂ ।
ತತ್ರ ಶ್ರಾದ್ಧಂ ಚ ಭೂಪಾಲಶ್ಚಕಾರ ಪಿತೃತೃಪ್ತಯೇ ॥ ೮೯ ॥
ತತ್ರ ಮಾಸತ್ರಯಂ ಸಸ್ನೌ ರಾಜಾ ಪತ್ನೀ ಸುತಸ್ತಥಾ ।
ತತಃ ಪರಾಶರಮುನಿಃ ಸಸ್ನೌ ನಿಯಮಪೂರ್ವಕಂ ॥ ೯೦ ॥
ಏವಂ ಮಾಸತ್ರಯಂ ಸಸ್ನೌ ತೈಃ ಸಾಕಂ ಮುನಿಪುಂಗವಃ ।
ಮಂಗಲಾಖ್ಯೇ ಮಹಾಪುಣ್ಯೇ ಸರ್ವಾಂಗಮಲನಾಶನೇ ॥ ೯೧ ॥
ತತಃ ಪರಾಶರಮುನಿಃ ಸರ್ವಾನರ್ಥವಿನಾಶಕಂ ।
ರಾಮಸ್ಯೈಕಾಕ್ಷರಂ ಮಂತ್ರಂ ತದಂತೇ ಸಮುಪಾದಿಶತ್ ॥ ೯೨ ॥
ಚತ್ವಾರಿಂಶದ್ದಿನಂ ತತ್ರ ಮಂತ್ರಮೇಕಾಕ್ಷರಂ ನೃಪಃ ।
ತತ್ರ ತೀರ್ಥೇ ಜಜಾಪಾಽಸೌ ಮುನ್ಯುಕ್ತೇನೈವ ವರ್ತ್ಮನಾ ॥ ೯೩ ॥
ಏವಮಭ್ಯಸತಸ್ತಸ್ಯ ಮಂತ್ರಮೇಕಾಕ್ಷರಂ ದ್ವಿಜಾಃ ।
ಮುನಿಪ್ರಸಾದಾತ್ಪುರತೋ ಧನುಃ ಪ್ರಾದುರಭೂದ್ವೃಥಂ ॥ ೯೪ ॥
ಅಕ್ಷಯಾವಿಷುಧೀ ಚಾಽಪಿ ಖಡ್ಗೌ ಚ ಕನಕತ್ಸರೂ ।
ಏಕಂ ಚರ್ಮ ಗದಾ ಚೈಕಾ ತಥೈಕೋ ಮುಸಲೋತ್ತಮಃ ॥ ೯೫ ॥

---

ಮಂಗಳತೀರ್ಥವನ್ನು ಅವರೊಂದಿಗೆ ಸೇರಿ, ಸಂಕಲ್ಪಪೂರ್ವಕವಾಗಿ ಆ ಮಹರ್ಷಿಯು ತಾನೂ ಸ್ನಾನಮಾಡಿ, ವಿಧಿಪೂರ್ವಕವಾಗಿ ಅವರನ್ನೂ ಸ್ನಾನ ಮಾಡಿಸಿದನು. ಬಳಿಕ ರಾಜನು ಪಿತೃತೃಪ್ತಿಗಾಗಿ ಅಲ್ಲಿಯೇ ಕ್ಷೇತ್ರಶ್ರಾದ್ಧವನ್ನು ಮಾಡಿದನು.

೯೦–೯೧. ಹೀಗೆಯೇ ಪತ್ನೀಪುತ್ರರಿಂದ ಕೂಡಿದ ರಾಜನೂ, ಪರಾಶರ ಮಹರ್ಷಿಯೂ ಮೂರುತಿಂಗಳುಗಳ ಕಾಲ ಸರ್ವಾಂಗಮಲಮೋಚಕವಾದ ಮಂಗಳತೀರ್ಥದಲ್ಲಿ ಸ್ನಾನಮಾಡಿಕೊಂಡಿದ್ದರು.

೯೨. ಬಳಿಕ ಪರಾಶರಮುನಿಯು ಸಮಸ್ತ ವಿಪತ್ತುಗಳನ್ನೂ ತೊಲಗಿಸುವ ಶ್ರೀರಾಮನ ಏಕಾಕ್ಷರ ಮಂತ್ರವನ್ನು ಅದರ ಬಳಿ ರಾಜನಿಗೆ ಉಪದೇಶಿಸಿದನು.

೯೩. ರಾಜನು ಮಹರ್ಷಿಯು ಉಪದೇಶಿಸಿದ ರೀತಿಯಲ್ಲಿಯೇ ಆ ಮಂತ್ರವನ್ನು ಅಲ್ಲಿಯೇ ನಲವತ್ತು ದಿನಗಳು ಜಪಿಸುತ್ತಿದ್ದನು.

೯೪. ದ್ವಿಜರೇ! ಈ ಬಗೆಯಾಗಿ ಏಕಾಕ್ಷರ ಮಂತ್ರವನ್ನಭ್ಯಾಸಮಾಡುತ್ತಿರುವ ರಾಜನ ಮುಂದೆ ಆ ಮುನಿಯ ಪ್ರಭಾವದಿಂದೊಂದು ದೊಡ್ಡ ಧನುಸ್ಸು ಕಾಣಿಸಿಕೊಂಡಿತು.

೯೫–೯೬. ಅಂತೆಯೇ ಅಕ್ಷಯಬಾಣಗಳುಳ್ಳ ಎರಡು ಬತ್ತಳಿಕೆಗಳೂ,

ಏಕಃ ಶಂಖೋ ಮಹಾನಾದೋ ವಾಜಿಯುಕ್ತೋ ರಥಸ್ತಥಾ ।
ಸಸಾರಥಿಃ ಪತಾಕಾ ಚ ತೀರ್ಥಾದುತ್ಥಸ್ಥುರಗ್ರತಃ ॥ ೯೬ ॥
ಕವಚಂ ಕಾಂಚನಮಯಂ ವೈಶ್ವಾನರಸಮಪ್ರಭಂ ।
ಪ್ರಾದುರ್ಬಭೂವ ತತ್ತೀರ್ಥಾತ್ ಪ್ರಸಾದೇನ ಮುನೇಸ್ತಥಾ ॥ ೯೭ ॥
ಹಾರಕೇಯೂರಮುಕುಟಕಟಕಾದಿ ವಿಭೂಷಣಂ ।
ತೀರ್ಥಾನಾಂ ಪ್ರವರಾತ್ತಸ್ಮಾದುತ್ಥಿತಂ ನೃಪತೇಃ ಪುರಃ ॥ ೯೮ ॥
ದಿವ್ಯಾಂಬರಸಹಸ್ರಂ ಚ ತೀರ್ಥಾತ್ಪ್ರಾದುರಭೂತ್ತದಾ ।
ಮಾಲಾ ಚ ವೈಜಯಂತ್ಯಾಖ್ಯಾ ಸ್ವರ್ಣಪಂಕಜಶೋಭಿತಾ ॥ ೯೯ ॥
ಏತತ್ಸರ್ವಂ ಸಮಾಲೋಕ್ಯ ಮುನಯೇಽಸೌ ನ್ಯವೇದಯತ್ ।
ತತಃ ಪರಾಶರಮುನಿರ್ಜಲಮಾದಾಯ ತೀರ್ಥತಃ ॥ ೧೦೦ ॥
ಅಭ್ಯಷಿಂಚನ್ನರಪತಿಂ ಮಂತ್ರಪೂತೇನ ವಾರಿಣಾ ॥ ೧೦೧ ॥
ತತೋಽಭಿಷಿಕ್ತೋ ನೃಪತಿರ್ಮುನಿನಾ ಪರಿಶೋಭಿತಃ ।
ಸನ್ನದ್ಧಃ ಕವಚೀ ಖಡ್ಗೀ ಚಾಪಬಾಣಧರೋ ಯುವಾ ।
ಹಾರಕೇಯೂರಮುಕುಟಕಟಕಾದಿ ವಿಭೂಷಿತಃ ॥ ೧೦೨ ॥
ದಿವ್ಯಾಂಬರಧರಶ್ಚಾಽಪಿ ವಾಜಿಯುಕ್ತರಥಸ್ಥಿತಃ ।
ಶುಶುಭೇಽತೀವ ನೃಪತಿರ್ಮಧ್ಯಾಹ್ನ ಇವ ಭಾಸ್ಕರಃ ॥ ೧೦೩ ॥

---

ಚಿನ್ನದ ಹಿಡಿಯುಳ್ಳ ಎರಡು ಖಡ್ಗಗಳೂ, ಒಂದು ಗುರಾಣಿಯೂ, ಒಂದು ಗದೆಯೂ, ಒಂದು ಮುಸಲಾಯುಧವೂ, ಮಹಾಧ್ವನಿಗೈಯ್ಯುವ ಒಂದು ಶಂಖವೂ, ಪತಾಕಾಸಾರಥಿಗಳಿಂದೊಪ್ಪುವ ಅಶ್ವಸಹಿತವಾದ ಒಂದು ರಥವೂ ಆ ತೀರ್ಥದಿಂದೆದ್ದು ಹೊರಗೆ ಬಂದವು.

೯೭. ಮತ್ತು ಪಾವಕನಂತೆ ಪ್ರಕಾಶಮಾನವಾದ ಚಿನ್ನದ ಕವಚವೊಂದು ಮಹರ್ಷಿಯ ಅನುಗ್ರಹದಿಂದ ತೀರ್ಥದಿಂದ ಹೊರಬಿದ್ದಿತು.

೯೮. ಅಲ್ಲದೆ, ಕಿರೀಟ, ಹಾರ, ಕೇಯೂರ, ಕಟಕಾದಿ ಭೂಷಣಗಳೂ, ಸಮಸ್ತ ತೀರ್ಥಗಳಲ್ಲಗ್ರಗಣ್ಯವಾದ ಸರೋವರದಿಂದೆದ್ದು ಬಂದು ರಾಜನ ಬಳಿ ಬಿದ್ದವು.

೯೯. ಸಾವಿರಾರು ದಿವ್ಯಾಂಬರಗಳೂ, ಚಿನ್ನದ ಕಮಲಗಳಿಂದೊಪ್ಪುವ ವೈಜಯಂತಿ ಎಂಬ ಮಾಲೆಯೂ ಅದರಿಂದಲೇ ಬಂದೊದಗಿದವು.

೧೦೦–೧೦೧. ಈ ಎಲ್ಲವನ್ನೂ ನೋಡಿ ರಾಜನು ಪರಾಶರಮಹರ್ಷಿಗೆ ಬಿನ್ನವಿಸಿದನು. ಆಗ ಮಹರ್ಷಿಯು ಮಂತ್ರಶುದ್ಧವಾದ ಆ ತೀರ್ಥದಿಂದ ಜಲವನ್ನು ತೆಗೆದುಕೊಂಡು ಮಂತ್ರಪೂರ್ವಕವಾಗಿ ಆತನನ್ನಭಿಷೇಕಿಸಿದನು.

೧೦೨–೧೦೩. ಬಳಿಕ ಮುನಿಯಿಂದಭಿಷಿಕ್ತನಾದ ನೃಪತಿಯು, ಸನ್ನಾಹ

ತಸ್ಮೈ ನೃಪತಯೇ ತತ್ರ ಬ್ರಹ್ಮಾದ್ಯಸ್ತ್ರಂ ಮಹಾಮುನಿಃ ।
ಸಾಂಗಂ ಚ ಸರಹಸ್ಯಂ ಚ ಸೋತ್ಸರ್ಗಂ ಸೋಪಸಂಹೃತಿ ।
ಉಪಾದಿಶಚ್ಛಕ್ತಿಪುತ್ರಃ ಸುಮಿತ್ರಾಜಾನಯೇ ತದಾ ॥ ೧೦೪ ॥
ಮನೋಜವೋಽಥ ಮುನಿನಾ ಹ್ಯಾಶೀರ್ವಾದಪುರಸ್ಸರಂ ॥ ೧೦೫ ॥
ಪ್ರೇರಿತೋ ರಥಮಾಸ್ಥಾಯ ಪ್ರಣಮ್ಯ ಮುನಿಪುಂಗವಂ ।
ಪ್ರದಕ್ಷಿಣೀಕೃತ್ಯ ತದಾಽಭ್ಯನುಜ್ಞಾತೋ ಮಹರ್ಷಿಣಾ ।
ಸಾರ್ಧಂ ಪತ್ನ್ಯಾ ಚ ಪುತ್ರೇಣ ಪ್ರಯಯೌ ವಿಜಯಾಯ ಸಃ ॥ ೧೦೬ ॥
ಸ ಗತ್ವಾ ಸ್ವಪುರಂ ರಾಜಾ ಪ್ರದಧ್ಮೌ ಜಲಜಂ ತದಾ ॥ ೧೦೭ ॥
ತತಃ ಶಂಖರವಂ ಶ್ರುತ್ವಾ ಗೋಲಭಸ್ತು ಸಸೈನಿಕಃ ।
ಯುದ್ಧಾಯ ನಿರ್ಯಯೌ ತೂರ್ಣಂ ಮನೋಜವನೃಪೇಣ ಸಃ ॥೧೦೮॥
ದಿನತ್ರಯಂ ರಣಂ ಜಜ್ಞೇ ಗೋಲಭೇನ ನೃಪಸ್ಯ ವೈ ।
ತತಶ್ಚತುರ್ಥೇ ದಿವಸೇ ಗೋಲಭಂ ತು ಸಸೈನಿಕಂ ।
ಮನೋಜವೋ ನೃಪೋ ಯುದ್ಧೇ ಬ್ರಹ್ಮಾಸ್ತ್ರೇಣ ವ್ಯನಾಶಯತ್ ॥೧೦೯॥

---

ದೊಂದಿಗೆ ಕೂಡಿದವನೂ, ಕವಚಿಯೂ, ಖಡ್ಗಧಾರಿಯೂ, ಧನುರ್ಬಾಣಧಾರಿಯೂ, ಹಾರಕೇಯೂರಾದಿಗಳಿಂದ ವಿರಾಜಿಸುವವನೂ, ದಿವ್ಯಾಂಬರಧಾರಿಯೂ, ಕುದುರೆಗಳಿಂದ ಕೂಡಿದ ರಥವನ್ನೇರಿದವನೂ, ಯೌವನೋಪೇತನೂ ಆಗಿ ಮಧ್ಯಾಹ್ನದ ಸೂರ್ಯನಂತೆ ಕಂಗೊಳಿಸಿದನು.

೧೦೪. ಆಗ ಶಕ್ತಿಪುತ್ರನಾದ ಪರಾಶರಮಹರ್ಷಿಯು ಸುಮಿತ್ರಾಪತಿಯಾದ ಆತನಿಗೆ ಸಾಂಗವಾದ ಬ್ರಹ್ಮಾಸ್ತ್ರವನ್ನು ಪ್ರಯೋಗೋಪಸಂಹಾರದೊಂದಿಗೆ ಉಪದೇಶಮಾಡಿದನು.

೧೦೫–೧೦೬. ಮನೋಜವನು ಮುನಿಯಿಂದ ಆಶೀರ್ವಾದಪೂರ್ವಕವಾಗಿ ಪ್ರೇರಿತನಾಗಿ ರಥವನ್ನೇರಿ ಆತನಿಗೆ ಪ್ರದಕ್ಷಿಣಪೂರ್ವಕವಾಗೆರಗಿ, ಅಪ್ಪಣೆಯನ್ನು ಪಡೆದು, ಪತ್ನೀಪುತ್ರರೊಂದಿಗೆ ವಿಜಯಕ್ಕಾಗಿ ಹೊರಟನು.

೧೦೭. ಬಳಿಕ ಆತನು ತನ್ನ ಪಟ್ಟಣವನ್ನು ಸೇರಿ ಶಂಖವನ್ನೂದಿದನು.

೧೦೮. ಬಳಿಕ ಗೋಲಭನಾ ಶಂಖಧ್ವನಿಯನ್ನು ಕೇಳಿ ಮನೋಜವನೊಡನೆ ಯುದ್ಧಮಾಡಲು ಸೈನ್ಯದೊಂದಿಗೆ ಬಂದನು.

೧೦೯. ಅನಂತರ ಮೂರುದಿನಗಳು ಅವರಿಬ್ಬರಿಗೂ ಯುದ್ಧನಡೆದು ನಾಲ್ಕನೆಯ ದಿನ ಮನೋಜವನೃಪತಿಯು ಗೋಲಭನನ್ನು ಸೈನ್ಯಸಮೇತವಾಗಿ ಬ್ರಹ್ಮಾಸ್ತ್ರದಿಂದ ನಾಶಗೊಳಿಸಿದನು.

ತತಸ್ಸಪುತ್ರಭಾರ್ಯೋಽಯಂ ಪುರಂ ಪ್ರಾಪ್ಯ ನಿಜಂ ನೃಪಃ ।
ಪಾಲಯನ್ಪೃಥಿವೀಂ ಸರ್ವಾಂ ಬುಭುಜೇ ಭಾರ್ಯಯಾ ಸಹ ॥ ೧೧೦ ॥
ತದಾ ಪ್ರಭೃತಿ ರಾಜಾಽಸೌ ನಾಽಹಂಕಾರಂ ಚಕಾರ ವೈ ॥ ೧೧೧ ॥
ಅಸೂಯಾದೀಂಸ್ತಥಾ ದೋಷಾನ್ ವರ್ಜಯಾಮಾಸ ಭೂಪತಿಃ ।
ಅಹಿಂಸಾನಿರತೋ ದಾಂತಃ ಸದಾ ಧರ್ಮಪರೋಽಭವತ್ ॥ ೧೧೨ ॥
ಸಹಸ್ರಂ ವತ್ಸರಾನೇವಂ ರರಕ್ಷ ಸ ಮಹೀಪತಿಃ ।
ತತೋ ವಿರಕ್ತೋ ರಾಜೇಂದ್ರಃ ಪುತ್ರೇ ರಾಜ್ಯಂ ನಿಧಾಯ ತು ॥ ೧೧೩ ॥
ಜಗಾಮ ಮಂಗಲಂ ತೀರ್ಥಂ ಗಂಧಮಾದನಪರ್ವತೇ ।
ತಪಶ್ಚಚಾರ ತತ್ರಾಽಸೌ ಧ್ಯಾಯನ್ಹೃದಿ ಸದಾಶಿವಂ ॥ ೧೧೪ ॥
ತತೋಽಚಿರೇಣ ಕಾಲೇನ ತ್ಯಕ್ತ್ವಾ ದೇಹಂ ಮನೋಜವಃ ।
ಶಿವಲೋಕಂ ಯಯೌ ರಾಜಾ ತಸ್ಯ ತೀರ್ಥಸ್ಯ ವೈಭವಾತ್ ॥ ೧೧೫ ॥
ತಸ್ಯ ಭಾರ್ಯಾ ಸುಮಿತ್ರಾಽಪಿ ತಸ್ಯಾಲಿಂಗ್ಯ ತನುಂ ತದಾ ।
ಅನ್ವಾರೂಢಾ ಚಿತಾಂ ವಿಪ್ರಾಃ ಪ್ರಾಪ ತಲ್ಲೋಕಮೇವ ಸಾ ॥ ೧೧೬ ॥

ಶ್ರೀ ಸೂತ ಉವಾಚ :—

ಏವಂಪ್ರಭಾವಂ ತತ್ತೀರ್ಥಂ ಶ್ರೀಮನ್ಮಂಗಲನಾಮಕಂ ।
ಮನೋಜವೋ ನೃಪೋ ಯತ್ರ ಸ್ನಾತ್ವಾ ತೀರ್ಥೇ ಮಹತ್ತರೇ ॥ ೧೧೭ ॥

---

೧೧೦. ತರುವಾಯ ಮನೋಜವನು ನಿಜಪುರವನ್ನು ಪ್ರವೇಶಿಸಿ ರಾಜ್ಯವನ್ನಾಳುತ್ತ, ಭಾರ್ಯೆಯೊಡನೆ ಸುಖವಾಗಿದ್ದನು.

೧೧೧–೧೧೨. ಆಗಿನಿಂದಾರಾಜನು ಅಹಂಕಾರಪಡುತ್ತಿರಲಿಲ್ಲ. ಅಸೂಯಾದಿ ದೋಷಗಳನ್ನು ಬಿಟ್ಟು ಅಹಿಂಸಾನಿರತನೂ, ದಾಂತನೂ, ಯಾವಾಗಲೂ ಧರ್ಮಪರನೂ ಆಗಿದ್ದನು.

೧೧೩. ಈ ಬಗೆಯಾಗಿ ರಾಜನು ಒಂದುಸಾವಿರ ವರ್ಷಗಳು ರಾಜ್ಯವಾಳುತ್ತಿದ್ದು ಬಳಿಕ ವಿರಕ್ತನಾಗಿ ರಾಜ್ಯವನ್ನು ಮಗನಿಗೊಪ್ಪಿಸಿದನು.

೧೧೪. ಗಂಧಮಾದನದಲ್ಲಿನ ಮಂಗಳತೀರ್ಥಕ್ಕೆ ಹೋದನು. ಪ್ರತಿದಿನವೂ ಸದಾಶಿವನನ್ನು ಧ್ಯಾನಿಸುತ್ತ ತಪೋನಿರತನಾಗಿದ್ದನು.

೧೧೫. ಅದರಲ್ಲಿ ಸ್ನಾನಮಾಡುತ್ತ ಬಹುಕಾಲವಿದ್ದು ಬಳಿಕ ದೇಹವನ್ನು ಬಿಟ್ಟು, ಆ ತೀರ್ಥದ ಮಹಿಮೆಯಿಂದ ಶಿವಲೋಕವನ್ನೈದಿದನು.

೧೧೬. ಮಹರ್ಷಿಗಳಿರಾ! ಆತನ ಪತ್ನಿಯಾದ ಸುಮಿತ್ರೆಯೂ ಪತಿಯ ದೇಹವನ್ನಾಲಿಂಗಿಸಿಕೊಂಡು ಚಿತೆಯನ್ನು ಪ್ರವೇಶಿಸಿ ಆತನೊಂದಿಗೆ ತಾನೂ ಶಿವಲೋಕವನ್ನು ಪಡೆದಳು.

೧೧೭–೧೧೮. ಶ್ರೀಸೂತನು ಹೇಳುತ್ತಾನೆ :— ಮಂಗಳನಾಮಕವಾದಾ

ಶತ್ರೂನ್ವಿಜಿತ್ಯ ದೇಹಾಂತೇ ಶಿವಲೋಕಂ ಯಯೌ ಸ್ತ್ರಿಯಾ ।
ತಸ್ಮಾತ್ಸರ್ವಪ್ರಯತ್ನೇನ ಸೇವ್ಯಂ ಮಂಗಲತೀರ್ಥಕಂ ॥ ೧೧೮ ॥
ತೀರ್ಥಮೇತದತಿಶೋಭನಂ ಶಿವಂ
ಭುಕ್ತಿಮುಕ್ತಿಫಲದಂ ನೃಣಾಂ ಸದಾ ।
ಪಾಪರಾಶಿತೃಣತೂಲಪಾವಕಂ
ಸೇವತ ದ್ವಿಜವರಾ ವಿಮುಕ್ತಯೇ ॥ ೧೧೯ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಮಂಗಲತೀರ್ಥಪ್ರಶಂಸನಂ—ಮನೋಜವಾಽಲಕ್ಷ್ಮೀವಿನಾಶ ತೀರ್ಥವರ್ಣನಂ"ನಾಮ ದ್ವಾದಶೋಽಧ್ಯಾಯಃ

---

ತೀರ್ಥವು ಈ ಬಗೆಯ ಪ್ರಭಾವವುಳ್ಳದ್ದು. ಯಾವ ಮಹತ್ತರವಾದ ತೀರ್ಥದಲ್ಲಿ ಮನೋಜವನು ಪತ್ನಿಯೊಂದಿಗೆ ಸ್ನಾನಮಾಡಿ, ಶತ್ರುಗಳನ್ನು ಗೆದ್ದು, ಆ ತೀರ್ಥದ ಮಹಿಮೆಯಿಂದ ಕಡೆಯಲ್ಲಿ ಶಿವಸಾಯುಜ್ಯವನ್ನು ಪಡೆದನೊ, ಅಂತಹ ಆ ತೀರ್ಥವನ್ನು ಸರ್ವಪ್ರಯತ್ನದಿಂದಲೂ ಸೇವಿಸಬೇಕು.

೧೧೯. ಎಲೈ ದ್ವಿಜವರ್ಯರೇ! ಮಾನವರಿಗಾವಾಗಲೂ ಮಂಗಳಕರವೂ, ಭುಕ್ತಿಮುಕ್ತಿಗಳನ್ನು ಕೊಡುವಂತಹುದೂ, ಪಾಪರಾಶಿಗಳೆಂಬ ಹುಲ್ಲು, ಹತ್ತಿಗಳಿಗೆ ಬೆಂಕಿಯಂತಹುದೂ ಆದ ಅತಿ ಶೋಭನವಾದೀ ತೀರ್ಥವನ್ನು ಮೋಕ್ಷಪ್ರಾಪ್ತಿಗಾಗಿ ಸೇವಿಸಿರಿ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಮಂಗಳತೀರ್ಥದ ಪ್ರಶಂಸೆ—ಮನೋಜವಾಲಕ್ಷ್ಮೀವಿನಾಶತೀರ್ಥ ವರ್ಣನ"ವೆಂಬ ಪನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋದಶೋಽಧ್ಯಾಯಃ

### ಅಮೃತವಾಪೀಪ್ರಶಂಸಾಯಾಮಗಸ್ತ್ಯಭ್ರಾತೃವಿಮುಕ್ತಿವರ್ಣನಂ

ಶ್ರೀ ಸೂತ ಉವಾಚ :—

ಮಂಗಲಾಖ್ಯೇ ಮಹಾತೀರ್ಥೇ ನರಃ ಸ್ನಾತ್ವಾ ವಿಕಲ್ಮಷಃ ।
ಏಕಾಂತರಾಮನಾಥಾಖ್ಯಂ ಕ್ಷೇತ್ರಂ ಗಚ್ಛೇತ್ತತಃ ಪರಂ ॥ ೧ ॥
ತತ್ರ ರಾಮೋ ಜಗನ್ನಾಥೋ ಜಾನಕ್ಯಾ ಲಕ್ಷ್ಮಣೇನ ಚ ।
ಹನುಮತ್ಪ್ರಮುಖೈಶ್ಚಾಪಿ ವಾನರೈಃ ಪರಿವಾರಿತಃ ॥ ೨ ॥
ಸನ್ನಿಧತ್ತೇ ಸದಾ ವಿಪ್ರಾಃ ಲೋಕಾನುಗ್ರಹಕಾಮ್ಯಯಾ ।
ವಿದ್ಯತೇ ಪುಣ್ಯದಾ ತತ್ರ ನಾಮ್ನಾ ಹ್ಯಮೃತವಾಪಿಕಾ ॥ ೩ ॥
ತಸ್ಯಾಂ ನಿಮಜ್ಜತಾಂ ನೄಣಾಂ ನ ಜರಾಂತಕಜಂ ಭಯಂ ।
ಅಸ್ಯಾಮಮೃತವಾಪ್ಯಾಂ ಯಃ ಸಶ್ರದ್ಧಂ ಸ್ನಾತಿ ಮಾನವಃ ॥ ೪ ॥
ಅಮೃತತ್ವಂ ಭಜತ್ಯೇಷ ಶಂಕರಸ್ಯ ಪ್ರಸಾದತಃ ।
ಮಹಾಪಾತಕನಾಶಿನ್ಯಾಮಸ್ಯಾಂ ವಾಪ್ಯಾಂ ನಿಮಜ್ಜತಾಂ ।
ಅಮೃತತ್ವಂ ಹರೋ ದಾತುಂ ಸನ್ನಿಧತ್ತೇ ಸದಾ ತಟೇ ॥ ೫ ॥

---

### ಕನ್ನಡದ ಅನುವಾದ

#### ಅಮೃತವಾಪೀಪ್ರಶಂಸೆಯಲ್ಲಿ ಅಗಸ್ತ್ಯಭ್ರಾತೃಮುಕ್ತಿ

೧. ಶ್ರೀಸೂತನು ಹೇಳುತ್ತಾನೆ :— ಮನುಜನೀರೀತಿಯಾಗಿ ಮಂಗಳ ಮಹಾತೀರ್ಥದಲ್ಲಿ ಸ್ನಾನಮಾಡಿ ಪಾಪದಿಂದ ಮುಕ್ತನಾಗಿ ಬಳಿಕ ಏಕಾಂತರಾಮನಾಥವೆಂಬ ಕ್ಷೇತ್ರಕ್ಕೆ ತೆರಳಬೇಕು.

೨-೩. ಎಲೈ ವಿಪ್ರರೇ! ಅಲ್ಲಿ ಜಗತ್ತಿಗೆ ಒಡೆಯನಾದ ಶ್ರೀರಾಮನು ಸೀತಾಲಕ್ಷ್ಮಣರೊಡನೆ, ಹನುಮಂತನೇ ಮೊದಲಾದ ವಾನರರಿಂದ ಪರಿವೃತನಾಗಿ ಲೋಕಾನುಗ್ರಹಕ್ಕಾಗಿ ಯಾವಾಗಲೂ ವಾಸಮಾಡುತ್ತಿರುವನು. ಅಲ್ಲಿ 'ಅಮೃತವಾಪಿ' ಎಂಬ ಪುಣ್ಯತೀರ್ಥವಿರುವುದು.

೪-೫. ಅದರಲ್ಲಿ ಮುಳುಗುವ ಮಾನವರಿಗೆ, ಜರಾಮೃತ್ಯುಗಳ ಭೀತಿಯಿರುವುದಿಲ್ಲ. ಈ ಅಮೃತವಾಪಿಯಲ್ಲಿ ಶ್ರದ್ಧೆಯಿಂದ ಸ್ನಾನಮಾಡುವವರು ಶಂಕರನ ಅನುಗ್ರಹದಿಂದ ಅಮೃತತ್ವವನ್ನು ಪಡೆಯುತ್ತಾರೆ. ಮಹಾಪಾತಕನಾಶಿನಿಯಾದ ಈ ಅಮೃತವಾಪಿಯಲ್ಲಿ ಸ್ನಾನಮಾಡುವವರಿಗೆ, ಅಮೃತತ್ವವನ್ನು ನೀಡಲು ಹರನಾವಾಗಲೂ ಅದರ ದಡದಲ್ಲಿಯೇ ಸನ್ನಿಹಿತನಾಗಿರುವನು.

ಋಷಯ ಊಚುಃ :—

ಇಯಂ ಹ್ಯಮೃತವಾಹೀತಿ ಕುತೋ ಹೇತೋರ್ನಿಗದ್ಯತೇ ॥ ೬ ॥
ಅಸ್ಮಾಕಮೇತದ್ಬ್ರೂಹಿ ತ್ವಂ ಕೃಪಯಾ ವ್ಯಾಸಶಾಸಿತ ।
ತಥೈವಾಽಮೃತನಾಮಿನ್ಯಾ ವಾಪಿಕಾಯಾಶ್ಚ ವೈಭವಂ ।
ತೃಪ್ತಿರ್ನ ಜಾಯತೇಽಸ್ಮಾಕಂ ತ್ವದ್ವಚೋಽಮೃತಪಾಯಿನಾಂ ॥ ೭ ॥

ಶ್ರೀ ಸೂತ ಉವಾಚ :—

ಅಸ್ಯಾ ಅಮೃತನಾಮತ್ವಂ ವೈಭವಂ ಚ ಮನೋಹರಂ ॥ ೮ ॥
ಪ್ರವಕ್ಷ್ಯಾಮಿ ವಿಶೇಷೇಣ ಶೃಣುತ ದ್ವಿಜಸತ್ತಮಾಃ ।
ಪುರಾ ಹಿಮವತಃ ಪಾರ್ಶ್ವೇ ನಾನಾಮುನಿಸಮಾಕುಲೇ ॥ ೯ ॥
ಸಿದ್ಧಚಾರಣಗಂಧರ್ವದೇವಕಿನ್ನರಸೇವಿತೇ ।
ಸಿಂಹವ್ಯಾಘ್ರವರಾಹೇಭಮಹಿಷಾದಿ ಸಮಾಕುಲೇ ॥ ೧೦ ॥
ತಮಾಲತಾಲಹಿಂತಾಲಚಂಪಕಾಽಶೋಕಸಂತತೇ ।
ಹಂಸಕೋಕಿಲದಾತ್ಯೂಹಚಕ್ರವಾಕಾದಿ ಶೋಭಿತೇ ॥ ೧೧ ॥
ಪದ್ಮೇಂದೀವರಕಲ್ಹಾರಕುಮುದಾಢ್ಯ ಸರೋವೃತೇ ।
ಸತ್ಯವಾನ್ ಶೀಲವಾನ್ವಾಗ್ಮೀ ವಶೀ ಕುಂಭಜಸೋದರಃ ॥ ೧೨ ॥

---

೬–೭. ಋಷಿಗಳು ಕೇಳುತ್ತಾರೆ:—ವ್ಯಾಸಶಿಷ್ಯನಾದ ಸೂತನೆ! ಯಾವ ಕಾರಣದಿಂದಿದಕ್ಕೆ ಅಮೃತವಾಹಿನಿ ಎಂಬ ಹೆಸರುಂಟಾಯಿತು? ಮತ್ತು ಅದರ ವೈಭವವೆಂತಹುದು? ತಮ್ಮ ವಾಗಮೃತವನ್ನು ಪಾನಮಾಡುವ ನಮಗೆ ತೃಪ್ತಿಯುಂಟಾಗಿಲ್ಲವಾದುದರಿಂದೀ ವಿಚಾರವನ್ನರುಹು.

೮–೧೮. ಸೂತನು ಹೇಳುತ್ತಾನೆ:–ಎಲೈ ದ್ವಿಜರೇ! ಇದಕ್ಕೆ ಅಮೃತವಾಹಿನಿ ಎಂಬ ಹೆಸರು ಬರಲು ಕಾರಣವನ್ನೂ, ಮನೋಹರವಾದ ಅದರ ವೈಭವವನ್ನೂ ಅರುಹುವೆನು; ಕೇಳಿರಿ. ಹಿಂದೆ ಅನೇಕ ಮಹರ್ಷಿಗಳಿಂದ ಸಂವೃತವೂ, ಸಿದ್ಧ, ಚಾರಣ, ಗಂಧರ್ವ, ದೇವ, ಕಿನ್ನರಸೇವಿತವೂ, ಸಿಂಹ, ಹುಲಿ, ಕಾಡುಹಂದಿ, ಆನೆ, ಎಮ್ಮೆ ಮುಂತಾದ ಕ್ರೂರಮೃಗಗಳಿಂದ ಆವೃತವೂ, ಕಸ್ತೂರಿ, ಹೊಂಗೆ, ತಾಳೆ, ಗಿರಿಕರ್ಣಿಕೆ, ಸಂಪಿಗೆ, ಅಶೋಕ ಮುಂತಾದ ಹೂಗಿಡಗಳಿಂದೊಪ್ಪುವುದೂ, ಹಂಸ, ಕೋಗಿಲೆ, ನೀರುಕಾಗೆ, ಚಕ್ರವಾಕ ಮುಂತಾದ ಹಕ್ಕಿಗಳಿಂದ ಸಂಶೋಭಿತವೂ, ನೈದಿಲೆ, ಕೆಂದಾವರೆ ಮುಂತಾದುವುಗಳಿಂದ ಕೂಡಿದ ಸರೋವರಗಳಿಂದಾವೃತವೂ ಆದ ಹಿಮವತ್ಪರ್ವತದ ತಪ್ಪಲಲ್ಲಿ, ಸತ್ಯವಂತನೂ, ಶೀಲವಂತನೂ, ವಾಚಾಲನೂ, ವಶಿಯೂ, ಆದ ಅಗಸ್ತ್ಯನ ಸಹೋದರನು ಮೋಕ್ಷಾರ್ಥಿಯೂ, ಸದಾ ತಪಸ್ವಿಯೂ, ಶಂಕರನಿಗೆ ಪ್ರಿಯನೂ ಆಗಿ, ತ್ರಿಕಾಲ

ಆಸ್ತೇ ತಪಶ್ಚರನ್ನಿತ್ಯಂ ಮೋಕ್ಷಾರ್ಥೀ ಶಂಕರಪ್ರಿಯಃ ।
ತ್ರಿಕಾಲಮರ್ಚಯನ್ಶಂಭುಂ ವನ್ಯೈರ್ಮೂಲಫಲಾದಿಭಿಃ ॥ ೧೩ ॥
ಆಗತಾನ್ಸ್ವಾಶ್ರಮಾಽಭ್ಯಾಶಮತಿಥೀನ್ವನ್ಯಭೋಜನೈಃ ।
ಪೂಜಯನ್ನರ್ಚಯನ್ನಗ್ನಿಂ ಸಂಧ್ಯೋಪಾಸನತತ್ಪರಃ ॥ ೧೪ ॥
ಗಾಯತ್ರ್ಯಾದೀನ್ಮಹಾಮಂತ್ರಾನ್ಕಾಲೇ ಕಾಲೇ ಜಪನ್ಸದಾ ।
ನಿದ್ರಾಂ ಪರಿತ್ಯಜನ್ಬ್ರಾಹ್ಮೇ ಮುಹೂರ್ತೇ ವಿಷ್ಣುಚಿಂತಕಃ ॥ ೧೫ ॥
ಸ್ನಾನಂ ಕುರ್ವನ್ನುಷಃಕಾಲೇ ನಮನ್ಸಂಧ್ಯಾಂ ಪ್ರಸನ್ನಧೀಃ ।
ಗಾಯತ್ರೀಂ ಪ್ರಜಪನ್ವಿಪ್ರಃ ಪೂಜಯನ್ಹರಿಶಂಕರೌ ॥ ೧೬ ॥
ವೇದಾಽಧ್ಯಾಯೀ ಶಾಸ್ತ್ರಪಾಠೀ ಮಧ್ಯಾಹ್ನೇಽತಿಥಿಪೂಜಕಃ ।
ಶ್ರೋತಾ ಪುರಾಣಪಾಠಾನಾಮಗ್ನಿಕಾರ್ಯೇಷ್ವತಂದ್ರಿತಃ ॥ ೧೭ ॥
ಪಂಚಯಜ್ಞಪರೋ ನಿತ್ಯಂ ವೈಶ್ವದೇವಬಲಿಪ್ರದಃ ।
ಪ್ರತ್ಯಬ್ದಂ ಶ್ರಾದ್ಧಕೃತ್ಪಿತ್ರೋಸ್ತಥಾಽನ್ಯಶ್ರಾದ್ಧಕೃದ್ದ್ವಿಜಃ ॥ ೧೮ ॥
ಏವಂ ನಿನಾಯ ಕಾಲಂ ಸ ನಿತ್ಯಾಽನುಷ್ಠಾನತತ್ಪರಃ ।
ತಸ್ಯೈವಂ ವರ್ತಮಾನಸ್ಯ ತಪಶ್ಚರತ ಉತ್ತಮಂ ॥ ೧೯ ॥
ಸಹಸ್ರವರ್ಷಾಣ್ಯಗಮನ್ ಶಂಕರಾಸಕ್ತಚೇತಸಃ ।
ತಥಾಽಪಿ ಶಂಕರೋ ನಾಽಸ್ಯಾಯಯೌ ಪ್ರತ್ಯಕ್ಷತಾಂ ತದಾ ॥ ೨೦ ॥

---

ಗಳಲ್ಲಿಯೂ ಈಶ್ವರನನ್ನು ಅರ್ಚಿಸುತ್ತ ವನ್ಯಗಳಾದ ಕಂದಮೂಲಗಳಿಂದಲೂ, ಫಲಗಳಿಂದಲೂ, ಆಶ್ರಮಕ್ಕೆ ಬಂದ ಅತಿಥಿಗಳನ್ನು ಪೂಜಿಸುವವನೂ, ಅಗ್ನಿ ಪೂಜಕನೂ, ಸಂಧ್ಯಾದಿನಿತ್ಯಕರ್ಮನಿರತನೂ, ಗಾಯತ್ರ್ಯಾದಿ ಮಹಾಮಂತ್ರ ಗಳನ್ನು ಸಕಾಲದಲ್ಲಿ ಜಪಿಸುವವನೂ, ಬ್ರಾಹ್ಮಮುಹೂರ್ತದಲ್ಲೆದ್ದು ಶ್ರೀವಿಷ್ಣು ವನ್ನು ಧ್ಯಾನಿಸುವವನೂ ಆಗಿ ಉಷಃಕಾಲದಲ್ಲಿ ಸ್ನಾನಮಾಡಿ, ಪ್ರಸನ್ನಮನಸ್ಕ ನಾಗಿ ಸಂಧ್ಯೆಯನ್ನಾಚರಿಸಿ, ಗಾಯತ್ರಿಯನ್ನು ಜಪಿಸಿ, ಹರಿಹರರನ್ನು ಪೂಜಿಸಿ, ವೇದಾಧ್ಯಾಯಿಯೂ, ಶಾಸ್ತ್ರಪಾಠಿಯೂ, ಮಧ್ಯಾಹ್ನಕಾಲದಲ್ಲಿ ಅತಿಥಿ ಅಭ್ಯಾಗತರ ಪೂಜಕನೂ, ಪುರಾಣಗಳನ್ನು ಕೇಳುವವನೂ, ಅಗ್ನಿಕಾರ್ಯದಲ್ಲಿ ಅಪ್ರಮತ್ತನೂ, ಪಂಚಯಜ್ಞಗಳಲ್ಲಿ ನಿರತನೂ, ವೈಶ್ವದೇವ ಬಲಿಹರಣ ಗಳನ್ನು ನಡೆಸುವವನೂ, ಪ್ರತಿವರ್ಷವೂ, ಸಮಸ್ತ ಪಿತೃದಿನಗಳಲ್ಲಿಯೂ, ಪಿತ್ರೂದ್ದೇಶದಿಂದ ಶ್ರಾದ್ಧಕೃತ್ಯವನ್ನು ನೆರವೇರಿಸುವವನೂ ಆಗಿ ಕಾಲವನ್ನು ಕಳೆಯುತ್ತಿದ್ದನು.

೧೯–೨೦. ಈ ಬಗೆಯಾಗಿ ಆತನು ಶಂಕರನಲ್ಲಿ ಮನಸ್ಸಿಟ್ಟು ಸಾವಿರವರ್ಷ ಶ್ರೇಷ್ಠವಾದ ತಪಸ್ಸನ್ನುಮಾಡಿದರೂ ಶಂಕರನಾತನಿಗೆ ಪ್ರತ್ಯಕ್ಷನಾಗಲಿಲ್ಲ.

ತತಸ್ತ್ವಗಸ್ತ್ಯಭ್ರಾತಾಽಸೌ ಗ್ರೀಷ್ಮೇ ಪಂಚಾಗ್ನಿಮಧ್ಯಗಃ ।
ಭಾಸ್ಕರೇ ದತ್ತದೃಷ್ಟಿಶ್ಚ ಮೌನವ್ರತಸಮನ್ವಿತಃ ॥ ೨೧ ॥
ತಿಷ್ಠನ್ಸ್ವಕನಿಷ್ಠಿಕಾಂಗುಲ್ಯಾಂ ವಾಮಪಾದಸ್ಯ ನಿಶ್ಚಲಃ ।
ಊರ್ಧ್ವಬಾಹುರ್ನಿರಾಲಂಬಸ್ತಪಸ್ತೇಪೇಽತಿದಾರುಣಂ ॥ ೨೨ ॥
ಅಥ ತಸ್ಯ ಪ್ರಸನ್ನಾತ್ಮಾ ಮಹಾದೇವೋ ಘೃಣಾನಿಧಿಃ ।
ಪ್ರಾದುರಾಸೀತ್ಸ್ವಯಾ ದೀಪ್ತ್ಯಾ ದಿಶೋ ದಶ ವಿಭಾಸಯನ್ ॥ ೨೩ ॥
ತತೋಽದ್ರಾಕ್ಷೀನ್ಮುನಿಃ ಶಂಭುಂ ಸಾಂಬಂ ವೃಷಭಸಂಸ್ಥಿತಂ ।
ದೃಷ್ಟ್ವಾ ಪ್ರಣಮ್ಯ ತುಷ್ಟಾವ ಭವಾನೀಪತಿಮೀಶ್ವರಂ ॥ ೨೪ ॥

ಮುನಿರುವಾಚ:—

ನಮಸ್ತೇ ಪಾರ್ವತೀನಾಥ ನೀಲಕಂಠ ಮಹೇಶ್ವರ ।
ಶಿವ ರುದ್ರ ಮಹಾದೇವ ನಮಸ್ತೇ ಶಂಭವೇ ವಿಭೋ ॥ ೨೫ ॥
ಶ್ರೀಕಂಠೋಮಾಪತೇ ಶೂಲಿನ್ ಭಗನೇತ್ರ ಹರಾಽವ್ಯಯ ।
ಗಂಗಾಧರ ವಿರೂಪಾಕ್ಷ ನಮಸ್ತೇ ರುದ್ರ ಮನ್ಯವೇ ॥ ೨೬ ॥
ಅಂತಕಾರೇ ಕಾಮಶತ್ರೋ ದೇವದೇವ ಜಗತ್ಪತೇ ।
ಸ್ವಾಮಿನ್ಪಶುಪತೇ ಶರ್ವ ನಮಸ್ತೇ ಶತಧನ್ವನೇ ॥ ೨೭ ॥

---

೨೧–೨೨. ಬಳಿಕ ಆ ಅಗಸ್ತ್ಯಭ್ರಾತನು ಗ್ರೀಷ್ಮಕಾಲದಲ್ಲಿ, ಪಂಚಾಗ್ನಿ ಮಧ್ಯದಲ್ಲಿ ವಾಮಪಾದಾಂಗುಷ್ಠದ ಮೇಲೆ ನಿಂತು, ಊರ್ಧ್ವಬಾಹುವೂ, ನಿರಾಲಂಬನೂ ಆಗಿ ಸೂರ್ಯನನ್ನು ನೋಡುತ್ತ ತೀವ್ರವಾದ ತಪವನ್ನಾಚರಿಸಿದನು.

೨೩. ಬಳಿಕ ಕರುಣಾನಿಧಿಯಾದ ಮಹಾದೇವನು ಪ್ರಸನ್ನನಾಗಿ, ಸ್ವಕಾಂತಿಯಿಂದ ದಶದಿಕ್ಕುಗಳನ್ನೂ ಪ್ರಕಾಶಗೊಳಿಸುತ್ತ ಆತನ ಎದುರಿನಲ್ಲಿ ಪ್ರತ್ಯಕ್ಷನಾದನು.

೨೪–೨೫. ಆಗಲಾ ಮುನಿಯು ವೃಷಭಾರೂಢನೂ, ಸುಖಪ್ರದನೂ ಆದ ಸಾಂಬನನ್ನು ಕಂಡು, ನಮಸ್ಕರಿಸಿ, ಆ ಭವಾನೀಪತಿಯನ್ನಿಂತು ಹೊಗಳತೊಡಗಿದನು. "ಹೇ ಪಾರ್ವತೀಪತೆ! ನೀಲಕಂಠ! ಮಹೇಶ್ವರ! ಶಿವ! ರುದ್ರ, ಮಹಾದೇವ, ವಿಭುವೆ! ಸುಖಕರನಾದ ನಿನಗೆ ನಮಸ್ಕಾರ.

೨೬. ಶ್ರೀಕಂಠ! ಉಮಾಪತೇ! ಶೂಲಪಾಣೇ! ಭಗನೇತ್ರ; ಹರ, ಅವ್ಯಯ, ಗಂಗಾಧರ, ವಿರೂಪಾಕ್ಷ, ರುದ್ರ, ಮನ್ಯುವಾದ ನಿನಗೆರಗುವೆನು.

೨೭. ಅಂತಕರಿಪುವೆ! ಕಾಮಶತ್ರೊ! ದೇವದೇವ, ಜಗತ್ಪತೇ! ಪಶುಪತೇ! ಶರ್ವ, ಸ್ವಾಮಿನ್, ಶತಧನ್ವನಾದ ನಿನಗೆ ನಮಸ್ಕರಿಸುವೆನು.

ದಕ್ಷಯಜ್ಞವಿನಾಶಾಯ ಸ್ಥಾಯೂನಾಂ ಪತಯೇ ನಮಃ ।
ನಿಚೇರವೇ ನಮಸ್ತುಭ್ಯಂ ಪುಷ್ಟಾನಾಂ ಪತಯೇ ನಮಃ ॥ ೨೮ ॥
ಭೂಯೋ ಭೂಯೋ ನಮಸ್ತುಭ್ಯಂ ಮಹಾದೇವ ಕೃಪಾಲಯ ।
ದುಸ್ತರಾದ್ಭವಸಿಂಧೋರ್ಮಾಂ ತಾರಯಸ್ವ ತ್ರಿಲೋಚನ ॥ ೨೯ ॥
ಅಗಸ್ತ್ಯಸೋದರೇಣೈವಂ ಸ್ತುತಃ ಶಂಭುರಭಾಷತ ।
ಪ್ರೀಣಯನ್ವಚಸಾ ಸ್ವೇನ ಕುಂಭಜಸ್ಯಾಽನುಜಂ ಮುನಿಂ ॥ ೩೦ ॥

ಈಶ್ವರ ಉವಾಚ :—

ಕುಂಭಜಾಽನುಜ ವಕ್ಷ್ಯಾಮಿ ಮುಕ್ತ್ಯುಪಾಯಂ ತವಾಽನಘ ।
ಸೇತುಮಧ್ಯೇ ಮಹಾತೀರ್ಥಂ ಗಂಧಮಾದನಪರ್ವತೇ ॥ ೩೧ ॥
ಮಂಗಲಾಖ್ಯಸ್ಯ ತೀರ್ಥಸ್ಯ ನಾಽತಿದೂರೇಣ ವರ್ತತೇ ।
ತತ್ರ ಗತ್ವಾ ಕುರು ಸ್ನಾನಂ ತತೋ ಮುಕ್ತಿಮವಾಪ್ಸ್ಯಸಿ ॥ ೩೨ ॥
ತತ್ತೀರ್ಥಸೇವನಾನ್ನಾಽನ್ಯೋ ಮೋಕ್ಷೋಪಾಯೋ ಲಘುಸ್ತವ ।
ನ ಹಿ ತತ್ತೀರ್ಥವೈಶಿಷ್ಟ್ಯಂ ವಕ್ತುಂ ಶಕ್ಯಂ ಮಯಾಽಪಿ ಚ ॥ ೩೩ ॥
ಸಂದೇಹೋ ನಾಽತ್ರ ಕರ್ತವ್ಯಸ್ತ್ವಯಾಽದ್ಯ ಮುನಿಸತ್ತಮ ।
ತಸ್ಮಾತ್ತತ್ರೈವ ಗಚ್ಛ ತ್ವಂ ಯದೀಚ್ಛಸಿ ಭವಕ್ಷಯಂ ॥ ೩೪ ॥

---

೨೮. ದಕ್ಷಯಜ್ಞಧ್ವಂಸಿಯಾದ ಸ್ಥಾಯೂನಾಂಪತಿಗೆ ನಮಸ್ಕಾರ. ನಿಚೋರುವಿಗೆ ನಮಸ್ಕಾರ. ಪುಷ್ಟಪತಿಗೆ ನಮಸ್ಕಾರ.

೨೯. ಹೇ ಮಹಾದೇವ! ಕೃಪಾನಿಧೆ! ಬಾರಿಬಾರಿಗೂ ನಿನಗೆರಗುವೆನು. ಹೇ ತ್ರಿಲೋಚನ! ದುಸ್ತರವಾದ ಈ ಸಂಸಾರಸಾಗರದಿಂದ ನನ್ನನ್ನು ದಾಟಿಸು.”

೩೦. ಈ ಬಗೆಯಾಗಿ ಕುಂಭಜಸೋದರನಿಂದ ಸ್ತುತನಾದ ಶಂಭುವು ಆತನನ್ನು ತನ್ನ ಮಾತಿನಿಂದ ಸಂತೋಷಗೊಳಿಸುವವನಾಗಿ ಇಂತು ನುಡಿದನು.

೩೧–೩೨. ಈಶ್ವರನು ಹೇಳುತ್ತಾನೆ:— “ಎಲೈ ಕುಂಭಜಸೋದರನೆ! ನಿನಗೆ ಮೋಕ್ಷೋಪಾಯವನ್ನು ಹೇಳುವೆನು; ಕೇಳು. ಸೇತುಮಧ್ಯದಲ್ಲಿನ ಗಂಧಮಾದನಪರ್ವತದಲ್ಲಿ ಮಂಗಳತೀರ್ಥದ ಹತ್ತಿರ ಒಂದು ಮಹಾತೀರ್ಥವಿರುವುದು. ಅಲ್ಲಿಗೆ ಹೋಗಿ ಅದರಲ್ಲಿ ಸ್ನಾನಮಾಡು. ಅದರಿಂದ ನಿನಗೆ ಮುಕ್ತಿಯು ದೊರೆಯುವುದು.

೩೩. ಆ ತೀರ್ಥದ ಸೇವನೆಗಿಂತಲೂ, ಬೇರೊಂದು ಸುಲಭೋಪಾಯವು ನಿನಗಿರುವುದಿಲ್ಲ. ಆ ತೀರ್ಥದ ಮಹಿಮೆಯನ್ನು ಬಣ್ಣಿಸಲು ನನಗೂ ಶಕ್ತಿಯಿರುವುದಿಲ್ಲ.

೩೪. ಇದರಲ್ಲಿ ಸಂಶಯಪಡಬೇಡ. ಆದುದರಿಂದ ನೀನು ಸಂಸಾರದಿಂದ ಬಿಡುಗಡೆಯನ್ನಪೇಕ್ಷಿಸಿದಲ್ಲಿ ಈಗಲೇ ಅಲ್ಲಿಗೆ ಹೋಗು. ಅದರಲ್ಲಿ ಸ್ನಾನಮಾಡು.”

ಇತ್ಯುಕ್ತ್ವಾ ಭಗವಾನೀಶಸ್ತತ್ರೈವಾಂತರಧೀಯತ ।
ತತೋ ದೇವಸ್ಯ ವಚನಾದಗಸ್ತ್ಯಸ್ಯ ಸಹೋದರಃ ॥ ೩೫ ॥
ಗತ್ವಾ ಸೇತುಂ ಸಮುದ್ರೇ ತು ಗಂಧಮಾದನಪರ್ವತೇ ।
ಈಶ್ವರೇಣೈವ ಗದಿತಂ ತೀರ್ಥಂ ತಚ್ಛೀಘ್ರಮಾಸದತ್ ॥ ೩೬ ॥
ತತ್ರ ತೀರ್ಥೇ ಮಹಾಪುಣ್ಯೇ ಸ್ನಾತಾನಾಂ ಮುಕ್ತಿದಾಯಿನಿ ।
ಏಕಾಂತರಾಮನಾಥಾಖ್ಯಕ್ಷೇತ್ರಾಲಂಕರಣೇ ಶುಭೇ ॥ ೩೭ ॥
ಸಸ್ನೌ ನಿಯಮಪೂರ್ವಂ ಸ ತ್ರೀಣಿ ವರ್ಷಾಣಿ ವೈ ದ್ವಿಜಃ ।
ತತಶ್ಚತುರ್ಥವರ್ಷೇ ತು ಸಮಾಧಿಸ್ಥೋ ಮಹಾಮುನಿಃ ॥ ೩೮ ॥
ಬ್ರಹ್ಮನಾಡ್ಯಾಂ ಪ್ರಾಣವಾಯುಂ ಮೂರ್ಧನ್ಯಾರೋಪ್ಯ ಯೋಗತಃ ।
ಪ್ರಾಣಾನ್ನಿರ್ಗಮಯಾಮಾಸ ಬ್ರಹ್ಮರಂಧ್ರೇಣ ತತ್ರ ಸಃ ॥ ೩೯ ॥
ತತೋಽಗಸ್ತ್ಯಾನುಜಃ ಸೋಽಯಂ ಪರಿತ್ಯಜ್ಯ ಕಲೇಬರಂ ।
ಅವಾಪ ಮುಕ್ತಿಂ ಪರಮಾಂ ತಸ್ಯ ತೀರ್ಥಸ್ಯ ವೈಭವಾತ್ ॥ ೪೦ ॥
ವಿನಷ್ಟಾಽಶೇಷದುಃಖಸ್ಯ ತತ್ತೀರ್ಥಸ್ನಾನವೈಭವಾತ್ ।
ಅಮೃತತ್ವಮಭೂದ್ಯಸ್ಮಾದಗಸ್ತ್ಯಾನುಜಜನ್ಮನಃ ॥ ೪೧ ॥
ತತೋ ಹ್ಯಮೃತವಾಪೀತಿ ಪ್ರಥಾಽಸ್ಯಾಸೀನ್ಮುನೀಶ್ವರಾಃ ।
ಅತ್ರ ತೀರ್ಥೇ ನರಾ ಯೇ ತು ವರ್ಷತ್ರಯಮತಂದ್ರಿತಾಃ ॥ ೪೨ ॥

---

೩೫–೩೬. ಹೀಗೆ ಹೇಳಿ ಆ ಶಂಕರನಲ್ಲಿಯೇ ಅಂತರ್ಹಿತನಾದನು. ಬಳಿಕ ಅಗಸ್ತ್ಯಸೋದರನು ಶಂಕರನಪ್ಪಣೆಯಂತೆ ಸಮುದ್ರದೊಳಗಿನ ಸೇತುರೂಪವಾದ ಗಂಧಮಾದನಪರ್ವತಕ್ಕೆ ಹೋಗಿ ಈಶ್ವರೋಕ್ತವಾದ ಆ ತೀರ್ಥವನ್ನು ಸೇರಿದನು.

೩೭–೩೯. ಮಹಾಪುಣ್ಯಕರವೂ, ಸ್ನಾನಮಾಡುವವರ ಪಾಪಗಳನ್ನು ನೀಗುವಂತಹುದೂ, ಏಕಾಂತರಾಮನಾಥಕ್ಷೇತ್ರಕ್ಕೆ ಅಲಂಕಾರಪ್ರಾಯವೂ, ಶುಭಕರವೂ ಆದ ಆ ತೀರ್ಥದಲ್ಲಿ ನಿಯಮಪೂರ್ವಕವಾಗಿ ಮೂರು ವರ್ಷಗಳು ಸ್ನಾನಮಾಡುತ್ತಿದ್ದನು. ಬಳಿಕ ನಾಲ್ಕನೆಯ ವರ್ಷದಲ್ಲಿ ಆ ಮುನಿಯು ಸಮಾಧಿಮಗ್ನನಾಗಿ ಯೋಗಬಲದಿಂದ ಬ್ರಹ್ಮನಾಡಿಯ ಮೂಲಕ ಪ್ರಾಣ ವಾಯುವನ್ನು ಬ್ರಹ್ಮರಂಧ್ರಕ್ಕೇರಿಸಿ ಆ ಬ್ರಹ್ಮರಂಧ್ರದ ಮೂಲಕವಾಗಿಯೇ ಪ್ರಾಣಗಳನ್ನು ವಿಸರ್ಜಿಸಿದನು.

೪೦. ಈ ಬಗೆಯಾಗಿ ಅಗಸ್ತ್ಯಸೋದರನು ಕಳೇಬರವನ್ನು ತೊರೆದು ಆ ತೀರ್ಥದ ಮಹಿಮೆಯಿಂದ ಪರಮಪದವಾದ ಮೋಕ್ಷವನ್ನು ಪಡೆದನು.

೪೧–೪೨. ಆ ತೀರ್ಥದ ಪ್ರಭಾವದಿಂದ ಅಗಸ್ತ್ಯಭ್ರಾತೃವು ಸಮಸ್ತ ದುಃಖಗಳನ್ನೂ ತೊರೆದು ಅಮೃತತ್ವವನ್ನು ಪಡೆದನಾದಕಾರಣ ಆದಕ್ಕೆ ಅಮೃತ ವಾಪಿಯೆಂಬ ಹೆಸರು ಸುಪ್ರಸಿದ್ಧವಾಯಿತು. ಎಲೈ ಮುನೀಶ್ವರರುಗಳಿರಾ!

ಸ್ನಾನಂ ಕುರ್ವಂತಿ ತೇ ಸತ್ಯಮಮೃತತ್ವಂ ಪ್ರಯಾಂತಿ ಹಿ ।
ಏವಂ ತ್ವಮೃತವಾಪೀತಿ ಪ್ರಥಾ ತದ್ವೈಭವಂ ತಥಾ ।
ಯುಷ್ಮಾಕಂ ಕಥಿತಂ ವಿಪ್ರಾಃ ಕಿಂ ಭೂಯಃ ಶ್ರೋತುಮಿಚ್ಛಥ ॥ ೪೩ ॥

ಋಷಯ ಊಚುಃ—

ಏಕಾಂತರಾಮನಾಥಾಖ್ಯಾ ತಸ್ಯ ಕ್ಷೇತ್ರಸ್ಯ ವೈ ಮುನೇ ॥ ೪೪ ॥
ಕಥಂ ಸಮಾಗತಾ ಸೂತ ವಕ್ತುಮೇತತ್ತ್ವಮರ್ಹಸಿ ।
ಅಸ್ಮಾಕಂ ಮುನಿಶಾರ್ದೂಲ ತಚ್ಛುಶ್ರೂಷಾಽತಿ ಭೂಯಸೀ ॥ ೪೫ ॥

ಶ್ರೀ ಸೂತ ಉವಾಚ :—

ಪುರಾ ದಾಶರಥೀ ರಾಮಃ ಸಸುಗ್ರೀವವಿಭೀಷಣಃ ।
ಲಕ್ಷ್ಮಣೇನ ಯುತೋ ಭ್ರಾತ್ರಾ ಮಂತ್ರಜ್ಞೇನ ಹನೂಮತಾ ॥ ೪೬ ॥
ವಾನರೈರ್ಬಧ್ಯಮಾನೇ ತು ಸೇತಾವಂಬುಧಿಮಧ್ಯತಃ ।
ಚಿಂತಯನ್ಮನಸಾ ಸೀತಾಮೇಕಾಂತೇ ಸಮಮಂತ್ರಯತ್ ॥ ೪೭ ॥
ತೇಷು ಮಂತ್ರಯಮಾಣೇಷು ರಾವಣಾದಿವಧಂ ಪ್ರತಿ ।
ಉಲ್ಲೋಲತರಕಲ್ಲೋಲೋ ಜುಘೋಷ ಜಲಧಿರ್ಭೃಶಂ ॥ ೪೮ ॥
ಅರ್ಣವಸ್ಯ ಮಹಾಭೀಮೇ ಜೃಂಭಮಾಣೇ ಮಹಾಧ್ವನೌ ।
ಅನ್ಯೋನ್ಯಕಥಿತಾಂ ವಾರ್ತಾಂ ನಾಽಶೃಣ್ವಂಸ್ತೇ ಪರಸ್ಪರಂ ॥ ೪೯ ॥

---

ಈ ತೀರ್ಥದಲ್ಲಿ ಮೂರು ವರ್ಷಗಳು ಶ್ರದ್ಧೆಯಿಂದ ಸ್ನಾನಮಾಡುವ ಮನುಜರು ಸತ್ಯವಾಗಿಯೂ ಅಮೃತತ್ವವನ್ನು ಹೊಂದುವರು. ಅಯ್ಯಾ ಬ್ರಾಹ್ಮಣರುಗಳಿರಾ! ಈ ಬಗೆಯಾಗಿ ಅಮೃತವಾಪಿಯ ಪ್ರಭಾವವನ್ನೂ, ಆ ಹೆಸರಿಗೆ ಕಾರಣವನ್ನೂ ವಿವರಿಸಿರುವೆನು. ಮತ್ತೇನು ಕೇಳಬಯಸುವಿರಿ?

೪೪–೪೫. ಋಷಿಗಳು ಕೇಳುತ್ತಾರೆ :—ಸೂತಮಹರ್ಷಿಯೇ! ಆ ಕ್ಷೇತ್ರಕ್ಕೆ ಏಕಾಂತರಾಮನಾಥವೆಂಬ ಹೆಸರು ಬರಲು ಕಾರಣವೇನು? ಅದನ್ನು ಕೇಳಲು ನಮಗೆ ಬಹು ಆಸೆಯಾಗಿರುವುದು. ಅಪ್ಪಣೆ ಕೊಡಿಸಬೇಕು.

೪೬–೪೮. ಸೂತನು ಹೇಳುತ್ತಾನೆ:—ಹಿಂದೆ ವಾನರರು ಸಮುದ್ರದಲ್ಲಿ ಸೇತುವನ್ನು ಕಟ್ಟುತ್ತಿರುವಾಗ ದಶರಥನ ಕುವರನಾದ ರಾಮನು ಸುಗ್ರೀವ, ವಿಭೀಷಣರೊಂದಿಗೂ, ತಮ್ಮನಾದ ಲಕ್ಷ್ಮಣನೊಂದಿಗೂ, ಮಂತ್ರಜ್ಞನಾದ ಹನುಮಂತನೊಂದಿಗೂ, ಏಕಾಂತದಲ್ಲಿ ಕುಳಿತು ಸೀತೆಯನ್ನು ನೆನೆದು, ರಾವಣ ವಧೆಯನ್ನು ಕುರಿತು ವಿಚಾರಮಾಡುತ್ತಿದ್ದನು. ಆಗ ಸಮುದ್ರನು ಅತಿ ಚಂಚಲವಾದ ಅಲೆಗಳುಳ್ಳವನಾಗಿ ಗಟ್ಟಿಯಾಗಿ ಧ್ವನಿಮಾಡುತ್ತಿದ್ದನು.

೪೯. ಹೀಗೆ ಸಮುದ್ರದ ಭಯಂಕರವಾದ ಘರ್ಜನೆಯು ಹೆಚ್ಚಲು ಒಬ್ಬರ ಮಾತೊಬ್ಬರಿಗೆ ಕೇಳಿಸದಂತಾಯಿತು.

ತತಃ ಕಿಂಚಿದಿವ ಕ್ರುದ್ಧೋ ಭೃಕುಟೀಕುಟಿಲೇಕ್ಷಣಃ ।
ಭ್ರೂಭಂಗಲೀಲಯಾ ರಾಮೋ ನಿಯಮ್ಯ ಜಲಧಿಂ ತದಾ ॥ ೫೦ ॥
ನ್ಯಮಂತ್ರಯತ ವಿಪ್ರೇಂದ್ರಾ ರಾಕ್ಷಸಾನಾಂ ವಧಂ ಪ್ರತಿ ।
ಏಕಾಂತೇಽಮಂತ್ರಯತ್ತತ್ರ ತೈಃ ಸಾಕಂ ರಾಘವೋ ಯತಃ ॥ ೫೧ ॥
ಏಕಾಂತರಾಮನಾಥಾಖ್ಯಂ ತತ್ಕ್ಷೇತ್ರಮಭವದ್ದ್ವಿಜಾಃ ।
ಸೋಽಯಂ ನಿಯಮಿತೋ ವಾರ್ಧೀ ರಾಮಭ್ರೂಭಂಗಲೀಲಯಾ ॥ ೫೨ ॥
ಅದ್ಯಾಪಿ ನಿಶ್ಚಲಜಲಸ್ತತ್ರದೇಶೇಷು ದೃಶ್ಯತೇ ।
ಏಕಾಂತರಾಮನಾಥಾಖ್ಯಂ ತದೇತತ್ಕ್ಷೇತ್ರಮುತ್ತಮಂ ॥ ೫೩ ॥
ಆಗತ್ಯಾಽಮೃತವಾಪ್ಯಾಂ ಚ ಸ್ನಾತ್ವಾ ನಿಯಮಪೂರ್ವಕಂ ।
ರಾಮಾದೀನಪಿ ಸೇವಂತೇ ತೇ ಸರ್ವೇ ಮುಕ್ತಿಮಾಪ್ನುಯುಃ ॥ ೫೪ ॥

ಅದ್ವೈತವಿಜ್ಞಾನವಿವೇಕಶೂನ್ಯಾ
ವಿರಕ್ತಿಹೀನಾಶ್ಚ ಸಮಾಧಿಹೀನಾಃ ।
ಯೋಗಾದ್ಯನುಷ್ಠಾನವಿವರ್ಜಿತಾಶ್ಚ
ಸ್ನಾತ್ವಾಽತ್ರ ಯಾಸ್ಯಂತ್ಯಮೃತಂ ದ್ವಿಜೇಂದ್ರಾಃ ॥ ೫೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಅಮೃತವಾಪೀ ಪ್ರಶಂಸಾಯಾಮಗಸ್ತ್ಯಭ್ರಾತೃವಿಮುಕ್ತಿರ್ವರ್ಣನಂ" ನಾಮ ತ್ರಯೋದಶೋಽಧ್ಯಾಯಃ

---

೫೦. ಬಳಿಕ ರಾಮನು ಸ್ವಲ್ಪ ಕೋಪಗೊಂಡು ಹುಬ್ಬುಗಂಟಿಕ್ಕಿ ಕ್ರೂರವಾದ ನೋಟದಿಂದಲೇ ಆ ಸಮುದ್ರನನ್ನಣಗಿಸಿದನು.

೫೧–೫೪. ವಿಪ್ರರೇ! ತರುವಾಯ ರಾಮನು ಅವರೊಡನೆ ರಾವಣ ವಧೆಯನ್ನು ಕುರಿತು ರಹಸ್ಯವಾಗಿ ಅಲ್ಲಿ ಮಂತ್ರಾಲೋಚನೆಯನ್ನು ನಡೆಸಿದನು. ಆದುದರಿಂದದು ಏಕಾಂತರಾಮನಾಥವೆಂಬ ಪ್ರಖ್ಯಾತಿಯನ್ನು ಪಡೆದಿರುವುದು. ಆಗ ಶ್ರೀರಾಮನ ಭ್ರೂಭಂಗಮಾತ್ರದಿಂದ ಅಡಗಿಸಲ್ಪಟ್ಟ ಸಮುದ್ರನು ಅಲ್ಲಿ ಈಗಲೂ ಅಲೆಗಳಿಲ್ಲದೇ ನಿಶ್ಚಲನಾಗಿ ನಿಂತಿರುವನು. ಅಂತಹ ಈ ಏಕಾಂತ ರಾಮನಾಥ ಕ್ಷೇತ್ರವು ಅತ್ಯುತ್ತಮವಾದುದು. ಇಲ್ಲಿಗೆ ಬಂದು ಅಮೃತವಾಪಿಯಲ್ಲಿ ನಿಯಮಪೂರ್ವಕವಾಗಿ ಸ್ನಾನಮಾಡಿ ಅಲ್ಲಿ ನೆಲಸಿರುವ ರಾಮಾದಿಗಳನ್ನು ಸೇವಿಸುವವರೆಲ್ಲರೂ ಮುಕ್ತಿಯನ್ನು ಪಡೆಯುವರು.

೫೫. ಎಲೈ ದ್ವಿಜಶ್ರೇಷ್ಠರೇ! ಅದ್ವೈತಜ್ಞಾನವಿವೇಕರಹಿತರೂ, ವೈರಾಗ್ಯವಿಲ್ಲದವರೂ, ಸಮಾಧಿಶೂನ್ಯರೂ, ಯೋಗಾನುಷ್ಠಾನಾದಿಗಳನ್ನು ಆಚರಿಸದವರೂ ಕೂಡ ಇದರಲ್ಲಿ ಸ್ನಾನಮಾಡಿದಲ್ಲಿ ಅಮೃತತ್ವವನ್ನು ಪಡೆಯುತ್ತಾರೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಅಮೃತವಾಪಿಯ ಪ್ರಶಂಸೆಯಲ್ಲಿ ಅಗಸ್ತ್ಯಭ್ರಾತೃವಿಮುಕ್ತಿ ವರ್ಣನ"ವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು

ಉತ್ಪತ್ತೌ ತಸ್ಯ ಸಾಂಕರ್ಯಮನುಮೇಯಂ ವಿಪಶ್ಚಿತಾ ।
ಕದಾಚಿದಪಿ ಯೋ ಮರ್ತ್ಯೋ ಭಸ್ಮೈತತ್ತು ನ ಧಾರಯೇತ್ ॥ ೧೩ ॥
ಉತ್ಪತ್ತೌ ತಸ್ಯ ಸಾಂಕರ್ಯಮನುಮೇಯಂ ವಿಪಶ್ಚಿತಾ ॥ ೧೬ ॥
ಬ್ರಹ್ಮಕುಂಡಸಮುದ್ಭೂತಂ ಭಸ್ಮ ದದ್ಯಾದ್ದ್ವಿಜಾಯ ಯಃ ।
ಚತುರರ್ಣವಪರ್ಯಂತಾ ತೇನ ದತ್ತಾ ವಸುಂಧರಾ ।
ಸಂದೇಹೋ ನಾತ್ರ ಕರ್ತವ್ಯಸ್ತ್ರಿರ್ವಾ ಶಪಥಯಾಮ್ಯಹಂ ॥ ೧೭ ॥
ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ।
ಬ್ರಹ್ಮಕುಂಡೋದ್ಭವಂ ಭಸ್ಮ ಧಾರಯಧ್ವಂ ದ್ವಿಜೋತ್ತಮಾಃ ॥ ೧೮ ॥
ಏತದ್ಧಿ ಪಾವನಂ ಭಸ್ಮ ಬ್ರಹ್ಮಯಜ್ಞಸಮುದ್ಭವಂ ।
ಪುರಾ ಹಿ ಭಗವಾನ್ಬ್ರಹ್ಮಾ ಸರ್ವಲೋಕಪಿತಾಮಹಃ ॥ ೧೯ ॥
ಸನ್ನಿಧೌ ಸರ್ವದೇವಾನಾಂ ಪರ್ವತೇ ಗಂಧಮಾದನೇ ।
ಈಶಶಾಪನಿವೃತ್ತ್ಯರ್ಥಂ ಕ್ರತೂನ್ಸರ್ವಾನ್ಸಮಾತನೋತ್ ॥ ೨೦ ॥
ವಿಧಾಯ ವಿಧಿವತ್ಸರ್ವಾನಧ್ವರಾನ್ಬಹುದಕ್ಷಿಣಾನ್ ।
ಮುಮುಚೇ ಸಹಸಾ ಬ್ರಹ್ಮಾ ಶಂಭುಶಾಪಾದ್ದ್ವಿಜೋತ್ತಮಾಃ ॥ ೨೧ ॥

---

ಭಸ್ಮಾಂತರದಿಂದ ತ್ರಿಪುಂಡ್ರವನ್ನು ಧರಿಸುವನೋ, ಅವನ ಜನನವು ಸಾಂಕರ್ಯದಿಂದ ಕೂಡಿದುದೆಂದೂಹಿಸಬೇಕು. ಯಾವನೊಮ್ಮೆಯಾದರೂ ಈ ಭಸ್ಮವನ್ನು ಧರಿಸುವುದಿಲ್ಲವೊ, ಅವನ ಉತ್ಪತ್ತಿಯು ಸಾಂಕರ್ಯದೂಷಿತವೆಂದರಿಯಬೇಕು.

೧೭–೧೮. ಯಾವನು ಈ ಭಸ್ಮವನ್ನು ಬ್ರಾಹ್ಮಣನಿಗೆ ದಾನಮಾಡುವನೊ ಅವನು ಚತುಸ್ಸಮುದ್ರಪರ್ಯಂತವಾದ ಭೂಮಿಯನ್ನು ದಾನಮಾಡಿದ ಫಲವನ್ನು ಪಡೆಯುವನು. ಇದರಲ್ಲಿ ಸಂಶಯಪಡಬೇಕಾಗಿಲ್ಲ. ನಿಜ, ನಿಜ, ನಿಜವೆಂದು ಕೈಮೇಲಕ್ಕೆತ್ತಿ ಮೂರುಸಾರಿಗೂ ಶಪಥಮಾಡುವೆನು. ಎಲೈ ದ್ವಿಜರೇ! ಆದುದರಿಂದೀ ಭಸ್ಮವನ್ನು ನೀವುಗಳು ಧರಿಸಿರಿ.

೧೯–೨೦. ಈ ಪಾವನವಾದ ಭಸ್ಮವು ಬ್ರಹ್ಮದೇವನ ಯಜ್ಞದಿಂದುಂಟಾದುದು. ಹಿಂದೆ, ಸಮಸ್ತ ಲೋಕಗಳಿಗೂ ಪಿತಾಮಹನಾದ ಭಗವಾನ್ ಬ್ರಹ್ಮದೇವನು ಗಂಧಮಾದನಪರ್ವತದಲ್ಲಿ ಸಮಸ್ತ ದೇವತೆಗಳ ಸಾನ್ನಿಧ್ಯದಲ್ಲಿ ಪರಮೇಶ್ವರನ ಶಾಪದ ನಿವೃತ್ತಿಗಾಗಿ ಸಮಸ್ತ ಕ್ರತುಗಳನ್ನೂ ನೆರವೇರಿಸಿದನು.

೨೧. ಈ ಬಗೆಯಾಗಿ ಬಹು ದಕ್ಷಿಣಾಸಾಧ್ಯವಾದ ಸಮಸ್ತ ಯಾಗಗಳನ್ನು ವಿಧಿವತ್ತಾಗಿ ಮಾಡಿ ಶಂಭುಶಾಪದಿಂದ ಕೂಡಲೇ ಮುಕ್ತನಾದನು.

ತದೇತತ್ತೀರ್ಥಮಾಸಾದ್ಯ ಸ್ನಾನಂ ಕುರ್ವಂತಿ ಯೇ ನರಾಃ ।
ತೇ ಮಹಾದೇವಸಾಯುಜ್ಯಂ ಪ್ರಾಪ್ನುವಂತಿ ನ ಸಂಶಯಃ ॥ ೨೨ ॥

ಋಷಯ ಊಚುಃ :—

ವ್ಯಾಸಶಿಷ್ಯ ಮಹಾಪ್ರಾಜ್ಞ ಪುರಾಣಾರ್ಥವಿಶಾರದ ।
ಚತುರ್ದಶಾನಾಂ ಲೋಕಾನಾಂ ಸ್ರಷ್ಟಾರಂ ಚತುರಾನನಂ ॥ ೨೩ ॥
ಶಂಭುಃ ಕೇನಾಽಪರಾಧೇನ ಶಪ್ತವಾನ್ಭಾರತೀಪತಿಂ ।
ಶಾಪಶ್ಚ ಕೀದೃಶಸ್ತಸ್ಯ ಪುರಾ ದತ್ತೋ ಹರೇಣ ವೈ ।
ಏತತ್ಸರ್ವಂ ಮುನೇ ಬ್ರೂಹಿ ತತ್ವತೋಽಸ್ಮಾಕಮಾದರಾತ್ ॥ ೨೪ ॥

ಶ್ರೀ ಸೂತ ಉವಾಚ :—

ಪುರಾ ಬಭೂವ ಕಲಹೋ ಬ್ರಹ್ಮವಿಷ್ಣ್ವೋಃ ಪರಸ್ಪರಂ ॥ ೨೫ ॥
ಕಂಚಿದ್ಧೇತುಂ ಸಮುದ್ದಿಶ್ಯ ಸ್ಪರ್ಧಯಾ ಶ್ಲಾಘಮಾನಯೋಃ ।
ಅಹಂ ಕರ್ತಾ ನ ಮತ್ತೋಽನ್ಯಃ ಕರ್ತಾಽಸ್ತಿ ಜಗತೀತಲೇ ॥ ೨೬ ॥
ಏವಮಾಹ ಹರಿಂ ಬ್ರಹ್ಮಾ ಬ್ರಹ್ಮಾಣಂ ಚ ಹರಿಸ್ತಥಾ ।
ಏವಂ ವಿವಾದಃ ಸುಮಹಾನ್ಪ್ರಾವರ್ತತ ಪುರಾ ತಯೋಃ ॥ ೨೭ ॥
ಏತಸ್ಮಿನ್ನಂತರೇ ವಿಪ್ರಾಃ ಕುರ್ವತೋಃ ಕಲಹಂ ಮಿಥಃ ।
ತಯೋರ್ಗರ್ವವಿನಾಶಾಯ ಪ್ರಬೋಧಾರ್ಥಂ ಚ ದೇವಯೋಃ ॥ ೨೮ ॥

---

೨೨. ಆದುದರಿಂದ ಯಾರು ಈ ತೀರ್ಥದಲ್ಲಿ ಸ್ನಾನಮಾಡುವರೊ, ಅವರು ನಿಸ್ಸಂಶಯವಾಗಿ ಮಹಾದೇವನ ಸಾಯುಜ್ಯವನ್ನು ಪಡೆಯುತ್ತಾರೆ.

೨೩–೨೪. ಋಷಿಗಳು ಕೇಳುತ್ತಾರೆ:—ಮಹಾಪಂಡಿತನೂ, ಪುರಾಣಾರ್ಥಗಳನ್ನು ಚೆನ್ನಾಗಿ ಅರಿತವನೂ ಆದ ಎಲೈ ವ್ಯಾಸಶಿಷ್ಯನೇ! ಹದಿನಾಲ್ಕುಲೋಕಗಳಿಗೂ ಸೃಷ್ಟಿಕರ್ತನೂ, ಭಾರತೀಪತಿಯೂ ಆದ ಚತುರ್ಮುಖನನ್ನು ಈಶ್ವರನು ಯಾವ ಅಪರಾಧಕ್ಕಾಗಿ ಶಪಿಸಿದನು? ಶಾಪವಾದರೂ ಎಂತಹುದು? ಎಲೈ ಮುನಿಯೇ! ಈ ಎಲ್ಲವನ್ನೂ ಆದರದಿಂದೆಮಗೆ ವಿಶದವಾಗಿ ಅಪ್ಪಣೆಕೊಡಿಸು.

೨೫–೨೭. ಶ್ರೀಸೂತನು ಹೇಳುತ್ತಾನೆ:—ಹಿಂದೊಮ್ಮೆ ಯಾವುದೊ ಒಂದು ನೆಪವನ್ನು ಮನಸ್ಸಿನಲ್ಲಿಟ್ಟುಕೊಂಡು, "ನಾನೇ ಸೃಷ್ಟಿಕರ್ತನು, ನನಗಿಂತಲೂ ಮಿಗಿಲಾದವರು ಬೇರೊಬ್ಬರಿಲ್ಲ" ಎಂದು ಹರಿಯೂ, ಅಂತೆಯೇ ಬ್ರಹ್ಮನೂ ಪರಸ್ಪರ ಆತ್ಮಶ್ಲಾಘಾಪರರಾಗಿ ಅವರಿಬ್ಬರೂ ಸ್ಪರ್ಧೆಯಿಂದ ಕಲಹಮಾಡಿಕೊಂಡರು.

೨೮–೨೯. ಎಲೈ ವಿಪ್ರರೇ! ಈ ಸಮಯದಲ್ಲಿ, ಈ ಬಗೆಯಾಗಿ, ಪರಸ್ಪರ ಕಲಹಮಾಡುವ ಅವರಿಬ್ಬರ ನಡುವೆ ಅವರ ಗರ್ವವನ್ನು ಹೋಗಲಾಡಿಸಿ

॥ ಶ್ರೀಃ ॥

## ಅಥ ಚತುರ್ದಶೋಽಧ್ಯಾಯಃ

### ಬ್ರಹ್ಮಕುಂಡಪ್ರಶಂಸಾಯಾಂ ಬ್ರಹ್ಮಶಾಪವಿಮೋಕ್ಷಣವರ್ಣನಂ

ಶ್ರೀ ಸೂತ ಉವಾಚ :—

ಸ್ನಾತ್ವಾ ತ್ವಮೃತವಾಪ್ಯಾಂ ವೈ ಸೇವಿತ್ವೈಕಾಂತರಾಘವಂ ।
ಜಿತೇಂದ್ರಿಯೋ ನರಃ ಸ್ನಾತುಂ ಬ್ರಹ್ಮಕುಂಡಂ ತತೋ ವ್ರಜೇತ್ ॥ ೧ ॥
ಸೇತುಮಧ್ಯೇ ಮಹಾತೀರ್ಥಂ ಗಂಧಮಾದನಪರ್ವತೇ ।
ಬ್ರಹ್ಮಕುಂಡಮಿತಿ ಖ್ಯಾತಂ ಸರ್ವದಾರಿದ್ರ್ಯಭೇಷಜಂ ॥ ೨ ॥
ವಿದ್ಯತೇ ಬ್ರಹ್ಮಹತ್ಯಾನಾಮಯುತಾಽಯುತನಾಶನಂ ।
ದರ್ಶನಂ ಬ್ರಹ್ಮಕುಂಡಸ್ಯ ಸರ್ವಪಾಪೌಘನಾಶನಂ ॥ ೩ ॥
ಕಿಂ ತಸ್ಯ ಬಹುಭಿಸ್ತೀರ್ಥೈಃ ಕಿಂ ತಪೋಭಿಃ ಕಿಮಧ್ವರೈಃ ।
ಮಹಾದಾನೈಶ್ಚ ಕಿಂ ತಸ್ಯ ಬ್ರಹ್ಮಕುಂಡವಿಲೋಕಿನಃ ॥ ೪ ॥
ಬ್ರಹ್ಮಕುಂಡೇ ಸಕೃತ್ಸ್ನಾನಂ ವೈಕುಂಠಪ್ರಾಪ್ತಿಕಾರಣಂ ।
ಬ್ರಹ್ಮಕುಂಡಸಮುದ್ಭೂತಂ ಭಸ್ಮ ಯೇನ ಧೃತಂ ದ್ವಿಜಾಃ ॥ ೫ ॥
ತಸ್ಯಾಽನುಗಾಸ್ತ್ರಯೋ ದೇವಾ ಬ್ರಹ್ಮವಿಷ್ಣುಮಹೇಶ್ವರಾಃ ।
ಬ್ರಹ್ಮಕುಂಡಸಮುದ್ಭೂತ ಭಸ್ಮನಾ ಯಸ್ತ್ರಿಪುಂಡ್ರಕಂ ॥ ೬ ॥

---

### ಕನ್ನಡದ ಅನುವಾದ

#### ಬ್ರಹ್ಮಕುಂಡಪ್ರಶಂಸೆಯಲ್ಲಿ ಬ್ರಹ್ಮಶಾಪಮೋಕ್ಷವರ್ಣನ

೧. ಸೂತನು ಹೇಳುತ್ತಾನೆ:—ಮಾನವನು ಅಮೃತವಾಪಿಯಲ್ಲಿ ಸ್ನಾನ ಮಾಡಿ ಏಕಾಂತರಾಮನಾಥನನ್ನು ಸೇವಿಸಿ, ಜಿತೇಂದ್ರಿಯನಾಗಿ ಸ್ನಾನಕ್ಕಾಗಿ ಬ್ರಹ್ಮಕುಂಡಕ್ಕೆ ತೆರಳಬೇಕು.

೨-೩. ಗಂಧಮಾದನಪರ್ವತದಲ್ಲಿ ಸೇತುಮಧ್ಯದಲ್ಲಿ ಬ್ರಹ್ಮಕುಂಡವೆಂಬ ಮಹಾತೀರ್ಥವು ಸಮಸ್ತ ದಾರಿದ್ರ್ಯರೋಗಕ್ಕೆ ಔಷಧಪ್ರಾಯವೆಂದು ಹೆಸರು ಪಡೆದಿದೆ. ಮತ್ತು ಕೋಟಿ ಮಹಾಪಾತಕಗಳನ್ನು ನಾಶಪಡಿಸುವಂತಹುದಾಗಿದೆ. ಬ್ರಹ್ಮಕುಂಡದ ದರ್ಶನವು ಸಮಸ್ತ ಪಾಪರಾಶಿಗಳನ್ನೂ ನಾಶಗೊಳಿಸುವುದು.

೪. ಬ್ರಹ್ಮಕುಂಡವನ್ನು ದರ್ಶಿಸಿದವನಿಗೆ ಅನೇಕ ತೀರ್ಥಗಳಿಂದಾಗಲೀ, ತಪಸ್ಸುಗಳಿಂದಾಗಲೀ, ಯಾಗಗಳಿಂದಾಗಲೀ, ಮಹಾ ದಾನಗಳಿಂದಾಗಲೀ ಯಾವ ಪ್ರಯೋಜನವಾಗಬೇಕಾಗಿರುವುದು ?

೫-೬. ಬ್ರಹ್ಮಕುಂಡದಲ್ಲೊಮ್ಮೆ ಸ್ನಾನಮಾಡಿದರೂ ವೈಕುಂಠಪ್ರಾಪ್ತಿಯಾಗುವುದು. ಅಯ್ಯಾ ದ್ವಿಜರೇ! ಯಾವನು ಬ್ರಹ್ಮಕುಂಡದಲ್ಲಿ ಹುಟ್ಟಿದ ಭಸ್ಮವನ್ನು ಧರಿಸುವನೋ, ಅವನಿಗೆ ಬ್ರಹ್ಮ ವಿಷ್ಣು ಮಹೇಶ್ವರರು ಮೂವರೂ

ಕರೋತಿ ತಸ್ಯ ಕೈವಲ್ಯಂ ಕರಸ್ಥಂ ನಾಽತ್ರಸಂಶಯಃ ।
ತದ್ಭಸ್ಮಪರಮಾಣುರ್ವಾ ಯೋ ಲಲಾಟೇ ಧೃತೋ ಭವೇತ್ ॥ ೭ ॥
ತಾವದೇವಾಽಸ್ಯ ಮುಕ್ತಿಃ ಸ್ಯಾನ್ನಾಽತ್ರ ಕಾರ್ಯಾ ವಿಚಾರಣಾ ।
ತತ್ಕುಂಡಭಸ್ಮನಾ ಮರ್ತ್ಯಃ ಕುರ್ಯಾದುದ್ಧೂಲನಂ ತು ಯಃ ॥ ೮ ॥
ತಸ್ಯ ಪುಣ್ಯಫಲಂ ವಕ್ತುಂ ಶಂಕರೋ ವೇತ್ತಿ ವಾ ನ ವಾ ।
ಬ್ರಹ್ಮಕುಂಡಸಮುದ್ಭೂತಂ ಭಸ್ಮ ಯೋ ನೈವ ಧಾರಯೇತ್ ॥ ೯ ॥
ರೌರವೇ ನರಕೇ ಸೋಽಯಂ ಪತೇದಾಚಂದ್ರತಾರಕಂ ।
ಉದ್ಧೂಲನಂ ತ್ರಿಪುಂಡ್ರಂ ವಾ ಬ್ರಹ್ಮಕುಂಡಸ್ಥಭಸ್ಮನಾ ॥ ೧೦ ॥
ನರಾಧಮೋ ನ ಕುರ್ಯಾದ್ಯಃ ಸುಖಂ ನಾಽಸ್ಯ ಕದಾಚನ ।
ಬ್ರಹ್ಮಕುಂಡಸಮುದ್ಭೂತಭಸ್ಮನಿಂದಾರತಸ್ತು ಯಃ ॥ ೧೧ ॥
ಉತ್ಪತ್ತೌ ತಸ್ಯ ಸಾಂಕರ್ಯಮನುಮೇಯಂ ವಿಪಶ್ಚಿತಾ ।
ಬ್ರಹ್ಮಕುಂಡಸಮುದ್ಭೂತಂ ಭಸ್ಮೈತಲ್ಲೋಕಪಾವನಂ ॥ ೧೨ ॥
ಅನ್ಯಭಸ್ಮಸಮಂ ಯಸ್ತು ನ್ಯೂನಂ ವಾ ವಕ್ತಿ ಮಾನವಃ ।
ಉತ್ಪತ್ತೌ ತಸ್ಯ ಸಾಂಕರ್ಯಮನುಮೇಯಂ ವಿಪಶ್ಚಿತಾ ॥ ೧೩ ॥
ಬ್ರಹ್ಮಕುಂಡಸಮುದ್ಭೂತೇಽಪ್ಯಸ್ಮಿನ್ಭಸ್ಮನಿ ಜಾಗ್ರತಿ ।
ಭಸ್ಮಾಂತರೇಣ ಮನುಜೋ ಧಾರಯೇದ್ಯಸ್ತ್ರಿಪುಂಡ್ರಕಂ ॥ ೧೪ ॥

---

ವಶರಾಗಿರುತ್ತಾರೆ. ಬ್ರಹ್ಮಕುಂಡದ ಭಸ್ಮದಿಂದ ತ್ರಿಪುಂಡ್ರವನ್ನು ರಚಿಸುವವನಿಗೆ ಕೈವಲ್ಯವು ಕೈಗೆಟಕಿದಂತಹುದು. ಇದರಲ್ಲಿ ಸಂಶಯವಿಲ್ಲ. ಕಡೆಗೆ ಆ ಭಸ್ಮದ ಪರಮಾಣುವನ್ನು ಲಲಾಟದಲ್ಲಿ ಧರಿಸಿದವನಿಗೂ ಕೂಡ ಮೋಕ್ಷವು ದೊರಕುವುದು. ಇದರಲ್ಲಿ ವಿಚಾರವೇ ಇಲ್ಲ.

೯–೧೨. ಆ ಬ್ರಹ್ಮಕುಂಡದ ಭಸ್ಮವನ್ನು ಬಳಿದವನಿಗುಂಟಾಗುವ ಫಲವು ಶಂಕರನಿಗೂ ಗೊತ್ತಿರುವುದೋ ಇಲ್ಲವೋ. ಯಾವನು ಬ್ರಹ್ಮಕುಂಡದ ಭಸ್ಮವನ್ನು ಧರಿಸುವುದೇ ಇಲ್ಲವೊ ಅವನು ಆಚಂದ್ರತಾರಕವಾಗಿ ರೌರವ ನರಕದಲ್ಲಿ ಬೀಳುವನು. ಯಾವ ನರಾಧಮನು ಆ ಬ್ರಹ್ಮಕುಂಡದ ಭಸ್ಮದಿಂದ ಲೇಪನವನ್ನೂ, ತ್ರಿಪುಂಡ್ರವನ್ನೂ ಮಾಡಿಕೊಳ್ಳುವುದಿಲ್ಲವೊ ಅವನಿಗೆಂದೆಂದಿಗೂ ಸುಖವಿಲ್ಲ. ಯಾವನು ಬ್ರಹ್ಮಕುಂಡದ ಭಸ್ಮವನ್ನು ದೂಷಿಸುವನೊ, ಅವನ ಹುಟ್ಟಿನಲ್ಲಿ ಸಾಂಕರ್ಯದೋಷವಿದೆಯೆಂದು ವಿದ್ವಾಂಸನು ಎಣಿಸತಕ್ಕದ್ದು.

೧೩. ಯಾವನು ಪರಮಪಾವನವಾದ ಬ್ರಹ್ಮಕುಂಡದ ಭಸ್ಮವನ್ನು ಬೇರೆ ಭಸ್ಮಕ್ಕೆ ಸಮವಾಗಿಯಾಗಲೀ ಕಡೆಯಾಗಿಯಾಗಲೀ ಎಣಿಸುವನೋ, ಅವನ ಹುಟ್ಟು ಸಾಂಕರ್ಯದಿಂದ ಕೂಡಿದುದೆಂದೆಣಿಸತಕ್ಕದ್ದು.

೧೪–೧೭. ಬ್ರಹ್ಮಕುಂಡದ ಈ ಭಸ್ಮವು ಸಿದ್ಧವಾಗಿರುವಲ್ಲಿ ಯಾವನು

ಉತ್ಪತ್ತೌ ತಸ್ಯ ಸಾಂಕರ್ಯಮನುಮೇಯಂ ವಿಪಶ್ಚಿತಾ ।
ಕದಾಚಿದಪಿ ಯೋ ಮರ್ತ್ಯೋ ಭಸ್ಮೈತತ್ತು ನ ಧಾರಯೇತ್ ॥ ೧೫ ॥
ಉತ್ಪತ್ತೌ ತಸ್ಯ ಸಾಂಕರ್ಯಮನುಮೇಯಂ ವಿಪಶ್ಚಿತಾ ॥ ೧೬ ॥
ಬ್ರಹ್ಮಕುಂಡಸಮುದ್ಭೂತಂ ಭಸ್ಮ ದದ್ಯಾದ್ದ್ವಿಜಾಯ ಯಃ ।
ಚತುರರ್ಣವಪರ್ಯಂತಾ ತೇನ ದತ್ತಾ ವಸುಂಧರಾ ।
ಸಂದೇಹೋ ನಾತ್ರ ಕರ್ತವ್ಯಸ್ತ್ರಿರ್ವಾ ಶಪಥಯಾಮ್ಯಹಂ ॥ ೧೭ ॥
ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ।
ಬ್ರಹ್ಮಕುಂಡೋದ್ಭವಂ ಭಸ್ಮ ಧಾರಯಧ್ವಂ ದ್ವಿಜೋತ್ತಮಾಃ ॥ ೧೮ ॥
ಏತದ್ಧಿ ಪಾವನಂ ಭಸ್ಮ ಬ್ರಹ್ಮಯಜ್ಞಸಮುದ್ಭವಂ ।
ಪುರಾ ಹಿ ಭಗವಾನ್ಬ್ರಹ್ಮಾ ಸರ್ವಲೋಕಪಿತಾಮಹಃ ॥ ೧೯ ॥
ಸನ್ನಿಧೌ ಸರ್ವದೇವಾನಾಂ ಪರ್ವತೇ ಗಂಧಮಾದನೇ ।
ಈಶಶಾಪನಿವೃತ್ತ್ಯರ್ಥಂ ಕ್ರತೂನ್ಸರ್ವಾನ್ಸಮಾತನೋತ್ ॥ ೨೦ ॥
ವಿಧಾಯ ವಿಧಿವತ್ಸರ್ವಾನಧ್ವರಾನ್ಬಹುದಕ್ಷಿಣಾನ್ ।
ಮುಮುಚೇ ಸಹಸಾ ಬ್ರಹ್ಮಾ ಶಂಭುಶಾಪಾದ್ದ್ವಿಜೋತ್ತಮಾಃ ॥ ೨೧ ॥

---

ಭಸ್ಮಾಂತರದಿಂದ ತ್ರಿಪುಂಡ್ರವನ್ನು ಧರಿಸುವನೋ, ಅವನ ಜನನವು ಸಾಂಕರ್ಯದಿಂದ ಕೂಡಿದುದೆಂದೂಹಿಸಬೇಕು. ಯಾವನೊಮ್ಮೆಯಾದರೂ ಈ ಭಸ್ಮವನ್ನು ಧರಿಸುವುದಿಲ್ಲವೊ, ಅವನ ಉತ್ಪತ್ತಿಯು ಸಾಂಕರ್ಯದೂಷಿತವೆಂದರಿಯಬೇಕು.

೧೭–೧೮. ಯಾವನು ಈ ಭಸ್ಮವನ್ನು ಬ್ರಾಹ್ಮಣನಿಗೆ ದಾನಮಾಡುವನೊ ಅವನು ಚತುಸ್ಸಮುದ್ರಪರ್ಯಂತವಾದ ಭೂಮಿಯನ್ನು ದಾನಮಾಡಿದ ಫಲವನ್ನು ಪಡೆಯುವನು. ಇದರಲ್ಲಿ ಸಂಶಯಪಡಬೇಕಾಗಿಲ್ಲ. ನಿಜ, ನಿಜ, ನಿಜವೆಂದು ಕೈಮೇಲಕ್ಕೆತ್ತಿ ಮೂರುಸಾರೆಗೂ ಶಪಥಮಾಡುವೆನು. ಎಲೈ ದ್ವಿಜರೇ! ಆದುದರಿಂದೀ ಭಸ್ಮವನ್ನು ನೀವುಗಳು ಧರಿಸಿರಿ.

೧೯–೨೦. ಈ ಪಾವನವಾದ ಭಸ್ಮವು ಬ್ರಹ್ಮದೇವನ ಯಜ್ಞದಿಂದುಂಟಾದುದು. ಹಿಂದೆ, ಸಮಸ್ತ ಲೋಕಗಳಿಗೂ ಪಿತಾಮಹನಾದ ಭಗವಾನ್ ಬ್ರಹ್ಮದೇವನು ಗಂಧಮಾದನಪರ್ವತದಲ್ಲಿ ಸಮಸ್ತ ದೇವತೆಗಳ ಸಾನ್ನಿಧ್ಯದಲ್ಲಿ ಪರಮೇಶ್ವರನ ಶಾಪದ ನಿವೃತ್ತಿಗಾಗಿ ಸಮಸ್ತ ಕ್ರತುಗಳನ್ನೂ ನೆರವೇರಿಸಿದನು.

೨೧. ಈ ಬಗೆಯಾಗಿ ಬಹು ದಕ್ಷಿಣಾಸಾಧ್ಯವಾದ ಸಮಸ್ತ ಯಾಗಗಳನ್ನು ವಿಧಿವತ್ತಾಗಿ ಮಾಡಿ ಶಂಭುಶಾಪದಿಂದ ಕೂಡಲೇ ಮುಕ್ತನಾದನು.

ತದೇತತ್ತೀರ್ಥಮಾಸಾದ್ಯ ಸ್ನಾನಂ ಕುರ್ವಂತಿ ಯೇ ನರಾಃ ।
ತೇ ಮಹಾದೇವಸಾಯುಜ್ಯಂ ಪ್ರಾಪ್ನುವಂತಿ ನ ಸಂಶಯಃ ॥ ೨೨ ॥

ಋಷಯ ಊಚುಃ:—

ವ್ಯಾಸಶಿಷ್ಯ ಮಹಾಪ್ರಾಜ್ಞ ಪುರಾಣಾರ್ಥವಿಶಾರದ ।
ಚತುರ್ದಶಾನಾಂ ಲೋಕಾನಾಂ ಸ್ರಷ್ಟಾರಂ ಚತುರಾನನಂ ॥ ೨೩ ॥
ಶಂಭುಃ ಕೇನಾಪರಾಧೇನ ಶಪ್ತವಾನ್ಭಾರತೀಪತಿಂ ।
ಶಾಪಶ್ಚ ಕೀದೃಶಸ್ತಸ್ಯ ಪುರಾ ದತ್ತೋ ಹರೇಣ ವೈ ।
ಏತತ್ಸರ್ವಂ ಮುನೇ ಬ್ರೂಹಿ ತತ್ವತೋಽಸ್ಮಾಕಮಾದರಾತ್ ॥ ೨೪ ॥

ಶ್ರೀ ಸೂತ ಉವಾಚ:—

ಪುರಾ ಬಭೂವ ಕಲಹೋ ಬ್ರಹ್ಮವಿಷ್ಣ್ವೋಃ ಪರಸ್ಪರಂ ॥ ೨೫ ॥
ಕಂಚಿದ್ಧೇತುಂ ಸಮುದ್ದಿಶ್ಯ ಸ್ಪರ್ಧಯಾ ಶ್ಲಾಘಮಾನಯೋಃ ।
ಅಹಂ ಕರ್ತಾ ನ ಮತ್ತೋಽನ್ಯಃ ಕರ್ತಾಽಸ್ತಿ ಜಗತೀತಲೇ ॥ ೨೬ ॥
ಏವಮಾಹ ಹರಿಂ ಬ್ರಹ್ಮಾ ಬ್ರಹ್ಮಾಣಂ ಚ ಹರಿಸ್ತಥಾ ।
ಏವಂ ವಿವಾದಃ ಸುಮಹಾನ್ಪ್ರಾವರ್ತತ ಪುರಾ ತಯೋಃ ॥ ೨೭ ॥
ಏತಸ್ಮಿನ್ನಂತರೇ ವಿಪ್ರಾಃ ಕುರ್ವತೋಃ ಕಲಹಂ ಮಿಥಃ ।
ತಯೋರ್ಗರ್ವವಿನಾಶಾಯ ಪ್ರಬೋಧಾರ್ಥಂ ಚ ದೇವಯೋಃ ॥ ೨೮ ॥

---

೨೨. ಆದುದರಿಂದ ಯಾರು ಈ ತೀರ್ಥದಲ್ಲಿ ಸ್ನಾನಮಾಡುವರೊ, ಅವರು ನಿಸ್ಸಂಶಯವಾಗಿ ಮಹಾದೇವನ ಸಾಯುಜ್ಯವನ್ನು ಪಡೆಯುತ್ತಾರೆ.

೨೩–೨೪. ಋಷಿಗಳು ಕೇಳುತ್ತಾರೆ:—ಮಹಾಪಂಡಿತನೂ, ಪುರಾಣಾರ್ಥಗಳನ್ನು ಚೆನ್ನಾಗಿ ಅರಿತವನೂ ಆದ ಎಲೈ ವ್ಯಾಸಶಿಷ್ಯನೇ! ಹದಿನಾಲ್ಕುಲೋಕಗಳಿಗೂ ಸೃಷ್ಟಿಕರ್ತನೂ, ಭಾರತೀಪತಿಯೂ ಆದ ಚತುರ್ಮುಖನನ್ನು ಈಶ್ವರನು ಯಾವ ಅಪರಾಧಕ್ಕಾಗಿ ಶಪಿಸಿದನು? ಶಾಪವಾದರೂ ಎಂತಹುದು? ಎಲೈ ಮುನಿಯೇ! ಈ ಎಲ್ಲವನ್ನೂ ಆದರದಿಂದೆಮಗೆ ವಿಶದವಾಗಿ ಅಪ್ಪಣೆಕೊಡಿಸು.

೨೫–೨೭. ಶ್ರೀಸೂತನು ಹೇಳುತ್ತಾನೆ:—ಹಿಂದೊಮ್ಮೆ ಯಾವುದೊ ಒಂದು ನೆಪವನ್ನು ಮನಸ್ಸಿನಲ್ಲಿಟ್ಟುಕೊಂಡು, "ನಾನೇ ಸೃಷ್ಟಿಕರ್ತನು, ನನಗಿಂತಲೂ ಮಿಗಿಲಾದವರು ಬೇರೊಬ್ಬರಿಲ್ಲ" ಎಂದು ಹರಿಯೂ, ಅಂತೆಯೇ ಬ್ರಹ್ಮನೂ ಪರಸ್ಪರ ಆತ್ಮಶ್ಲಾಘಾಪರರಾಗಿ ಅವರಿಬ್ಬರೂ ಸ್ಪರ್ಧೆಯಿಂದ ಕಲಹಮಾಡಿಕೊಂಡರು.

೨೮–೨೯. ಎಲೈ ವಿಪ್ರರೇ! ಈ ಸಮಯದಲ್ಲಿ, ಈ ಬಗೆಯಾಗಿ, ಪರಸ್ಪರ ಕಲಹಮಾಡುವ ಅವರಿಬ್ಬರ ನಡುವೆ ಅವರ ಗರ್ವವನ್ನು ಹೋಗಲಾಡಿಸಿ

ಮಧ್ಯೇ ಪ್ರಾದುರಭೂಲ್ಲಿಂಗಂ ಸ್ವಯಂಜ್ಯೋತಿರನಾಮಯಂ ।
ತೌ ದೃಷ್ಟ್ವಾ ವಿಸ್ಮಿತೌ ಲಿಂಗಂ ಬ್ರಹ್ಮವಿಷ್ಣೂ ಪರಸ್ಪರಂ ॥ ೨೯ ॥
ಸಮಯಂ ಚಕ್ರತುರ್ವಿಪ್ರಾ ದೇವಾನಾಂ ಸನ್ನಿಧೌ ಪುರಾ ।
ಅನಾದ್ಯಂತಂ ಮಹಾಲಿಂಗಂ ಯದೇತದ್ದೃಶ್ಯತೇ ಪುರಃ ॥ ೩೦ ॥
ಅನಂತಾದಿತ್ಯಸಂಕಾಶಮನಂತಾಽಗ್ನಿಸಮಪ್ರಭಂ ।
ಆವಯೋರಸ್ಯ ಲಿಂಗಸ್ಯ ಯೋಽಂತಮಾದಿಂ ಚ ದ್ರಕ್ಷ್ಯತಿ ॥ ೩೧ ॥
ಸ ಭವೇದಧಿಕೋ ಲೋಕೇ ಲೋಕಕರ್ತಾ ಚ ಸ ಪ್ರಭುಃ ।
ಅಹಮೂರ್ಧ್ವಂ ಗಮಿಷ್ಯಾಮಿ ಲಿಂಗಸ್ಯಾಂತಂ ಗವೇಷಯನ್ ॥ ೩೨ ॥
ಗವೇಷಣಾಯ ಮೂಲಸ್ಯ ತ್ವಮಧಸ್ತಾದ್ಧರೇ ವ್ರಜ ।
ಇತಿ ತಸ್ಯ ವಚಃ ಶ್ರುತ್ವಾ ತಥೇತ್ಯಾಹ ರಮಾಪತಿಃ ॥ ೩೩ ॥
ಏವಂ ತೌ ಸಮಯಂ ಕೃತ್ವಾ ಮಾರ್ಗಣಾಯ ವಿನಿರ್ಗತೌ ।
ವಿಷ್ಣುರ್ವರಾಹರೂಪೇಣ ಗತೋಽಧಸ್ತಾದ್ಗವೇಷಿತುಂ ।
ಹಂಸತಾಂ ಭಾರತೀಜಾನಿಃ ಸ್ವೀಕೃತ್ಯೋಪರಿ ನಿರ್ಯಯೌ ॥ ೩೪ ॥
ಅಧೋಲೋಕಾನ್ವಿಚಿತ್ಯಾಽಥೋ ವಿಷ್ಣುರ್ವರ್ಷಗಣಾನ್ಬಹೂನ್ ।
ಯಥಾಸ್ಥಾನಂ ಸಮಾಗತ್ಯ ಬಭಾಷೇ ದೇವಸನ್ನಿಧೌ ॥ ೩೫ ॥

---

ಜ್ಞಾನವನ್ನುಂಟುಮಾಡುವುದಕ್ಕೂ, ಸ್ವತಃಪ್ರಕಾಶಕವೂ, ನೀರೋಗವೂ ಆದ ಪರಮೇಶ್ವರ ಲಿಂಗವು ಉದಯಿಸಿತು. ಅದನ್ನು ನೋಡಿ ಬ್ರಹ್ಮವಿಷ್ಣುಗಳಿಬ್ಬರೂ ಅಚ್ಚರಿಗೊಂಡರು.

೩೦–೩೩. ಆಗ ಅವರಿಬ್ಬರೂ ದೇವತೆಗಳ ಎದುರಿನಲ್ಲಿ "ತುದಿಮೊದಲಿಲ್ಲದ, ಅನೇಕ ಸೂರ್ಯರಂತೆಯೂ, ಅಗ್ನಿಗಳಂತೆಯೂ ಬೆಳಗುವ ಈ ನಮ್ಮ ಎದುರಿನಲ್ಲಿ ಉದಯಿಸಿರುವ ಲಿಂಗದ ಕೊನೆಮೊದಲುಗಳನ್ನು ಯಾವನು ಕಂಡುಹಿಡಿಯುವನೊ ಅವನೇ ಅಧಿಕನೂ, ಸೃಷ್ಟಿಕರ್ತನೂ, ಪ್ರಭುವೂ ಎಂದು ತಿಳಿಯತಕ್ಕದ್ದು" ಎಂದು ಶಪಥಮಾಡಿಕೊಂಡರು. ಬಳಿಕ ಬ್ರಹ್ಮನು "ಈ ಲಿಂಗದ ತುದಿಯನ್ನು ಕಂಡುಹಿಡಿಯಲು ನಾನು ಮೇಲಕ್ಕೆ ಹೋಗುವೆನು. ಹೇ ಹರೇ! ಮೊದಲನ್ನು ಕಂಡುಹಿಡಿಯಲು ನೀನು ತಳಕ್ಕೆ ಹೋಗು" ಎಂಬುದಾಗಿ ಹೇಳಲು ವಿಷ್ಣುವು ಅದನ್ನೊಪ್ಪಿದನು.

೩೪. ಈ ಬಗೆಯಾಗಿ ಅವರಿಬ್ಬರೂ ಶಪಥಮಾಡಿಕೊಂಡು ಅನ್ವೇಷಣಕ್ಕಾಗಿ ಹೊರಟರು. ವಿಷ್ಣುವು ವರಾಹರೂಪವನ್ನು ಧರಿಸಿ ಹೊರಟನು. ಬ್ರಹ್ಮನು ಹಂಸರೂಪವನ್ನುತಾಳಿ ಮೇಲಕ್ಕೆ ಹಾರಿಹೋದನು.

೩೫. ವಿಷ್ಣುವು ಅನೇಕ ವರ್ಷಗಳು ಅಧೋಲೋಕಗಳನ್ನೆಲ್ಲ ಹುಡಿಕಿ ಯಥಾಸ್ಥಾನಕ್ಕೆ ಬಂದು ದೇವತೆಗಳ ಎದುರಿನಲ್ಲಿ ಹೇಳತೊಡಗಿದನು.

ವಿಷ್ಣುರುವಾಚ :—

ಅಹಂ ಲಿಂಗಸ್ಯ ನಾಽದ್ರಾಕ್ಷಮಾದಿಮಸ್ಯೇತಿ ಸತ್ಯವಾಕ್ ॥ ೩೬ ॥
ಊರ್ಧ್ವಂ ಗವೇಷಯಿತ್ವಾಽಥ ಬ್ರಹ್ಮಾಽಪ್ಯಾಽಗಚ್ಛದತ್ರ ಸಃ ।
ಆಗತ್ಯ ಚ ವಚಃ ಪ್ರಾಹ ಛದ್ಮನಾ ಚತುರಾನನಃ ।

ಬ್ರಹ್ಮೋವಾಚ :—

ಅಹಮದ್ರಾಕ್ಷಮಸ್ಯಾಂತಂ ಲಿಂಗಸ್ಯೇತಿ ಮೃಷಾ ಪುನಃ ॥ ೩೭ ॥
ತಯೋಸ್ತದ್ವಚನಂ ಶ್ರುತ್ವಾ ಬ್ರಹ್ಮವಿಷ್ಣ್ವೋರ್ಮಹೇಶ್ವರಃ ।
ಮಿಥ್ಯಾವಾದಿನಮಾಹೇದಂ ಪ್ರಹಸ್ಯ ಚತುರಾನನಂ ॥ ೩೮ ॥

ಈಶ್ವರ ಉವಾಚ :—

ಅಸತ್ಯಂ ಯದವೋಚಸ್ತ್ವಂ ಚತುರಾನನ ಮತ್ಪುರಃ ॥ ೩೯ ॥
ತಸ್ಮಾತ್ಪೂಜಾ ನ ತೇ ಭೂಯಾಲ್ಲೋಕೇ ಸರ್ವತ್ರ ಸರ್ವದಾ ।
ಅಥ ವಿಷ್ಣುಂ ಪುನಃ ಪ್ರಾಹ ಭಗವಾನ್ಪರಮೇಶ್ವರಃ ॥ ೪೦ ॥
ಯಸ್ಮಾತ್ಸತ್ಯಮವೋಚಸ್ತ್ವಂ ಕಮಲಾಯಾಃ ಪತೇ ಹರೇ ।
ತಸ್ಮಾತ್ತೇ ಮತ್ಸಮಾ ಪೂಜಾ ಭವಿಷ್ಯತಿ ನ ಸಂಶಯಃ ॥ ೪೧ ॥
ತತೋ ಬ್ರಹ್ಮಾ ವಿಷಣ್ಣಸ್ಸಂಶ್ಶಂಕರಂ ಪ್ರತ್ಯಭಾಷತ ।
ಸ್ವಾಮಿನ್ಮಮಾಽಪರಾಧಂ ತ್ವಂ ಕ್ಷಮಸ್ವ ಕರುಣಾನಿಧೇ ॥ ೪೨ ॥

---

೩೬. ವಿಷ್ಣುವು ಹೇಳುತ್ತಾನೆ:—ನಾನೀಲಿಂಗದ ಮೊದಲನ್ನು ಕಾಣಲಿಲ್ಲ. ಇದು ಸತ್ಯ.

೩೭. ಈ ಹೊತ್ತಿಗೆ ಸರಿಯಾಗಿ ಬ್ರಹ್ಮದೇವನೂ ಊರ್ಧ್ವಲೋಕಗಳನ್ನೆಲ್ಲ ಹುಡಿಕಿ ಹಿಂದಿರುಗಿ ಬಂದು ಮೋಸದಿಂದ "ನಾನೀ ಲಿಂಗದ ತುದಿಯನ್ನು ಕಂಡೆನು" ಎಂದು ಸುಳ್ಳನ್ನು ನುಡಿದನು.

೩೮–೪೧. ಈಶ್ವರನು ಬ್ರಹ್ಮವಿಷ್ಣುಗಳ ಈ ಬಗೆಯ ಮಾತುಗಳನ್ನು ಕೇಳಿ ನಕ್ಕು ಬ್ರಹ್ಮನನ್ನು ಕುರಿತು, "ಎಲೈ ಚತುರಾನನೇ! ನೀನು ನನ್ನ ಎದುರಿನಲ್ಲಿ ಅಸತ್ಯವನ್ನು ನುಡಿದೆಯಾದಕಾರಣ, ನಿನಗಾವಾಗಲೂ ಎಲ್ಲಿಯೂ ಪೂಜೆಯಿಲ್ಲದೇ ಹೋಗಲಿ" ಎಂದು ಶಪಿಸಿ ಬಳಿಕ "ಅಯ್ಯಾ ಕಮಲಾಪತಿಯಾದ ಹರಿಯೇ! ನೀನು ಸತ್ಯವನ್ನೇ ನುಡಿದೆಯಾದಕಾರಣ ನಿನಗೆ ನನಗೆ ಸಮಾನವಾದ ಪೂಜೆಯೇ ದೊರೆಯುವುದು, ಸಂಶಯವಿಲ್ಲ" ಎಂದು ವಿಷ್ಣುವಿಗೆ ನುಡಿದನು.

೪೨–೪೩. ಬಳಿಕ ಬ್ರಹ್ಮದೇವನು ಖಿನ್ನನಾಗಿ "ಕರುಣಾನಿಧಿಯಾದ ಎಲಾ ಸ್ವಾಮಿಯೇ! ನನ್ನ ಅಪರಾಧವನ್ನು ಕ್ಷಮಿಸು. ಜಗದೀಶ್ವರನಾದ ನಿನಗೆ

ಏಕೋಽಪರಾಧಃ ಕ್ಷಂತವ್ಯಃ ಸ್ವಾಮಿಭಿರ್ಜಗದೀಶ್ವರೈಃ ।
ತತೋ ಮಹೇಶ್ವರೋಽವಾದೀದ್ಬ್ರಹ್ಮಾಣಂ ಪರಿಸಾಂತ್ವಯನ್ ॥ ೪೩ ॥
ಈಶ್ವರ ಉವಾಚ :—
ನ ಮಿಥ್ಯಾವಚನಂ ಮೇ ಸ್ಯಾದ್ಬ್ರಹ್ಮನ್ವಕ್ಷ್ಯಾಮಿ ತೇ ಶೃಣು ।
ಗಚ್ಛ ತ್ವಂ ಸಹಸಾ ವತ್ಸ ಗಂಧಮಾದನಪರ್ವತಂ ॥ ೪೪ ॥
ತತ್ರ ಕ್ರತೂನ್ಕುರುಷ್ವ ತ್ವಂ ಮಿಥ್ಯಾದೋಷಪ್ರಶಾಂತಯೇ ।
ತತೋ ವಿಧೂತಪಾಪಸ್ತ್ವಂ ಭವಿಷ್ಯಸಿ ನ ಸಂಶಯಃ ॥ ೪೫ ॥
ತೇನ ಶ್ರೌತೇಷು ತೇ ಬ್ರಹ್ಮನ್ ಸ್ಮಾರ್ತೇಷ್ವಪಿ ಚ ಕರ್ಮಸು ।
ಪೂಜಾ ಭವಿಷ್ಯತಿ ಸದಾ ನ ಪೂಜಾ ಪ್ರತಿಮಾಸು ತೇ ॥ ೪೬ ॥
ಇತ್ಯುಕ್ತ್ವಾ ಭಗವಾನೀಶಸ್ತತ್ರೈವಾಂತರಧೀಯತ ।
ತತೋ ಬ್ರಹ್ಮಾ ಯಯೌ ವಿಪ್ರಾ ಗಂಧಮಾದನಪರ್ವತಂ ॥ ೪೭ ॥
ಈಜೇ ಚ ಕ್ರತುಕರ್ತಾರಂ ಕ್ರತುಭಿಃ ಪಾರ್ವತೀಪತಿಂ ।
ಅಷ್ಟಾಽಶೀತಿಸಹಸ್ರಾಣಿ ವರ್ಷಾಣಿ ಮುನಿಪುಂಗವಾಃ ॥ ೪೮ ॥
ಪೌಂಡರೀಕಾದಿಭಿಃ ಸರ್ವೈರಧ್ವರೈರ್ಭೂರಿದಕ್ಷಿಣೈಃ ।
ಇಂದ್ರಾದಿ ಸರ್ವದೇವಾನಾಂ ಸನ್ನಿಧಾವಯಜಚ್ಛಿವಂ ।
ತೇನ ತುಷ್ಟೋಽಭವಚ್ಛಂಭುರ್ವರಮಸ್ಮೈ ಪ್ರದತ್ತವಾನ್ ॥ ೪೯ ॥

---

ನನ್ನ ಒಂದು ತಪ್ಪು ಕ್ಷಮ್ಯವಲ್ಲವೆ ?" ಎಂದು ಶಂಕರನನ್ನು ಬೇಡಿಕೊಂಡನು. ತರುವಾಯ ಮಹೇಶ್ವರನಾತನನ್ನು ಸಮಾಧಾನಪಡಿಸುತ್ತ ಇಂತು ನುಡಿದನು.

೪೪. ಈಶ್ವರನು ಹೇಳುತ್ತಾನೆ :—"ಅಯ್ಯಾ ಬ್ರಹ್ಮನೇ! ಹೇಳುವೆನು, ಕೇಳು. ನನ್ನ ಮಾತು ಸುಳ್ಳಾಗಲಾರದು. ಆದರೆ ಮಗೂ! ನೀನು ಬೇಗ ಗಂಧಮಾದನಪರ್ವತಕ್ಕೆ ಹೋಗು.

೪೫. ಸುಳ್ಳಿನ ಪಾಪವನ್ನು ನೀಗುವುದಕ್ಕಾಗಿ ಅಲ್ಲಿ ಯಜ್ಞಗಳನ್ನು ಮಾಡು. ಅದರಿಂದ ನೀನು ಪಾಪದಿಂದ ನಿಸ್ಸಂಶಯವಾಗಿ ಮುಕ್ತನಾಗುವೆ.

೪೬. ಆಗ ಶ್ರೌತಸ್ಮಾರ್ತಕರ್ಮಗಳಲ್ಲಿ ಮಾತ್ರ ಪೂಜೆಯನ್ನು ಪಡೆಯುವೆ. ಅಷ್ಟೇ ಹೊರತು ಪ್ರತಿಮೆಗಳಲ್ಲಿ ಪೂಜೆ ದೊರೆಯಲಾರದು."

೪೭–೫೧. ಎಂದು ಅಪ್ಪಣೆಯಿತ್ತು ಮಹೇಶ್ವರನಲ್ಲಿಯೇ ಅಂತರ್ಧಾನ ಹೊಂದಿದನು. ಎಲೈ ವಿಪ್ರರೇ! ಬಳಿಕ ಬ್ರಹ್ಮನು ಗಂಧಮಾದನಪರ್ವತಕ್ಕೆ ಹೋಗಿ ಎಂಭತ್ತೆಂಟುಸಾವಿರ ವರ್ಷಕಾಲ ಇಂದ್ರಾದಿ ಸಮಸ್ತ ದೇವತೆಗಳ ಸನ್ನಿಧಿಯಲ್ಲಿ ಯಜ್ಞಕರ್ತನಾದ ಪಾರ್ವತೀಪತಿಯನ್ನುದ್ದೇಶಿಸಿ, ಬಹು ದಕ್ಷಿಣೆಗಳಿಂದ ಮಾಡಬಹುದಾದ ಪೌಂಡರೀಕಾದಿ ಸಮಸ್ತ ಯಾಗಗಳನ್ನೂ

ಈಶ್ವರ ಉವಾಚ :—

ಮಿಥ್ಯೋಕ್ತಿದೋಷಸ್ತೇ ನಷ್ಟಃ ಕೃತೈರೇತೈರ್ಮಖೈರಿಹ ॥ ೫೦ ॥
ಚತುರಾನನ ತೇ ಪೂಜಾ ಶ್ರೌತಸ್ಮಾರ್ತೇಷು ಕರ್ಮಸು ।
ಭವಿಷ್ಯತ್ಯಮಲಾ ಬ್ರಹ್ಮನ್ನ ಪೂಜಾ ಪ್ರತಿಮಾಸು ತೇ ॥ ೫೧ ॥
ಯಾಗಸ್ಥಲಮಿದಂ ತೇಽದ್ಯ ಬ್ರಹ್ಮಕುಂಡಮಿತಿ ಪ್ರಥಾಂ ।
ಗಮಿಷ್ಯತಿ ತ್ರಿಲೋಕೇಽಸ್ಮಿನ್ಪುಣ್ಯಂ ಪಾಪವಿನಾಶನಂ ॥ ೫೨ ॥
ಬ್ರಹ್ಮಕುಂಡಾಽಭಿಧೇ ತೀರ್ಥೇ ಸಕೃದ್ಯಃ ಸ್ನಾನಮಾಚರೇತ್ ।
ಮುಕ್ತಿದ್ವಾರಾರ್ಗಲಂ ತಸ್ಯ ಭಿದ್ಯತೇ ತತ್ಕ್ಷಣಾದ್ವಿಧೇ ॥ ೫೩ ॥
ಬ್ರಹ್ಮಕುಂಡಸಮುದ್ಭೂತಂ ಲಲಾಟೇ ಭಸ್ಮ ಧಾರಯನ್ ।
ಮಾಯಾಕಪಾಟಂ ನಿರ್ಭಿದ್ಯ ಮುಕ್ತಿದ್ವಾರಂ ಪ್ರಯಾಸ್ಯತಿ ॥ ೫೪ ॥
ಬ್ರಹ್ಮಕುಂಡೋತ್ಥಿತಂ ಭಸ್ಮ ಲಲಾಟೇ ಯೋ ನ ಧಾರಯೇತ್ ।
ಸ್ವಪಿತುರ್ಬೀಜಸಂಭೂತೋ ನ ಮಾತರಿ ಸುತಸ್ಯ ಸಃ ॥ ೫೫ ॥
ಬ್ರಹ್ಮಕುಂಡಸಮುದ್ಭೂತಭಸ್ಮಧಾರಣತೋ ವಿಧೇ ।
ಬ್ರಹ್ಮಹತ್ಯಾಽಯುತಂ ನಶ್ಯೇತ್ಸುರಾಪಾನಾಽಯುತಂ ತಥಾ ॥ ೫೬ ॥

---

ನೆರವೇರಿಸಿದನು. ಬಹು ದಕ್ಷಿಣೆಗಳಿಂದ ನಡೆಸಬಹುದಾದ ಪೌಂಡರೀಕಾದಿ ಸಮಸ್ತ ಅಧ್ವರಗಳನ್ನು ಎಂಭತ್ತೆಂಟುಸಾವಿರ ವರ್ಷಗಳ ಕಾಲ ನಡೆಸಿ ಯಜ್ಞ ಕರ್ತನಾದ ಪಾರ್ವತೀಪತಿಯನ್ನು ಪೂಜಿಸಲು, ಅದರಿಂದ ಸಂತೋಷಗೊಂಡ ಶಂಭುವು "ಎಲೈ ಚತುರಾನನ! ಈ ಯಾಗಾಚರಣೆಯಿಂದ ನಿನಗೆ ಸುಳ್ಳಿನ ಪಾತಕವು ತೊಲಗಿತು. ಹೇ ಬ್ರಹ್ಮನ್! ಶ್ರೌತಸ್ಮಾರ್ತಕರ್ಮಗಳಲ್ಲಿ ಪೂಜೆ ಯನ್ನು ಪಡೆಯುವೆ. ಪ್ರತಿಮೆಗಳಲ್ಲಿ ಮಾತ್ರ ಅದು ನಿನಗೆ ದೊರೆಯಲಾರದು.

೫೨. ಈ ಯಾಗದ ಜಾಗವು ಬ್ರಹ್ಮಕುಂಡವೆಂದು ಹೆಸರುಗೊಳ್ಳುವುದು. ಮೂರು ಲೋಕಗಳಲ್ಲಿಯೂ ಪುಣ್ಯವೂ, ಪಾಪವಿನಾಶಕವೂ ಆಗಿರುವುದು.

೫೩. ಎಲೈ ವಿಧಿಯೇ! ಬ್ರಹ್ಮಕುಂಡದಲ್ಲಿ ಒಮ್ಮೆ ಸ್ನಾನವನ್ನಾಚರಿಸಿದ ವನಿಗಾದರೂ ಮೋಕ್ಷದ್ವಾರದ ಅಗಳಿಯು ಕೂಡಲೇ ಮುರಿದುಹೋಗುವುದು.

೫೪. ಬ್ರಹ್ಮಕುಂಡದಲ್ಲಿನ ಭಸ್ಮವನ್ನು ಧರಿಸಿದವನು ಮಾಯೆಯೆಂಬ ಬಾಗಿಲನ್ನು ಸೀಳಿ ಮೋಕ್ಷದ ಬಾಗಿಲನ್ನು ಪ್ರವೇಶಿಸುವನು.

೫೫. ಬ್ರಹ್ಮಕುಂಡದೊಳಗಿನ ಭಸ್ಮವನ್ನು ಧರಿಸಿದವನು ತನ್ನ ತಾಯಿಯಲ್ಲಿ ತನ್ನ ತಂದೆಯ ಬೀಜದಿಂದ ಜನಿಸಿದ ಮಗನೇ ಅಲ್ಲ.

೫೬—೫೭. ಅಯ್ಯಾ ವಿರಿಂಚಿಯೇ! ಬ್ರಹ್ಮಕುಂಡದ ಭಸ್ಮಧಾರಣೆಯಿಂದ ಹತ್ತುಸಾವಿರ ಬ್ರಹ್ಮಹತ್ಯೆಗಳೂ, ಹತ್ತುಸಾವಿರ ಸುರಾಪಾನಗಳೂ, ಅಷ್ಟೇ

ಗುರುತಲ್ಪಾಽಯುತಂ ನಶ್ಯೇತ್ಸ್ವರ್ಣಸ್ತೇಯಾಽಯುತಂ ತಥಾ ।
ತತ್ಸಂಸರ್ಗಾಽಯುತಂ ನಶ್ಯೇತ್ಸತ್ಯಮುಕ್ತಂ ಮಯಾ ವಿಧೇ ॥ ೫೭ ॥
ಬ್ರಹ್ಮಕುಂಡಸಮುದ್ಭೂತಭಸ್ಮಧಾರಣವೈಭವಾತ್ ।
ಭೂತಪ್ರೇತಪಿಶಾಚಾದ್ಯಾ ನಶ್ಯಂತಿ ಕ್ಷಣಮಾತ್ರತಃ ॥ ೫೮ ॥
ಇತ್ಯುಕ್ತ್ವಾ ಭಗವಾನೀಶಸ್ತತ್ರೈವಾಂತರಧೀಯತ ।
ಯಜ್ಞೇಷ್ವಥ ಸಮಾಪ್ತೇಷು ಮುನಯಶ್ಚ ಜಿತೇಂದ್ರಿಯಾಃ ॥ ೫೯ ॥
ಇಂದ್ರಾದಿದೇವತಾಶ್ಚೈವ ಸಿದ್ಧಚಾರಣಕಿನ್ನರಾಃ ।
ಅನ್ಯೇ ಚ ದೇವನಿವಹಾ ಗಂಧಮಾದನಪರ್ವತೇ ॥ ೬೦ ॥
ತಾಂ ಯಜ್ಞಭೂಮಿಮಾಶ್ರಿತ್ಯ ಸ್ವಯಂ ರುದ್ರೇಣ ಸೇವಿತಾಂ
ನಿರಂತರಮವರ್ತಂತ ವಿದಿತ್ವಾ ತಸ್ಯ ವೈಭವಂ ॥ ೬೧ ॥
ಯಥಾವಿಧಿ ತತೋ ಯಜ್ಞಾನ್ಸಮಾಪ್ಯ ಬಹುದಕ್ಷಿಣಾನ್ ।
ಸತ್ಯಲೋಕಮಗಾದ್ಬ್ರಹ್ಮಾ ಶಿವಾಲ್ಲಬ್ಧಮನೋರಥಃ ॥ ೬೨ ॥
ತದಾಪ್ರಭೃತಿ ದೇವಾಶ್ಚ ಮುನಯಶ್ಚ ದ್ವಿಜೋತ್ತಮಾಃ ।
ಬ್ರಹ್ಮಕುಂಡಂ ಸಮಾಸಾದ್ಯ ಚಕ್ರುರ್ಯಾಗಾನ್ವಿಧಾನತಃ ॥ ೬೩ ॥

---

ಗುರುತಲ್ಪಗಮನ ಸುವರ್ಣಸ್ತೇಯಗಳ ಪಾಪಗಳೂ, ಅಂತಹವರ ಸಂಬಂಧ ದಿಂದುಂಟಾದ ಹತ್ತುಸಾವಿರ ಪಾತಕಗಳೂ ನಶಿಸುವುವು. ಬ್ರಹ್ಮನೇ! ನಾನು ನಿಜವನ್ನೇ ನುಡಿದಿರುವೆನು.

೫೮. ಬ್ರಹ್ಮಕುಂಡದ ಭಸ್ಮಧಾರಣೆಯ ಮಹಿಮೆಯಿಂದ ಕ್ಷಣದಲ್ಲಿಯೇ ಭೂತಪ್ರೇತಪಿಶಾಚಾದಿಗಳೆಲ್ಲವೂ ತೊಲಗುವುವು.''

೫೯–೬೧. ಇಂತು ಬ್ರಹ್ಮನಿಗೆ ವರವಿತ್ತು ಭವಾನೀಪತಿಯು ಅಂತರ್ಹಿತ ನಾದನು. ಯಜ್ಞಗಳು ಮುಗಿದ ಬಳಿಕ ಜಿತೇಂದ್ರಿಯರಾದ ದ್ವಿಜರೂ, ಇಂದ್ರಾದಿ ದೇವತೆಗಳೂ, ಸಿದ್ಧಚಾರಣಾದಿ ಇತರ ದೇವತಾವೃಂದಗಳೂ ಗಂಧಮಾದನ ಪರ್ವತದಲ್ಲಿನ, ಸಾಕ್ಷಾತ್ತಾಗಿ ರುದ್ರನಿಂದಲೇ ಸೇವಿತವಾದ ಆ ಯಜ್ಞ ಭೂಮಿಯ ಮಹಿಮೆಯನ್ನರಿತು ಅಲ್ಲಿಗಾವಾಗಲೂ ಬಂದು ಸೇವಿಸಿಕೊಂಡಿರು ತ್ತಿದ್ದರು.

೬೨. ಬಳಿಕ ಬ್ರಹ್ಮದೇವನು ಯಥಾವಿಧಿಯಾಗಿ ಯಜ್ಞಗಳನ್ನು ಮುಗಿಸಿ ಶಿವನಿಂದ ಮನೋರಥವನ್ನು ಪಡೆದು ಸತ್ಯಲೋಕಕ್ಕೆ ತೆರಳಿದನು.

೬೩. ಎಲೈ ಬ್ರಾಹ್ಮಣೋತ್ತಮರುಗಳಿರಾ! ಆಗಿನಿಂದಲೂ ದೇವತೆಗಳೂ, ಮಹರ್ಷಿಗಳೂ ಆ ಬ್ರಹ್ಮಕುಂಡಕ್ಕೆ ಬಂದು ವಿಧಿವತ್ತಾಗಿ ತಾವೂ ಯಜ್ಞ ಗಳನ್ನಾಚರಿಸುವರು.

ತಸ್ಮಾದಿಯಕ್ಷವೋ ಮರ್ತ್ಯಾಃ ಕುರ್ಯುರ್ಯಜ್ಞಾನಿಹೈವ ಹಿ ॥ ೬೪ ॥
ಮನುಜದೇವಮುನೀಶ್ವರವಂದಿತಂ
ಸಕಲಸಂಸೃತಿನಾಶಕರಂ ದ್ವಿಜಾಃ ।
ಜಲಜಸಂಭವಕುಂಡಮಿದಂ ಶುಭಂ
ಸಕಲಪಾಪಹರಂ ಸಕಲಾರ್ಥದಂ ॥ ೬೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಬ್ರಹ್ಮಕುಂಡ ಪ್ರಶಂಸಾಯಾಂ ಬ್ರಹ್ಮಶಾಪವಿಮೋಕ್ಷಣವರ್ಣನಂ" ನಾಮ ಚತುರ್ದಶೋಽಧ್ಯಾಯಃ

---

೬೪. ಆದುದರಿಂದ ಯಾಗಮಾಡಲು ಬಯಸುವ ಮರ್ತ್ಯರಾದರೂ ಇಲ್ಲಿಯೇ ಯಜ್ಞಗಳನ್ನು ಮಾಡುವರು.

೬೫. ಅಯ್ಯಾ ದ್ವಿಜರೇ! ದೇವರ್ಷಿಮನುಷ್ಯರೆಲ್ಲರಿಗೂ ಪೂಜನೀಯವೂ, ಸಮಸ್ತ ಸಂಸಾರಕ್ಲೇಶನಾಶಕರವೂ ಆದ ಶುಭಕರವಾದೀ ಬ್ರಹ್ಮಕುಂಡವು ಸಮಸ್ತ ಪಾಪಗಳನ್ನು ನಾಶಪಡಿಸುವಂತಹುದೂ, ಸಕಲ ಇಷ್ಟಾರ್ಥಗಳನ್ನು ಕೊಡುವಂತಹುದೂ ಆಗಿರುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಬ್ರಹ್ಮಕುಂಡ ಪ್ರಶಂಸೆಯಲ್ಲಿ ಬ್ರಹ್ಮಶಾಪವಿಮೋಕ್ಷಣವರ್ಣನ"ವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚದಶೋಽಧ್ಯಾಯಃ

### ಹನುಮತ್ಕುಂಡ ಪ್ರಶಂಸಾಯಾಂ ಧರ್ಮಸಖಶತಪುತ್ರಾವಾಪ್ತಿವರ್ಣನಂ

ಶ್ರೀ ಸೂತ ಉವಾಚ:—

ಬ್ರಹ್ಮಕುಂಡೇ ಮಹಾಪುಣ್ಯೇ ಸ್ನಾನಂ ಕೃತ್ವಾ ಸಮಾಹಿತಃ ।
ನರೋ ಹನೂಮತಃ ಕುಂಡಮಥ ಗಚ್ಛೇದ್ದ್ವಿಜೋತ್ತಮಾಃ ॥ ೧ ॥
ಪುರಾ ಹತೇಷು ರಕ್ಷಸ್ಸು ಸಮಾಪ್ತೇ ರಣಕರ್ಮಣಿ ।
ರಾಮಾದಿಷು ನಿವೃತ್ತೇಷು ಗಂಧಮಾದನಪರ್ವತೇ ॥ ೨ ॥
ಸರ್ವಲೋಕೋಪಕಾರಾಯ ಹನೂಮಾನ್ಮಾರುತಾತ್ಮಜಃ ।
ಸರ್ವತೀರ್ಥೋತ್ತಮಂ ಚಕ್ರೇ ಸ್ವನಾಮ್ನಾ ತೀರ್ಥಮುತ್ತಮಂ ॥ ೩ ॥
ವಿದಿತ್ವಾ ವೈಭವಂ ಯಸ್ಯ ಸ್ವಯಂ ರುದ್ರೇಣ ಸೇವ್ಯತೇ ।
ತಸ್ಯ ತೀರ್ಥಸ್ಯ ಸದೃಶಂ ನ ಭೂತಂ ನ ಭವಿಷ್ಯತಿ ॥ ೪ ॥
ಯತ್ರ ಸ್ನಾತಾ ನರಾ ಯಾಂತಿ ಶಿವಲೋಕಂ ಸನಾತನಂ ।
ಯಸ್ಮಿಂಸ್ತೀರ್ಥೇ ಮಹಾಪುಣ್ಯೇ ಮಹಾಪಾತಕನಾಶನೇ ॥ ೫ ॥

---

## ಕನ್ನಡದ ಅನುವಾದ

### ಹನುಮತ್ಕುಂಡಪ್ರಶಂಸೆಯಲ್ಲಿ ಧರ್ಮಸಖನಿಗೆ ನೂರು ಮಕ್ಕಳಾದುದು

೧. ಸೂತನು ಹೇಳುತ್ತಾನೆ:—ಬ್ರಾಹ್ಮಣರುಗಳಿರಾ! ಮನುಜನು ಮಹಾಪುಣ್ಯಕರವಾದ ಬ್ರಹ್ಮಕುಂಡದಲ್ಲಿ ಮಿಂದ ಬಳಿಕ ಸಮಾಹಿತಮನಸ್ಕನಾಗಿ ಹನೂಮತ್ಕುಂಡಕ್ಕೆ ತೆರಳಬೇಕು.

೨. ಹಿಂದೆ ರಾಕ್ಷಸರೆಲ್ಲರೂ ಸತ್ತಬಳಿಕ ಯುದ್ಧವೆಲ್ಲವೂ ಮುಗಿಯಲು ರಾಮಾದಿಗಳೆಲ್ಲರೂ ಗಂಧಮಾದನಕ್ಕೆ ಹಿಂದಿರುಗಿದರು.

೩. ಆಗ ವಾಯುಪುತ್ರನಾದ ಹನುಮಂತನು ಸಮಸ್ತ ಲೋಕೋಪಕಾರಾರ್ಥವಾಗಿ ಸ್ವನಾಮಾಂಕಿತವಾದ ಸಮಸ್ತ ತೀರ್ಥಗಳಲ್ಲಿಯೂ ಉತ್ತಮವಾದ ತೀರ್ಥವನ್ನೇರ್ಪಡಿಸಿದನು.

೪. ರುದ್ರನು ಕೂಡ ಯಾವ ತೀರ್ಥದ ವೈಭವವನ್ನರಿತು ಅದರ ಬಳಿ ವಾಸಮಾಡುವನೊ, ಅಂತಹ ತೀರ್ಥಕ್ಕೆ ಸಮನಾದುದು ಇರಲೂ ಇಲ್ಲ. ಮುಂದಿರುವುದೂ ಇಲ್ಲ.

೫–೭. ಯಾವ ತೀರ್ಥದಲ್ಲಿ ಸ್ನಾನಮಾಡಿದವರೆಲ್ಲರೂ ಸನಾತನವಾದ ಶಿವಲೋಕವನ್ನು ಹೊಂದುವರೊ, ಸರ್ವಲೋಕೋಪಕಾರಕ್ಕಾಗಿ ಹನುಮಂತನು ಸಮಸ್ತ ಪಾಪಗಳನ್ನೂ ನೀಗಿಸುವ ಮಹಾಪುಣ್ಯಪ್ರದವಾದ ಯಾವ ತೀರ್ಥ

ಸರ್ವಲೋಕೋಪಕಾರಾಯ ನಿರ್ಮಿತೇ ವಾಯುಸೂನುನಾ ।
ಸರ್ವಾಣಿ ನರಕಾಣ್ಯಾಸನ್ ಶೂನ್ಯಾನ್ಯೇವ ಚಿರಾಯ ವೈ ॥ ೬ ॥
ವೈಭವಂ ತಸ್ಯ ತೀರ್ಥಸ್ಯ ಶಂಕರೋ ವೇತ್ತಿ ವಾ ನ ವಾ ।
ಯತ್ರ ಧರ್ಮಸಖೋ ನಾಮ ರಾಜಾ ಕೇಕಯವಂಶಜಃ ।
ಭಕ್ತ್ಯಾ ಸಹ ಪುರಾ ಸ್ನಾತ್ವಾ ಶತಂ ಪುತ್ರಾನವಾಪ್ತವಾನ್ ॥ ೭ ॥

ಋಷಯ ಊಚುಃ:—

ಸೂತ ಧರ್ಮಸಖಸ್ಯಾಽದ್ಯ ಚರಿತಂ ವಕ್ತುಮರ್ಹಸಿ ।
ಹನೂಮತ್ಕುಂಡತೀರ್ಥೇ ಯೋ ಲೇಭೇ ಸ್ನಾತ್ವಾ ಶತಂ ಸುತಾನ್ ॥ ೮ ॥

ಶ್ರೀ ಸೂತ ಉವಾಚ :—

ಶೃಣುಧ್ವಮೃಷಯೋ ಯೂಯಂ ಚರಿತಂ ತಸ್ಯ ಭೂಪತೇಃ ।
ಅದ್ಯ ಧರ್ಮಸಖಸ್ಯಾಽಹಂ ಪ್ರವಕ್ಷ್ಯಾಮಿ ಸಮಾಸತಃ ॥ ೯ ॥
ರಾಜಾ ಧರ್ಮಸಖೋ ನಾಮ ವಿಜಿತಾಽರಿಃ ಸುಧಾರ್ಮಿಕಃ ॥ ೧೦ ॥
ಬಭೂವ ನೀತಿಮಾನ್ಪೂರ್ವಂ ಪ್ರಜಾಪಾಲನತತ್ಪರಃ ।
ತಸ್ಯ ಭಾರ್ಯಾಶತಂ ವಿಪ್ರಾ ಬಭೂವ ಪತಿದೈವತಂ ॥ ೧೧ ॥
ಸ ಪಾಲಯನ್ಮಹೀಂ ರಾಜಾ ಸಶೈಲವನಕಾನನಾಂ ।
ತಾಸು ಭಾರ್ಯಾಸು ತನಯಂ ನಾಽವಿಂದದ್ವಂಶವರ್ಧನಂ ॥ ೧೨ ॥

---

ವನ್ನು ನಿರ್ಮಿಸಿದಾಗಲೇ ಧರ್ಮಸಖನೆಂಬ ಕೇಕೆಯವಂಶದ ರಾಜನು ಯಾವ ತೀರ್ಥದಲ್ಲಿ ಭಕ್ತಿಯಿಂದ ಸ್ನಾನಮಾಡಿ ನೂರುಮಂದಿ ಮಕ್ಕಳನ್ನು ಪಡೆದನೋ, ಸಮಸ್ತನರಕಗಳೂ ಬಹುಕಾಲದವರೆಗೂ ಶೂನ್ಯಗಳಾದವೋ ಅಂತಹ ತೀರ್ಥದ ವೈಭವವನ್ನು ಶಂಕರನೂ ಕೂಡ ಬಲ್ಲನೋ ಇಲ್ಲವೊ.

೮. ಋಷಿಗಳು ಕೇಳುತ್ತಾರೆ:—ಎಲೈ ಸೂತನೇ! ಹನೂಮತ್ಕುಂಡದಲ್ಲಿ ಸ್ನಾನಮಾಡಿ ನೂರುಮಂದಿ ಮಕ್ಕಳನ್ನು ಪಡೆದ ಈ ಧರ್ಮಸಖನ ಚರಿತ್ರೆಯನ್ನೆಮಗೆ ಅರುಹುವವನಾಗು.

೯. ಸೂತನು ಹೇಳುತ್ತಾನೆ:—ಎಲೈ ಋಷಿಗಳಿರಾ! ಧರ್ಮಸಖರಾಜನ ಸಂಪೂರ್ಣವಾದ ಚರಿತ್ರೆಯನ್ನು ಈಗ ಹೇಳುವೆನು; ಕೇಳಿರಿ.

೧೦–೧೧. ಹಿಂದೆ ಧರ್ಮಸಖನೆಂಬ ಧಾರ್ಮಿಕನಾದ ರಾಜನು ಶತ್ರುಗಳನ್ನು ಗೆದ್ದು ನೀತಿಯಿಂದ ಪ್ರಜಾಪರಿಪಾಲನೆಯಲ್ಲಿ ನಿರತನಾಗಿದ್ದನು. ಅಯ್ಯಾ ಬ್ರಾಹ್ಮಣರೇ! ಆತನಿಗೆ, ಪತಿಯನ್ನೇ ದೇವರೆಂದು ಭಾವಿಸಿದಂತಹ ನೂರು ಮಂದಿ ಹೆಂಡತಿಯರಿದ್ದರು.

೧೨. ಆತನು ಕಾಡುಬೆಟ್ಟಗಳನ್ನೊಳಗೊಂಡ ಈಸಮಸ್ತ ಭೂಮಿಗೂ ಒಡೆಯನಾದರೂ, ಆತನಿಗೆ ವಂಶಕರನಾದ ಮಗನು ಅವರಾರಲ್ಲಿಯೂ ಉದಯಿಸಲಿಲ್ಲ.

ಪುತ್ರಾರ್ಥಂ ಸ ಮಹೀಪಾಲೋ ಬಹೂನ್ಯತ್ನಾನಥಾಽಕರೋತ್ ।
ಅಕರೋಚ್ಚ ಮಹಾದಾನಂ ಪುತ್ರಾರ್ಥಂ ಸ ಮಹೀಪತಿಃ ॥ ೧೩ ॥
ಅಶ್ವಮೇಧಾದಿಭಿರ್ಯಜ್ಞೈರಯಜಚ್ಚ ಸುರಾನ್ಪ್ರತಿ ।
ತುಲಾಪುರುಷಮುಖ್ಯಾನಿ ದದೌ ದಾನಾನಿ ಭೂರಿಶಃ ॥ ೧೪ ॥
ಆಮಧ್ಯರಾತ್ರಮನ್ನಾನಿ ಸರ್ವೇಭ್ಯೋಽಪ್ಯನಿವಾರಿತಂ ।
ಪ್ರಾಯಚ್ಛದ್ಬಹುಸೂಪಾನಿ ಸಸ್ಯೋಪೇತಾನಿ ಭೂಮಿಪಃ ॥ ೧೫ ॥
ಪಿತೄನುದ್ದಿಶ್ಯ ಚ ಶ್ರಾದ್ಧಂ ಅಕರೋದ್ವಿಧಿಪೂರ್ವಕಂ ।
ಸಂತಾನದಾಯಿನೋ ಮಂತ್ರಾನ್ಸ ಜಜಾಪ ನಿಯತೇಂದ್ರಿಯಃ ॥ ೧೬ ॥
ಏವಮಾದೀನ್ಬಹೂನ್ಧರ್ಮಾನ್ಸ ಪುತ್ರಾರ್ಥಂ ಕೃತವಾನ್ನೃಪಃ ।
ಪುತ್ರಮುದ್ದಿಶ್ಯ ಸತತಂ ಕುರ್ವನ್ಧರ್ಮಾನನುತ್ತಮಾನ್ ।
ರಾಜಾ ದೀರ್ಘೇಣ ಕಾಲೇನ ವೃದ್ಧತಾಂ ಪ್ರತ್ಯಪದ್ಯತ ॥ ೧೭ ॥
ಕದಾಚಿತ್ತಸ್ಯ ವೃದ್ಧಸ್ಯ ಯತಮಾನಸ್ಯ ಭೂಪತೇಃ ।
ಪುತ್ರಸ್ಸುಚಂದ್ರನಾಮಾಽಭೂಜ್ಜ್ಯೇಷ್ಠಪತ್ನ್ಯಾಂ ಮನೋರಮಃ ॥ ೧೮ ॥
ಜಾತಂ ಪುತ್ರಂ ಜನನ್ಯಸ್ತಾಃ ಸರ್ವಾ ವೈಷಮ್ಯವರ್ಜಿತಾಃ ॥ ೧೯ ॥
ಸಮಂ ಸಂವರ್ಧಯಾಮಾಸುಃ ಕ್ಷೀರಾದಿಭಿರನುತ್ತಮಾಃ ।
ರಾಜ್ಞಶ್ಚ ಸರ್ವಮಾತೄಣಾಂ ಪೌರಾಣಾಂ ಮಂತ್ರಿಣಾಂ ತಥಾ ॥ ೨೦ ॥

---

೧೩–೧೪. ಆ ರಾಜನು ಪುತ್ರಪ್ರಾಪ್ತಿಗಾಗಿ ಅನೇಕ ಪ್ರಯತ್ನಗಳನ್ನು ನಡೆಸಿದನು. ದೇವತೆಗಳನ್ನು ಕುರಿತು ಅಶ್ವಮೇಧಾದಿ ಯಾಗಗಳನ್ನು ನಡೆಸಿದನು. ಮಹಾದಾನ, ತುಲಾಪುರುಷದಾನ ಮೊದಲಾದ ಅನೇಕ ಬಗೆಯ ದಾನಗಳನ್ನೆಷ್ಟೋವೇಳೆ ನೆರವೇರಿಸಿದನು.

೧೫. ನಡುರಾತ್ರಿಯವರೆಗೂ ಅನೇಕಬಗೆಯ ತೊವ್ವೆಗಳೊಂದಿಗೂ, ಅನೇಕ ಫಲಗಳೊಂದಿಗೂ ಅನ್ನದಾನವನ್ನೆಲ್ಲರಿಗೂ ತಡೆಯಿಲ್ಲದೆ ನಡೆಸಿದನು.

೧೬. ವಿಧಿಪೂರ್ವಕವಾಗಿ ಪಿತೃಶ್ರಾದ್ಧಗಳನ್ನು ಮಾಡಿದನು. ಸಂತಾನ ಪ್ರದಗಳಾದ ಮಂತ್ರಗಳನ್ನು ಜಿತೇಂದ್ರಿಯತೆಯಿಂದ ಜಪಿಸಿದನು.

೧೭–೧೮. ಈ ಬಗೆಯಾಗಿ ಪುತ್ರಪ್ರಾಪ್ತಿಗಾಗಿ ಆ ನೃಪನು ಬಗೆಬಗೆಯ ಧರ್ಮಗಳನ್ನು ಬಹುಕಾಲ ನೆರವೇರಿಸುತ್ತ ಮುಪ್ಪನ್ನು ಹೊಂದಿದನು. ಬಳಿಕ ಪ್ರಯತ್ನಪರನಾದ ಆ ವೃದ್ಧರಾಜನಿಗೆ, ಜ್ಯೇಷ್ಠಭಾರ್ಯೆಯಲ್ಲಿ ಸುಚಂದ್ರನೆಂಬ ಮುದ್ದುಕುವರನೊಬ್ಬನುದಯಿಸಿದನು.

೧೯–೨೧. ಆ ಮಗುವನ್ನು ಉತ್ತಮರಾದ ಆತನ ತಾಯಂದಿರೆಲ್ಲರೂ ಭೇದಭಾವವಿಲ್ಲದೆ ಸಮನಾದ ಪ್ರೀತಿಯಿಂದ ಹಾಲುಹುಯ್ಯುವುದೇ ಮುಂತಾದ ಪೋಷಣೆಗಳಿಂದ ಬೆಳಸುತ್ತ ಬಂದರು. ಆ ಮಗುವು ರಾಜನಿಗೂ, ತಾಯಂದಿ

ಮನೋನಯನಸಂತೋಷಜನಕೋಽಯಂ ಸುತೋಽಭವತ್ ।
ಲಾಲಯಾನಃ ಸುತಂ ರಾಜಾ ಮುದಂ ಲೇಭೇ ಪರಾತ್ಪರಾಂ ॥ ೨೧ ॥
ಆಂದೋಲಿಕಾಶಯಾನಸ್ಯ ಸೂನೋಸ್ತಸ್ಯ ಕದಾಚನ ।
ವೃಶ್ಚಿಕೋಽಕುಟ್ಟಯತ್ಪಾದೇ ಪುಚ್ಛೇನೋದ್ಯದ್ವಿಷಾಗ್ನಿನಾ ॥ ೨೨ ॥
ಕುಟ್ಟನಾದ್ವೃಶ್ಚಿಕಸ್ಯಾಽಸಾವರುದತ್ತನಯೋ ಭೃಶಂ ।
ತತಸ್ತನ್ಮಾತರಃ ಸರ್ವಾಃ ಪ್ರಾರುದನ್ಬ್ವೇಕಕಾತರಾಃ ॥ ೨೩ ॥
ಪರಿವಾಯಾರ್ತಾತ್ಮಜಂ ವಿಪ್ರಾಃ ಸ ಧ್ವನಿಃ ಸಂಕುಲೋಽಭವತ್ ।
ಆರ್ತಧ್ವನಿಂ ಸ ಶುಶ್ರಾವ ರಾಜಾ ಧರ್ಮಸಖಸ್ತದಾ ॥ ೨೪ ॥
ಉಪವಿಷ್ಟಃ ಸಭಾಮಧ್ಯೇ ಸಹಾಽಮಾತ್ಯಪುರೋಹಿತಃ ।
ಅಥ ಪ್ರಾತಿಷ್ಠಿಪದ್ರಾಜಾ ಸೌವಿದಲ್ಲಂ ಸ ವೇದಿತುಂ ॥ ೨೫ ॥
ಅಂತಃಪುರಬಹಿರ್ದ್ವಾರಂ ಸೌವಿದಲ್ಲಃ ಸಮೇತ್ಯ ಸಃ ।
ಷಂಡವೃದ್ಧಾನ್ಸಮಾಹೂಯ ವಾಕ್ಯಮೇತದಭಾಷತ ॥ ೨೬ ॥
ಷಂಡಾಃ ಕಿಮರ್ಥಮಧುನಾ ರುದಂತ್ಯಂತಃಪುರಸ್ತ್ರಿಯಃ ।
ತತ್ಪರಿಜ್ಞಾಯತಾಂ ತತ್ರ ಗತ್ವಾ ರೋದನಕಾರಣಂ ॥ ೨೭ ॥
ಏತದರ್ಥಂ ಹಿ ಮಾಂ ರಾಜಾ ಪ್ರೇರಯಾಮಾಸ ಸಂಸದಿ ।
ಇತ್ಯುಕ್ತಾಸ್ತು ಪರಿಜ್ಞಾಯ ನಿದಾನಂ ರೋದನಸ್ಯ ತೇ ॥ ೨೮ ॥

---

ರೆಲ್ಲರಿಗೂ, ಮಂತ್ರಿಗಳಿಗೂ, ಸಮಸ್ತ ಪ್ರಜೆಗಳಿಗೂ, ಎಲ್ಲರ ಕಣ್ಣುಗಳಿಗೂ, ಮನಸ್ಸುಗಳಿಗೂ ಸಂತೋಷವನ್ನುಂಟುಮಾಡುವವನಾದನು. ರಾಜನು ಮಗನನ್ನು ಲಾಲಿಸುತ್ತ ಬ್ರಹ್ಮಾನಂದಕ್ಕೆ ಸಮವಾದ ಆನಂದವನ್ನು ಅನುಭವಿಸಿದನು.

೨೨. ಒಮ್ಮೆ ತೊಟ್ಟಿಲಲ್ಲಿ ಮಲಗಿದ್ದ ಆ ಮಗುವಿನ ಕಾಲನ್ನು ಚೇಳೊಂದು ಅಧಿಕವಾದ ವಿಷವುಳ್ಳ ತನ್ನ ಕೊಂಡಿಯಿಂದ ಕುಟಕಿತು.

೨೩–೨೫. ಆ ಚೇಳಿನ ಹೊಡೆತದಿಂದ ಆ ಮಗುವು ಬಹಳವಾಗಿ ಅತ್ತಿತು. ಬಳಿಕ ಆತನ ತಾಯಿಯರೆಲ್ಲರೂ ಆತನನ್ನು ಬಳಸಿಕೊಂಡು ಅತಿ ಶೋಕದಿಂದ ಗಟ್ಟಿಯಾಗಿ ಅಳತೊಡಗಿದರು. ಆಗ ಮಂತ್ರಿ ಪುರೋಹಿತರೊಡನೆ ಸಭೆಯಲ್ಲಿ ಕುಳಿತಿದ್ದ ಧರ್ಮಸಖನು ಅಳುವನ್ನು ಕೇಳಿ, ಅದನ್ನು ತಿಳಿಯಲು ಕಂಚುಕಿಯನ್ನು ಕಳುಹಿಸಿದನು.

೨೬–೨೭. ಕಂಚುಕಿಯು ಅಂತಃಪುರದ ಹೊರಬಾಗಿಲ ಬಳಿಗೆ ಹೋಗಿ, ಷಂಡರಾದ ವೃದ್ಧ ದ್ವಾರಪಾಲಕರನ್ನು ಕರೆದು "ಎಲೈ ದ್ವಾರಪಾಲಕರುಗಳಿರಾ! ರಾಣಿಯರೇತಕ್ಕಾಗಿ ಅಳುತ್ತಿರುವರು? ಕಾರಣವನ್ನು ತಿಳಿದು ಬನ್ನಿರಿ.

೨೮–೩೧. ಸಭೆಯಲ್ಲಿ ಮಂಡಿಸಿರುವ ರಾಜನದಕ್ಕಾಗಿಯೇ ನನ್ನನ್ನಿಲ್ಲಿಗೆ ಕಳುಹಿರುವನು" ಎಂದು ಹೇಳಿದನು. ಅವರಲ್ಲಿಗೆ ಹೋಗಿ ಅಳುವಿನ ಕಾರಣ

ನಿರ್ಗಮ್ಯಾಂತಃಪುರಾತ್ತಸ್ಮೈ ಯಥಾವೃತ್ತಂ ನ್ಯವೇದಯತ್ ।
ಸ ಷಂಡಕವಚಃ ಶ್ರುತ್ವಾ ಸೌವಿದಲ್ಲಃ ಸಭಾಂ ಗತಃ ॥ ೨೯ ॥
ರಾಜ್ಞೇ ನಿವೇದಯಾಮಾಸ ಪುತ್ರಂ ವೃಶ್ಚಿಕಪೀಡಿತಂ ।
ತತೋ ಧರ್ಮಸಖೋ ರಾಜಾ ಶ್ರುತ್ವಾ ವೃತ್ತಾಂತಮೀದೃಶಂ ॥ ೩೦ ॥
ತ್ವರಮಾಣಃ ಸಮುತ್ಥಾಯ ಸಾಽಮಾತ್ಯಃ ಸಪುರೋಹಿತಃ ।
ಪ್ರವಿಶ್ಯಾಂತಃಪುರಂ ಸಾರ್ಧಂ ಮಾಂತ್ರಿಕೈರ್ವಿಷಹಾರಿಭಿಃ ॥ ೩೧ ॥
ಚಿಕಿತ್ಸಯಾಮಾಸ ಸುತಂ ಔಷಧಾದ್ಯೈರನೇಕಶಃ ।
ಜಾತಸ್ವಾಸ್ಥ್ಯಂ ತತಃ ಪುತ್ರಂ ಲಾಲಯಿತ್ವಾ ಸ ಭೂಪತಿಃ ॥ ೩೨ ॥
ಮಾನಯಿತ್ವಾ ಚ ಮಂತ್ರಜ್ಞಾನ್ರತ್ನಕಾಂಚನಮೌಕ್ತಿಕೈಃ ।
ನಿಷ್ಕ್ರಮ್ಯಾಂತಃಪುರಾದ್ರಾಜಾ ಭೃಶಂ ಚಿಂತಾಸಮಾಕುಲಃ ॥ ೩೩ ॥
ಋತ್ವಿಕ್ಪುರೋಹಿತಾಽಮಾತ್ಯೈಸ್ತಾಂ ಸಭಾಂ ಸಮುಪಾವಿಶತ್ ।
ತತ್ರ ಧರ್ಮಸಖೋ ರಾಜಾ ಸಮಾಸೀನೋ ವರಾಸನೇ ॥ ೩೪ ॥
ಉವಾಚೇದಂ ವಚೋ ಯುಕ್ತಮೃತ್ವಿಜಃ ಸ ಪುರೋಹಿತಾನ್ ।

ಧರ್ಮಸಖ ಉವಾಚ:—

ದುಃಖಾಯೈವೈಕಪುತ್ರತ್ವಂ ಭವತಿ ಬ್ರಾಹ್ಮಣೋತ್ತಮಾಃ ॥ ೩೫ ॥
ಏಕಪುತ್ರತ್ವತೋ ನೄಣಾಂ ವರಾ ಚೈವ ಹ್ಯಪುತ್ರತಾ ।
ನಿತ್ಯಂ ಹ್ಯಪಾಯಯುಕ್ತತ್ವಾದ್ವರಮೇವ ಹ್ಯಪುತ್ರತಾ ।
ಅಹಂ ಭಾರ್ಯಾಶತಂ ವಿಪ್ರಾ ಉದವೋಢಂ ವಿಚಿಂತ್ಯ ತು ॥ ೩೬ ॥

---

ವನ್ನರಿತು ಬಂದು ವೃದ್ಧನಾದ ಕಂಚುಕಿಗೆ ಎಲ್ಲವನ್ನೂ ತಿಳಿಸಿದರು. ಅವನು ಸಭೆಗೆ ಹಿಂದಿರುಗಿ ಬಂದು ಮಗನಿಗೆ ಚೇಳು ಹೊಡೆದಿದೆಯೆಂದು ರಾಜನಿಗೆ ಅರಿಕೆ ಮಾಡಿದನು. ಇಂತಹ ವಿಚಾರವನ್ನು ಕೇಳಿದೊಡನೆಯೇ ರಾಜನಾದ ಧರ್ಮಸಖನು ತಳಮಳದಿಂದೆದ್ದು ಮಂತ್ರಿಪುರೋಹಿತರೊಡನೆ, ಮಂತ್ರವಾದಿಗಳನ್ನೂ ಜತೆಯಲ್ಲಿಯೇ ಕರೆದುಕೊಂಡು ಅಂತಃಪುರಕ್ಕೆ ಬಂದನು.

೩೨–೩೬. ಔಷಧಾದಿಗಳಿಂದ ಅನೇಕ ಬಗೆಯಾಗಿ ಮಗನಿಗೆ ಚಿಕಿತ್ಸೆಯನ್ನು ಮಾಡಿಸಿದನು. ರಾಜನು ಆದರಿಂದ ಗುಣಹೊಂದಿದ ಮಗನನ್ನು ಲಾಲಿಸಿ ರತ್ನ, ಕಾಂಚನ, ಮುತ್ತು ಮುಂತಾದುವುಗಳಿಂದ ಆ ಮಾಂತ್ರಿಕರನ್ನು ಗೌರವಿಸಿ ಕಳುಹಿಸಿದನು. ಬಳಿಕ ರಾಜನು ಚಿಂತಾಕ್ರಾಂತನಾಗಿ, ಪುರೋಹಿತಾದಿಗಳೊಡನೆ ಸಭೆಗೆ ಹಿಂದಿರುಗಿ ಬಂದು ಸಿಂಹಾಸನದಲ್ಲಿ ಕುಳಿತು ಮಂತ್ರಿಪುರೋಹಿತಾದಿಗಳನ್ನು ಕುರಿತು, "ಎಲೈ ಬ್ರಾಹ್ಮಣೋತ್ತಮರೇ! ಏಕಪುತ್ರತ್ವವು ಕೇವಲ ದುಃಖಕ್ಕೆ ಕಾರಣವಾದುದು. ಅದಕ್ಕಿಂತಲೂ ಮಕ್ಕಳಿಲ್ಲದಿರುವುದೇ ಲೇಸು. ಏಕಪುತ್ರತ್ವವು ಯಾವಾಗಲೂ ಅಪಾಯಗಳಿಗೆ ಎಡೆಯಾದಕಾರಣ ಏಕಪುತ್ರತ್ವ

ವಯಶ್ಚ ಸಮತಿಕ್ರಾಂತಂ ಸಪತ್ನೀಕಸ್ಯ ಮೇ ದ್ವಿಜಾಃ ।
ಪ್ರಾಣಾ ಮಮ ಚ ಭಾರ್ಯಾಣಾಮಸ್ಮಿನ್ಪುತ್ರೇ ವ್ಯವಸ್ಥಿತಾಃ ॥ ೩೭ ॥
ತನ್ನಾಶೇ ಮಮ ಭಾರ್ಯಾಣಾಂ ಸರ್ವಾಸಾಂ ಚ ಮೃತಿರ್ಧ್ರುವಾ ।
ಮಮಾಽಪಿ ಪ್ರಾಣನಾಶಃ ಸ್ಯಾದೇಕಪುತ್ರಸ್ಯ ಮಾರಣೇ ॥ ೩೮ ॥
ಅತೋ ಮೇ ಬಹುಪುತ್ರತ್ವಂ ಕೇನೋಪಾಯೇನ ವೈ ಭವೇತ್ ।
ತಮುಪಾಯಂ ಮಮ ಬ್ರೂತ ಬ್ರಾಹ್ಮಣಾ ವೇದವಿತ್ತಮಾಃ ॥ ೩೯ ॥
ಏಕೈಕಃ ಶತಭಾರ್ಯಾಸು ಪುತ್ರೋ ಮೇ ಸ್ಯಾದ್ಯಥಾ ಗುಣೀ ।
ತತ್ಕರ್ಮ ಬ್ರೂತ ಯೂಯಂ ತು ಶಾಸ್ತ್ರಮಾಲೋಕ್ಯ ಧರ್ಮತಃ ॥ ೪೦ ॥
ಮಹತಾ ಲಘುನಾ ವಾಽಪಿ ಕರ್ಮಣಾ ದುಷ್ಕರೇಣ ವಾ ।
ಫಲಂ ಯದ್ಯಪಿ ತತ್ಸಾಧ್ಯಂ ಕರಿಷ್ಯೇಽಹಂ ನ ಸಂಶಯಃ ॥ ೪೧ ॥
ಯುಷ್ಮಾಭಿರುದಿತಂ ಕರ್ಮ ಕರಿಷ್ಯಾಮಿ ನ ಸಂಶಯಃ ।
ಕೃತಮೇವ ಹಿ ತದ್ವಿತ್ತ ಶಪೇಽಹಂ ಸುಕೃತೈರ್ಮಮ ॥ ೪೨ ॥
ಅಸ್ತಿಚೇದೀದೃಶಂ ಕರ್ಮ ಯೇನ ಪುತ್ರಶತಂ ಭವೇತ್ ।
ತತ್ಕರ್ಮ ಕುತ್ರ ಕರ್ತವ್ಯಂ ಮಯೇತಿ ವದತಾಽಧುನಾ ॥ ೪೩ ॥

---

ಕ್ಕಿಂತಲೂ ಅಪುತ್ರತ್ವವೇ ಮೇಲು. ಎಲೈ ವಿಪ್ರೋತ್ತಮರೇ! ಅದನ್ನು ಯೋಚಿಸಿಯೇ ನಾನು ನೂರುಮಂದಿ ಹೆಂಡಿರನ್ನು ಮದುವೆಯಾದೆನು.

೩೭. ನಾನೂ ನನ್ನ ಮಡದಿಯರೂ ಕೂಡ ವೃದ್ಧರಾದೆವು. ಈ ಒಬ್ಬ ಮಗನಲ್ಲಿಯೇ ನಮ್ಮೆಲ್ಲರ ಪ್ರಾಣಗಳೂ ನಟ್ಟಿರುವುವು.

೩೮. ಅವನಿಗೆ ಅಪಾಯವೊದಗಿದಲ್ಲಿ ನಮ್ಮೆಲ್ಲರಿಗೂ ಮರಣವು ನಿಶ್ಚಿತವು.

೩೯. ವೇದವಿದರಾದ ಎಲೈ ಬ್ರಾಹ್ಮಣರೆ! ಆದುದರಿಂದ ಯಾವ ಉಪಾಯದಿಂದ ನನಗೆ ಬಹುಪುತ್ರತ್ವವು ಸಿದ್ಧಿಸುವುದೊ ಅದನ್ನರುಹಿರಿ.

೪೦. ನೀವು ಶಾಸ್ತ್ರವನ್ನವಲೋಕಿಸಿ, ಒಬ್ಬೊಬ್ಬ ಮಡದಿಯಲ್ಲಿಯೂ ಒಬ್ಬೊಬ್ಬ ಗುಣವಂತನಾದ ಮಗನು ಹುಟ್ಟುವ ಧಾರ್ಮಿಕವಾದ ಕರ್ಮವನ್ನು ಅಪ್ಪಣೆ ಕೊಡಿಸಿರಿ.

೪೧. ದೊಡ್ಡದಾಗಲಿ, ಸ್ವಲ್ಪವಾಗಲಿ, ಕಠಿಣವಾದುದಾಗಲಿ ಯಾವ ಕೆಲಸದಿಂದ ಅದು ಸಿದ್ಧಿಸುವುದೊ ಅದನ್ನು ಖಂಡಿತವಾಗಿಯೂ ಮಾಡುವೆನು.

೪೨–೪೩. ತಾವು ಅಪ್ಪಣೆ ಮಾಡಿದ ಕೆಲಸವನ್ನು ನಿಸ್ಸಂಶಯವಾಗಿಯೂ ನಡೆಸುವೆನು. ನಾನು ಮಾಡಿದ ಸುಕೃತಗಳ ಆಣೆಯಾಗಿಯೂ ಮಾಡಿದಂತೆಯೇ ತಿಳಿಯಿರಿ. ನನಗೆ ಪುತ್ರಶತವನ್ನು ಅನುಗ್ರಹಿಸುವಂತಹ ಕರ್ಮವೊಂದಿದ್ದರೆ ಅದನ್ನೆಲ್ಲಿ ಆಚರಿಸಬೇಕೆಂದೂ ಅಪ್ಪಣೆಕೊಡಿಸಿರಿ" ಎಂದು ಪ್ರಾರ್ಥಿಸಿಕೊಂಡನು.

ಇತಿ ಪೃಷ್ಟಾಸ್ತದಾ ರಾಜ್ಞಾ ಋತ್ವಿಜಃ ಸಪುರೋಹಿತಾಃ ।
ಸಂಭೂಯ ಸರ್ವೇ ರಾಜಾನಮಿದಮೂಚುಃ ಸುನಿಶ್ಚಿತಂ ॥ ೪೪ ॥

ಋತ್ವಿಜ ಊಚುಃ:—

ಅಸ್ತಿ ರಾಜನ್ಪ್ರವಕ್ಷ್ಯಾಮೋ ಯೇನ ಪುತ್ರಶತಂ ತವ ।
ಭವೇದ್ಧರ್ಮೇಣ ಮಹತಾ ಶತಭಾರ್ಯಾಸು ಕೈಕಯ ॥ ೪೫ ॥
ಅಸ್ತಿ ಕಶ್ಚಿನ್ಮಹಾಪುಣ್ಯೋ ಗಂಧಮಾದನಪರ್ವತಃ ।
ದಕ್ಷಿಣಾಂಬುಧಿಮಧ್ಯೇ ಯಃ ಸೇತುರೂಪೇಣ ವರ್ತತೇ ॥ ೪೬ ॥
ಸಿದ್ಧಚಾರಣಗಂಧರ್ವದೇವರ್ಷಿಗಣಸಂಕುಲಃ ।
ದರ್ಶನಾತ್ಸ್ಪರ್ಶನಾನ್ನೄಣಾಂ ಮಹಾಪಾತಕನಾಶನಃ ॥ ೪೭ ॥
ತತ್ರಾಽಸ್ತಿ ಹನುಮತ್ಕುಂಡಮಿತಿ ಲೋಕೇಷು ವಿಶ್ರುತಂ ।
ಮಹಾದುಃಖಪ್ರಶಮನಂ ಸ್ವರ್ಗಮೋಕ್ಷಫಲಪ್ರದಂ ॥ ೪೮ ॥
ನರಕಕ್ಲೇಶಶಮನಂ ತಥಾ ದಾರಿದ್ರ್ಯಮೋಚನಂ ।
ಪುತ್ರಪ್ರದಮಪುತ್ರಾಣಾಮಸ್ತ್ರೀಣಾಂ ಸ್ತ್ರೀಪ್ರದಂ ನೃಣಾಂ ॥ ೪೯ ॥
ತತ್ರ ತ್ವಂ ಪ್ರಯತಃ ಸ್ನಾತ್ವಾ ಸರ್ವಾಽಭೀಷ್ಟಪ್ರದಾಯಿನೀಂ ।
ಪುತ್ರೀಯೇಷ್ಟಿಂ ಚ ತತ್ತೀರೇ ಕುರುಷ್ವ ಸುಸಮಾಹಿತಃ ॥ ೫೦ ॥

---

೪೪. ಈ ಬಗೆಯಾಗಿ ರಾಜನಿಂದ ಪ್ರಾರ್ಥಿಸಲ್ಪಟ್ಟ ಋತ್ವಿಜರೂ, ಪುರೋಹಿತರೂ ಒಟ್ಟುಗೂಡಿ ನಿಜವನ್ನರುಹಿದರು.

೪೫. ಋತ್ವಿಜರು ಹೇಳುತ್ತಾರೆ:—ಎಲೈ ಕೈಕಯಮಹಾರಾಜನೇ! ಯಾವ ಮಹತ್ತರವಾದ ಧರ್ಮದಿಂದ ನಿನ್ನ ನೂರುಮಂದಿ ಮಡದಿಯರಲ್ಲಿಯೂ ಪುತ್ರಶತ ವುಂಟಾಗುವುದೊ, ಅಂತಹದೊಂದು ಉಪಾಯವಿರುವುದು ಹೇಳುವೆವು; ಕೇಳು.

೪೬. ದಕ್ಷಿಣಸಮುದ್ರದ ಮಧ್ಯದಲ್ಲಿ ಸೇತುರೂಪವೂ, ಪುಣ್ಯಪ್ರದವೂ ಆದ ಗಂಧಮಾದನವೆಂಬ ಪರ್ವತವೊಂದಿರುವುದು.

೪೭. ಅದು ಸಿದ್ಧ, ಚಾರಣ, ಗಂಧರ್ವ, ದೇವ ಋಷಿಸಂಕುಲವಾಗಿ, ದರ್ಶನಸ್ಪರ್ಶನಗಳಿಂದಲೇ ಸಮಸ್ತರಿಗೂ ಮಹಾಪಾತಕಗಳನ್ನು ನೀಗುವಂತಹುದೂ ಆಗಿರುವುದು.

೪೮–೪೯. ಅಲ್ಲಿ ಹನೂಮತ್ಕುಂಡವೆಂಬ ಲೋಕಪ್ರಸಿದ್ಧವಾದ ತೀರ್ಥವಿರುವುದು. ಅದು ಸಮಸ್ತ ದುಃಖಗಳನ್ನೂ ನೀಗಿಸುವಂತಹುದಾಗಿ, ಸ್ವರ್ಗ ಮೋಕ್ಷಗಳನ್ನು ಒದಗಿಸಿ, ನರಕಕ್ಲೇಶವನ್ನೂ, ದಾರಿದ್ರ್ಯವನ್ನೂ ನಾಶಮಾಡುವಂತಹುದೂ, ಅಪುತ್ರರಿಗೆ ಪುತ್ರರನ್ನೂ, ಅಪತ್ನೀಕರಾದವರಿಗೆ ಪತ್ನಿಯನ್ನೂ ಕೊಡುವಂತಹುದೂ ಆಗಿರುವುದು.

೫೦. ನೀನು ಅದರಲ್ಲಿ ಶುಚಿಯಾಗಿ ಸ್ನಾನಮಾಡಿ, ಅದರ ತೀರದಲ್ಲಿ

ತೇನ ತೇ ಶತಭಾರ್ಯಾಸು ಪ್ರತ್ಯೇಕಂ ತನಯೋ ನೃಪ ।
ಏಕೈಕಸ್ತು ಭವೇಚ್ಛೀಘ್ರಂ ಮಾ ಕುರುಷ್ವಾತ್ರ ಸಂಶಯಂ ॥ ೫೧ ॥
ತಥೋಕ್ತೋ ನೃಪತಿರ್ವಿಪ್ರೈರೃತ್ವಿಕ್ಭಿಃ ಸ ಪುರೋಹಿತೈಃ ।
ತತ್ಕ್ಷಣೇನೈವ ಋತ್ವಿಕ್ಭಿರ್ಭಾರ್ಯಾಭಿಶ್ಚ ಪುರೋಧಸಾ ॥ ೫೨ ॥
ವೃತೋಽಮಾತ್ಯೈಶ್ಚ ಭೃತ್ಯೈಶ್ಚ ಯಜ್ಞಸಂಭಾರಸಂಯುತಃ ।
ಪ್ರಯಯೌ ದಕ್ಷಿಣಾಂಬೋಧೌ ಗಂಧಮಾದನಪರ್ವತಂ ॥ ೫೩ ॥
ಹನುಮತ್ಕುಂಡಮಾಸಾದ್ಯ ತತ್ರ ಸಸ್ನೌ ಸಸೈನಿಕಃ ।
ಮಾಸಮಾತ್ರಂ ಸ ತತ್ತೀರೇ ನ್ಯವಸತ್ಸ್ನಾನಮಾಚರನ್ ॥ ೫೪ ॥
ತತೋ ವಸಂತೇ ಸಂಪ್ರಾಪ್ತೇ ಚೈತ್ರಮಾಸಿ ನೃಪೋತ್ತಮಃ ।
ಇಷ್ಟಿಮಾರಬ್ಧವಾಂಸ್ತತ್ರ ಪುತ್ರೀಯಾಂ ಸ ಪುರೋಹಿತಃ ॥ ೫೫ ॥
ಸಮ್ಯಕ್ಕರ್ಮಾಣಿ ಚಕ್ರುಸ್ತೇ ಋತ್ವಿಜಃ ಸ ಪುರೋಧಸಃ ।
ಸಪತ್ನೀಕಸ್ಯ ರಾಜರ್ಷೇಸ್ತಥಾ ಧರ್ಮಸಖಸ್ಯ ತು ॥ ೫೬ ॥
ಇಷ್ಟೌ ತಸ್ಯ ಸಮಾಪ್ತಾಯಾಂ ಹನೂಮತ್ಕುಂಡತೀರತಃ ।
ಪುರೋಹಿತೋ ಹುತೋಚ್ಛಿಷ್ಟಂ ಪ್ರಾಶಯದ್ರಾಜಯೋಷಿತಃ ॥ ೫೭ ॥

---

ಸಾವಧಾನಮನಸ್ಕನಾಗಿ, ಸರ್ವಾಭೀಷ್ಟಗಳನ್ನೂ ಕೊಡುವ ಪುತ್ರಕಾಮೇಷ್ಟಿಯನ್ನು ಮಾಡು.

೫೧. ಎಲೈ ನೃಪನೇ! ಅವರಿಂದ ನಿನ್ನ ನೂರುಮಂದಿ ಮಡದಿಯರಲ್ಲಿ ಪ್ರತಿಯೊಬ್ಬಳಲ್ಲಿಯೂ ಒಬ್ಬೊಬ್ಬ ಮಗನು ಜನಿಸುವನು. ಇದರಲ್ಲಿ ಸಂಶಯ ಪಡಬೇಡ."

೫೨–೫೪. ಋತ್ವಿಜರೂ, ಪುರೋಹಿತರೂ ಇಂತು ನುಡಿಯಲು, ಆ ರಾಜನು ಕೂಡಲೇ ಅವರೊಡನೆಯೂ, ಅಮಾತ್ಯಭೃತ್ಯರೊಡನೆಯೂ ಕೂಡಿದವನಾಗಿ ಯಜ್ಞಸಾಮಗ್ರಿಗಳನ್ನೊದಗಿಸಿಕೊಂಡು ಭಾರ್ಯಾಸಮೇತನಾಗಿ ದಕ್ಷಿಣ ಸಮುದ್ರದಲ್ಲಿರುವ ಗಂಧಮಾದನಪರ್ವತಕ್ಕೆ ತೆರಳಿದನು. ಅಲ್ಲಿ ಹನೂಮತ್ಕುಂಡಕ್ಕೆ ಹೋಗಿ ಪರಿವಾರದೊಂದಿಗೆ ಒಂದು ತಿಂಗಳು ಕಾಲ ಅಲ್ಲಿ ಸ್ನಾನಮಾಡುತ್ತಿದ್ದನು.

೫೫. ಬಳಿಕ ವಸಂತಋತುವು ಬರಲು ಆತನು ಚೈತ್ರಮಾಸದಲ್ಲಿ ಪುರೋಹಿತ ಸಹಿತನಾಗಿ ಪುತ್ರಕಾಮೇಷ್ಟಿಯನ್ನು ಪ್ರಾರಂಭಿಸಿದನು.

೫೬. ರುತ್ವಿಜರೂ, ಪುರೋಹಿತರೂ ಭಾರ್ಯಾಸಮೇತನಾದ ಆ ಧರ್ಮಸಖನಿಗಾಗಿ ಯಾಗಕೃತ್ಯಗಳನ್ನು ಸುಷ್ಠುವಾಗಿ ನೆರವೇರಿಸಿದರು.

೫೭. ಹನೂಮತ್ಕುಂಡದ ಬಳಿಯಲ್ಲಿ ಯಜ್ಞವು ಮುಗಿದ ಬಳಿಕ ಪುರೋಹಿತನು ಯಜ್ಞಶೇಷವಾದ ಅಮೃತವನ್ನು ಆತನ ಪತ್ನಿಯರೆಲ್ಲರಿಂದಲೂ ಪ್ರಾಶನ ಮಾಡಿಸಿದನು.

ತತೋ ಧರ್ಮಸಖೋ ರಾಜಾ ಹನೂಮತ್ಕುಂಡವಾರಿಷು ।
ಸಮ್ಯಕ್ಚಕಾರಾಽವಭೃಥಸ್ನಾನಂ ಭಾರ್ಯಾಶತಾನ್ವಿತಃ ॥ ೫೮ ॥
ಋತ್ವಿಗ್ಭ್ಯೋ ದಕ್ಷಿಣಾಃ ಪ್ರಾದಾದಸಂಖ್ಯಾತಾಸ್ತು ಭೂರಿಶಃ ।
ಗ್ರಾಮಾಂಶ್ಚ ಪ್ರದದೌ ರಾಜಾ ಬ್ರಾಹ್ಮಣೇಭ್ಯೋ ದ್ವಿಜೋತ್ತಮಾಃ॥ ೫೯ ॥
ಸಾಽಮಾತ್ಯಃ ಸಪರೀವಾರಃ ಸಪತ್ನೀಕಃ ಸ ಧಾರ್ಮಿಕಃ ।
ರಾಜಾ ತತೋ ನಿವವೃತೇ ಪುರೀಂ ಸ್ವಾಂ ಪ್ರತಿನಂದಿತಃ ॥ ೬೦ ॥
ತತಃ ಕತಿಪಯೇ ಕಾಲೇ ಗತೇ ದಶಮಮಾಸಿ ವೈ ।
ಶತಂ ಭಾರ್ಯಾಃ ಶತಂ ಪುತ್ರಾನ್ಸುಷುವುರ್ಗುಣವತ್ತರಾನ್ ॥ ೬೧ ॥
ಅಥ ಪ್ರೀತಮನಾ ರಾಜಾ ವೀರೋ ಧರ್ಮಸಖೋ ಮಹಾನ್ ।
ಸ್ನಾತಃ ಶುದ್ಧಶ್ಚ ಸಂಕಲ್ಪ್ಯ ಜಾತಕರ್ಮಾಽಕರೋತ್ತದಾ ॥ ೬೨ ॥
ಗೋಭೂತಿಲಹಿರಣ್ಯಾದಿ ಬ್ರಾಹ್ಮಣೇಭ್ಯೋ ದದೌ ಬಹು ।
ದ್ವೌ ಪುತ್ರೌ ಜ್ಯೇಷ್ಠಭಾರ್ಯಾಯಾಃ ಪೂರ್ವಜೋಽವರಜಸ್ತದಾ ॥ ೬೩ ॥
ಸರ್ವೇ ವವೃಧಿರೇ ಪುತ್ರಾ ಏಕಾಽಧಿಕಶತಂ ದ್ವಿಜಾಃ ।
ಪ್ರೌಢೇಷು ತೇಷು ರಾಜಾಽಸೌ ತೇಭ್ಯೋ ರಾಜ್ಯಂ ವಿಭಜ್ಯತು ॥ ೬೪ ॥
ದತ್ವಾಚ ಪ್ರಯಯೌ ಸೇತುಂ ಸಭಾರ್ಯೋ ಗಂಧಮಾದನಂ ।
ಹನುಮತ್ಕುಂಡಮಾಸಾದ್ಯ ತಪೋಽತಪ್ಯತ ತತ್ತಟೇ ॥ ೬೫ ॥

---

೫೮–೫೯. ಅನಂತರ ಆ ಧರ್ಮಸಖನು ಭಾರ್ಯಾಸಹಿತನಾಗಿ ಹನೂಮತ್ಕುಂಡದಲ್ಲಿ ಅವಭೃಥಸ್ನಾನವನ್ನಾಚರಿಸಿ, ಋತ್ವಿಜರಿಗೆ ಭೂರಿದಕ್ಷಿಣೆಗಳನ್ನೂ, ಬ್ರಾಹ್ಮಣರಿಗೆ ಅನೇಕ ಗ್ರಾಮಗಳನ್ನೂ ದಾನಮಾಡಿದನು.

೬೦. ತರುವಾಯ ಧಾರ್ಮಿಕನಾದ ಆ ರಾಜನು ಸಪರಿವಾರನೂ, ಸಾಮಾತ್ಯನೂ, ಸಪತ್ನೀಕನೂ ಆಗಿ, ಆನಂದವಾಗಿ ತನ್ನ ಪಟ್ಟಣಕ್ಕೆ ಹಿಂದಿರುಗಿದನು.

೬೧. ಬಳಿಕ ಕೆಲಕಾಲವು ಕಳೆಯಲು ಆತನ ನೂರು ಜನ ಹೆಂಡತಿಯರೂ ಗರ್ಭಧಾರಣೆಮಾಡಿ ಹತ್ತನೆಯ ತಿಂಗಳಲ್ಲಿ ಗುಣವಂತರಾದ ನೂರು ಗಂಡುಮಕ್ಕಳನ್ನು ಪ್ರಸವಿಸಿದರು.

೬೨. ಆಗ ವೀರನಾದ ಧರ್ಮಸಖನು ಸಂತೋಷಚಿತ್ತನಾಗಿ ಸ್ನಾನಮಾಡಿ ಶುದ್ಧನಾಗಿ ಸಂಕಲ್ಪಪೂರ್ವಕವಾಗಿ ಅವರಿಗೆ ಜಾತಕರ್ಮವನ್ನು ನಡೆಸಿದನು.

೬೩–೬೫. ಬ್ರಾಹ್ಮಣರಿಗೆ ಗೋ, ಭೂ, ತಿಲ, ಹಿರಣ್ಯಾದಿ ದಶದಾನಗಳನ್ನು ಮಾಡಿದನು. ಹಿರಿಯ ಹೆಂಡತಿಯು ಇಬ್ಬರು ಮಕ್ಕಳೂ, ಮಿಕ್ಕ ಇತರ ಪತ್ನಿಯರ ಒಬ್ಬೊಬ್ಬ ಮಗನೂ, ಒಟ್ಟಿಗೆ ಆ ನೂರೊಂದು ಗಂಡುಮಕ್ಕಳೂ ವೃದ್ಧಿಹೊಂದುತ್ತ ಬಂದರು. ಆಯ್ಯಾ ಬ್ರಾಹ್ಮಣರುಗಳಿರಾ! ಅವರೆಲ್ಲರೂ ವಯಸ್ಕರಾಗಲು ವೃದ್ಧನಾದ ಧರ್ಮಸಖನು ಅವರೆಲ್ಲರಿಗೂ ರಾಜ್ಯವನ್ನು ಹಂಚಿಕೊಟ್ಟು ಪತ್ನಿಯ

ಮಹಾನ್ಕಾಲೋ ವ್ಯತೀಯಾಯ ರಾಜ್ಞಸ್ತಸ್ಯ ತಪಸ್ಯತಃ ।
ರಾಜ್ಞೋ ಧರ್ಮಸಖಸ್ಯಾಸ್ಯ ಧ್ಯಾಯಮಾನಸ್ಯ ಶೂಲಿನಂ ॥ ೬೬ ॥
ತತೋ ಬಹುತಿಥೇ ಕಾಲೇ ಗತೇ ಧರ್ಮಸಖೋ ನೃಪಃ ।
ಕಾಲಧರ್ಮಂ ಯಯೌ ತತ್ರ ಧಾರ್ಮಿಕಃ ಶಾಂತಮಾನಸಃ ॥ ೬೭ ॥
ಪತ್ನ್ಯೋಽಪಿ ತಸ್ಯ ರಾಜರ್ಷೇರನುಜಗ್ಮುಃ ಪತಿಂ ತದಾ ।
ಜ್ಯೇಷ್ಠಪುತ್ರಃ ಸುಚಂದ್ರೋಽಪಿ ಸಂಸ್ಕೃತ್ಯ ಪಿತರಂ ತತಃ ॥ ೬೮ ॥
ಅಕರೋಚ್ಛ್ರಾದ್ಧಪರ್ಯಂತಂ ಕರ್ಮಾಣಿ ಶ್ರದ್ಧಯಾ ಸಹ ।
ರಾಜಾ ಸಭಾರ್ಯೋ ವೈಕುಂಠಂ ಮರಣಾದತ್ರ ಜಗ್ಮಿವಾನ್ ॥ ೬೯ ॥
ಸುಚಂದ್ರಮುಖ್ಯಾಸ್ತೇ ಸರ್ವೇ ರಾಜಪುತ್ರಾ ಮಹೌಜಸಃ ।
ಸ್ವಂ ಸ್ವಂ ರಾಜ್ಯಂ ಬುಭುಜಿರೇ ಭ್ರಾತರಸ್ತ್ಯಕ್ತಮತ್ಸರಾಃ ॥ ೭೦ ॥
ಏವಂ ವಃ ಕಥಿತಂ ವಿಪ್ರಾ ಹನೂಮತ್ಕುಂಡವೈಭವಂ ।
ರಾಜ್ಞೋ ಧರ್ಮಸಖಸ್ಯಾಽಪಿ ಚರಿತ್ರಂ ಪರಮಾದ್ಭುತಂ ॥ ೭೧ ॥
ತತ್ಸರ್ವಕಾಮಸಿದ್ಧ್ಯರ್ಥಂ ಸ್ನಾಯಾತ್ಕುಂಡೇ ಹನೂಮತಃ ॥ ೭೨ ॥

---

ರೆಲ್ಲರಿಂದಲೂ ಕೂಡಿದವನಾಗಿ ಸೇತುರೂಪವಾದ ಗಂಧಮಾದನಪರ್ವತಕ್ಕೆ ತೆರಳಿದನು. ಅಲ್ಲಿ ಹನೂಮತ್ಕುಂಡದ ಬಳಿಯಲ್ಲಿಯೆ ತಪಸ್ಸನ್ನು ಮಾಡಿಕೊಂಡಿದ್ದನು.

೬೬–೬೭. ಈ ಬಗೆಯಾಗಿ ಬಹುಕಾಲವು ಕಳೆಯಲು ಧಾರ್ಮಿಕನೂ, ಶಿವಧ್ಯಾನಪರನೂ ಆದ ಆ ಧರ್ಮಸಖರಾಜನು ಶಾಂತಚಿತ್ತನಾಗಿ ಅಲ್ಲಿಯೇ ಕಾಲಧರ್ಮವನ್ನೈದಿದನು.

೬೮–೬೯. ಆಗ ಆ ರಾಜರ್ಷಿಯ ಪತ್ನಿಯರು ಆತನನ್ನೇ ಹಿಂಬಾಲಿಸಿದರು. ಜ್ಯೇಷ್ಠಪುತ್ರನಾದ ಸುಚಂದ್ರನು ತಂದೆಗೆ ಅಂತ್ಯಸಂಸ್ಕಾರವನ್ನು ನೆರವೇರಿಸಿ ಶ್ರದ್ಧೆಯಿಂದ ಶ್ರಾದ್ಧಪರ್ಯಂತವಾದ ಕರ್ಮಗಳೆಲ್ಲವನ್ನೂ ನಡೆಸಿದನು. ಹನೂಮತ್ಕುಂಡದ ಬಳಿಯ ಮರಣದಿಂದ ಆ ರಾಜನು ಪತ್ನೀಸಮೇತನಾಗಿ ವೈಕುಂಠವನ್ನು ಹೊಂದಿದನು.

೭೦. ಬಳಿಕ ಮಾತ್ಸರ್ಯವಿಹೀನರಾದ ಸುಚಂದ್ರನೇ ಮೊದಲಾದ ಆತನ ಮಕ್ಕಳೆಲ್ಲರೂ ಅಸೂಯೆಯಿಲ್ಲದವರಾಗಿ ತಂತಮ್ಮ ರಾಜ್ಯವನ್ನು ಅನುಭವಿಸುತ್ತ ಸುಖದಿಂದಿದ್ದರು.

೭೧. ಎಲೈ ವಿಪ್ರರೇ! ಇಂತು ಹನೂಮತ್ಕುಂಡದ ವೈಭವವನ್ನೂ, ಧರ್ಮಸಖನ ಪರಮಾದ್ಭುತವಾದ ಚರಿತ್ರೆಯನ್ನೂ ನಿಮಗೆ ಹೇಳಿರುವೆನು.

೭೨. ಆದುದರಿಂದ ಎಲ್ಲರೂ ಇಷ್ಟಸಿದ್ಧಿಗಾಗಿ ಹನೂಮತ್ಕುಂಡದಲ್ಲಿ ಸ್ನಾನ ಮಾಡತಕ್ಕದ್ದು.

ಅಧ್ಯಾಯಮೇನಂ ಪಠತೇ ಮನುಷ್ಯಃ
ಶೃಣೋತಿ ವಾಯುಃ ಸುಸಮಾಹಿತೋ ದ್ವಿಜಾಃ ।
ಸೋಽನಂತಮಾಪ್ನೋತಿ ಸುಖಂ ಪರತ್ರ
ಕ್ರೀಡೇತ ಸಾರ್ಧಂ ದಿವಿ ದೇವವೃಂದೈಃ ॥ ೭೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಹನುಮತ್ಕುಂಡ ಪ್ರಶಂಸಾಯಾಂ ಧರ್ಮಸಖಶತಪುತ್ರಾಽವಾಪ್ತಿವರ್ಣನಂ" ನಾಮ ಪಂಚದಶೋಽಧ್ಯಾಯಃ

---

೭೩. ಎಲೈ ದ್ವಿಜರೇ! ಈ ಅಧ್ಯಾಯವನ್ನು ಸಾವಧಾನಚಿತ್ತದಿಂದ ಓದುವವನೂ, ಕೇಳುವವನೂ, ಇಹಲೋಕದಲ್ಲಿ ಅನಂತವಾದ ಸುಖವನ್ನನುಭವಿಸಿ, ಪರಲೋಕದಲ್ಲಿ ದೇವಬೃಂದಗಳೊಡನೆ ಸಮಸಮವಾಗಿ ವಿಹರಿಸುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಹನೂಮತ್ಕುಂಡಪ್ರಶಂಸೆಯಲ್ಲಿ ಧರ್ಮಸಖನಿಗೆ ನೂರು ಮಕ್ಕಳಾದುದು" ದೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷೋಡಶೋಽಧ್ಯಾಯಃ

### ಅಗಸ್ತ್ಯತೀರ್ಥಪ್ರಶಂಸನಂ— ಕಕ್ಷೀವದುದ್ವಾಹೋದ್ಯೋಗವರ್ಣನಂ

ಸೂತ ಉವಾಚ :—

ಕುಂಡೇ ಹನುಮತಃ ಸ್ನಾತ್ವಾ ಸ್ವಯಂ ರುದ್ರೇಣ ಸೇವಿತೇ ।
ಅಗಸ್ತ್ಯತೀರ್ಥಂ ವಿಪ್ರೇಂದ್ರಾಸ್ತತೋ ಗಚ್ಛೇತ್ಸಮಾಹಿತಃ ॥ ೧ ॥
ಏತದ್ಧಿನಿರ್ಮಿತಂ ತೀರ್ಥಂ ಸಾಕ್ಷಾದ್ವೈ ಕುಂಭಯೋನಿನಾ ।
ಪ್ರವರ್ತಮಾನೇ ಕಲಹೇ ಪುರಾ ವೈ ಮೇರುವಿಂಧ್ಯಯೋಃ ॥ ೨ ॥
ನಿರುದ್ಧ ಭುವನಾಭೋಗೋ ವವೃಧೇ ವಿಂಧ್ಯಪರ್ವತಃ ।
ತದಾ ಪ್ರಾಣಿಷು ಸರ್ವೇಷು ನಿರುಚ್ಛ್ವಾಸೇಷು ದೇವತಾಃ ॥ ೩ ॥
ಕೈಲಾಸಂ ಪರ್ವತಂ ಗತ್ವಾ ಶಂಭವೇ ತದ್ವ್ಯಜಿಜ್ಞಪನ್ ।
ತದಾ ಸ ಪಾರ್ವತೀಪಾಣಿಗ್ರಹಣೋತ್ಸುಕಕೌತುಕೀ ॥ ೪ ॥
ಪ್ರೇಷಯಿತ್ವಾ ವಸಿಷ್ಠಾದೀನ್ಪಾರ್ವತೀಂ ಯಾಚಿತುಂ ಮುನೀನ್ ।
ಕುಂಭಜ ತ್ವಂ ನಿಗೃಹ್ಣೀಷ್ವ ವಿಂಧ್ಯಾದ್ರಿಮಿತಿ ಸೋಽನ್ವಶಾತ್ ॥ ೫ ॥
ತತಃ ಸ ಕುಂಭಜಃ ಪ್ರಾಹ ಭಗವಂತಂ ಪಿನಾಕಿನಂ ।
ಉದ್ವಾಹವೇಷಂ ತೇ ದೇವ ನ ದ್ರಕ್ಷ್ಯೇಽಹಂ ಕಥಂ ವಿಭೋ ॥ ೬ ॥

---

## ಕನ್ನಡದ ಅನುವಾದ

### ಅಗಸ್ತ್ಯತೀರ್ಥಪ್ರಶಂಸನ— ಕಕ್ಷೀವದುದ್ವಾಹೋದ್ಯೋಗವರ್ಣನ

೧. ಸೂತನು ಹೇಳುತ್ತಾನೆ:—ಎಲೈ ವಿಪ್ರೋತ್ತಮರೇ! ಮಹಾದೇವನಿಂದ ಸೇವಿತವಾದ ಈ ಹನೂಮತ್ಕುಂಡದಲ್ಲಿ ಸ್ನಾನಮಾಡಿದ ಬಳಿಕ ಸಾವಧಾನಚಿತ್ತನಾಗಿ ಅಗಸ್ತ್ಯತೀರ್ಥಕ್ಕೆ ಹೋಗಬೇಕು.

೨-೫. ಈ ತೀರ್ಥವು ಸಾಕ್ಷಾದಗಸ್ತ್ಯನಿಂದಲೇ ನಿರ್ಮಿತವಾದುದು. ಪೂರ್ವಕಾಲದಲ್ಲಿ ಮೇರುವಿಂಧ್ಯಪರ್ವತಗಳಿಗೆ ಕಲಹವುಂಟಾಗಲು ವಿಂಧ್ಯವು ಭೂಮ್ಯಾಕಾಶಗಳ ಅಂತರವೆಲ್ಲವನ್ನೂ ಆವರಿಸಿತು. ಆಗ ಸಮಸ್ತ ಪ್ರಾಣಿಗಳಿಗೂ ಉಸಿರಾಡಲಸಾಧ್ಯವಾಗಲು, ದೇವತೆಗಳು ಕೈಲಾಸಕ್ಕೆ ಹೋಗಿ ಪರಮೇಶ್ವರನಿಗೆ ಆ ಸಮಾಚಾರವನ್ನು ಬಿನ್ನವಿಸಿಕೊಂಡರು. ಆತನು ಆಗ ಪಾರ್ವತಿಯನ್ನು ಮದುವೆಯಾಗಲು ಉತ್ಸಾಹಿಯಾಗಿ ಆಕೆಯನ್ನು ಯಾಚಿಸಲು ವಸಿಷ್ಠಾದಿ ಮಹರ್ಷಿಗಳನ್ನು ಕಳುಹಿಸಿಕೊಟ್ಟು ಅಗಸ್ತ್ಯನಿಗೆ ವಿಂಧ್ಯಾದ್ರಿಯನ್ನು ಅಡಗಿಸುವಂತೆ ಅಪ್ಪಣೆ ಮಾಡಿದನು.

೬. ಆಗ ಕುಂಭಜನು, ''ದೇವ, ವಿಭೋ! ಮದುವಣಿಗನಾಗುವ ನಿನ್ನ

ಇತಿ ವಿಜ್ಞಾಪಿತಃ ಶಂಭುಃ ಪುನಃ ಕುಂಭಜಮಬ್ರವೀತ್ ।
ಕುಂಭಜೋದ್ವಾಹವೇಷಂ ತೇ ಪಾರ್ವತ್ಯಾ ಸಹಿತೋಽಪ್ಯಹಂ ॥ ೭ ॥
ವೇದಾರಣ್ಯೇ ಮಹಾಪುಣ್ಯೇ ದರ್ಶಯಿಷ್ಯಾಮ್ಯಸಂಶಯಃ ।
ತದ್ಗಚ್ಛ ಶೀಘ್ರಂ ವಿಂಧ್ಯಾದ್ರಿಂ ನಿಗ್ರಹೀತುಂ ಮುನೀಶ್ವರ ॥ ೮ ॥
ಏವಮುಕ್ತಸ್ತತೋಽಗಸ್ತ್ಯೋ ವಿಂಧ್ಯಾದ್ರಿಂ ಸ ನಿಗೃಹ್ಯ ಚ ।
ಪಾದಾಕ್ರಮಣಮಾತ್ರೇಣ ಸಮೀಕುರ್ವನ್ಮಹೀತಲಂ ॥ ೯ ॥
ಚರಿತ್ವಾ ದಕ್ಷಿಣಾನ್ದೇಶಾನ್ಗಂಧಮಾದನಮನ್ವಗಾತ್ ।
ಸ ವಿದಿತ್ವಾ ಮಹರ್ಷಿಸ್ತು ಗಂಧಮಾದನವೈಭವಂ ॥ ೧೦ ॥
ತತ್ರ ತೀರ್ಥಂ ಮಹಾಪುಣ್ಯಂ ಸ್ವನಾಮ್ನಾ ನಿರ್ಮಮೇ ಮುನಿಃ ।
ಲೋಪಾಮುದ್ರಾಸಖಸ್ತತ್ರ ವರ್ತತೇಽದ್ಯಾಪಿ ಕುಂಭಜಃ ॥ ೧೧ ॥
ತತ್ರ ಸ್ನಾತ್ವಾ ಚ ಪೀತ್ವಾ ಚ ನ ಭೂಯೋ ಜನ್ಮಭಾಗ್ಭವೇತ್ ।
ಇಹ ಲೋಕೇ ತ್ರಿಕಾಲೇಽಪಿ ತತ್ತೀರ್ಥಸದೃಶಂ ದ್ವಿಜಾಃ ॥ ೧೨ ॥
ತೀರ್ಥಂ ನ ವಿದ್ಯತೇ ಪುಣ್ಯಂ ಭುಕ್ತಿಮುಕ್ತಿಫಲಪ್ರದಂ ।
ಸರ್ವಾಽಭೀಷ್ಟಪ್ರದಂ ನೄಣಾಂ ಯತ್ತೀರ್ಥಸ್ನಾನವೈಭವಾತ್ ॥ ೧೩ ॥
ಸುದೀರ್ಘತಮಸಃ ಪುತ್ರಃ ಕಕ್ಷೀವಾನ್ನಾಮ ನಾಮತಃ ।
ಲೇಭೇ ಮನೋರಮಾಂ ನಾಮ ಸ್ವನಯಸ್ಯ ಸುತಾಂ ಪ್ರಿಯಾಂ ॥ ೧೪ ॥

---

ವೇಷವನ್ನು ನೋಡಲಾರದೇ ಹೋಗುವೆನಲ್ಲವೇ ?'' ಎಂದು ಭಗವಂತನಾದ ಪಿನಾಕಿಯನ್ನು ಕೇಳಿದನು.

೭–೮. ಅದಕ್ಕೆ ಪಿನಾಕಿಯು "ಕುಂಭಜ! ನಾನು ಪಾರ್ವತೀಸಮೇತನಾಗಿ ಪುಣ್ಯತಮವಾದ ವೇದಾರಣ್ಯಕ್ಕೆ ಬಂದು ಅಲ್ಲಿ ಮದವಣಿಗನ ವೇಷದಲ್ಲಿಯೇ ನಿನಗೆ ದರ್ಶನವನ್ನು ಕೊಡುವೆನು. ಎಲೈ ಮುನೀಶ್ವರನೇ! ಈ ಸಂಶಯವನ್ನೇ ತೊರೆದು ಬೇಗ ವಿಂಧ್ಯಾದ್ರಿಯನ್ನಡಗಿಸಲು ನಡೆ'' ಎಂದು ಅಪ್ಪಣೆಮಾಡಿದನು.

೯–೧೧. ಬಳಿಕ ಅಗಸ್ತ್ಯನು ಹೆಜ್ಜೆಯನ್ನಿಟ್ಟುದುದರಿಂದಲೇ ವಿಂಧ್ಯವನ್ನು ಗೆದ್ದು ಅದನ್ನು ನೆಲಸಮಮಾಡುವವನಾಗಿ ದಕ್ಷಿಣದೇಶಕ್ಕೆ ಹೊರಟು ಗಂಧಮಾದನವನ್ನು ಸೇರಿದನು. ಬಳಿಕ ಆತನು ಆ ಪರ್ವತದ ಮಹಿಮೆಯನ್ನರಿತು ಅಲ್ಲಿ ಸ್ವನಾಮಾಂಕಿತವಾದ ಪುಣ್ಯತೀರ್ಥವೊಂದನ್ನೇರ್ಪಡಿಸಿ, ಈಗ್ಗೂ ತನ್ನ ಪತ್ನಿಯಾದ ಲೋಪಾಮುದ್ರೆಯೊಡನೆ ಅಲ್ಲಿಯೇ ವಾಸಿಸುತ್ತಿರುವನು.

೧೨–೧೪. ಅಲ್ಲಿ ಸ್ನಾನಪಾನವನ್ನು ಮಾಡಿದವನು ಮತ್ತೆ ಜನ್ಮವನ್ನು ತಾಳುವುದಿಲ್ಲ. ಎಲೈ ದ್ವಿಜರೇ! ಈ ಲೋಕದಲ್ಲಿ ಭೂತಭವಿಷ್ಯದ್ವರ್ತಮಾನಗಳೆಂಬ ತ್ರಿಕಾಲಗಳಲ್ಲಿಯೂ ಭುಕ್ತಿಮುಕ್ತಿದಾಯಕವೂ, ಸಕಲಾಭೀಷ್ಟಪ್ರದವೂ ಆದ ಆ ತೀರ್ಥಕ್ಕೆ ಸಮಾನವಾದುದು ಮತ್ತೊಂದಿಲ್ಲ. ಯಾವ ತೀರ್ಥಸ್ನಾನದ

ಕಕ್ಷೀವತಃ ಕಥಾ ಸೇಯಂ ಪುಣ್ಯಾ ಪಾಪವಿನಾಶಿನೀ ।
ತಾಂ ಕಥಾಂ ವಃ ಪ್ರವಕ್ಷ್ಯಾಮಿ ತಚ್ಛೃಣುಧ್ವಂ ಮುನೀಶ್ವರಾಃ ॥ ೧೫ ॥
ಅಸ್ತಿ ದೀರ್ಘತಮಾ ನಾಮ ಮುನಿಃ ಪರಮಧಾರ್ಮಿಕಃ ।
ತಸ್ಯ ಪುತ್ರಃ ಸಮಭವತ್ಕಕ್ಷೀವಾನಿತಿ ವಿಶ್ರುತಃ ॥ ೧೬ ॥
ಉಪನೀತಃ ಸ ಕಕ್ಷೀವಾನ್ ಬ್ರಹ್ಮಚಾರೀ ಜಿತೇಂದ್ರಿಯಃ ।
ವೇದಾಽಭ್ಯಾಸಾಯ ಸ ಗುರೋಃ ಕುಲೇ ವಾಸಮಕಲ್ಪಯತ್ ॥ ೧೭ ॥
ಉದಂಕಸ್ಯ ಗುರೋರ್ಗೇಹೇ ವಸನ್ ದೀರ್ಘತಮಃ ಸುತಃ ।
ಸೋಽಧ್ಯೈಷ್ಟ ಚತುರೋ ವೇದಾನ್ಸಾಂಗಾನ್ಶಾಸ್ತ್ರಾಣಿ ಷಟ್ತಥಾ ॥ ೧೮ ॥
ಇತಿಹಾಸಪುರಾಣಾನಿ ತಥೋಪನಿಷದೋಽಪಿ ಚ ।
ಉಷಿತ್ವಾ ಷಷ್ಟಿವರ್ಷಾಣಿ ಕಕ್ಷೀವಾನ್ಗುರುಸನ್ನಿಧೌ ॥ ೧೯ ॥
ಪ್ರಯಾಸ್ಯನ್ಸ್ವಗೃಹಂ ವಿಪ್ರಾ ಗುರುವೇ ದಕ್ಷಿಣಾಮದಾತ್ ।
ಉವಾಚ ವೈ ಗುರುರ್ವಿದ್ವಾನ್ಕಕ್ಷೀವಾನ್ಬ್ರಹ್ಮವಿತ್ತಮಃ ॥ ೨೦ ॥

ಕಕ್ಷೀವಾನುವಾಚ :—

ಅಹಂ ಗೃಹಂ ಪ್ರಯಾಸ್ಯಾಮಿ ಕುರ್ವನುಜ್ಞಾಂ ಮಹಾಮುನೇ ।
ಅವಲೋಕ್ಯ ಕೃಪಾದೃಷ್ಟ್ಯಾ ಮಾಂ ರಕ್ಷೋದಂಕ ಸಾಂಪ್ರತಂ ।
ಉದಂಕಸ್ತ್ವೇವಮುದಿತಃ ಕಕ್ಷೀವಂತಮಥಾಽಬ್ರವೀತ್ ॥ ೨೧ ॥

---

ಮಹತ್ತ್ವದಿಂದ ದೀರ್ಘತಮನ ಮಗನಾದ ಕಕ್ಷೀವಂತನೆಂಬುವನು ಸ್ವನಯನ ಮಗಳಾದ ಮನೋರಮೆ ಎಂಬ ಪ್ರಿಯಳನ್ನು ಹೊಂದಿದನೋ ಅಂತಹ ಅಗಸ್ತ್ಯ ತೀರ್ಥಕ್ಕೆ ಸಮನಾದುದು ಮತ್ತೊಂದಿಲ್ಲ.

೧೫. ಕಕ್ಷೀವಂತನ ಈ ಕಥೆಯು ಸರ್ವಪಾಪನಾಶಕರವಾದುದು. ಎಲೈ ಮುನಿಶ್ರೇಷ್ಠರೇ! ಆ ಕಥೆಯನ್ನು ನಿಮಗೆ ಹೇಳುವೆನು ಸಾವಧಾನದಿಂದ ಕೇಳಿರಿ.

೧೬. ದೀರ್ಘತಮನೆಂಬ ಧರ್ಮಿಷ್ಠನಾದ ಒಬ್ಬ ಮಹರ್ಷಿಯಿದ್ದನು. ಆತನಿಗೆ ಕಕ್ಷೀವಂತನೆಂಬ ಮಗನುದಯಿಸಿದನು.

೧೭. ಆ ಕಕ್ಷೀವಂತನು ಉಪನೀತನಾಗಿ ಜಿತೇಂದ್ರಿಯನಾಗಿ ಬ್ರಹ್ಮಚರ್ಯವನ್ನು ನಡೆಸುತ್ತಾ ವೇದಾಧ್ಯಯನಕ್ಕಾಗಿ ಗುರುಕುಲದಲ್ಲಿ ವಾಸಮಾಡುತ್ತಿದ್ದನು.

೧೮–೧೯. ಗುರುವಾದ ಉದಂಕನ ಮನೆಯಲ್ಲಿ ವಾಸಮಾಡುತ್ತಿರುವ ಕಕ್ಷೀವಂತನು ಸಾಂಗವಾದ ಚತುರ್ವೇದಗಳನ್ನೂ, ಆರು ಶಾಸ್ತ್ರಗಳನ್ನೂ, ಪುರಾಣೇತಿಹಾಸಗಳನ್ನೂ, ಉಪನಿಷತ್ತುಗಳನ್ನೂ ಕಲಿತನು. ಈ ಬಗೆಯಾಗಿ ಅವನು ಅರುವತ್ತು ವರ್ಷಗಳ ಕಾಲ ಗುರುಗಳ ಸನ್ನಿಧಿಯಲ್ಲಿದ್ದನು.

೨೦–೨೧. ಎಲೈ ವಿಪ್ರರೇ! ಬಳಿಕ ವಿದ್ವಾಂಸನೂ, ಬ್ರಹ್ಮವಿದನೂ ಆದ ಆ ಕಕ್ಷೀವಂತನು ತನ್ನ ಮನೆಗೆ ಹೋಗಬಯಸಿ ಗುರುವಿಗೆ ದಕ್ಷಿಣೆಯನ್ನು ಕೊಟ್ಟು, "ಮಹರ್ಷಿಯೇ! ನಾನು ಮನೆಗೆ ಹೊರಡುವವನಾಗಿರುವೆನು;

ಉದಂಕ ಉವಾಚ:—

ಅನುಜಾನಾಮಿ ಕಕ್ಷೀವನ್ಗಚ್ಛತ್ವಂ ಸ್ವಗೃಹಂ ಪ್ರತಿ ॥ ೨೨ ॥
ಉದ್ವಾಹಾರ್ಥಮುಪಾಯಂ ತೇ ವತ್ಸ ವಕ್ಷ್ಯಾಮಿ ತಚ್ಛೃಣು ।
ರಾಮಸೇತುಂ ಪ್ರಯಾಹಿ ತ್ವಂ ಗಂಧಮಾದನಪರ್ವತಂ ॥ ೨೩ ॥
ತತ್ರಾಽಗಸ್ತ್ಯಕೃತಂ ತೀರ್ಥಂ ಸರ್ವಾಽಭೀಷ್ಟಪ್ರದಾಯಕಂ ।
ಭುಕ್ತಿಮುಕ್ತಿಪ್ರದಂ ಪುಂಸಾಂ ಸರ್ವಪಾಪನಿಬರ್ಹಣಂ ॥ ೨೪ ॥
ವಿದ್ಯತೇ ಸ್ನಾಹಿ ತತ್ರ ತ್ವಂ ಸರ್ವಮಂಗಲಸಾಧನೇ ।
ತ್ರಿವರ್ಷಂ ವಸ ತತ್ರ ತ್ವಂ ನಿಯಮಾಚಾರಸಂಯುತಃ ॥ ೨೫ ॥
ವರ್ಷೇಷು ತ್ರಿಷು ಯಾತೇಷು ಚತುರ್ಥೇ ವತ್ಸರೇ ತತಃ ।
ನಿರ್ಗಮಿಷ್ಯತಿ ಮಾತಂಗಃ ಕಶ್ಚಿತ್ತೀರ್ಥೋತ್ತಮಾತ್ತತಃ ॥ ೨೬ ॥
ಚತುರ್ದಂತೋ ಮಹಾಕಾಯಃ ಶರದಭ್ರಸಮುಜ್ಜ್ವಲಃ ।
ತಂ ಗಜಂ ಗಿರಿಸಂಕಾಶಂ ಸ್ನಾತ್ವಾ ತತ್ರ ಸಮಾರುಹ ॥ ೨೭ ॥
ಆರುಹ್ಯ ತಂ ಗಜಂ ವತ್ಸ ಸ್ವನಯಸ್ಯ ಪುರೀಂ ವ್ರಜ ।
ಚತುರ್ದಂತಗಜಸ್ಥಂ ತ್ವಾಂ ದೃಷ್ಟ್ವಾ ಶಕ್ರಮಿವಾಽಪರಂ ॥ ೨೮ ॥

---

ಅಪ್ಪಣೆಯನ್ನು ದಯಪಾಲಿಸು. ಮುನಿಯೇ! ಕೃಪಾದೃಷ್ಟಿಯಿಂದ ನನ್ನನ್ನು ವೀಕ್ಷಿಸಿ ರಕ್ಷಿಸು" ಎಂಬುದಾಗಿ ಆತನನ್ನು ಬೇಡಿದನು.

೨೨. ಉದಂಕಮುನಿಯು ಹೇಳುತ್ತಾನೆ:—"ಎಲೈ ಕಕ್ಷೀವಂತ! ಅಪ್ಪಣೆ ಕೊಟ್ಟಿರುವೆನು. ನೀನು ಮನೆಗೆ ಹೊರಡು.

೨೩. ಮಗುವೆ! ಮದುವೆಗೆ ತಕ್ಕ ಉಪಾಯವನ್ನೂ ಹೇಳುವೆನು ಕೇಳು. ಶ್ರೀರಾಮನಿರ್ಮಿತವಾಗಿ ಸೇತುರೂಪವಾಗಿರುವ ಗಂಧಮಾದನಪರ್ವತಕ್ಕೆ ಹೋಗು.

೨೪–೨೫. ಅಲ್ಲಿ ಸಮಸ್ತ ಇಷ್ಟಾರ್ಥಗಳನ್ನು ಕೊಡುವಂತಹುದೂ, ಭುಕ್ತಿ ಮುಕ್ತಿದಾಯಕವೂ, ಸಮಸ್ತ ಪಾಪನಾಶಕವೂ ಆದ ಅಗಸ್ತ್ಯನಿರ್ಮಿತವಾದ ಪುಣ್ಯತೀರ್ಥವಿರುವುದು. ಶುಭಕರವಾದ ಆ ತೀರ್ಥದಲ್ಲಿ ಸ್ನಾನಮಾಡಿಕೊಂಡು ಜಿತೇಂದ್ರಿಯನಾಗಿ ಅಲ್ಲಿಯೆ ಮೂರು ವರ್ಷಗಳ ಕಾಲ ವಾಸವಾಗಿರು.

೨೬–೨೭. ಬಳಿಕ ನಾಲ್ಕನೆಯ ವರ್ಷದಲ್ಲಿ ಉತ್ತಮವಾದ ಆ ತೀರ್ಥದಿಂದ ಒಂದು ಆನೆಯು ಎದ್ದು ಬರುವುದು. ನೀನು ಆ ತೀರ್ಥದಲ್ಲಿ ಸ್ನಾನಮಾಡಿ, ನಾಲ್ಕು ದಂತಗಳುಳ್ಳುದಾಗಿ, ಶರತ್ಕಾಲದ ಮೋಡಗಳಂತೆ ಬೆಳ್ಳಗೆ ಬೆಳಗುವ ದೊಡ್ಡ ದೇಹವುಳ್ಳ ಬೆಟ್ಟದಂತಹ ಆ ಆನೆಯನ್ನೇರು.

೨೮–೨೯. ಮಗೂ! ಅದರ ಮೇಲೆ ಕುಳಿತು ಸ್ವನಯನ ಪಟ್ಟಣಕ್ಕೆ ಹೋಗು. ನಾಲ್ಕು ದಂತಗಳುಳ್ಳ ಆ ಆನೆಯನ್ನೇರಿ ಎರಡನೆಯ ಇಂದ್ರನಂತೆ

ರಾಜರ್ಷಿಃ ಸ್ವನಯೋ ಧೀಮಾನ್ ಹರ್ಷವ್ಯಾಕುಲಲೋಚನಃ ।
ಸ್ವಕನ್ಯಾಯಾಃ ಕೃತೇ ದುಃಖಂ ತ್ಯಜೇದೇವ ಹೃದಿ ಸ್ಥಿತಂ ॥ ೨೯ ॥
ಪುರಾಹಿ ಪ್ರತಿಜಜ್ಞೇ ಸಾ ತಸ್ಯ ಪುತ್ರೀ ಮನೋರಮಾ ।
ಚತುರ್ದಂತಂ ಮಹಾಕಾಯಂ ಗಜಂ ಸರ್ವಾಂಗಪಾಂಡುರಂ ॥ ೩೦ ॥
ಆರುಹ್ಯ ಯಃ ಸಮಾಗಚ್ಛೇತ್ಸಮೇ ಭರ್ತಾ ಭವೇದಿತಿ ।
ಸ್ವಕನ್ಯಾಯಾಃ ಪ್ರತಿಜ್ಞಾಂ ತಾಂ ಸಮಾಕರ್ಣ್ಯ ಸ ಭೂಪತಿಃ ॥ ೩೧ ॥
ದುಃಖಾಕುಲಮನಾ ಭೂತ್ವಾ ಸತತಂ ಪರ್ಯಚಿಂತಯತ್ ।
ಸ್ವನಯೇ ಚಿಂತಯತ್ಯೇವಂ ನಾರದಃ ಸಮುಪಾಗಮತ್ ॥ ೩೨ ॥
ತಮಾಗತಂ ಮುನಿಂ ದೃಷ್ಟ್ವಾ ರಾಜರ್ಷಿರತಿಧಾರ್ಮಿಕಃ ।
ಪ್ರತ್ಯುದ್ಗಮ್ಯ ಮುದಾಯುಕ್ತಃ ಪಾದ್ಯಾರ್ಘ್ಯಾದ್ಯೈರಪೂಜಯತ್ ॥ ೩೩ ॥
ಪ್ರಣಮ್ಯ ನಾರದಂ ರಾಜಾ ವಚನಂ ಚೇದಮಬ್ರವೀತ್ ।
ಕಸ್ಯೇಯಂ ಮಮ ದೇವರ್ಷೇ ಪ್ರತಿಜ್ಞಾಮಕರೋತ್ಪುರಾ ॥ ೩೪ ॥
ಚತುರ್ದಂತಂ ಮಹಾಕಾಯಂ ಗಜಂ ಸರ್ವಾಂಗಪಾಂಡುರಂ ।
ಆರುಹ್ಯ ಯಃ ಸಮಾಗಚ್ಛೇತ್ಸ ಮೇ ಭರ್ತಾ ಭವೇದಿತಿ ॥ ೩೫ ॥
ಚತುರ್ದಂತೋ ಮಹಾಕಾಯೋ ಗಜಃ ಸರ್ವಾಂಗಪಾಂಡುರಃ ।
ಸಂಭವೇದಿಂದ್ರಭವನೇ ಭೂತಲೇ ನೈವ ವಿದ್ಯತೇ ॥ ೩೬ ॥

---

ಬೆಳಗುವ ನಿನ್ನನ್ನು ಕಂಡು, ರಾಜರ್ಷಿಯಾದ ಸ್ವನಯನು ಸಂತೋಷದಿಂದ ತುಂಬಿ ತುಳುಕಾಡುವ ಕಣ್ಣುಗಳುಳ್ಳವನಾಗಿ, ತನ್ನ ಮಗಳ ವಿಚಾರವಾದ ಮಾನಸಿಕ ಖೇದವನ್ನು ತೊರೆದುಬಿಡುವನು.

೩೦–೩೧. ಹಿಂದೆ ಆತನ ಪುತ್ರಿಯಾದ ಮನೋರಮೆಯು "ಯಾವನು ಚತುರ್ದಂತವೂ, ಮಹಾಕಾಯವೂ, ದೇಹವೆಲ್ಲವೂ ಬಿಳುಪಾಗಿಯೂ ಇರುವ ಆನೆಯನ್ನೇರಿಬರುವನೊ ಅವನೇ ನನಗೆ ಗಂಡನಾಗಬೇಕು" ಎಂದು ಶಪಥ ಮಾಡಿದ್ದಳು. ರಾಜನು ಮಗಳ ಈ ಬಗೆಯ ಪ್ರತಿಜ್ಞೆಯನ್ನು ಕೇಳಿ ದುಃಖ ಗೊಂಡು ಯಾವಾಗಲೂ ಚಿಂತಿಸುತ್ತಿದ್ದನು. ಹೀಗೆ ಆತನು ಚಿಂತಿಸುತ್ತಿರಲು ನಾರದನು ಆತನ ಮನೆಗೆ ದಯಮಾಡಿಸಿದನು.

೩೨. ಧಾರ್ಮಿಕನಾದ ಆ ರಾಜರ್ಷಿಯು ಮನೆಗೆ ದಯಮಾಡಿಸಿದ ಆ ನಾರದನನ್ನು ಕಂಡು, ಸಂತೋಷದಿಂದೆದುರುಗೊಂಡು ಪಾದಾರ್ಘ್ಯಗಳಿಂದ ಪೂಜಿಸಿದನು.

೩೩–೩೬. ಬಳಿಕ ಆತನಿಗೆರಗಿ, "ದೇವರ್ಷಿಯೇ! ಈ ನನ್ನ ಕುವರಿಯು ಚತುರ್ದಂತವೂ, ಮಹಾಕಾಯವೂ, ಸರ್ವಾಂಗಪಾಂಡುರವೂ ಆದ ಆನೆಯು ನ್ನೇರಿಬರುವವನೇ ನನಗೆ ಇನಿಯನಾಗಬೇಕೆಂದು ಶಪಥಮಾಡಿರುವಳು. ಇಂತಹ ಆನೆಯು ಇಂದ್ರನ ಲೋಕದಲ್ಲಿರುವುದೇ ಹೊರತು ಭೂಲೋಕದಲ್ಲಿಲ್ಲವೇ ಇಲ್ಲವು.

ಇಯಂ ಚ ದುಸ್ತರಾಮೇನಾಂ ಪ್ರತಿಜ್ಞಾಂ ಬಾಲಿಶಾಽಕರೋತ್ ।
ಇಯಂ ಪ್ರತಿಜ್ಞಾಽತಿತರಾಂ ಸತತಂ ಬಾಧತೇ ಹಿ ಮಾಂ ॥ ೩೭ ॥
ಅನೂಢಾ ಹಿ ಪಿತುಃ ಕನ್ಯಾ ಸರ್ವದಾ ಶೋಕಮಾವಹೇತ್ ।
ಇತಿ ತಸ್ಯ ವಚಃ ಶ್ರುತ್ವಾ ಸ್ವನಯಂ ನಾರದೋಽಬ್ರವೀತ್ ॥ ೩೮ ॥
ಮಾವಿಷೀದಸ್ವ ರಾಜರ್ಷೇ ತಸ್ಯಾ ಈದೃಗ್ವಿಧಃ ಪತಿಃ ।
ಭವಿಷ್ಯತ್ಯಚಿರಾದೇವ ಪೃಥಿವ್ಯಾಂ ಬ್ರಾಹ್ಮಣೋತ್ತಮಃ ॥ ೩೯ ॥
ಕಕ್ಷೀವಾನಿತಿ ವಿಖ್ಯಾತೋ ಜಾಮಾತಾ ತೇ ಭವಿಷ್ಯತಿ ।
ಇತ್ಯುಕ್ತ್ವಾ ನಾರದಮುನಿರ್ಯಯಾವಾಕಾಶಮಾರ್ಗತಃ ॥ ೪೦ ॥
ಸ್ವನಯಸ್ತದ್ವಚಃ ಶ್ರುತ್ವಾ ನಾರದೇನ ಪ್ರಭಾಷಿತಂ ।
ಆಕಾಂಕ್ಷತೇ ದಿವಾರಾತ್ರಂ ತಾದೃಗ್ವಿಧಸಮಾಗಮಂ ॥ ೪೧ ॥
ಅತಃ ಸೌಮ್ಯ ಮಹಾಭಾಗ ಕಕ್ಷೀವನ್ಬಾಲತಾಪಸ ।
ಅಗಸ್ತ್ಯ ತೀರ್ಥಮದ್ಯ ತ್ವಂ ಸ್ನಾತುಂ ಗಚ್ಛ ತ್ವರಾನ್ವಿತಃ ॥ ೪೨ ॥
ಸರ್ವಮಂಗಲಸಿದ್ಧಿಸ್ತೇ ಭವಿಷ್ಯತಿ ನ ಸಂಶಯಃ ।
ಉದಂಕೇನೈವಮುಕ್ತೋಽಥ ಕಕ್ಷೀವಾನ್ ದ್ವಿಜಪುಂಗವಃ ॥ ೪೩ ॥
ಅನುಜ್ಞಾತಶ್ಚ ಗುರುಣಾ ಪ್ರಯಯೌ ಗಂಧಮಾದನಂ ।
ಸಂಪ್ರಾಪ್ಯಾಗಸ್ತ್ಯತೀರ್ಥಂ ಚ ತತ್ರ ಸಸ್ನೌ ಜಿತೇಂದ್ರಿಯಃ ॥ ೪೪ ॥

---

೩೭–೩೮. ಅರಿಯದ ಹಸಗೂಸು; ಇಂತಹ ಅಸಾಧ್ಯವಾದ ಶಪಥವನ್ನು ಮಾಡಿರುವಳು. ಈ ಪ್ರತಿಜ್ಞೆಯು ಯಾವಾಗಲೂ ನನ್ನನ್ನು ಬಹಳವಾಗಿ ಬಾಧಿಸುತ್ತಿರುವುದು. ಕನ್ಯೆಯು ಅವಿವಾಹಿತೆಯಾಗಿರುವಲ್ಲಿ ತಂದೆಗೆ ದುಃಖವುಂಟಾಗುವುದಲ್ಲವೆ?" ಎಂದು ಆತನಲ್ಲಿ ಬಿನ್ನವಿಸಿಕೊಂಡನು.

೩೯–೪೦. ಅದನ್ನು ಕೇಳಿ ನಾರದಮಹರ್ಷಿಯು, "ರಾಜರ್ಷಿಯೇ! ವ್ಯಥೆಗೊಳ್ಳಬೇಡ. ಬೇಗನೆಯೆ ಇವಳಿಗಂಥವನೇ ಪತಿಯಾಗುವನು. ಭೂಲೋಕದಲ್ಲಿ ಈಗಾಗಲೆ ಉದಿಸಿರುವ ಕಕ್ಷೀವಂತನೆಂಬ ಬ್ರಾಹ್ಮಣನು ನಿನಗೆ ಅಳಿಯನಾಗುವನು" ಎಂದು ನುಡಿದು ಆತನು ಆಕಾಶಮಾರ್ಗದಲ್ಲಿ ಹೊರಟುಹೋದನು.

೪೧. ಸ್ವನಯನು ಆ ಮಹರ್ಷಿಯ ಮಾತನ್ನುಕೇಳಿ ಹಗಲಿರುಳೂ ಅಂತಹವನ ಬರುವಿಕೆಗಾಗಿ ಇದಿರುನೋಡುತ್ತಿರುವನು.

೪೨–೪೩. ಆದುದರಿಂದ ಬಾಲತಾಪಸನೂ, ಭಾಗ್ಯಶಾಲಿಯೂ, ಸೌಮ್ಯನೂ ಆದ ಎಲೈ ಕಕ್ಷೀವಂತನೇ! ನೀನು ಬೇಗನೆ ಅಗಸ್ತ್ಯತೀರ್ಥಕ್ಕೆ ಸ್ನಾನಕ್ಕಾಗಿ ಹೊರಡು. ನಿನಗೆ ಸಮಸ್ತ ಮಂಗಳಗಳೂ ಸಿದ್ಧಿಸುವುವು. ಸಂಶಯವಿಲ್ಲ."

೪೪. ಕಕ್ಷೀವಂತನೀರೀತಿಯಾಗಿ ಗುರುವಾದ ಉದಂಕನ ಅಪ್ಪಣೆಯನ್ನು

ಕ್ಷೇತ್ರೋಪವಾಸಮಕರೋದ್ದಿನಮೇಕಂ ಮುನೀಶ್ವರಃ ।
ಅಪರೇದ್ಯುಃ ಪುನಃ ಸ್ನಾತ್ವಾ ಪಾರಣಾಮಕರೋದ್ದ್ವಿಜಃ ॥ ೪೫ ॥
ರಾತ್ರೌ ತತ್ರೈವ ಸುಷ್ವಾಪ ಕಕ್ಷೀವಾನ್ ಧರ್ಮತತ್ಪರಃ ।
ಏವಂ ನಿಯಮಯುಕ್ತಸ್ಯ ತಸ್ಯ ಕಕ್ಷೀವತೋ ಮುನೇಃ ॥ ೪೬ ॥
ಏಕೇನ ದಿವಸೇನೋನಂ ವರ್ಷತ್ರಯಮಥಾಗಮತ್ ।
ಅಥ ವರ್ಷತ್ರಯಸ್ಯಾಂತೇ ತಸ್ಮಿನ್ನೇವ ದಿನೇ ಮುನಿಃ ॥ ೪೭ ॥
ಅನ್ವಾಸ್ಯ ಪಶ್ಚಿಮಾಂ ಸಂಧ್ಯಾಂ ಸುಖಂ ಸುಷ್ವಾಪ ತತ್ತಟೇ ।
ಯಾಮಮಾತ್ರಾವಶಿಷ್ಟಾಯಾಂ ವಿಭಾವರ್ಯಾಂ ಮಹಾಧ್ವನಿಃ ॥ ೪೮ ॥
ಉದಭೂತ್ಪ್ರಲಯಾಂಭೋಧಿವೀಚಿಕೋಲಾಹಲೋಪಮಃ ।
ತೇನ ಶಬ್ದೇನ ಮಹತಾ ಕಕ್ಷೀವಾನ್ಪ್ರತ್ಯಬುಧ್ಯತ ॥ ೪೯ ॥
ತತಸ್ತು ಸ್ವನಯೋ ನಾಮ ರಾಜಾ ಸಾಽನುಚರೋ ಬಲೀ ।
ಮೃಗಯಾಕೌತುಕೀ ತತ್ರ ಮಧುರಾಪತಿರಾಯಯೌ ॥ ೫೦ ॥
ವಿನಿಘ್ನನ್ಸ ಗಜಾನ್ಸಿಂಹಾನ್ವರಾಹಾನ್ಮಹಿಷಾನ್ರುರೂನ್ ।
ಅನ್ಯಾನ್ಮೃಗವಿಶೇಷಾಂಶ್ಚ ಸ ರಾಜಾ ನ್ಯವಧೀಚ್ಛರೈಃ ॥ ೫೧ ॥
ಸಾಽಮಾತ್ಯೋ ಮೃಗಯಾಸಕ್ತೋ ರಥವಾಜಿಗಜೈರ್ಯುತಃ ।
ಅಗಸ್ತ್ಯತೀರ್ಥಸವಿಧಮಾಸಸಾದ ಭಟಾನ್ವಿತಃ ॥ ೫೨ ॥

---

ಪಡೆದು ಗಂಧಮಾದನದಲ್ಲಿನ ಅಗಸ್ತ್ಯತೀರ್ಥಕ್ಕೆ ಹೋಗಿ ಜಿತೇಂದ್ರಿಯನಾಗಿ ಅದರಲ್ಲಿ ಸ್ನಾನಮಾಡಿದನು.

೪೫. ಒಂದು ದಿನ ಆ ಮುನೀಶ್ವರನು ಕ್ಷೇತ್ರೋಪವಾಸವನ್ನು ಮಾಡಿ ಮಾರನೆಯ ದಿನ ಮತ್ತೆ ಅದರಲ್ಲಿ ಸ್ನಾನಮಾಡಿ ಪಾರಣೆಯನ್ನು ಮಾಡಿದನು.

೪೬–೪೮. ರಾತ್ರಿಯಲ್ಲಿ ಅಲ್ಲಿಯೇ ಧರ್ಮಪರನಾಗಿ ವಾಸಮಾಡಿದನು. ಈ ಬಗೆಯಾಗಿ ಆ ಕಕ್ಷೀವಂತನು ನಿಯಮಯುಕ್ತನಾಗಿ, ಒಂದು ದಿನ ಕಡಿಮೆಯಾಗಿ ಮೂರು ವರ್ಷಗಳನ್ನು ಕಳೆದನು. ಬಳಿಕ ಅದೇ ದಿನ ಸಾಯಂ ಸಂಧ್ಯೆಯನ್ನು ನೆರವೇರಿಸಿಕೊಂಡು ಆ ತೀರ್ಥದ ದಡದಲ್ಲಿಯೇ ಸುಖವಾಗಿ ಮಲಗಿದನು. ರಾತ್ರಿಯು ಒಂದು ಜಾವ ಮಾತ್ರ ಉಳಿದಿರುವಾಗ ಪ್ರಳಯಕಾಲ ದಲ್ಲಿ ಉಂಟಾಗುವ ಸಮುದ್ರದ ಅಲೆಗಳ ಹೊಡೆತದ ಆರ್ಭಟದಂತಿರುವ ಒಂದು ಧ್ವನಿಯುಂಟಾಯಿತು. ಅದರಿಂದ ಕಕ್ಷೀವಂತನೆಚ್ಚರಗೊಂಡನು.

೪೯–೫೦. ಆಗ ಮಧುರಾಪತಿಯೂ, ಬಲಶಾಲಿಯೂ ಆದ ಸ್ವನಯನೆಂಬ ರಾಜನು ಬೇಟೆಯಲ್ಲಿ ತವಕಗೊಂಡವನಾಗಿ ಪರ್ವತದ ಕಿಬ್ಬರಿಯಲ್ಲಿ ಸಂಚರಿಸುತ್ತ ಗಂಧಮಾದನಕ್ಕೆ ಬಂದಿದ್ದನು.

೫೧–೫೨. ಆತನು ಮಂತ್ರಿಗಳೊಡನೆ, ಗಜಾಶ್ವರಥ ಭಟಸಮೇತನಾಗಿ,

ಸ ರಾಜಾ ಮೃಗಯಾಶ್ರಾಂತಃ ಶ್ರಾಂತಸೈನಿಕಸಂವೃತಃ ।
ತತ್ತೀರ್ಥತೀರಪ್ರಾಂತೇಷು ನಿಷಸಾದ ಮಹೀಪತಿಃ ॥ ೫೩ ॥
ತತಃ ಪ್ರಭಾತೇ ವಿಮಲೇ ಕಕ್ಷೀವಾನ್ಮುನಿಸತ್ತಮಃ ।
ಅಗಸ್ತ್ಯತೀರ್ಥೇ ಸ್ನಾತ್ವಾಽಸೌ ಸಂಧ್ಯಾಂ ಪೂರ್ವಾಮುಪಾಸ್ಯಚ ॥ ೫೪ ॥
ತಸ್ಯ ತೀರೇ ಜಪನ್ಮಂತ್ರಾಂಸ್ತಸ್ಥೌ ನಿಯಮಸಂಯುತಃ ।
ಅತ್ರಾಂತರೇ ತೀರ್ಥವರಾದ್ಗಜ ಏಕೋ ವಿನಿರ್ಯಯೌ ॥ ೫೫ ॥
ಚತುರ್ದಂತೋ ಮಹಾಕಾಯಃ ಕೈಲಾಸ ಇವ ಮೂರ್ತಿಮಾನ್ ।
ಸ ಸಮುತ್ಥಾಯ ತತ್ತೀರ್ಥಾದಗಾತ್ಕಕ್ಷೀವದಂತಿಕಂ ॥ ೫೬ ॥
ತಮಾಗತಮುದಂಕೋಕ್ತಲಕ್ಷಣೈರುಪಲಕ್ಷಿತಂ ।
ತದಾ ನಿರೀಕ್ಷ್ಯ ಕಕ್ಷೀವಾನಾರೋಢುಂ ಸ್ನಾನಮಾತನೋತ್ ॥ ೫೭ ॥
ನಮಸ್ಕೃತ್ಯ ಚ ತತ್ತೀರ್ಥಂ ಶ್ಲಾಘಮಾನೋ ಮುಹುರ್ಮುಹುಃ ।
ಆರುರೋಹ ಚ ಕಕ್ಷೀವಾಂಶ್ಚತುರ್ದಂತಂ ಮಹಾಗಜಂ ॥ ೫೮ ॥
ಆರುಹ್ಯ ತಂ ಚತುರ್ದಂತಂ ರಜತಾಽಚಲಸನ್ನಿಭಂ ।
ಸ್ವನಯಸ್ಯ ಪುರೀಮೇವ ಕಕ್ಷೀವಾನ್ಗಂತುಮೈಚ್ಛತ ॥ ೫೯ ॥

---

ಆನೆ, ಸಿಂಹ, ಹಂದಿ, ಎಮ್ಮೆ, ದುಪ್ಪೆ ಮುಂತಾದ ಬಗೆ ಬಗೆಯ ಪ್ರಾಣಿಗಳನ್ನೆಲ್ಲ ಕೊಲ್ಲುತ್ತ ಅಗಸ್ತ್ಯತೀರ್ಥದ ಬಳಿಗೆ ಬಂದನು.

೫೩. ತಾನೂ ತನ್ನ ಪರಿವಾರದವರೂ ಬಳಲಿದ್ದುದರಿಂದ ಆ ರಾಜನು ಅಲ್ಲಿ ವಿಶ್ರಾಂತಿಯನ್ನು ಪಡೆಯುತ್ತಿದ್ದನು.

೫೪–೫೫. ಬಳಿಕ ಬೆಳಗುವ ಪ್ರಾತಃಕಾಲದಲ್ಲಿ ಮುನಿಪುಂಗವನಾದ ಕಕ್ಷೀವಂತನು ಅಗಸ್ತ್ಯತೀರ್ಥದಲ್ಲಿ ಸ್ನಾನಮಾಡಿ ಪ್ರಾತಃಸ್ಸಂಧ್ಯಾದಿ ಕರ್ಮಗಳನ್ನು ಮಾಡಿ, ನಿಯಮದಿಂದ ಅದರ ತೀರದಲ್ಲಿ ಮಂತ್ರಗಳನ್ನು ಜಪಿಸುತ್ತಿದ್ದನು.

೫೬. ಆಗ ಆ ತೀರ್ಥದಿಂದ ಚತುರ್ದಂತವೂ, ಮಹಾಕಾಯವೂ, ಮೂರ್ತಿಮಂತವಾದ ಹಿಮತ್ಪರ್ವತದೋಪಾದಿಯಲ್ಲಿ ಇರುವದೂ ಆದ ಆನೆಯೊಂದು ಎದ್ದು ಕಕ್ಷೀವಂತನ ಬಳಿಗೆ ಬಂದಿತು.

೫೭–೫೮. ಉದಂಕನು ಹೇಳಿದ ಲಕ್ಷಣಗಳೊಡಗೂಡಿ ಆ ತೀರ್ಥದಿಂದೆದ್ದು ಬಂದ ಆ ಆನೆಯನ್ನು ಕಂಡು ಕಕ್ಷೀವಂತನದರಲ್ಲಿ ಸ್ನಾನಮಾಡಿ, ಆ ತೀರ್ಥವನ್ನು ಹೊಗಳುತ್ತಾ, ಬಾರಿಬಾರಿಗೂ ನಮಸ್ಕರಿಸಿ ಚತುರ್ದಂತಗಳುಳ್ಳ ಆ ಆನೆಯನ್ನು ಏರಿ ಕುಳಿತನು.

೫೯. ಕೈಲಾಸಪರ್ವತದಂತಿರುವ ಆ ಆನೆಯನ್ನೇರಿದ ಬಳಿಕ ಕಕ್ಷೀವಂತನು ಸ್ವನಯನ ಪಟ್ಟಣಕ್ಕೆ ಹೋಗಲು ಇಷ್ಟಪಟ್ಟನು.

ತಮಾರೂಢಂ ಚತುರ್ದಂತಂ ಶ್ವೇತದಂತಾವಲೋತ್ತಮಂ ।
ಸ ವೀಕ್ಷ್ಯ ನಿಶ್ಚಿಕಾಯೈನಂ ಕಕ್ಷೀವಾನಿತಿ ಭೂಪತಿಃ ॥ ೬೦ ॥
ಪ್ರಸನ್ನಹೃದಯೋ ರಾಜಾ ತಸ್ಯಾಂತಿಕಮುಪಾಗಮತ್ ।
ತದಾಭ್ಯಾಶಮುಪಾಗಮ್ಯ ಕಕ್ಷೀವಂತಂ ನೃಪೋಽಬ್ರವೀತ್ ॥ ೬೧ ॥
ಸ್ವನಯ ಉವಾಚ :—
ತ್ವಂ ಬ್ರಹ್ಮನ್ಕಸ್ಯ ಪುತ್ರೋಽಸಿ ನಾಮ ಕಿಂ ತವ ಮೇ ವದ ।
ಗಜಮೇನಂ ಸಮಾರುಹ್ಯ ಕುತ್ರ ವಾ ಗಂತುಮಿಚ್ಛಸಿ ।
ಸ್ವನಯೇನೈವಮುಕ್ತಸ್ತು ಕಕ್ಷೀವಾನ್ವಾಕ್ಯಮಬ್ರವೀತ್ ॥ ೬೨ ॥
ಕಕ್ಷೀವಾನುವಾಚ :—
ಪುತ್ರೋಽಹಂ ದೀರ್ಘತಮಸಃ ಕಕ್ಷೀವಾನಿತಿ ವಿಶ್ರುತಃ ॥ ೬೩ ॥
ಸ್ವನಯಸ್ಯ ತು ರಾಜರ್ಷೇರ್ಗಚ್ಛಾಮಿ ನಗರಂ ಪ್ರತಿ ।
ಅಹಮುದ್ವೋಢುಮಿಚ್ಛಾಮಿ ತಸ್ಯ ಕನ್ಯಾಂ ಮನೋರಮಾಂ ॥ ೬೪ ॥
ಚತುರ್ದಂತಗಜಾರೂಢಸ್ತತ್ಪ್ರತಿಜ್ಞಾಂ ಚ ಪೂರಯನ್ ।
ಸ್ವನಯಸ್ಯ ಸುತಾಪಾಣಿಂ ಗ್ರಹೀಷ್ಯಾಮಿ ನರಾಧಿಪ ॥ ೬೫ ॥
ತದ್ಭಾಷಿತಂ ಸಮಾಕರ್ಣ್ಯ ಶ್ರೋತ್ರಪೀಯೂಷವರ್ಷಣಂ ।
ಹರ್ಷಸಂಫುಲ್ಲನಯನಃ ಸ್ವನಯೋ ವಾಕ್ಯಮಬ್ರವೀತ್ ॥ ೬೬ ॥
ಕಕ್ಷೀವನ್ಭೋಃ ಕೃತಾರ್ಥೋಽಸ್ಮಿ ಸ ಏವ ಸ್ವನಯೋಹ್ಯಹಂ ।
ಉದ್ವೋಢುಮಿಚ್ಛತಿ ಭವಾನ್ಯಸ್ಯ ಕನ್ಯಾಂ ಮನೋರಮಾಂ ॥ ೬೭ ॥

---

೬೦–೬೨. ಆಗ ಸ್ವನಯ ರಾಜನು ನಾಲ್ಕುದಂತಗಳಿಂದ ಕೂಡಿದ ಬಿಳಿಯ ಆನೆಯನ್ನು ಏರಿದ ಆತನನ್ನು ಕಂಡು ಕಕ್ಷೀವಂತನೆಂದು ನಿಶ್ಚಯಿಸಿ ಸಂತೋಷ ಹೃದಯದಿಂದ ಆತನ ಬಳಿಗೆ ಬಂದು ಆತನನ್ನು ಕುರಿತು ಇಂತೆಂದನು :— ಸ್ವನಯನು ಕೇಳುತ್ತಾನೆ:—"ಅಯ್ಯಾ ಬ್ರಾಹ್ಮಣಾ! ನೀನಾರ ಮಗ? ನಿನ್ನ ಹೆಸರೇನು? ಈ ಆನೆಯನ್ನೇರಿ ಎಲ್ಲಿಗೆ ಹೋಗಲು ಇಚ್ಛಯಿಸಿರುವೆ? ಹೇಳು" ಎಂದು ಆತನನ್ನು ಕೇಳಿದನು.

೬೩. ಕಕ್ಷೀವಂತನು ಹೇಳುತ್ತಾನೆ:— "ಅಯ್ಯಾ! ನಾನು ದೀರ್ಘತಮಸನ ಮಗನು; ಕಕ್ಷೀವಂತನೆಂದು ನನ್ನ ಹೆಸರು.

೬೪. ಸ್ವನಯನೆಂಬ ರಾಜರ್ಷಿಯ ಪಟ್ಟಣಕ್ಕೆ ಹೋಗಿ ಆತನ ಮಗಳಾದ ಮನೋರಮೆಯನ್ನು ಮದುವೆಯಾಗಲು ಇಷ್ಟಪಟ್ಟಿರುವೆನು.

೬೫. ಚತುರ್ದಂತಗಳುಳ್ಳ ಆನೆಯನ್ನೇರಿ ಹೋಗಿ ಅವಳ ಪ್ರತಿಜ್ಞೆಯನ್ನು ಪೂರ್ತಿಮಾಡಿ ಅವಳನ್ನು ಪಾಣಿಗ್ರಹಣಮಾಡಿಕೊಳ್ಳುವೆನು."

೬೬–೬೭. ಆಗ ಸ್ವನಯನು, ಕಿವಿಗೆ ಅಮೃತದಂತಿರುವ ಆ ಮಾತನ್ನು ಕೇಳಿ ಸಂತೋಷದಿಂದ ಅರಳಿದ ಕಣ್ಣುಳ್ಳವನಾಗಿ, "ಅಯ್ಯಾ ಕಕ್ಷೀವಂತನೆ!

ಸ್ವಾಗತಂ ತೇ ಮುನಿಶ್ರೇಷ್ಠ ಕಕ್ಷೀವನ್ಬಾಲತಾಪಸ ।
ಮಮ ಕನ್ಯಾಂ ಗೃಹಾಣ ತ್ವಂ ತಪೋಧನ ಮನೋರಮಾಂ ॥ ೬೮ ॥
ತಯಾ ಸಹ ಚರಸ್ವ ಧರ್ಮಾನ್ಗಾರ್ಹಸ್ಥ್ಯಂ ಪ್ರತಿಪಾಲಯ ।
ರಾಜ್ಞೋಕ್ತಃ ಸ ತದೋವಾಚ ಕಕ್ಷೀವಾನ್ಧರ್ಮತತ್ಪರಃ ।
ರಾಜಾನಂ ಸ್ವನಯಂ ಪ್ರೀತಂ ಮಧುರಾಪುರವಾಸಿನಂ ॥ ೬೯ ॥

ಕಕ್ಷೀವಾನುವಾಚ :—

ಪಿತಾ ದೀರ್ಘತಮಾ ನಾಮ ವೇದಾರಣ್ಯೇ ಮಮ ಪ್ರಭೋ ॥ ೭೦ ॥
ಆಸ್ತೇ ತಪಶ್ಚರನ್ರಾಜನ್ನಿಯಮಾಚಾರತತ್ಪರಃ ।
ತಸ್ಯಾಂತಿಕಂ ಪ್ರೇಷಯ ತ್ವಂ ವಿಪ್ರಮೇಕಂ ಧರಾಪತೇ ॥ ೭೧ ॥
ತಥೋಕ್ತಃ ಸ ತದಾ ರಾಜಾ ಸ್ವನಯೋ ಹೃಷ್ಟಮಾನಸಃ ।
ಅನೇಕಸೇನಯಾ ಸಾರ್ಧಂ ಪ್ರಾಹಿಣೋತ್ಸ್ವಪುರೋಧಸಂ ॥ ೭೨ ॥
ವಿಪ್ರಂ ಸುದರ್ಶನಂ ನಾಮ ವೇದಾರಣ್ಯಸ್ಥಲಂ ಪ್ರತಿ ।
ಸುದರ್ಶನಃ ಸಮಾದಿಷ್ಟಃ ಸ್ವನಯೇನ ನೃಪೇಣ ಸಃ ॥ ೭೩ ॥
ಮಹತ್ಯಾ ಸೇನಯಾ ಸಾರ್ಧಂ ಪ್ರಯಯೌ ವೇದಕಾನನಂ ।
ತತ್ರೋಟಜೇ ಸಮಾಸೀನಂ ತಂ ದೀರ್ಘತಮಸಂ ಮುನಿಂ ॥ ೭೪ ॥
ತಪಶ್ಚರಂತಮಾಸೀನಂ ಧ್ಯಾಯನ್ತಂ ವೇದಾಟವೀಪತಿಂ ।
ಪುರೋಹಿತೋ ದದರ್ಶಾಥ ಜಪಂತಂ ಮಂತ್ರಮುತ್ತಮಂ ॥ ೭೫ ॥

---

ಕೃತಾರ್ಥನಾದೆನು. ನಾನೇ ಸ್ವನಯನೆಂಬವನು. ನೀನು ಮದುವೆಯಾಗಲು ಇಷ್ಟಪಟ್ಟಿರುವ ಮನೋರಮೆಯು ನನ್ನ ಮಗಳೇ.

೬೮–೬೯. ಮುನಿಶ್ರೇಷ್ಠನೂ, ಬಾಲತಪಸ್ವಿಯೂ ಆದ ಎಲೈ ಕಕ್ಷೀವಂತನೇ! ನಿನಗೆ ಸ್ವಾಗತವನ್ನು ಬಯಸುವೆನು. ಓ ತಪೋಧನ! ನನ್ನ ಕುವರಿಯಾದ ಮನೋರಮೆಯನ್ನು ಪರಿಗ್ರಹಿಸಿ ಅವಳೊಡನೆ ಗೃಹಸ್ಥಧರ್ಮವನ್ನು ನೆರವೇರಿಸಿ ಕೊಂಡಿರು" ಎಂಬುದಾಗಿ ನುಡಿಯಲು, ಮಧುರಾಪುರದರಸನೂ ಸಂತುಷ್ಟನೂ ಆದ ಸ್ವನಯರಾಜನನ್ನು ಕುರಿತು ಆ ಕಕ್ಷೀವಂತನು ಹೇಳತೊಡಗಿದನು.

೭೦–೭೧. ಕಕ್ಷೀವಂತನು ಹೇಳುತ್ತಾನೆ:— ಅರಸನೇ! ನಿಯಮಾನುಷ್ಠಾನಪರನಾದ ದೀರ್ಘತಮನೆಂಬ ನನ್ನ ತಂದೆಯು ವೇದಾರಣ್ಯದಲ್ಲಿ ತಪವನ್ನು ಆಚರಿಸುತ್ತಿರುವನು. ಎಲೈ ಭೂಪತಿಯೇ! ಆತನ ಬಳಿಗೊಬ್ಬ ಬ್ರಾಹ್ಮಣನನ್ನು ಕಳುಹು."

೭೨–೭೩. ಆಗ ಸ್ವನಯರಾಜನು ಆ ಮಾತನ್ನು ಕೇಳಿ ಸಂತುಷ್ಟನಾಗಿ ಬಹು ಸೇನೆಯೊಂದಿಗೆ ನಿಜಪುರೋಹಿತನಾದ ಸುದರ್ಶನನನ್ನು ಆತನ ಬಳಿಗೈದಲು ವೇದಾರಣ್ಯಕ್ಕೆ ಕಳುಹಿಸಿದನು.

೭೪–೭೫. ಆಗ ರಾಜನಿಂದ ಅಜ್ಞಪ್ತನಾದ ಸುದರ್ಶನನು ಮಹತ್ತರವಾದ

ಪ್ರಣಾಮಮಕರೋತ್ತಸ್ಮೈ ಮುನಯೇ ಸ ಸುದರ್ಶನಃ ।
ಉವಾಚ ದೀರ್ಘತಮಸಂ ಮುನಿಂ ಪ್ರಹ್ಲಾದಯನ್ನಿವ ॥ ೭೬ ॥

ಸುದರ್ಶನ ಉವಾಚ :—

ಕಚ್ಚಿತ್ತೇ ಕುಶಲಂ ಬ್ರಹ್ಮನ್ಕಚ್ಚಿತ್ತೇ ವರ್ಧತೇ ತಪಃ ।
ಆಶ್ರಮೇ ಕುಶಲಂ ಕಚ್ಚಿತ್ಕಚ್ಚಿದ್ಧರ್ಮೇ ಸುಖಂ ವದ ॥ ೭೭ ॥
ಪೃಷ್ಟಃ ಸುದರ್ಶನೇನೈವಂ ಮುನಿರ್ದೀರ್ಘತಮಾಸ್ತದಾ ।
ಸುದರ್ಶನಮುವಾಚೇದಮರ್ಘ್ಯಾದಿವಿಧಿಪೂರ್ವಕಂ ॥ ೭೮ ॥

ದೀರ್ಘತಮಾ ಉವಾಚ :—

ಸರ್ವತ್ರ ಕುಶಲಂ ಬ್ರಹ್ಮನ್ಸುದರ್ಶನ ಮಹಾಮತೇ ।
ಮಮ ವೇದಾಟವೀನಾಥಕೃಪಯಾ ನಾಽಶುಭಂ ಕ್ವಚಿತ್ ॥ ೭೯ ॥
ತವಾಽಪಿ ಕುಶಲಂ ಬ್ರಹ್ಮನ್ಕಿಂ ಸುಖಾಗಮನಂ ತಥಾ ।
ಕಿಂವಾಽಽಗಮನಕಾರ್ಯಂ ತೇ ಸುದರ್ಶನ ಮಮಾಶ್ರಮೇ ॥ ೮೦ ॥
ಸ್ವನಯಸ್ಯ ಪುರೋಧಾಸ್ತ್ವಂ ಖಲು ವೇದವಿದಾಂ ವರಃ ।
ತಂ ವಿಹಾಯ ಮಹಾರಾಜಂ ಮಧುರಾಪುರವಾಸಿನಂ ॥ ೮೧ ॥
ಮಹತ್ಯಾ ಸೇನಯಾ ಸಾರ್ಧಂ ಕಿಮರ್ಥಂ ತ್ವಮಿಹಾಗತಃ ॥ ೮೨ ॥

---

ಸೈನ್ಯದೊಂದಿಗೆ ವೇದಾರಣ್ಯಕ್ಕೆ ಹೋಗಿ ಪರ್ಣಶಾಲೆಯಲ್ಲಿ ಕುಳಿತು ವೇದಾರಣ್ಯೇಶ್ವರನನ್ನು ಕುರಿತು ತಪಸ್ಸು ಮಾಡುತ್ತಿರುವ ದೀರ್ಘತಮಮುನಿಯನ್ನು ಕಂಡನು.

೭೬. ಬಳಿಕ ಮಂತ್ರೋತ್ತಮವನ್ನು ಜಪಿಸುತ್ತಿರುವ ಆ ಮಹರ್ಷಿಗೆ ನಮಸ್ಕರಿಸಿ ಸುದರ್ಶನನು ಆತನಿಗೆ ಸಂತೋಷವಾಗುವಂತೆ ಹೀಗೆ ಹೇಳಿದನು.

೭೭. ಸುದರ್ಶನನು ಹೇಳುತ್ತಾನೆ:—"ಅಯ್ಯಾ, ಬ್ರಾಹ್ಮಣನೇ! ನಿನಗೆ ಕುಶಲವೇ! ನಿನ್ನ ತಪವು ಬೆಳೆಯುತ್ತಿರುವುದಷ್ಟೆ. ನಿನ್ನ ಆಶ್ರಮದವರು ಕುಶಲವಾಗಿರುವರೇ! ನಿನ್ನ ಧರ್ಮವು ಸುಖವಾಗಿ ಬೆಳೆಯುತ್ತಿದೆಯೇ."

೭೮–೭೯. ದೀರ್ಘತಮನು ಈ ಬಗೆಯಾಗಿ ಕೇಳಿದ ಸುದರ್ಶನನನ್ನು ಅರ್ಘ್ಯಾದಿಗಳಿಂದ ಸತ್ಕರಿಸಿ ಹೇಳುತ್ತಾನೆ:–ಬುದ್ಧಿಶಾಲಿಯಾದ ಸುದರ್ಶನನೇ! ಎಲ್ಲದರಲ್ಲಿಯೂ ನಮಗೆ ಕುಶಲವಾಗಿರುವುದು. ವೇದಾಟವೀಶನ ಕೃಪೆಯಿಂದ ನಮಗೆಂದಿಗೂ ಅಶುಭವೆಂಬುದಿಲ್ಲ.

೮೦–೮೨. ಓ ಬ್ರಾಹ್ಮಣನೇ! ತಮಗೆ ಕುಶಲವೇ. ತಮ್ಮ ಪ್ರಯಾಣವು ಸುಖವಾಗಿ ಸಾಗಿತೇ. ಅಯ್ಯಾ ಸುದರ್ಶನ! ನನ್ನಾಶ್ರಮಕ್ಕೆ ಯಾವ ಕಾರ್ಯಕ್ಕಾಗಿ ಬಂದಿರುವೆ. ವೇದವಿದರಲ್ಲಿ ಶ್ರೇಷ್ಠನಾದ ನೀನು ಸ್ವನಯನ ಪುರೋಹಿತನಲ್ಲವೇ? ಮಧುರಾಪತಿಯಾದ ಆ ಮಹಾರಾಜನಿಲ್ಲದೆ ದೊಡ್ಡ ಸೈನ್ಯದೊಂದಿಗೆ ನೀನೊಬ್ಬನೇ ಇಲ್ಲಿಗೆ ಬರಲು ಕಾರಣವೇನು?" ಎಂಬುದಾಗಿ ಕೇಳಿದನು.

ಇತ್ಯುಕ್ತೋ ದೀರ್ಘತಮಸಾ ತದಾನೀಂ ಸ ಸುದರ್ಶನಃ ।
ಉವಾಚ ತಂ ಮಹಾತ್ಮಾನಂ ಮುನಿಂ ಜ್ವಲಿತತೇಜಸಂ ।
ಸರ್ವತ್ರ ಮೇ ಸುಖಂ ಬ್ರಹ್ಮನ್ಭವತಃ ಕೃಪಯಾ ಸದಾ ॥ ೮೩ ॥
ಭಗವನ್ಸ್ವನಯೋ ರಾಜಾ ಸಾಷ್ಟಾಂಗಂ ಪ್ರಣಿಪತ್ಯ ತು ।
ತ್ವಾಂ ಪ್ರಾಹ ಪ್ರಶ್ರಿತಂ ವಾಕ್ಯಂ ಮನ್ಮುಖೇನ ಶೃಣುಷ್ವ ತತ್ ॥ ೮೪ ॥

ಸ್ವನಯ ಉವಾಚ:—

ಕಕ್ಷೀವಾಂಸ್ತೇ ಸುತೋ ಬ್ರಹ್ಮನ್ಗಂಧಮಾದನಪರ್ವತೇ ।
ಸ್ನಾನಂ ಕುರ್ವನ್ನಗಸ್ತ್ಯಸ್ಯ ತೀರ್ಥೇ ಸಂಪ್ರತಿ ವರ್ತತೇ ॥ ೮೫ ॥
ತಸ್ಯ ರೂಪಂ ತಪೋ ಧರ್ಮಮಾಚಾರಾನ್ವೈದಿಕಾಂಸ್ತಥಾ ।
ವೇದಶಾಸ್ತ್ರಪ್ರವೀಣತ್ವಮಾಭಿಜಾತ್ಯಂ ಚ ತಾದೃಶಂ ॥ ೮೬ ॥
ಲೋಕೋತ್ತರಮಿದಂ ಸರ್ವಂ ವಿಜ್ಞಾಯ ತವ ನಂದನೇ ।
ಮನೋರಮಾಂ ಸುತಾಂ ತಸ್ಮೈ ದಾತುಮಿಚ್ಛಾಮ್ಯಹಂ ಮುನೇ ॥ ೮೭ ॥
ಮೃಗಯಾ ಕೌತುಕೀ ಚಾಽಹಂ ಗಂಧಮಾದನಪರ್ವತಂ ।
ಆಗತೋ ಮುನಿಶಾರ್ದೂಲ ವರ್ತೇ ಯುಷ್ಮತ್ಸುತಾಂತಿಕೇ ॥ ೮೮ ॥
ಪಿತ್ರನುಜ್ಞಾಂ ವಿನಾ ನಾಽಹಂ ಉದ್ವಹೇಯಂ ಸುತಾಂ ತವ ।
ಇತಿ ಬ್ರೂತೇ ತವ ಸುತಃ ಕಕ್ಷೀವಾನ್ಮುನಿಸತ್ತಮ ॥ ೮೯ ॥

---

೮೩–೮೪. ಇಂತು ಕೇಳಿದ, ತೇಜಸ್ಸಿನಿಂದ ಬೆಳಗುವ ಮಹಾತ್ಮನಾದ ಆ ಮುನಿಗೆ ಸುದರ್ಶನನು, "ಭಗವನ್! ನಮಗೆ ಎಲ್ಲ ವಿಷಯದಲ್ಲಿಯೂ ತಮ್ಮ ಕೃಪೆಯಿಂದ ಯಾವಾಗಲೂ ಕುಶಲವಾಗಿರುವುದು. ಸ್ವನಯರಾಜನು ತಮಗೆ ಸಾಷ್ಟಾಂಗವೆರಗಿ ನನ್ನ ಮೂಲಕವಾಗಿ ಗೌರವವಾದ ಮಾತನ್ನು ಹೇಳಿಕಳುಹಿಸಿರುವನು. ಅದನ್ನು ಆಲಿಸೋಣವಾಗಲಿ.

೮೫–೮೭. ಸ್ವನಯನು ಹೇಳುತ್ತಾನೆ:—ಬ್ರಹ್ಮನ್! ನಿನ್ನ ಮಗನಾದ ಕಕ್ಷೀವಂತನು ಗಂಧಮಾದನಪರ್ವತದಲ್ಲಿ ಅಗಸ್ತ್ಯತೀರ್ಥದಲ್ಲಿ ಸ್ನಾನಮಾಡಿಕೊಂಡಿರುವನು. ಮಹರ್ಷಿಯೇ! ನಿನ್ನ ಮಗನಲ್ಲಿರುವ ಲೋಕೋತ್ತರವಾದ ರೂಪವನ್ನೂ, ತಪಸ್ಸನ್ನೂ, ವೈದಿಕಧರ್ಮಾಚರಣೆಯನ್ನೂ, ವೇದಶಾಸ್ತ್ರಗಳ ಪಾಂಡಿತ್ಯವನ್ನೂ, ಅತ್ಯುತ್ತಮವಾದ ಸದ್ವಂಶದಲ್ಲಿನ ಹುಟ್ಟನ್ನೂ ಕಂಡು ಮಗಳಾದ ಮನೋರಮೆಯನ್ನಾತನಿಗೆ ಕೊಟ್ಟು ವಿವಾಹಮಾಡಲು ಅಪೇಕ್ಷೆಯುಳ್ಳವನಾಗಿದ್ದೇನೆ.

೮೮. ಎಲೈ ಮುನಿಶ್ರೇಷ್ಠನೇ! ನಾನು ಮೃಗಯಾಸಕ್ತನಾಗಿ ಬಂದು ಗಂಧಮಾದನಪರ್ವತದಲ್ಲಿ ನಿನ್ನ ಮಗನ ಬಳಿಯಲ್ಲಿಯೇ ಇರುವೆನು.

೮೯. ಮುನಿಪುಂಗವನೇ! ಆತನು "ನನ್ನ ತಂದೆಯ ಅನುಮತಿಯಿಲ್ಲದೆ ನಿನ್ನ ಮಗಳನ್ನು ಮದುವೆಯಾಗಲಾರೆನು" ಎಂದು ನುಡಿಯುತ್ತಿರುವನು.

ತದ್ಭಾವಾನ್ಮತ್ಸುತಾಂ ತಸ್ಮೈ ದಾತುಂ ಮೇಽನುಗ್ರಹಂ ಕುರು ।
ಪ್ರೈಷಯಂ ಚ ಸಮೀಪಂ ತೇ ಸೇನಯಾ ಚ ಸುದರ್ಶನಂ ॥ ೯೦ ॥

ಸುದರ್ಶನ ಉವಾಚ :—

ಇತಿ ಮಾಂ ಭಗವನ್ರಾಜಾ ಪ್ರಾಹಿಣೋತ್ತ್ವ ಸನ್ನಿಧಿಂ ।
ತದ್ಭವಾನನುಮನ್ಯಸ್ವ ರಾಜ್ಞಸ್ತಸ್ಯ ಚಿಕೀರ್ಷಿತಂ ॥ ೯೧ ॥

ಶ್ರೀಸೂತ ಉವಾಚ :—

ಇತ್ಯುಕ್ತ್ವಾ ವಿರರಾಮಾಥ ಸ್ವನಯಸ್ಯ ಪುರೋಹಿತಃ ।
ತತೋ ದೀರ್ಘತಮಾಃ ಪ್ರಾಹ ಸ್ವನಯಸ್ಯ ಪುರೋಹಿತಂ ॥ ೯೨ ॥

ದೀರ್ಘತಮಾ ಉವಾಚ :—

ಸುದರ್ಶನ ಭವತ್ವೇವಂ ಕಥಿತಂ ಸ್ವನಯೇನ ಯತ್ ।
ಮಮಾಽಭೀಷ್ಟತಮಂ ಹ್ಯೇತತ್ಪಾಣಿಗ್ರಹಣಮಂಗಲಂ ॥ ೯೩ ॥
ಆಗಮಿಷ್ಯಾಮ್ಯಹಂ ವಿಪ್ರ ಗಂಧಮಾದನಪರ್ವತಂ ।
ಇತ್ಯುಕ್ತ್ವಾ ಸಮುನಿರ್ವಿಪ್ರಾ ಮಹಾದೀರ್ಘತಮಾ ಮುನಿಃ ॥ ೯೪ ॥
ವೇದಾಽಟವೀಪತಿಂ ನತ್ವಾ ಭಕ್ತಿಪ್ರವಣಚೇತಸಾ ।
ಸುದರ್ಶನೇನ ಸಹಿತಃ ಸೇತುಮುದ್ದಿಶ್ಯ ನಿರ್ಯಯೌ ॥ ೯೫ ॥
ಷಡ್ಭಿರ್ದಿನೈರ್ಮುನಿಃ ಪುಣ್ಯಂ ಪ್ರಯಯೌ ಗಂಧಮಾದನಂ ।
ಅಗಸ್ತ್ಯತೀರ್ಥತೀರಂಚ ಗತ್ವಾ ದೀರ್ಘತಮಾ ಮುನಿಃ ॥ ೯೬ ॥

---

೯೦. ಆತನಲ್ಲಿಯೇ ಅಭಿಮತಳಾದ ನನ್ನ ಕುವರಿಯನ್ನಾತನಿಗೆ ದಾನ ಮಾಡಲು ಅಪ್ಪಣೆಯನ್ನು ಕೊಡುವವನಾಗು. ಅದಕ್ಕಾಗಿಯೇ ಸುದರ್ಶನನನ್ನು ಸೈನ್ಯದೊಂದಿಗೆ ತಮ್ಮ ಬಳಿಗೆ ಕಳುಹಿಸಿರುವೆನು.

೯೧. ಸುದರ್ಶನನು ಹೇಳುತ್ತಾನೆ:— ಹೀಗೆ ಹೇಳಿ ರಾಜನು ನನ್ನನ್ನು ತಮ್ಮ ಬಳಿಗೆ ಕಳುಹಿಸಿರುವನು. ಆದುದರಿಂದ ಎಲೈ ಪೂಜ್ಯನೇ! ರಾಜನ ಈ ಕೋರಿಕೆಯನ್ನೀಡೇರಿಸು" ಎಂದು ಬಿನ್ನವಿಸಿದನು.

೯೨–೯೩. ಶ್ರೀಸೂತನು ಹೇಳುತ್ತಾನೆ:—ಸ್ವನಯನ ಪುರೋಹಿತನಾದ ಸುದರ್ಶನನಿಂತು ನುಡಿದು ಸುಮ್ಮನಾಗಲು ದೀರ್ಘತಮನು ಅವನನ್ನು ಕುರಿತು ಇಂತೆಂದನು: ದೀರ್ಘತಮನು ಹೇಳುತ್ತಾನೆ:— "ಸುದರ್ಶನ! ರಾಜನು ಹೇಳಿದಂತೆಯೇ ಆಗಲಿ. ಈ ಪಾಣಿಗ್ರಹಣಶುಭೋತ್ಸವವು ನನಗೂ ಇಷ್ಟವೇ ಆಗಿರುವುದು.

೯೪–೯೫. ಅಯ್ಯಾ ಬ್ರಾಹ್ಮಣನೇ! ನಾನೂ ಗಂಧಮಾದನಪರ್ವತಕ್ಕೆ ಬರುವೆನು" ಎಂದು ಹೇಳಿ ಭಕ್ತಿಪರವಶವಾದ ಮನಸ್ಸಿನಿಂದ ವೇದಾರಣ್ಯೇಶನಿಗೆ ಎರಗಿ ಸುದರ್ಶನನೊಂದಿಗೆ ಸೇತುವಿಗೆ ತೆರಳಿದನು.

೯೬–೯೭. ದೀರ್ಘತಮಮಹರ್ಷಿಯು ಆರು ದಿನಗಳಲ್ಲಿ ಗಂಧಮಾದನ

ಅಥ ಪುತ್ರಂ ದದರ್ಶಾಽಗ್ರೇ ಕಕ್ಷೀವಂತಂ ಮಹಾಮುನಿಃ ।
ಕಕ್ಷೀವಾನ್ಪಿತರಂ ದೃಷ್ಟ್ವಾ ವವಂದೇ ನಾಮ ಕೀರ್ತಯನ್ ॥ ೯೭ ॥
ತತೋ ದೀರ್ಘತಮಾ ಯೋಗೀ ಸ್ವಾಂಕಮಾರೋಪ್ಯ ತಂ ಸುತಂ ।
ಮೂರ್ಧ್ನ್ಯುಪಾಘ್ರಾಯ ಸಸ್ನೇಹಂ ಸಸ್ವಜೇ ಪುಲಕಾಕುಲಃ ॥ ೯೮ ॥
ಕುಶಲಂ ಪರಿಪಪ್ರಚ್ಛ ತದಾ ದೀರ್ಘತಮಾ ಋಷಿಃ ।
ಸರ್ವವೇದಾಸ್ತ್ವಯಾಧೀತಾಃ ಕಕ್ಷೀವನ್ಕಿಮು ವತ್ಸಕ ॥ ೯೯ ॥
ಶಾಸ್ತ್ರಾಣ್ಯಪಾಠೀಃ ಕಿಂ ತ್ವಂ ವಾ ವತ್ಸ ಸರ್ವಂ ವದಸ್ವ ಮೇ ।
ಇತಿ ಪೃಷ್ಟಸ್ಸ್ವಪಿತ್ರಾ ಸ ಸರ್ವಂ ವೃತ್ತಂ ತಮಬ್ರವೀತ್ ॥ ೧೦೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಅಗಸ್ತ್ಯತೀರ್ಥಪ್ರಶಂಸನಂ—ಕಕ್ಷೀವದುದ್ವಾಹೋದ್ಯೋಗವರ್ಣನಂ" ನಾಮ ಷೋಡಶೋಽಧ್ಯಾಯಃ

---

ವನ್ನು ತಲುಪಿ ಅಗಸ್ತ್ಯತೀರ್ಥದ ಬಳಿಗೆ ಹೋಗಿ ಅಲ್ಲಿ ಎದುರಿನಲ್ಲಿಯೆ ಪುತ್ರನಾದ ಕಕ್ಷೀವಂತನನ್ನು ಕಂಡನು. ಕಕ್ಷೀವಂತನು ಸ್ವನಾಮೋಚ್ಚಾರಣಪೂರ್ವಕವಾಗಿ ತಂದೆಗೆರಗಿದನು.

೯೮. ಬಳಿಕ ದೀರ್ಘತಮನು ರೋಮಾಂಚಿತನಾಗಿ ಮಗನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಬಿಗಿದಪ್ಪಿ ಶಿರವನ್ನು ಆಘ್ರಾಣಿಸಿದನು.

೯೯–೧೦೦. ಬಳಿಕ ಕುಶಲವನ್ನು ಕೇಳಿ, "ಮಗುವೇ! ಸಮಸ್ತ ವೇದಗಳನ್ನೂ ಅಧ್ಯಯನಮಾಡಿರುವೆಯಾ?. ಎಲ್ಲ ಶಾಸ್ತ್ರಗಳನ್ನೂ ಓದಿದೆಯಾ? ಎಲ್ಲವನ್ನೂ ಅರುಹುವವನಾಗು" ಎಂದು ಕೇಳಲು ಕಕ್ಷೀವಂತನೆಲ್ಲವನ್ನೂ ತನ್ನ ತಂದೆಗೆ ನಿವೇದಿಸಿಕೊಂಡನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಅಗಸ್ತ್ಯತೀರ್ಥಪ್ರಶಂಸೆ—ಕಕ್ಷೀವದುದ್ವಾಹೋದ್ಯೋಗವರ್ಣನ" ವೆಂಬ ಹದಿನಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತದಶೋಽಧ್ಯಾಯಃ

### ಕಕ್ಷೀವದ್ವಿವಾಹವರ್ಣನಂ

ಶ್ರೀ ಸೂತ ಉವಾಚ :—

ಪುನರಿತ್ಯಾಹ ಪಿತರಂ ಕಕ್ಷೀವಾನ್ ತಂ ಮುನೀಶ್ವರಾಃ ।
ಯಥೋದಂಕೇನ ಗುರುಣಾ ಪ್ರೇಷಿತೋಽಹಮಿಹಾಽಧುನಾ ॥ ೧ ॥
ಸಮಾಗತೋಽಸ್ಮಿ ತೀರ್ಥೇಽಸ್ಮಿನ್ನಾಗಸ್ತ್ಯೇ ಮುನಿಸತ್ತಮ ।
ಸ್ವನಯಸ್ಯ ಸುತೋದ್ವಾಹಸಿದ್ಧ್ಯರ್ಥಂ ಗುರುಚೋದಿತಃ ॥ ೨ ॥
ಉಪಾಯಂ ತನ್ನಿಗದಿತಮತ್ರಕುರ್ವನ್ನ್ಯವರ್ತಿಷಂ ।
ವರ್ಷತ್ರಯಾಽವಸಾನೇ ಮಾಮುದ್ವಾಹೋಪಾಯಸಂಯುತಂ ॥ ೩ ॥
ಸ್ವನಯೋಽತ್ರೈವ ತಿಷ್ಠಂತಮಾಸಸಾದ ಯದೃಚ್ಛಯಾ ।
ಸ ಚ ಮಾಮೇತ್ಯ ಕನ್ಯಾಂ ತೇ ದಾಸ್ಯಾಮೀತಿ ವಚೋಽಬ್ರವೀತ್ ॥ ೪ ॥
ತತೋಽಸ್ಮದನುರೋಧೇನ ತ್ವಮಾಹ್ವಯದಯಂ ನೃಪಃ ।
ಇತೀರಯಿತ್ವಾ ಪಿತರಂ ಕಕ್ಷೀವಾನ್ವಿರರಾಮ ಸಃ ॥ ೫ ॥
ಸುದರ್ಶನೋಽಥ ವಿಪ್ರೇಂದ್ರಃ ಪುರೋಧಾಃ ಸ್ವನಯಸ್ಯ ಸಃ ।
ಪ್ರಯಯೌ ರಾಜಸವಿಧಂ ಸ್ವನಯಾಯ ನಿವೇದಿತುಂ ॥ ೬ ॥
ರಾಜಾನಂ ತಂ ಸಮಾಸಾದ್ಯ ಸ್ವನಯಂ ಸ ಸುದರ್ಶನಃ ।
ಪ್ರಾಪ್ತಂ ನಿವೇದಯಾಮಾಸ ತಂ ದೀರ್ಘತಮಸಂ ಮುನಿಂ ॥ ೭ ॥

---

### ಕನ್ನಡದ ಅನುವಾದ

### ಕಕ್ಷೀವದ್ವಿವಾಹವರ್ಣನ

೧–೨. ಸೂತನು ಹೇಳುತ್ತಾನೆ:—ಮುನೀಶ್ವರರೇ! ಕಕ್ಷೀವಂತನು ಮತ್ತೆ ತಂದೆಗೆ ಇಂತೆಂದನು: "ಮುನಿಸತ್ತಮನೇ! ಗುರುವಾದ ಉದಂಕನಿಂದ ನಾನು ಈ ಅಗಸ್ತ್ಯತೀರ್ಥದ ಸ್ನಾನಕ್ಕಾಗಿಯೂ, ಸ್ವನಯನ ಮಗಳನ್ನು ಮದುವೆಯಾಗುವುದಕ್ಕಾಗಿಯೂ ಆಜ್ಞಪ್ತನಾಗಿ ಇಲ್ಲಿಗೆ ಬಂದೆನು.

೩–೪. ಆತನು ಅನುಗ್ರಹಿಸಿದ ಉಪಾಯದಿಂದ ನಾನಿಲ್ಲಿ ಮೂರು ವರ್ಷಗಳಿದ್ದು ಆ ಉಪಾಯವನ್ನು ಪಡೆದಿರಲು, ಸ್ವನಯನು ಅಕಸ್ಮಾತ್ತಾಗಿ ಇಲ್ಲಿಗೆ ಬಂದು ನನಗೆ ಕನ್ಯೆಯನ್ನು ಕೊಡುವೆನೆಂದು ಹೇಳಿದನು.

೫. ಬಳಿಕ ನನ್ನ ಅಭಿಪ್ರಾಯಾನುಸಾರವಾಗಿ ತಮ್ಮನ್ನಿಲ್ಲಿಗೆ ಕರೆತಂದಿರುವನು." ಕಕ್ಷೀವಂತನಿಂತೆಂದು ಹೇಳಿ ಸುಮ್ಮನಾದನು.

೬–೭. ತರುವಾಯ ಸ್ವನಯನ ಪುರೋಹಿತನಾದ ಸುದರ್ಶನನು ರಾಜನ ಬಳಿಗೆ ಹೋಗಿ ದೀರ್ಘತಮನ ಬರುವಿಕೆಯನ್ನಾತನಿಗರುಹಿದನು.

ತತಃ ಸ ರಾಜಾ ಸ್ವನಯೋ ಮುನಿಂ ಪ್ರಾಪ್ತಂ ಪುರೋಹಿತಾತ್ ।
ಶ್ರುತ್ವಾ ವಿನಿರ್ಯಯೌ ದ್ರಷ್ಟುಂ ಸಹಸಾ ಪಟಮಂಡಪಾತ್ ॥ ೮ ॥
ಅಗಸ್ತ್ಯತೀರ್ಥತೀರೇ ತಂ ಸಪುತ್ರಮೃಷಿಸತ್ತಮಂ ।
ದದರ್ಶ ರಾಜಾ ಸ್ವನಯೋ ಬ್ರಹ್ಮಾಣಮಿವ ದೇವರಾಟ್ ॥ ೯ ॥
ವವಂದೇ ದೀರ್ಘತಮಸಶ್ಚರಣೌ ಲೋಕಮಂಗಲೌ ।
ಉತ್ಥಾಪ್ಯ ನೃಪತಿಂ ವಿಪ್ರಾಸ್ತದಾ ದೀರ್ಘತಮಾ ಮುನಿಃ ॥ ೧೦ ॥
ಆಶಿಷಂ ಪ್ರಯುಯೋಜಾಽಥ ಸ್ವನಯಾಯ ನೃಪಾಯ ಸಃ ।
ಅತ್ರಾಂತರೇ ಸಮಾಯಾತ ಉದಂಕೋಽಪಿ ಮಹಾನೃಷಿಃ ॥ ೧೧ ॥
ರಾಮಸೇತೌ ಧನುಷ್ಕೋಟೌ ಸ್ನಾತುಂ ಶಿಷ್ಯಗಣೈರ್ವೃತಃ ।
ಲಕ್ಷಸಂಖ್ಯೈಃ ಮುನಿಗಣಸ್ತೇನ ಸಾಕಂ ಮುನೀಶ್ವರಃ ॥ ೧೨ ॥
ಉದಂಕೋಽಗಸ್ತ್ಯತೀರ್ಥೇಽಸ್ಮಿನ್ಸ್ನಾತುಂ ಸಂಪ್ರಾಪ್ತವಾನ್ಮುನಿಃ ।
ಉದಂಕಮಾಗತಂ ದೃಷ್ಟ್ವಾ ಕಕ್ಷೀವಾನ್ಪ್ರಣನಾಮ ತಂ ॥ ೧೩ ॥
ಅಕರೋದಾಶಿಷಂ ವಿಪ್ರಃ ಶಿಷ್ಯಾಯಾಽಥ ಗುರುಸ್ತದಾ ।
ಅಥ ದೀರ್ಘತಮಾ ವಿಪ್ರಸ್ತಮುದಂಕಂ ಮಹಾಮುನಿಂ ॥ ೧೪ ॥
ಕುಶಲಂ ಪರಿಪಪ್ರಚ್ಛ ಸೋಽಪಿ ತಂ ಮುನಿಪುಂಗವಂ ।
ಉಭೌ ತೌ ಮುನಿಶಾರ್ದೂಲೌ ಸರ್ವಲೋಕೇಷು ವಿಶ್ರುತೌ ॥ ೧೫ ॥
ಕಥಯಾಮಾಸತುಸ್ತತ್ರ ಕಥಾಃ ಪಾಪಪ್ರಣಾಶಿನೀಃ ।
ಅಥ ರಾಜಾಪ್ಯುದಂಕಂ ತಂ ಪ್ರಣನಾಮ ಮುನೀಶ್ವರಂ ॥ ೧೬ ॥

---

೮. ಕೂಡಲೇ ಸ್ವನಯನು ಮುನಿಯನ್ನು ಕಾಣಲು ತನ್ನ ಪಾಳೆಯದಿಂದ ಹೊರಟುಬಂದನು.

೯–೧೦. ದೇವೇಂದ್ರನು ಬ್ರಹ್ಮದೇವನನ್ನೋಪಾದಿಯಲ್ಲಿ ಸ್ವನಯನು ಅಗಸ್ತ್ಯತೀರ್ಥ ದಡದಲ್ಲಿ ಮಗನೊಡನೆ ಕುಳಿತಿರುವ ದೀರ್ಘತಮಮಹರ್ಷಿಯನ್ನು ಕಂಡು, ಲೋಕಮಂಗಳಕರಗಳಾದ ಆತನ ಚರಣಗಳಿಗೆರಗಲು, ದೀರ್ಘತಮನು ಆತನನ್ನೆಬ್ಬಿಸಿ ಆಶೀರ್ವದಿಸಿದನು.

೧೧–೧೩. ಎಲೈ ಮಹರ್ಷಿಗಳಿರಾ! ಅದೇ ಹೊತ್ತಿಗೆ ಸರಿಯಾಗಿ ಉದಂಕ ಮಹರ್ಷಿಯು ಶಿಷ್ಯರೊಡನೆ ರಾಮಸೇತುವಾದ ಧನುಷ್ಕೋಟಿಯಲ್ಲಿ ಸ್ನಾನ ಮಾಡಲು ಅಲ್ಲಿಗೆ ಬಂದಿದ್ದನು. ಆತನೊಡನೆ ಆತನ ಶಿಷ್ಯರಾದ ಒಂದು ಲಕ್ಷ ಮುನಿಗಳೂ ಬಂದಿದ್ದರು. ಅವರೆಲ್ಲರೊಂದಿಗೂ ಉದಂಕನು ಅಗಸ್ತ್ಯತೀರ್ಥದ ಸ್ನಾನಕ್ಕಾಗಿ ದಯಮಾಡಿಸಲು ಕಕ್ಷೀವಂತನು ಆತನನ್ನು ಕಂಡು ನಮಸ್ಕರಿಸಿದನು.

೧೪–೧೬. ಉದಂಕನು ಆತನನ್ನಾಶೀರ್ವದಿಸಿದ ತರುವಾಯ, ದೀರ್ಘತಮನೂ, ಉದಂಕನೂ ಪರಸ್ಪರ ಕುಶಲಪ್ರಶ್ನೆಗಳನ್ನು ಮಾಡಿಕೊಂಡರು. ಬಳಿಕ

ಉದಂಕೋಪ್ಯಾಶಿಷಂ ತಸ್ಮೈ ಪ್ರಾಯುಂಕ್ತ ಸ್ವನಯಾಯ ವೈ ।
ರಾಜಾಽಥ ಸ್ವನಯಃ ಪ್ರೀತಸ್ತತ್ರ ವಾಕ್ಯಮಭಾಷತ ॥ ೧೭ ॥
ಮುನಿಂ ತಂ ದೀರ್ಘತಮಸಂ ವಿವಾಹಃ ಕ್ರಿಯತಾಮಿತಿ ।
ತಥಾಽಸ್ತ್ವಿತ್ಯವದತ್ಸೋಽಪಿ ತದಾ ದೀರ್ಘತಮಾ ಮುನಿಃ ॥ ೧೮ ॥
ಶ್ವ ಏವ ಕ್ರಿಯತಾಂ ರಾಜನ್ಸುಮುಹೂರ್ತೇ ಮಹಾಮತೇ ।
ಅತ್ರೈವ ಪಾಣಿಗ್ರಹಣಂ ಕ್ರಿಯತಾಂ ಗಂಧಮಾದನೇ ॥ ೧೯ ॥
ತಸ್ಮಾದಿಹಾನಯ ಕ್ಷಿಪ್ರಂ ಕನ್ಯಾಮಂತಃ ಪುರಂ ತಥಾ ।
ಇತ್ಯುಕ್ತಃ ಸ್ವನಯೋ ರಾಜಾ ಗತ್ವಾ ಸ್ವಪಟಮಂಡಪಂ ॥ ೨೦ ॥
ಆಹೂಯ ಶತಸಂಖ್ಯಾಕಾನ್ವೃದ್ಧಾನ್ವರ್ಷವರಾಂಸ್ತದಾ ।
ಆನೇತುಂ ಪ್ರೇಷಯಾಮಾಸ ಕನ್ಯಾಮಂತಃಪುರಂ ತಥಾ ॥ ೨೧ ॥
ತೇ ವರ್ಷವರಮುಖ್ಯಾಸ್ತು ಸ್ವನಯೇನ ಪ್ರಚೋದಿತಾಃ ।
ಮನೋಜವಾನ್ಸಮಾರುಹ್ಯ ವಾಜಿನೋ ಮಧುರಾಂ ಯಯುಃ ॥ ೨೨ ॥
ಗತ್ವಾಚಾಂತಃಪುರಂ ತೂರ್ಣಂ ವೃತ್ತಂ ಸರ್ವಂ ನಿವೇದ್ಯಚ ।
ಕನ್ಯಯಾಂತಃಪುರೇಣಾಽಪಿ ಸಹಿತಾಃ ಪುನರಾಯಯುಃ ॥ ೨೩ ॥
ತತಃ ಪರಸ್ಮಿನ್ದಿವಸೇ ಶುಭೇ ದೀರ್ಘತಮಾ ಋಷಿಃ ।
ಗೋದಾನಾದೀನಿ ಪುತ್ರಸ್ಯ ವಿಧಿವನ್ನಿರವರ್ತಯತ್ ॥ ೨೪ ॥

---

ಸರ್ವಲೋಕ ಪ್ರಸಿದ್ಧರಾದ ಆ ಮುನಿಪುಂಗವರೀರ್ವರೂ, ಪುಣ್ಯತಮವಾದ ಕಥಾಸಲ್ಲಾಪದೊಂದಿಗಿರಲು ಸ್ವನಯನು ಉದಂಕಮಹರ್ಷಿಗೆರಗಿದನು.

೧೭–೨೧. ಉದಂಕನು ಆತನನ್ನು ಆಶೀರ್ವದಿಸಿ, ಸಂತೋಷದಿಂದ ಮಗನಿಗೆ ಮದುವೆ ಮಾಡುವಂತೆ ದೀರ್ಘತಮನಿಗೆ ಹೇಳಿದನು. ಆತನೂ ಅದಕ್ಕೊಪ್ಪಿಗೆಯಿತ್ತು, "ಅಯ್ಯಾ ಬುದ್ಧಿವಂತನಾದ ರಾಜನೇ! ಪುಣ್ಯತಮವಾದ ಈ ಗಂಧಮಾದನದಲ್ಲಿಯೇ ನಾಳೆ ಸುಮುಹೂರ್ತದಲ್ಲಿ ವಿವಾಹವನ್ನು ನೆರವೇರಿಸು. ನಿನ್ನ ಕುವರಿಯನ್ನೂ, ರಾಣಿವಾಸವನ್ನೂ ಇಲ್ಲಿಗೆ ಬರಮಾಡು" ಎಂದು ನುಡಿಯಲು, ರಾಜನು ತನ್ನ ಬಿಡದಿಗೆ ಹೋಗಿ ಅವರನ್ನು ಕರೆತರಲು ನೂರು ಮಂದಿ ವೃದ್ಧರಾದ ವರ್ಷವರ ಸೇವಕರನ್ನೂ, ಕಂಚುಕಿಯರನ್ನೂ ತನ್ನ ಪಟ್ಟಣಕ್ಕೆ ಕಳುಹಿಸಿದನು.

೨೨–೨೪. ಆತನಿಂದ ಕಳುಹಲ್ಪಟ್ಟ ಆ ಅಂತಃಪುರದ ಸೇವಕರು ಮನೋವೇಗಗಳಾದ ಕುದುರೆಗಳನ್ನೇರಿ ಮಧುರಾಪಟ್ಟಣಕ್ಕೆ ಬಂದು ಸಮಾಚಾರವನ್ನು ಅಂತಃಪುರದವರಿಗೆ ತಿಳಿಸಿ, ರಾಣಿವಾಸದೊಂದಿಗೆ ಕನ್ಯೆಯನ್ನು ಕರೆದುಕೊಂಡು ಹಿಂದಿರುಗಿ ಬಂದರು. ಮಾರನೆಯ ದಿನ ದೀರ್ಘತಮನು ಮಗನಿಗೆ ಗೌದಾನಿಕವೇ ಮೊದಲಾದ ಸಂಸ್ಕಾರಗಳನ್ನೆಲ್ಲ ನೆರವೇರಿಸಿದನು.

ನಿರ್ವೃತ್ತೇಷ್ವಥ ಕಕ್ಷೀವಾನ್ಸ್ಯೋದಾನಾದಿಷು ಕರ್ಮಸು ।
ಉದ್ವೋಢುಂ ರಾಜತನಯಾಂ ಪಿತ್ರಾಚ ಗುರುಣಾ ಸಹ ॥ ೨೩ ॥
ಚತುರ್ದಂತಂ ಮಹಾಕಾಯಂ ಗಜಂ ಸರ್ವಾಂಗಪಾಂಡುರಂ ।
ಆರುಹ್ಯ ಹರ್ಷಸಂಯುಕ್ತೋ ದ್ವಿತೀಯ ಇವ ದೇವರಾಟ್ ॥ ೨೬ ॥
ಮನೋರಮಾಯಾಃ ಕನ್ಯಾಯಾಃ ಪೂರಯಂಶ್ಚ ಮನೋರಥಂ ।
ಬ್ರಾಹ್ಮಣೈರ್ಬಹುಸಾಹಸ್ರೈಃ ಸಹಿತಃ ಸ್ವಸ್ತಿವಾಚಕೈಃ ॥ ೨೭ ॥
ತೋರಣಾಲಂಕೃತದ್ವಾರಂ ರಾಜರ್ಷೇಃ ಪಟಮಂಡಪಂ ।
ಕೃತಮಂಗಲಕೃತ್ಯೋಽಸೌ ಕಕ್ಷೀವಾನ್ಮುದಿತೋ ಯಯೌ ॥ ೨೮ ॥
ತತಃ ಸ್ವನಯಕನ್ಯಾ ಸಾ ಕೃತಮಂಗಲಭೂಷಣಾ ।
ಚತುರ್ದಂತಮಹಾಕಾಯಶ್ವೇತದಂತಾವಲಸ್ಥಿತಂ ॥ ೨೯ ॥
ಕಕ್ಷೀವಂತಂ ಸಮಾಯಾಂತಂ ದೃಷ್ಟ್ವಾ ಸ್ವೋದ್ವಾಹನೋತ್ಸುಕಂ ।
ಪ್ರತಿಜ್ಞಾಮತ್ಕೃತೇದಾನೀಂ ನಿರ್ವೃತ್ತೇತಿ ಮುದಂ ಯಯೌ ॥ ೩೦ ॥
ಕಕ್ಷೀವಾನ್ದೀರ್ಘತಮಸಾ ತಥೋದಂಕೇನ ಸಂಯುತಃ ।
ಪಟಾಕಾರ ಬಹಿರ್ದ್ವಾರಂ ಕ್ರಮಾದ್ರಾಜ್ಞಃ ಸಮಾಯಯೌ ॥ ೩೧ ॥
ಸ್ವನಯಸ್ತು ತತೋ ದೃಷ್ಟ್ವಾ ಕಕ್ಷೀವಂತಂ ಸಮಾಗತಂ ।
ಪ್ರತ್ಯುಜ್ಜಗಾಮ ಸಹಿತಃ ಸುದರ್ಶನ ಪುರೋಧಸಾ ॥ ೩೨ ॥

---

೨೫-೨೮. ಬಳಿಕ ಸಂತುಷ್ಟನಾದ ಕಕ್ಷೀವಂತನು ವಿವಾಹೋಚಿತವಾದ ಅಲಂಕಾರವುಳ್ಳವನಾಗಿ ತಂದೆ ಮತ್ತು ಗುರುಗಳೊಡನೆ ಎರಡನೆಯ ಇಂದ್ರನಂತೆ ಚತುರ್ದಂತವೂ, ಮಹಾಕಾಯವೂ, ಸರ್ವಾಂಗಪಾಂಡುರವೂ ಆದ ಆನೆಯನ್ನೇರಿ, ರಾಜಕುವರಿಯಾದ ಮನೋರಮೆಯನ್ನು ಸ್ವೀಕರಿಸಿ ಅವಳ ಮನೋರಥವನ್ನೀಡೇರಿಸಲು ಸ್ವಸ್ತಿವಾಚಕರಾದ ಅನೇಕಸಾವಿರ ಬ್ರಾಹ್ಮಣರೊಡನೆ, ತಳಿರುತೋರಣಗಳಿಂದಲಂಕೃತವಾದ ಸ್ವನಯ ರಾಜರ್ಷಿಯ ಪಟಮಂಡಪಕ್ಕೆ ಬಿಜಮಾಡಿದನು.

೨೯-೩೦. ವಿವಾಹಮಂಗಳಾಲಂಕೃತಳಾದ ಸ್ವನಯನ ಪುತ್ರಿಯು ಚತುರ್ದಂತವೂ, ಮಹಾಕಾಯವೂ ಆದ ಬಿಳಿಯ ಆನೆಯನ್ನೇರಿ ತನ್ನನ್ನು ಪಡೆಯಲು ಉತ್ಸಾಹದಿಂದ ಬರುತ್ತಿರುವ ಕಕ್ಷೀವಂತನನ್ನು ಕಂಡು "ಈಗ ನನ್ನ ಪ್ರತಿಜ್ಞೆಯು ಸಫಲವಾಯಿತೆಂ"ದು ಸಂತೋಷಿಸಿದಳು.

೩೧. ಕಕ್ಷೀವಂತನು ದೀರ್ಘತಮೋದಂಕರೊಡನೆ ರಾಜನ ಪಟಮಂಡಪದ ಹೊರಬಾಗಿಲಿಗೆ ಬಂದನು.

೩೨. ಆಗ ಕಕ್ಷೀವಂತನು ಪುರೋಹಿತನಾದ ಸುದರ್ಶನನೊಡನೆ ಆತನನ್ನೆದುರುಗೊಂಡನು.

ಕಕ್ಷೀವತೋ ವರಸ್ಯಾಽಥ ಕನ್ಯಕಾಪರಿಚಾರಿಕಾಃ ।
ರಾಜತ್ಯೈಃ ಸ್ವರ್ಣಪಾತ್ರೈಶ್ಚ ಚಕ್ರುರ್ನೀರಾಜನಾವಿಧಿಂ ॥ ೩೩ ॥
ಸ್ವನಯೇನ ಸಮಾಹೂತೋ ಬ್ರಾಹ್ಮಣೈಃ ಪರಿವಾರಿತಃ ।
ಪ್ರವಿವೇಶಾಽಥ ಲಕ್ಷ್ಮೀವಾನ್ಕಕ್ಷೀವಾನ್ರಾಜಮಂದಿರಂ ॥ ೩೪ ॥
ತತೋ ವರೇಣ ಸಹಿತಂ ತಂ ದೀರ್ಘತಮಸಂ ಮುನಿಂ ।
ಸೋದಂಕಮುನಯದ್ರಾಜಾ ಸ್ವಗೃಹಂ ವಿನಯಾನ್ವಿತಃ ॥ ೩೫ ॥
ಉದಂಕದೀರ್ಘತಮಸೋರರ್ಘ್ಯಂ ಚ ಪ್ರದದೌ ನೃಪಃ ।
ಅಲಂಕೃತೇ ಪ್ರಪಾಮಧ್ಯೇ ವಸ್ತ್ರಚಾಮರತೋರಣೈಃ ॥ ೩೬ ॥
ವರೋ ದೀರ್ಘತಮಾಶ್ಚಾಽನ್ಯೇ ಸೋದಂಕಾ ಮುನಯಸ್ತದಾ ।
ನ್ಯಷೀದನ್ಸ್ವನಯಶ್ಚಾಪಿ ಸಾಽಮಾತ್ಯಃ ಸ ಪುರೋಹಿತಃ ॥ ೩೭ ॥
ತತೋ ದುಹಿತರಂ ಕನ್ಯಾಂ ಸುಕೇಶೀಂ ತಾಂ ಮನೋರಮಾಂ ।
ಭೂಷಣಾಲಂಕೃತಾಂ ಗಾತ್ರೇ ದಿವ್ಯವಸ್ತ್ರಧರಾಂ ಶುಭಾಂ ॥ ೩೮ ॥
ಬಿಂಬೋಷ್ಠೀಂ ಚಾರುಸರ್ವಾಂಗೀಂ ಪೀನೋನ್ನತಪಯೋಧರಾಂ ।
ಪ್ರಪಾಯಾಮಧ್ಯಮನಯನ್ಮಹಾಜನಸಮಾಕುಲಂ ॥ ೩೯ ॥
ತತೋ ವರಸ್ಯ ಕಂಠೇ ಸಾ ಮಾಲಾಂ ಚಂಪಕನಿರ್ಮಿತಾಂ ।
ನಿವೇಶಯಾಮಾಸ ಶುಭಾ ಜನಮಧ್ಯೇ ಮನೋರಮಾ ॥ ೪೦ ॥

---

೩೩. ಬಳಿಕ ಕನ್ಯಾಪರಿಚಾರಿಕೆಯರು ಬೆಳ್ಳಿ ಬಂಗಾರದ ಪಾತ್ರೆಗಳಿಂದ ಕಕ್ಷೀವಂತನಿಗಾರತಿಯನ್ನು ಬೆಳಗಿದರು.

೩೪. ಸ್ವನಯನು, ಲಕ್ಷ್ಮೀವಂತನಾದ ಕಕ್ಷೀವಂತನನ್ನು ಬ್ರಾಹ್ಮಣರೊಡನೆ ಒಳಕ್ಕೆ ಕರೆತಂದನು.

೩೫–೪೦. ಬಳಿಕ ಆತನೊಡನೆ ದಯಮಾಡಿಸಿದ ದೀರ್ಘತಮೋದಂಕರನ್ನು ಸವಿನಯವಾಗಿ ಕರೆದುಕೊಂಡು ಹೋಗಿ ಅರ್ಘ್ಯಾದಿಗಳಿಂದ ಅವರನ್ನು ಪೂಜಿಸಿದನು. ವಸ್ತ್ರ ಚಾಮರ ತೋರಣಗಳಿಂದಲಂಕೃತವಾದ ಚಪ್ಪರದೊಳಗೆ ವರನೂ, ಉದಂಕನೂ, ಆತನ ಶಿಷ್ಯರೂ, ದೀರ್ಘತಮನೂ, ಇತರರೂ ಉಪವಿಷ್ಟರಾದರು. ಆಗ ಸ್ವನಯನು ಮಂತ್ರಿಪುರೋಹಿತರೊಡನೆ ಕೂಡಿದವನಾಗಿ, ಸುಕೇಶಿಯೂ, ಒಡವೆ ವಸ್ತ್ರಗಳಿಂದಲಂಕೃತಳಾದವಳೂ, ಮಂಗಳಕರಳೂ, ತೊಂಡೆಯ ಹಣ್ಣಿನಂತಹ ಕೆಂದುಟಿಯುಳ್ಳವಳೂ, ಮನೋಹರಾಂಗಿಯೂ, ಪುಷ್ಟವೂ, ಉನ್ನತವೂ ಆದ ಸ್ತನಗಳುಳ್ಳವಳೂ, ಕನ್ಯೆಯೂ ಆದ ತನ್ನ ಕುವರಿಯಾದ ಮನೋರಮೆಯನ್ನು ಜನಸಂದಣಿಯಿಂದ ತುಂಬಿದ ಚಪ್ಪರದೊಳಕ್ಕೆ ಕರೆದುಕೊಂಡು ಬಂದನು. ಬಳಿಕ ಆ ಮನೋರಮೆಯು ಸಂಪಿಗೆ ಹುವ್ವಿನ ಹಾರವನ್ನು ಆತನ ಕೊರಳಿಗೆ ಹಾಕಿದಳು.

ಉದಂಕಸ್ತತ ಆಗತ್ಯ ಪ್ರತಿಷ್ಠಾಪ್ಯಾಽನಲಂ ಸ್ಥಲೇ ।
ಕೃತ್ವಾಽಗ್ನಿಮುಖಪರ್ಯಂತಂ ಲಾಜಾಹೋಮಾದಿಕಂ ತಥಾ ॥ ೪೧ ॥
ಪಾಣಿಮಗ್ರಾಹಯತ್ತಸ್ಯಾಃ ಕನ್ಯಾಯಾಶ್ಚ ವರೇಣ ತು ।
ಉದಂಕಃ ಸರ್ವಕರ್ಮಾಣಿ ಕಾರಯಾಮಾಸ ತತ್ರ ವೈ ॥ ೪೨ ॥
ವರವಧ್ವೋಸ್ತದಾ ವಿಪ್ರಾಃ ಪ್ರಾಯುಂಜತ ತದಾಶಿಷಃ ।
ತತಃ ಸ ರಾಜಾ ಸ್ವನಯೋ ವರಂ ದೀರ್ಘತಮೋ ಮುನಿಂ ॥ ೪೩ ॥
ಉದಂಕಂ ವರಪಕ್ಷೀಯಾನ್ಸ್ವಪಕ್ಷೀಯಾಂಸ್ತಥಾ ದ್ವಿಜಾಃ ।
ತ್ರಿಲಕ್ಷಂ ಬ್ರಾಹ್ಮಣಾನನ್ನೈರ್ಭೋಜಯಾಮಾಸ ಷಡ್ರಸೈಃ ॥ ೪೪ ॥
ತತಃ ಸಂಭಾವಯಾಮಾಸ ತಾಂಬೂಲಾದ್ಯೈರನೇಕಧಾ ।
ಅಥಾಽಽಮಂತ್ರ್ಯ ಮುನಿಶ್ರೇಷ್ಠಮುದಂಕಃ ಸ್ವಾಶ್ರಮಂ ಯಯೌ ॥ ೪೫ ॥
ಅನ್ಯೇಚ ಬ್ರಾಹ್ಮಣಾಃ ಸರ್ವೇ ಸ್ವದೇಶಾನ್ಪ್ರಯಯುಸ್ತದಾ ।
ಏವಂ ವಿವಾಹೇ ನಿರ್ವೃತ್ತೇ ಕಕ್ಷೀವದ್ರಾಜಕನ್ಯಯೋಃ ॥ ೪೬ ॥
ಪ್ರವಿಶ್ಯಾಽಗಸ್ತ್ಯತೀರ್ಥಂ ಸ ತಿರೋಧತ್ತ ಗಜೋತ್ತಮಃ ।
ತತೋ ದೀರ್ಘತಮಾ ವಿಪ್ರಾಃ ಪುತ್ರೇಣ ಸ್ನುಷಯಾ ಸಹ ॥ ೪೭ ॥
ಅಗಸ್ತ್ಯಸ್ಯ ಮಹಾತೀರ್ಥೇ ಸ್ನಾನಂ ಕೃತ್ವೇಷ್ಟದಾಯಿನಿ ।
ಶ್ಲಾಘಮಾನಶ್ಚ ತತ್ತೀರ್ಥಂ ಸರ್ವಲೋಕೇಷು ವಿಶ್ರುತಂ ॥ ೪೮ ॥

---

೪೧. ಆಗ ಉದಂಕನು ಬಂದು ಅಗ್ನ್ಯಾವಾಹನೆಯನ್ನು ಮಾಡಿ ಅಗ್ನಿ ಮುಖಾಂತ ಸಂಸ್ಕಾರದೊಡನೆ ಲಾಜಾ ಹೋಮಾದಿ ವಿವಾಹಕೃತ್ಯಗಳನ್ನು ನಡೆಸಿ ವರನಿಂದ ಕನ್ಯೆಯ ಪಾಣಿಗ್ರಹಣವನ್ನು ಮಾಡಿಸಿದನು.

೪೨–೪೪. ಉದಂಕನ ಎಲ್ಲ ವೈವಾಹಿಕ ಕೃತ್ಯಗಳನ್ನೂ ಸಾಂಗಗೊಳಿಸಿದ ಮೇಲೆ ಬ್ರಾಹ್ಮಣರೆಲ್ಲರೂ ವಧೂವರರನ್ನು ಹರಸಿದರು. ಬಳಿಕ ಸ್ವನಯ ರಾಜನು ವರನನ್ನೂ, ದೀರ್ಘತಮನನ್ನೂ, ಉದಂಕನನ್ನೂ, ವರನ ಕಡೆಯ ಬೀಗರೆಲ್ಲರನ್ನೂ ಔತಣದಿಂದ ಉಪಚರಿಸಿದುದಲ್ಲದೆ ಮೂರು ಲಕ್ಷ ಬ್ರಾಹ್ಮಣರನ್ನು ಷಡ್ರಸೋಪೇತವಾದ ಭೋಜನದಿಂದ ತೃಪ್ತಿಗೊಳಿಸಿದನು.

೪೫. ತಾಂಬೂಲ ದಕ್ಷಿಣಾದಿಗಳಿಂದ ಸನ್ಮಾನಿಸಿದನು. ತರುವಾಯ, ಉದಂಕನು ದೀರ್ಘತಮನಿಂದ ಬೀಳ್ಕೊಂಡು ತನ್ನ ಆಶ್ರಮಕ್ಕೆ ತೆರಳಿದನು.

೪೬–೪೮. ಅನಂತರ ಮಿಕ್ಕ ಬ್ರಾಹ್ಮಣರೆಲ್ಲರೂ ತಮ್ಮ ತಮ್ಮ ದೇಶಗಳಿಗೆ ಹೊರಟುಹೋದರು. ಈ ಬಗೆಯಾಗಿ ಕಕ್ಷೀವದ್ರಾಜಕನ್ಯೆಯರ ವಿವಾಹವು ನೆರವೇರಿದ ಬಳಿಕ, ಉತ್ತಮವಾದ ಆ ಆನೆಯು ಅಗಸ್ತ್ಯತೀರ್ಥವನ್ನು ಪ್ರವೇಶಿಸಿ ಅಂತರ್ಧಾನಹೊಂದಿತು. ದೀರ್ಘತಮನು ಮಗ ಸೊಸೆಯರೊಂದಿಗೆ, ಇಷ್ಟಾರ್ಥಗಳನ್ನೀಡೇರಿಸುವ ಅಗಸ್ತ್ಯತೀರ್ಥವನ್ನು ಕೊಂಡಾಡುತ್ತ ಅದರಲ್ಲಿ ಸ್ನಾನಮಾಡಿ

ಪ್ರಯಾತುಂ ಸ್ವಾಶ್ರಮಂ ಪುಣ್ಯಂ ವೇದಾರಣ್ಯಂ ಮನೋ ದಧೇ ।
ರಾಜಾನಂ ಚ ತಮಾಗಂತುಮಾಪೃಚ್ಛನ್ಮುನಿಸತ್ತಮಃ ॥ ೪೯ ॥
ಸ್ವನಯೋಽಪಿ ತದಾ ರಾಜಾ ಸ್ವದುಹಿತ್ರೇ ಮುದಾನ್ವಿತಃ ।
ದದೌ ಶತಸಹಸ್ರಾಣಿ ಸ್ವರ್ಣಾನಿ ಸ್ತ್ರೀಧನಂ ತದಾ ॥ ೫೦ ॥
ಗವಾಂ ಸಹಸ್ರಂ ಪ್ರದದೌ ದಾಸೀನಾಂ ಚ ಸಹಸ್ರಕಂ ।
ಗ್ರಾಮಂ ಪಂಚಶತಂ ಚಾಽಪಿ ದದೌ ದುಹಿತೃವತ್ಸಲಃ ॥ ೫೧ ॥
ದಿವ್ಯವಸ್ತ್ರಾಯುತಂ ಚಾಽಪಿ ಶತಂ ಭೂಷಣಪೇಟಿಕಾಃ ।
ಹಾರಮಾಲಾಸಹಸ್ರಂ ಚ ದದೌ ದುಹಿತೃಸೌಹೃದಾತ್ ॥ ೫೨ ॥
ಏತತ್ಸರ್ವಂ ಸಮಾದಾಯ ಸಪುತ್ರಃ ಸಸ್ನುಷೋ ಮುನಿಃ ।
ರಾಜ್ಞಾ ಚ ಸಮನುಜ್ಞಾತಃ ಪ್ರಯಯೌ ವೇದಕಾನನಂ ॥ ೫೩ ॥
ವೇದಾರಣ್ಯಂ ಸಮಾಸಾದ್ಯ ತದಾ ದೀರ್ಘತಮಾ ಮುನಿಃ ।
ಉವಾಸ ಸಮುಖಂ ವಿಪ್ರಾಃ ಪುತ್ರೇಣ ಸ್ನುಷಯಾ ಸಹ ॥ ೫೪ ॥
ಸೇವನ್ವೇದಾಽಟವೀನಾಥಂ ಭುಕ್ತಿಮುಕ್ತಿಫಲಪ್ರದಂ ।
ನ್ಯವಸತ್ಸುಚಿರಂ ಕಾಲಂ ಕಕ್ಷೀವಾನಪಿ ಭಾರ್ಯಯಾ ॥ ೫೫ ॥
ಸ್ವನಯೋಽಪಿ ಸ ರಾಜರ್ಷಿಃ ಸ್ನಾತ್ವಾ ಕುಂಭಜನಿರ್ಮಿತೇ ।
ತತ್ರ ತೀರ್ಥೇ ಮಹಾಪುಣ್ಯೇ ಸಹಿತಃ ಸರ್ವಸೈನಿಕೈಃ ॥ ೫೬ ॥

---

ವೇದಾರಣ್ಯದ ತನ್ನ ಪುಣ್ಯಾಶ್ರಮಕ್ಕೆ ತೆರಳುವ ಮನಸ್ಸುಳ್ಳವನಾಗಿ ರಾಜನೊಂದಿಗೆ ಪ್ರಸ್ತಾಪಿಸಿದನು.

೫೦–೫೨. ದುಹಿತೃವತ್ಸಲನಾದ ಆ ಸ್ವನಯನು ಬಹು ಸಂತುಷ್ಟನಾಗಿ ಮಗಳಮೇಲಿನ ಮಮತೆಯಿಂದ ಆಕೆಗೆ ಒಂದು ಲಕ್ಷ ಚಿನ್ನದ ನಾಣ್ಯವನ್ನೂ, ಸಾವಿರ ಹಸುಗಳನ್ನೂ, ಸಾವಿರ ಮಂದಿ ಪರಿಚಾರಿಕೆಯರನ್ನೂ, ಐನೂರು ಗ್ರಾಮಗಳನ್ನೂ, ಹತ್ತುಸಾವಿರ ಪೀತಾಂಬರಗಳನ್ನೂ, ನೂರು ಒಡೆವೆಯ ಪೆಟ್ಟಿಗೆಗಳನ್ನೂ, ಸಾವಿರ ಸರಗಳನ್ನೂ, ಹಾರಗಳನ್ನೂ ಬಳುವಳಿಯಾಗಿ ಕೊಟ್ಟನು.

೫೩–೫೪. ದೀರ್ಘತಮಮಹರ್ಷಿಯು ಎಲ್ಲವನ್ನೂ ತೆಗೆದುಕೊಂಡು, ಮಗ ಮತ್ತು ಸೊಸೆಯರೊಡನೆ ರಾಜನ ಅನುಮತಿಯನ್ನು ಪಡೆದು, ಆತನನ್ನು ಬೀಳ್ಕೊಂಡು ವೇದಾರಣ್ಯಕ್ಕೆ ಬಂದು ಅವರೊಡನೆ ಸುಖವಾಗಿದ್ದನು.

೫೫. ಕಕ್ಷೀವಂತನೂ ಮಡದಿಯೊಂದಿಗೆ ವೇದಾರಣ್ಯೇಶನನ್ನು ಸೇವಿಸುತ್ತ ಬಹುಕಾಲ ಸುಖವಾಗಿದ್ದನು.

೫೬–೫೭. ರಾಜರ್ಷಿಯಾದ ಸ್ವನಯನು ಕುಂಭಜನಿಂದ ನಿರ್ಮಿತವಾದ ಆ ತೀರ್ಥದಲ್ಲಿ ಸಸೈನ್ಯನೂ, ಸಾಂತಃಪುರನೂ ಆಗಿ ಸ್ನಾನಮಾಡಿ, ಎಲ್ಲರೊಡನೆ

ಅಂತಃಪುರಂ ಸಮಾದಾಯ ಮುದಿತಃ ಸ್ವಪುರಂ ಯಯೌ ।
ಅಗಸ್ತ್ಯತೀರ್ಥಮಾಹಾತ್ಮ್ಯಾದೇವಂ ಕಕ್ಷೀವತೋ ಮುನೇಃ ।
ಅನನ್ಯಸುಲಭೋ ವಿಪ್ರಾ ವಿವಾಹಃ ಸಮಜಾಯತ ॥ ೫೭ ॥

ಶ್ರೀ ಸೂತ ಉವಾಚ:—

ಇತಿಹಾಸಸ್ತ್ವಯಂ ಪುಣ್ಯೋ ವೇದಸಿದ್ಧೋ ಮುನೀಶ್ವರಾಃ ॥ ೫೮ ॥
ಧನ್ಯೋ ಯಶಸ್ಯ ಆಯುಷ್ಯಃ ಕೀರ್ತಿಸೌಭಾಗ್ಯವರ್ಧನಃ ।
ಶ್ರೋತವ್ಯಃ ಪಠಿತವ್ಯೋಽಯಂ ಸರ್ವಥಾ ಮಾನವೈರ್ದ್ವಿಜಾಃ ॥ ೫೯ ॥
ಪಠತಾಂ ಶೃಣ್ವತಾಂ ಚೇಮಮಿತಿಹಾಸಂ ಪುರಾತನಂ ।
ನೇಹಾಽಮುತ್ರಾಪಿ ವಾ ಕ್ಲೇಶೋ ದಾರಿದ್ರ್ಯಂ ಚಾಽಪಿ ನೋ ಭವೇತ್ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಕಕ್ಷೀವದ್ವಿವಾಹವರ್ಣನಂ"
ನಾಮ ಸಪ್ತದಶೋಽಧ್ಯಾಯಃ

---

ತನ್ನ ಪಟ್ಟಣಕ್ಕೆ ಹಿಂದಿರುಗಿದನು. ಎಲೈ ವಿಪ್ರರೇ! ಅಸಗ್ತ್ಯತೀರ್ಥದ ಮಹಿಮೆಯಿಂದ ಕಕ್ಷೀವಂತನಿಗೆ ಈ ಬಗೆಯಾಗಿ ಇತರರಿಗೆ ಅಸಾಧ್ಯವಾದಂತಹ ಮದುವೆಯ ಮಹೋತ್ಸವವು ನೆರವೇರಿತು.

೫೮–೫೯. ಸೂತನು ಹೇಳುತ್ತಾನೆ:—ಮುನೀಶ್ವರರೇ! ಧನ್ಯವೂ, ಶ್ರೇಯಸ್ಕರವೂ, ಆಯುರ್ವರ್ಧಕವೂ, ಕೀರ್ತಿಸೌಭಾಗ್ಯವರ್ಧಕವೂ, ವೇದ ಪ್ರಸಿದ್ಧವೂ ಆದ ಈ ಇತಿಹಾಸವು ಸಮಸ್ತ ಮಾನವರಿಗೂ ಅತ್ಯವಶ್ಯವಾಗಿ ಓದತಕ್ಕದ್ದೂ, ಕೇಳತಕ್ಕದ್ದೂ ಆಗಿರುತ್ತದೆ.

೬೦. ಪರಮಪ್ರಾಚೀನವಾದ ಈ ಇತಿಹಾಸವನ್ನು ಕೇಳುವವರಿಗೂ, ಓದುವವರಿಗೂ, ಇಹಪರಗಳೆರಡರಲ್ಲಿಯೂ ಕಷ್ಟದಾರಿದ್ರ್ಯಗಳು ಸಂಭವಿಸುವಂತಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ
"ಕಕ್ಷೀವದ್ವಿವಾಹವರ್ಣನ"ವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಽಷ್ಟಾದಶೋಽಧ್ಯಾಯಃ

### ರಾಮತೀರ್ಥಪ್ರಶಂಸನಂ—ಧರ್ಮಪುತ್ರಮಿಥ್ಯಾಕಥನದೋಷಶಾಂತಿವರ್ಣನಂ

ಶ್ರೀ ಸೂತ ಉವಾಚ :—

ಕುಂಭಸಂಭವತೀರ್ಥೇಽಸ್ಮಿನ್ನಿಧಾಯಾಭಿಷವಂ ನರಃ ।
ರಾಮಕುಂಡಂ ತತಃ ಪುಣ್ಯಂ ಗಚ್ಛೇತ್ಪಾಪವಿಮುಕ್ತಯೇ ॥ ೧ ॥
ರಘುನಾಥಸರಃ ಪುಣ್ಯಂ ದ್ವಿಜಾಃ ಪಾಪಹರಂ ತಥಾ ।
ರಘುನಾಥಸರಸ್ತೀರೇ ಕೃತೋ ಯಜ್ಞೋಽಲ್ಪದಕ್ಷಿಣಃ ॥ ೨ ॥
ಸಂಪೂರ್ಣಫಲದೋ ಭೂಯಾತ್ಸ್ವಾಧ್ಯಾಯೋಪಿ ಜಪಸ್ತಥಾ ।
ರಘುನಾಥಸರಸ್ತೀರೇ ಮುಷ್ಟಿಮಾತ್ರಮಪಿ ದ್ವಿಜಾಃ ॥ ೩ ॥
ದತ್ತಂ ಚೇದ್ವೇದವಿದುಷೇ ತದನಂತಗುಣಂ ಭವೇತ್ ।
ರಾಮತೀರ್ಥಂ ಸಮುದ್ದಿಶ್ಯ ವಕ್ಷ್ಯಾಮಿ ಮುನಿಪುಂಗವಾಃ ॥ ೪ ॥
ಇತಿಹಾಸಂ ಮಹಾಪುಣ್ಯಂ ಸರ್ವಪಾತಕನಾಶನಂ ।
ಸುತೀಕ್ಷ್ಣನಾಮಾ ವಿಪ್ರೇಂದ್ರೋ ಮುನಿರ್ನಿಯತಮಾನಸಃ ॥ ೫ ॥
ಅಗಸ್ತ್ಯಶಿಷ್ಯೋ ರಾಮಸ್ಯ ಚರಣಾಬ್ಜನಿಚಿಂತಕಃ ।
ರಾಮಚಂದ್ರಸರಸ್ತೀರೇ ತಪಸ್ತೇಪೇ ಸುದುಷ್ಕರಂ ॥ ೬ ॥

---

## ಕನ್ನಡದ ಅನುವಾದ

### ರಾಮತೀರ್ಥಪ್ರಶಂಸನ—ಧರ್ಮಪುತ್ರಮಿಥ್ಯಾಕಥನದೋಷಶಾಂತಿವರ್ಣನ

೧. ಸೂತನು ಹೇಳುತ್ತಾನೆ:—ಯಾತ್ರಿಕನು ಅಗಸ್ತ್ಯತೀರ್ಥದಲ್ಲಿ ಸ್ನಾನ ಮಾಡಿದ ಬಳಿಕ, ಪಾಪಶುದ್ಧಿಗಾಗಿ ಪುಣ್ಯಪ್ರದವಾದ ರಾಮಕುಂಡತೀರ್ಥಕ್ಕೆ ಹೋಗಬೇಕು.

೨–೪. ಎಲೈ ದ್ವಿಜರೇ! ರಘುನಾಥಸರೋವರವು ಪುಣ್ಯವೂ, ಪಾಪ ನಾಶಕವೂ ಆದುದು. ರಾಮಕುಂಡದ ತೀರದಲ್ಲಿ ಮಾಡಿದ ಅಲ್ಪದಕ್ಷಿಣಾಕವಾದ ಯಜ್ಞವಾದರೂ ಸಂಪೂರ್ಣವಾಗಿ ಫಲಪ್ರದವಾಗುವುದು. ಅಂತೆಯೇ ವೇದಾಧ್ಯಯನ ತಪೋನುಷ್ಠಾನಗಳೂ ಅನಲ್ಪವಾದ ಫಲಗಳನ್ನು ಕೊಡುವುವು. ರಘುನಾಥಸರಸ್ಸಿನ ತೀರದಲ್ಲಿ ವೇದವಿದನಾದ ಬ್ರಾಹ್ಮಣನಿಗೆ ಮಾಡಿದ ಮುಷ್ಟಿ ಮಾತ್ರ ದಾನವಾದರೂ ಅನಂತವಾಗುವುದು. ಎಲೈ ಮುನೀಶ್ವರರೇ! ಅಂತಹ ರಾಮತೀರ್ಥದ ಸರ್ವಪಾಪಪ್ರಣಾಶಕವೂ, ಪುಣ್ಯಪದತಮವೂ ಆದ ಇತಿಹಾಸವನ್ನು ನಿಮಗೆ ವಿವರಿಸುವೆನು.

೫–೬. ಮನನಶೀಲನೂ, ಜಿತಮನಸ್ಕನೂ, ಅಗಸ್ತ್ಯಶಿಷ್ಯನೂ, ಶ್ರೀರಾಮ ಪಾದಕಮಲಧ್ಯಾಯಿಯೂ ಆದ ಸುತೀಕ್ಷ್ಣನೆಂಬ ಬ್ರಾಹ್ಮಣಶ್ರೇಷ್ಠನು ರಾಮತೀರ್ಥದ ಬಳಿ ಅಸಾಧ್ಯವಾದ ತಪಸ್ಸು ಮಾಡುತ್ತಿದ್ದನು.

ಜಪನ್ನಷಡಕ್ಷರಂ ಮಂತ್ರಂ ರಾಮಚಂದ್ರಾಧಿದೈವತಂ ।
ನಿತ್ಯಂ ಸ ಪಂಚಸಾಹಸ್ರಂ ಮಂತ್ರರಾಜಮತಂದ್ರಿತಃ ॥ ೭ ॥
ಜಜಾಪ ಕುರ್ವನ್ಸ್ನಾನಂ ಚ ರಘುನಾಥಸರೋಜಲೇ ।
ಭಿಕ್ಷಾಶೀ ನಿಯತಾಹಾರೋ ಜಿತಕ್ರೋಧೋ ಜಿತೇಂದ್ರಿಯಃ ॥ ೮ ॥
ಏವಂ ಸುತೀಕ್ಷ್ಣೋ ವಿಪ್ರೇಂದ್ರಾ ಬಹುಕಾಲಮವರ್ತತ ।
ತತಃ ಕದಾಚಿತ್ಸಮುನೀ ರಾಮಂ ಧ್ಯಾಯನ್ಸದಾ ಹೃದಿ ।
ತುಷ್ಟಾವ ಸೀತಾಸಹಿತಂ ರಾಮಚಂದ್ರಂ ಸಭಕ್ತಿಕಂ ॥ ೯ ॥

ಸುತೀಕ್ಷ್ಣ ಉವಾಚ :—

ನಮಸ್ತೇ ಜಾನಕೀನಾಥ ನಮಸ್ತೇ ಹನುಮತ್ಪ್ರಿಯ ॥ ೧೦ ॥
ನಮಸ್ತೇ ಕೌಶಿಕಮುನೇರ್ಯಾಗರಕ್ಷಣದೀಕ್ಷಿತ ।
ನಮಸ್ತೇ ಕೌಸಲೇಯಾಯ ವಿಶ್ವಾಮಿತ್ರ ಪ್ರಿಯಾಯ ಚ ॥ ೧೧ ॥
ನಮಸ್ತೇ ಹರಕೋದಂಡಭಂಜಕಾಮರ ಸೇವಿತ ।
ಮಾರೀಚಾಂತಕ ರಾಜೇಂದ್ರ ತಾಟಕಾಪ್ರಾಣನಾಶನ ॥ ೧೨ ॥
ಕಬಂಧಾರೇ ಹರೇ ತುಭ್ಯಂ ನಮೋ ದಶರಥಾತ್ಮಜ ।
ಜಾಮದಗ್ನ್ಯಜಿತೇ ತುಭ್ಯಂ ಖರವಿಧ್ವಂಸಿನೇ ನಮಃ ॥ ೧೩ ॥
ನಮಃ ಸುಗ್ರೀವನಾಥಾಯ ನಮೋ ವಾಲಿಹರಾಯ ತೇ ।
ವಿಭೀಷಣಭಯಕ್ಲೇಶಹಾರಿಣೇ ಮಲಹಾರಿಣೇ ॥ ೧೪ ॥

---

೭–೮. ಆತನು ಪ್ರತಿದಿನವೂ ಶ್ರೀರಾಮತೀರ್ಥದಲ್ಲಿ ಸ್ನಾನಮಾಡುತ್ತ, ಭಿಕ್ಷಾಶಿಯೂ, ಆಹಾರನಿಯಮವುಳ್ಳವನೂ, ಕ್ರೋಧವನ್ನೂ ಇಂದ್ರಿಯಗಳನ್ನೂ ಗೆದ್ದವನೂ ಆಗಿ ಷಡಕ್ಷರವಾದ ಶ್ರೀರಾಮಮಂತ್ರವನ್ನು ಐದು ಸಾವಿರ ಬಾರಿ ಜಪಿಸುತ್ತಿದ್ದನು.

೯. ಎಲೈ ಬ್ರಾಹ್ಮಣರೇ! ಈ ಬಗೆಯಾಗಿ ಬಹುಕಾಲವಾದ ಮೇಲೆ ಆತನು ಒಮ್ಮೆ ಸೀತಾಸಮೇತನಾದ ಶ್ರೀರಾಮನನ್ನು ಮನದಲ್ಲಿ ನೆನದು ಭಕ್ತಿಯಿಂದ ಸ್ತುತಿಸತೊಡಗಿದನು.

೧೦–೨೦. ಸುತೀಕ್ಷ್ಣನು ಸ್ತುತಿಸುತ್ತಾನೆ:—ಜಾನಕೀರಮಣನೇ! ಹನುಮಂತನಲ್ಲಿ ಮಮತೆಯಿಟ್ಟಿರುವ ನಿನಗೆ ವಂದಿಸುವೆನು. ಹೇ ಸ್ವಾಮಿಯೇ! ವಿಶ್ವಾಮಿತ್ರನ ಯಾಗರಕ್ಷಣೆಯಲ್ಲಿ ಬದ್ಧಕಂಕಣನಾದ ನಿನಗೆರಗುವೆನು. ಕೌಸಲ್ಯೆಯ ಮುದ್ದುಕುವರನೂ, ವಿಶ್ವಾಮಿತ್ರಪ್ರಿಯನೂ, ಈಶ್ವರನ ಬಿಲ್ಲನ್ನು ಮುರಿದವನೂ, ದೇವವಂದಿತನೂ, ಮಾರೀಚಾಂತಕನೂ, ತಾಟಕಾಪ್ರಾಣಹಾರಕನೂ ಆದ ರಾಜೇಂದ್ರ! ನಿನ್ನನ್ನು ವಂದಿಸುವೆನು. ಓ ದಶರಥಾತ್ಮಜ! ಕಬಂಧನನ್ನು

ಅಹಲ್ಯಾದುಃಖಸಂಹರ್ತ್ರೇ ನಮಸ್ತೇ ಭರತಾಗ್ರಜ ।
ಅಂಭೋಧಿಗರ್ವಸಂಹರ್ತ್ರೇ ತಸ್ಮಿನ್ಸೇತುಕೃತೇ ನಮಃ ॥ ೧೫ ॥
ತಾರಕಬ್ರಹ್ಮಣೇ ತುಭ್ಯಂ ಲಕ್ಷ್ಮಣಾಗ್ರಜ ತೇ ನಮಃ ।
ರಕ್ಷಃಸಂಹಾರಿಣೇ ತುಭ್ಯಂ ನಮೋ ರಾವಣಮರ್ದಿನೇ ॥ ೧೬ ॥
ಕೋದಂಡಧಾರಿಣೇ ತುಭ್ಯಂ ಸರ್ವರಕ್ಷಾವಿಧಾಯಿನೇ ।
ಇತಿ ಸ್ತುವನ್ಮುನಿಃ ಸೋಽಯಂ ಸುತೀಕ್ಷ್ಣೋ ರಾಮಮನ್ವಹಂ ॥ ೧೭ ॥
ನಿನಾಯ ಕಾಲಮನಿಶಂ ರಾಮಚಂದ್ರನಿಷಣ್ಣಧೀಃ ।
ಏವಮಭ್ಯಸತಸ್ತಸ್ಯ ರಾಮಮಂತ್ರಂ ಷಡಕ್ಷರಂ ॥ ೧೮ ॥
ಸ್ತುವತೋ ರಾಮಚಂದ್ರಂ ಚ ಸ್ತೋತ್ರೇಣಾನೇನ ಸುವ್ರತಾಃ ।
ತೀರ್ಥೇ ಚ ರಘುನಾಥಸ್ಯ ಕುರ್ವತಃ ಸ್ನಾನಮನ್ವಹಂ ॥ ೧೯ ॥
ಅಭವನ್ನಿಶ್ಚಲಾ ಭಕ್ತೀ ರಾಮಚಂದ್ರೇಽತಿನಿರ್ಮಲಾ ।
ಅಭೂದದ್ವೈತವಿಜ್ಞಾನಂ ಪ್ರತ್ಯಗಾತ್ಮೈಕಲಕ್ಷಣಂ ॥ ೨೦ ॥
ಅನಧೀತತ್ರಯೀಜ್ಞಾನಂ ತಥೈವಾಽಶ್ರುತವೇದನಂ ।
ಪರಕಾಯಪ್ರವೇಶೇ ಚ ಸಾಮರ್ಥ್ಯಮಭವದ್ದ್ವಿಜಾಃ ॥ ೨೧ ॥

---

ಕೊಂದವನೂ, ಪರಶುರಾಮನನ್ನು ಗೆದ್ದವನೂ, ಖರಾದಿಗಳನ್ನು ಧ್ವಂಸಮಾಡಿದವನೂ ನೀನೆ ಅಲ್ಲವೆ! ವಾಲಿಯನ್ನು ಕೊಂದು ಸುಗ್ರೀವನನ್ನು ಸಲಹಿ, ವಿಭೀಷಣನ ಭಯಕ್ಲೇಶಗಳನ್ನು ನೀಗಿ ಪಾಪಪರಿಹಾರಕವಾಗಿರುವ ನಿನ್ನನ್ನು ನಮಸ್ಕರಿಸುವೆನು. ಎಲೈ ಭರತಾಗ್ರಜನೇ! ಅಹಲ್ಯೆಯ ದುಃಖವನ್ನು ಪರಿಹರಿಸಿದವನು ನೀನಲ್ಲದೆ ಮತ್ತಾರು! ಸಮುದ್ರರಾಜನ ಸೊಕ್ಕನ್ನು ಮುರಿದು ಅವನ ಮೇಲೆ ಸೇತುವನ್ನು ಕಟ್ಟಿಸಿದಂತಹ ಮಹಾಪ್ರಭೋ! ನಿನ್ನಡಿಗಳಿಗೆರಗುವೆನು. ಎಲೈ ಲಕ್ಷ್ಮಣಾಗ್ರಜನೇ! ರಾವಣಾದಿ ರಾಕ್ಷಸರನ್ನು ಯಮಪುರಿಗಟ್ಟಿದ ತಾರಕ ಬ್ರಹ್ಮನಾದ ನಿನಗೆ ನಮಸ್ಕಾರಗಳು. ಬಿಲ್ಲು ಬಾಣಗಳನ್ನು ಹಿಡಿದು ಎಲ್ಲರನ್ನೂ ಸಲಹಿದ ನಿನಗೆ ನಮಸ್ಕಾರವಿರಲಿ. ಸುತೀಕ್ಷ್ಣನೀಬಗೆಯಾಗಿ ಎಡಬಿಡದೆ ಸ್ತೋತ್ರಮಾಡುತ್ತ ಶ್ರೀರಾಮಚಂದ್ರನಲ್ಲಿಯೇ ಮನಸ್ಸಿಟ್ಟು ಕಾಲಕಳೆಯುತ್ತಿದ್ದನು. ಇಂತು ಪ್ರತಿದಿನವೂ ರಾಮತೀರ್ಥದಲ್ಲಿ ಸ್ನಾನಮಾಡಿ, ಶ್ರೀರಾಮ ಷಡಕ್ಷರೀಮಂತ್ರವನ್ನಭ್ಯಸಿಸುತ್ತ ಶ್ರೀರಾಮಚಂದ್ರನನ್ನೇ ಸ್ತೋತ್ರಮಾಡುತ್ತಿರುವ ಆ ಮಹಾಮುನಿಗೆ, ಶ್ರೀರಾಮಚಂದ್ರನಲ್ಲಿ ನಿಶ್ಚಲವೂ ನಿರ್ಮಲವೂ ಆದ ಭಕ್ತಿಯು ನೆಲೆಗೊಂಡಿತು. ಪರಮಾತ್ಮೈಕ್ಯಸ್ವರೂಪವಾದ ಅದ್ವೈತಜ್ಞಾನವು ಸ್ಫೂರ್ತಿಗೊಂಡಿತು.

೨೧. ಅಧ್ಯಯನಮಾಡದೆಯೆ ವೇದಾರ್ಥದ ಅರಿವೂ, ಕೇಳದಿದ್ದರೂ ತಿಳಿದುಕೊಳ್ಳುವ ಶಕ್ತಿಯೂ, ಪರಕಾಯಪ್ರವೇಶ ಸಾಮರ್ಥ್ಯವೂ ಆತನಿಗೊದಗಿತು.

ಆಕಾಶಗಮನೇ ಶಕ್ತಿಃ ಕಲಾವೈದಗ್ಧ್ಯಮೇವಚ ।
ಅಶ್ರುತಾನಾಂ ಚ ಶಾಸ್ತ್ರಾಣಾಮಭಿಜ್ಞಾನಂ ವಿನಾ ಗುರುಂ ॥ ೨೨ ॥
ಗಮನಂ ಸರ್ವಲೋಕೇಷು ಪ್ರತಿಘಾತವಿವರ್ಜಿತಂ ।
ಅತೀಂದ್ರಿಯಾರ್ಥದ್ರಷ್ಟೃತ್ವಂ ದೇವೈಃ ಸಂಭಾಷಣಂ ತಥಾ ॥ ೨೩ ॥
ಪಿಪೀಲಿಕಾದಿ ಜಂತೂನಾಂ ವಾರ್ತಾಜ್ಞಾನಮಪಿ ದ್ವಿಜಾಃ ।
ಬ್ರಹ್ಮ ವಿಷ್ಣು ಮಹಾದೇವಲೋಕೇಷು ಗಮನಂ ತಥಾ ॥ ೨೪ ॥
ಚತುರ್ದಶಸು ಲೋಕೇಷು ಸ್ವಾಧೀನಗಮನಂ ತಥಾ ।
ಏತಾನ್ಯನ್ಯಾನಿ ಸರ್ವಾಣಿ ಯೋಗಿಲಭ್ಯಾನಿ ಸತ್ತಮಾಃ ॥ ೨೫ ॥
ಸುತೀಕ್ಷ್ಣಸ್ಯಾಽಭವನ್ವಿಪ್ರಾ ರಾಮತೀರ್ಥನಿಷೇವಣಾತ್ ।
ಏವಂ ಪ್ರಭಾವಂ ತತ್ತೀರ್ಥಂ ಮಹಾಪಾತಕ ನಾಶನಂ ॥ ೨೬ ॥
ಮಹಾಸಿದ್ಧಿಕರಂ ಪುಣ್ಯಮಪಮೃತ್ಯುವಿನಾಶನಂ ।
ಭುಕ್ತಿಮುಕ್ತಿಪ್ರದಂ ಪುಂಸಾಂ ನರಕಕ್ಲೇಶನಾಶನಂ ॥ ೨೭ ॥
ರಾಮಭಕ್ತಿಪ್ರದಂ ನಿತ್ಯಂ ಸಂಸಾರೋಚ್ಛೇದಕಾರಣಂ ।
ಅಸ್ಯ ತೀರೇ ಮಹಲ್ಲಿಂಗಂ ಸ್ಥಾಪಯಿತ್ವಾ ರಘೂದ್ವಹಃ ।
ಪೂಜಯಾಮಾಸ ತಲ್ಲಿಂಗಂ ಲೋಕಾಽನುಗ್ರಹ ಕಾಮ್ಯಯಾ ॥ ೨೮ ॥

---

೨೨–೨೭. ಆಕಾಶ ಸಂಚಾರಶಕ್ತಿಯೂ, ಸಕಲ ವಿದ್ಯಾಕೌಶಲ್ಯವೂ, ಗುರುಮುಖಾಧ್ಯಯನವಿಲ್ಲದೆ ಸಮಸ್ತ ಪಾಂಡಿತ್ಯವೂ, ಸಮಸ್ತ ಲೋಕಗಳಲ್ಲಿಯೂ ತಡೆಯಿಲ್ಲದಂತಹ ಸಂಚಾರಶಕ್ತಿಯೂ, ಇಂದ್ರಿಯಾತೀತವಸ್ತುಗಳ ತಿಳುವಳಿಕೆಯೂ, ದೇವತೆಗಳೊಡನೆ ಮಾತನಾಡುವ ಸಾಮರ್ಥ್ಯವೂ, ಇರುವೆ ಮೊದಲಾದ ಸಮಸ್ತ ಪ್ರಾಣಿಗಳ ವೃತ್ತಾಂತವನ್ನರಿಯುವ ಯೋಗ್ಯತೆಯೂ, ಬ್ರಹ್ಮ ವಿಷ್ಣು ಮಹೇಶ್ವರರ ಲೋಕಗಳು ಮೊದಲಾಗಿ ಹದಿನಾಲ್ಕು ಲೋಕಗಳಲ್ಲಿಯೂ ಸ್ವಾಧೀನವಾದ ಸಂಚಾರಶಕ್ತಿಯೂ ಸಿದ್ಧಿಸಿದುದಲ್ಲದೆ, ಯೋಗಿಗಳಿಗುಂಟಾಗ ಬಹುದಾದ ಸಕಲ ಸಿದ್ಧಿಗಳೂ ಆತನಗಧೀನವಾದುವು. ಎಲೈ ಮುನಿಸತ್ತಮರೇ! ಇಷ್ಟೆಲ್ಲವೂ ಮಹಾಪಾತಕನಾಶಕವಾದ ಆ ರಾಮತೀರ್ಥದ ಪ್ರಭಾವದಿಂದಲೇ ಉಂಟಾಯಿತು. ಅದು ಸಮಸ್ತ ಸಿದ್ಧಿಗಳನ್ನೂ ಒದಗಿಸುವಂತಹುದೂ, ಪುಣ್ಯಪ್ರದವೂ, ಅಕಾಲಮರಣವನ್ನು ತೊಲಗಿಸುವಂತಹುದೂ, ಪುರುಷರಿಗೆ ಭುಕ್ತಿಮುಕ್ತಿಗಳನ್ನು ಅನುಗ್ರಹಿಸುವಂತಹುದೂ, ನರಕದ ಕಷ್ಟಗಳನ್ನು ನಾಶಗೊಳಿಸುವಂತಹುದೂ, ರಾಮಭಕ್ತಿಯನ್ನುಂಟುಮಾಡಿ ಶಾಶ್ವತವಾಗಿ ಸಂಸಾರ ಬಂಧನವನ್ನು ಬಿಡಿಸುವಂತಹುದೂ ಆಗಿರುತ್ತದೆ.

೨೮. ಅದರ ದಡದಲ್ಲಿ ಶ್ರೀರಾಮಚಂದ್ರನು ಲೋಕಾನುಗ್ರಹಕ್ಕಾಗಿ ಮಹಾಲಿಂಗವನ್ನು ಪ್ರತಿಷ್ಠಿಸಿ ಪೂಜಿಸಿದನು.

ರಾಮತೀರ್ಥೇ ಮಹಾಪುಣ್ಯೇ ಸ್ನಾತ್ವಾ ತಲ್ಲಿಂಗದರ್ಶನಾತ್ ।
ನರಾಣಾಂ ಮುಕ್ತಿರೇವಸ್ಯಾತ್ಕಿಮುತಾಽನ್ಯಾ ವಿಭೂತಯಃ ॥ ೨೯ ॥
ತತ್ರ ಸ್ನಾತ್ವಾ ಶಿವಂ ದೃಷ್ಟ್ವಾ ಧರ್ಮಪುತ್ರಃ ಪುರಾ ದ್ವಿಜಾಃ ।
ಅನೃತೋಕ್ತಿ ಸಮುದ್ಭೂತ ದೋಷಾನ್ಮುಕ್ತೋಽಭವತ್ಕ್ಷಣಾತ್ ॥ ೩೦ ॥

ಋಷಯ ಊಚುಃ:—

ಅಸತ್ಯಮುದಿತಂ ಕಸ್ಮಾದ್ಧರ್ಮಪುತ್ರೇಣ ಸೂತಜ ।
ಯದ್ದೋಷಶಾಂತಯೇ ಸಸ್ನೌ ರಾಮತೀರ್ಥೇಽತಿಪಾವನೇ ॥ ೩೧ ॥

ಶ್ರೀ ಸೂತ ಉವಾಚ:—

ಯುಷ್ಮಾಕಮೃಷಯೋ ವಕ್ಷ್ಯೇ ಯಥೋಕ್ತಮನೃತಂ ರಣೇ ।
ಛಲೇನ ಧರ್ಮಪುತ್ರೇಣ ಯನ್ನಷ್ಟಂ ರಾಮತೀರ್ಥಕೇ ॥ ೩೨ ॥
ಅನ್ಯೋನ್ಯಂ ಪಾಂಡವಾ ವಿಪ್ರಾ ಧರ್ಮಪುತ್ರಾದಯಃ ಪುರಾ ।
ಧೃತರಾಷ್ಟ್ರಸ್ಯ ಪುತ್ರಾಶ್ಚ ದುರ್ಯೋಧನಮುಖಾಸ್ತದಾ ॥ ೩೩ ॥
ಮಹದ್ವೈರಮಾಸಾದ್ಯ ರಾಜ್ಯಾರ್ಥಂ ವಿಪ್ರಸತ್ತಮಾಃ ।
ಮಹತ್ಯಾ ಸೇನಯಾಸಾರ್ಧಂ ಕುರುಕ್ಷೇತ್ರೇ ಸಮೇತ್ಯಚ ॥ ೩೪ ॥

---

೨೯. ಪವಿತ್ರವಾದ ರಾಮತೀರ್ಥದಲ್ಲಿ ಸ್ನಾನಮಾಡಿ, ಆ ಲಿಂಗವನ್ನು ಸಂದರ್ಶಿಸುವವರಿಗೆ ಮುಕ್ತಿಯೇ ಸಿದ್ಧಿಸುತ್ತಿರುವಲ್ಲಿ ಮಿಕ್ಕ ಅಣಿಮಾದಿಸಿದ್ಧಿಗಳ ವಿಚಾರವನ್ನು ಹೇಳಬೇಕಾದುದೇನಿರುವುದು.

೩೦. ಅಯ್ಯಾ ದ್ವಿಜರೇ! ಹಿಂದೆ ಧರ್ಮರಾಜನು ಆ ತೀರ್ಥದಲ್ಲಿ ಸ್ನಾನ ಮಾಡಿ ಶಿವನನ್ನು ಸಂದರ್ಶಿಸಿದುದರಿಂದ, ಸುಳ್ಳು ಹೇಳಿದುದರಿಂದುಂಟಾದ ಪಾಪವನ್ನು ಕಳೆದುಕೊಂಡನು.

೩೧. ಋಷಿಗಳು ಕೇಳುತ್ತಾರೆ:—ಎಲೈ ಸೂತಮಹರ್ಷಿಯೇ! ಧರ್ಮ ರಾಜನು ಏತಕ್ಕಾಗಿ ಸುಳ್ಳುಹೇಳಿದನು. ಅದನ್ನು ಕಳೆದುಕೊಳ್ಳಲು ಪಾವನವಾದ ರಾಮತೀರ್ಥದಲ್ಲಿ ಸ್ನಾನಮಾಡಿದುದೆಂತು?

೩೨. ಸೂತನು ಹೇಳುತ್ತಾನೆ:— ಎಲೈ ಮಹರ್ಷಿಗಳಿರಾ! ಧರ್ಮಜನು ಯುದ್ಧದಲ್ಲಿ ಮೋಸಮಾಡುವುದಕ್ಕಾಗಿ ಹೇಗೆ ಸುಳ್ಳುಹೇಳಿದನೆಂಬುದನ್ನು ನಿಮಗೀಗ ತಿಳಿಸುವೆನು ಕೇಳಿರಿ.

೩೩–೩೪. ಎಲೈ ವಿಪ್ರರೇ! ಪೂರ್ವದಲ್ಲಿ ಧರ್ಮರಾಯನೇ ಮೊದಲಾದ ಪಾಂಡುಪುತ್ರರೂ, ದುರ್ಯೋಧನಾದಿ ಧಾರ್ತರಾಷ್ಟ್ರರೂ ರಾಜ್ಯದ ಸಲುವಾಗಿ ಬಹಳ ವೈರವನ್ನು ತಾಳಿ ದೊಡ್ಡ ಸೇನೆಯೊಡನೆ ಕುರುಕ್ಷೇತ್ರಕ್ಕೆ ಬಂದು ಯುದ್ಧ ವನ್ನು ಮಾಡಿದರು.

ಅಯುಧ್ಯನ್ಸಮರೇ ವೀರಾಃ ಸಮರೇಷ್ವನಿವರ್ತಿನಃ ।
ಯುದ್ಧಂ ಕೃತ್ವಾ ದಶದಿನಂ ಗಾಂಗೇಯಃ ಪತಿತೋ ಭುವಿ ॥ ೩೫ ॥
ತತಃ ಪಂಚದಿನಂ ಭೂಯೋ ಧೃಷ್ಟದ್ಯುಮ್ನೇನ ವೀರ್ಯವಾನ್ ।
ಆಚಾರ್ಯೋ ಯುಯುಧೇ ದ್ರೋಣೋ ಮಹಾಬಲಪರಾಕ್ರಮಃ ॥ ೩೬ ॥
ಅನೇಕಾಸ್ತ್ರಾಣಿ ಶಸ್ತ್ರಾಣಿ ದ್ರೋಣಾಚಾರ್ಯೋ ಮಹಾಬಲೀ ।
ವಿಸೃಜನ್ಪಾಂಡವಾನೀಕಂ ಪೀಡಯಾಮಾಸ ವೀರ್ಯವಾನ್ ॥ ೩೭ ॥
ಅಥ ದಿವ್ಯಾಸ್ತ್ರವಿಚ್ಛೂರೋ ಧೃಷ್ಟದ್ಯುಮ್ನೋ ಮಹಾಬಲಃ ।
ಅಭ್ಯನದ್ಬಾಣವರ್ಷೇಣ ದ್ರೋಣಸೇನಾಮನೇಕಧಾ ॥ ೩೮ ॥
ಧೃಷ್ಟದ್ಯುಮ್ನಂ ತದಾ ದ್ರೋಣಃ ಶರವರ್ಷೈರವಾಕಿರತ್ ।
ಪಾರ್ಥಸೇನಾ ತಥಾ ದ್ರೋಣಬಾಣವರ್ಷಾತಿಪೀಡಿತಾ ॥ ೩೯ ॥
ದಶದಿಕ್ಷು ಭಯಾಕ್ರಾಂತಾ ವಿದ್ರುತಾ ದ್ವಿಜಸತ್ತಮಾಃ ।
ತತೋಽರ್ಜುನೋ ರಣೇ ದ್ರೋಣಂ ಯುಯುಧೇ ರಥಿನಾಂ ವರಃ ॥ ೪೦ ॥
ರಣಪ್ರವೀಣಯೋಸ್ತತ್ರ ವಿಜಯದ್ರೋಣಯೋ ರಣೇ ।
ದ್ರಷ್ಟುಂ ಸಮಾಗತೈರ್ದೇವೈರಭೂದ್ವ್ಯೋಮ ನಿರಂತರಂ ॥ ೪೧ ॥
ದ್ರೋಣಫಾಲ್ಗುನಯೋರ್ವಿಪ್ರಾ ನಾಸ್ತಿ ಯುದ್ಧೋಪಮಾ ಭುವಿ ।
ಸಾಮರ್ಷಯೋಸ್ತದಾಚಾರ್ಯಶಿಷ್ಯಯೋರಭವದ್ರಣಃ ॥ ೪೨ ॥

---

೩೫–೩೬. ಗಾಂಗೇಯನು ಹತ್ತುದಿನಗಳು ಯುದ್ಧಮಾಡಿ ರಣರಂಗದಲ್ಲಿ ಬಿದ್ದುಹೋದನು. ಬಳಿಕ ಐದು ದಿನಗಳು, ಬಹು ಬಲಪರಾಕ್ರಮಸಂಪನ್ನನಾದ ದ್ರೋಣಾಚಾರ್ಯನು ಧೃಷ್ಟದ್ಯುಮ್ನನೊಡನೆ ಹೋರಿದನು.

೩೭. ಆಗ ದ್ರೋಣಾಚಾರ್ಯನು ಬಲಶಾಲಿಯಾಗಿ ಬಗೆಬಗೆಯ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿ ಪಾಂಡವರ ಸೈನ್ಯವನ್ನು ಬಹುವಾಗಿ ಪೀಡಿಸಿದನು.

೩೮. ಆಗ ದಿವ್ಯಾಸ್ತ್ರಗಳನ್ನರಿತ ಶೂರನೂ, ಬಲಶಾಲಿಯೂ ಆದ ಧೃಷ್ಟದ್ಯುಮ್ನನು ದ್ರೋಣನ ಸೈನ್ಯದ ಮೇಲೆ ಬಾಣಗಳ ಮಳೆಗರೆದನು.

೩೯–೪೦. ಆ ಸಮಯದಲ್ಲಿ ದ್ರೋಣನು ಧೃಷ್ಟದ್ಯುಮ್ನನನ್ನು ಬಾಣಗಳಲ್ಲಿಯೆ ಮುಳುಗಿಸಿಬಿಟ್ಟನು. ಪಾಂಡವರ ಸೈನ್ಯವು ಆತನ ಬಾಣಗಳಿಂದ ನೊಂದು, ಹೆದರಿ ಹತ್ತುದಿಕ್ಕುಗಳಿಗೂ ಓಡಿತು. ಬಳಿಕ ರಥಿಕಶ್ರೇಷ್ಠನಾದ ಅರ್ಜುನನು ದ್ರೋಣನೊಂದಿಗೆ ಯುದ್ಧಮಾಡತೊಡಗಿದನು.

೪೧–೪೨. ಆಗ ರಣಪಂಡಿತರಾದ ಆ ದ್ರೋಣಾರ್ಜುನರ ಯುದ್ಧವನ್ನು ನೋಡಲುಬಂದ ದೇವತೆಗಳಿಂದ ಆಕಾಶವೇ ತುಂಬಿ ಅವಕಾಶವೇ ಇಲ್ಲದಂತಾಯಿತು. ಕೋಪೋದ್ದೀಪಿತರಾದ ಆ ಗುರುಶಿಷ್ಯರ ಯುದ್ಧಕ್ಕೆ ಸಮನಾದ ಯುದ್ಧವು ಈ ಭೂಮಿಯಲ್ಲೆಂದೂ ನಡೆದಿಲ್ಲ.

ದ್ರೋಣಫಾಲ್ಗುನಯೋರ್ಯುದ್ಧಂ ದ್ರೋಣಪಾಲ್ಗುನಯೋರಿವ ।
ಬಹುಮೇನೇಽಥ ಮನಸಾ ದ್ರೋಣೋಽರ್ಜುನಪರಾಕ್ರಮಂ ॥ ೪೩ ॥
ತತೋ ದ್ರೋಣೋ ಮಹಾವೀರ್ಯಂ ಪ್ರಿಯಶಿಷ್ಯಂ ಸ ಫಾಲ್ಗುನಂ ।
ವಿಹಾಯ ಪಾಂಚಾಲಬಲಂ ಸಮುಯುಧ್ಯತ ವೀರ್ಯವಾನ್ ॥ ೪೪ ॥
ಸ ವಿಂಶತಿಸಹಸ್ರಾಣಿ ದಶ ತತ್ರಾಽಯುತಾನಿಚ ।
ದ್ರೋಣಾಚಾರ್ಯೋಽವಧೀದ್ರಾಜ್ಞಾಂ ಯುದ್ಧೇ ಸ ಗಜವಾಜಿನಾಂ ॥ ೪೫ ॥
ಧೃಷ್ಟದ್ಯುಮ್ನೋಽಥ ಕುಪಿತೋ ದ್ರೋಣಮಭ್ಯನಹಚ್ಛರೈಃ ।
ದ್ರೋಣಶ್ಚ ಪಟ್ಟಿಶಂ ಗೃಹ್ಯ ಧೃಷ್ಟದ್ಯುಮ್ನಮತಾಡಯತ್ ॥ ೪೬ ॥
ಶರೈರ್ವಿವ್ಯಾಧ ತಂ ಯುದ್ಧೇ ತೀಕ್ಷ್ಣೈರಗ್ನಿಶಿಖೋಪಮೈಃ ।
ಪರಾಙ್ಮುಖೋಽಭವತ್ತತ್ರ ಧೃಷ್ಟದ್ಯುಮ್ನಃ ಶರಾಹತಃ ॥ ೪೭ ॥
ತತೋ ವಿರಥಮಾಗತ್ಯ ಧೃಷ್ಟದ್ಯುಮ್ನಂ ವೃಕೋದರಃ ।
ಸ್ವಂ ಸ್ಯಂದನಂ ಸಮಾರೋಪ್ಯ ದ್ರೋಣಾಚಾರ್ಯಮಥಾಽಬ್ರವೀತ್ ॥೪೮॥
ಸ್ವಕರ್ಮಭಿರಸಂತುಷ್ಟಾಃ ಶಿಕ್ಷಿತಾಸ್ತ್ರಾ ದ್ವಿಜಾಽಧಮಾಃ ।
ನ ಯುಧ್ಯೇರನ್ಯದಿ ಕ್ರೂರಾ ನ ನಶ್ಯೇರನ್ನೃಪಾ ರಣೇ ॥ ೪೯ ॥
ಅಹಿಂಸಾ ಹಿ ಪರೋ ಧರ್ಮೋ ಬ್ರಾಹ್ಮಣಾನಾಂ ಸದಾ ಸ್ಮೃತಃ ।
ಹಿಂಸಯಾ ದಾರಪುತ್ರಾದೀನ್ರಕ್ಷಂತೇ ವ್ಯಾಧಜಾತಯಃ ॥ ೫೦ ॥

---

೪೩. ದ್ರೋಣಫಾಲ್ಗುನರ ಯುದ್ಧಕ್ಕೆ ದ್ರೋಣಫಾಲ್ಗುನರ ಯುದ್ಧವೇ ಸಾಟಿಯಾದುದು. ದ್ರೋಣನು ಶಿಷ್ಯನ ಪರಾಕ್ರಮವನ್ನು ಮೆಚ್ಚಿಕೊಂಡನು.

೪೪. ಬಳಿಕ ಆತನು ಪ್ರಿಯಶಿಷ್ಯನೂ, ಮಹಾಪರಾಕ್ರಮಿಯೂ ಆದ ಅರ್ಜುನನ್ನು ಬಿಟ್ಟು ಪಾಂಚಾಲ ಸೈನ್ಯದೊಡನೆ ಹೋರಾಡತೊಡಗಿದನು.

೪೫. ಆ ಯುದ್ಧದಲ್ಲಿ ದ್ರೋಣಾಚಾರ್ಯನು ಗಜಾಶ್ವಸಮೇತವಾಗಿ ಮೂವತ್ತುಸಾವಿರ ಕ್ಷತ್ರಿಯರನ್ನು ಸಂಹಾರಮಾಡಿದನು.

೪೬–೪೭. ಆಗ ಧೃಷ್ಟದ್ಯುಮ್ನನು ಬಹಳ ಕುಪಿತನಾಗಿ ದ್ರೋಣನನ್ನು ಅಂಬುಗಳಿಂದ ನೋಯಿಸಿದನು. ದ್ರೋಣನು ಪಟ್ಟಸವೆಂಬ ಆಯುಧದಿಂದ ಅವನನ್ನು ಹೊಡೆದನು. ಹರಿತವಾದ ಅಗ್ನಿಜ್ವಾಲೆಗಳಂತಿರುವ ಅಲಗುಗಳಿಂದ ಹೊಡೆಯಲು ಧೃಷ್ಟದ್ಯುಮ್ನನು ನೊಂದು ಹಿಂತಿರುಗಿದನು.

೪೮–೫೩. ಆಗ ಭೀಮನು ವಿರಥನಾಗಿ ಹಿಂದಿರುಗಿದ ಧೃಷ್ಟದ್ಯುಮ್ನನ ಬಳಿಗೆಬಂದ ಆತನನ್ನು ತೇರಿನಲ್ಲಿ ಕೂರಿಸಿಕೊಂಡು, "ಸ್ವಧರ್ಮಗಳಿಂದ ತೃಪ್ತರಾಗದೆ ಧನುರ್ವಿದ್ಯೆಯನ್ನು ಕಲಿತ, ಕ್ರೂರರಾದ ಬ್ರಾಹ್ಮಣಾಧಮರು ಯುದ್ಧ ಮಾಡದೇ ಇದ್ದಿದ್ದರೆ ಎಷ್ಟೋ ಜನ ರಾಜರುಗಳು ಸಾಯದೇ ಇರುತ್ತಿದ್ದರು. ಸರ್ವಕಾಲದಲ್ಲಿಯೂ ಅಹಿಂಸೆಯೇ ಬ್ರಾಹ್ಮಣರ ಮುಖ್ಯ ಧರ್ಮವೆಂದು

ಹಿಂಸೀಸ್ತ್ವಮೇಕಪುತ್ರಾರ್ಥೇ ಯುದ್ಧೇ ಸ್ಥಿತ್ವಾ ಬಹೂನ್ನೃಪಾನ್ ।
ಸ ಚಾಽಪಿ ತೇ ಸುತೋ ಬ್ರಹ್ಮನ್ ಹತಃ ಶೇತೇ ರಣಾಜಿರೇ ॥ ೫೧ ॥
ತಥಾಽಪಿ ಲಜ್ಜಾ ತೇ ನಾಸ್ತಿ ಶೋಕೋಽಪೀಹ ನ ಜಾಯತೇ ।
ವಚನಂ ತ್ವಿತಿ ಭೀಮಸ್ಯ ಸತ್ಯಂ ಶ್ರುತ್ವಾ ಯುಧಿಷ್ಠಿರಾತ್ ॥ ೫೨ ॥
ನಿಜಾಯುಧಂ ಸ ತತ್ಯಾಜ ಪಸಾತ ಸ್ಯಂದನೋಪರಿ ।
ಯೋಗವಿತ್ಪ್ರಾಯಮಾತಸ್ಥೇ ದ್ರೋಣಾಚಾರ್ಯಸ್ತದಾ ದ್ವಿಜಾಃ ॥ ೫೩ ॥
ತದಂತರಂ ಪರಿಜ್ಞಾಯ ದ್ರೋಣಾಚಾರ್ಯಸ್ಯ ಪಾರ್ಶ್ವತಃ ।
ಖಡ್ಗಪಾಣಿಃ ಶಿರಶ್ಛೇತ್ತುಮಭ್ಯಧಾವದ್ರಣಾಜಿರೇ ॥ ೫೪ ॥
ವಾರ್ಯಮಾಣೋಽಪಿ ಪಾರ್ಥಾದ್ಯೈಸ್ತಚ್ಛಿರಶ್ಛೇತ್ತುಮುದ್ಯಯೌ ।
ಯೋಗವಿತ್ತ್ವಾದ್ದ್ರೋಣಮೂರ್ಧ್ನೋ ಜ್ಯೋತಿರೂರ್ಧ್ವಂ ದಿವಂ ಯಯೌ॥
ದೃಷ್ಟಂ ಕೃಷ್ಣಾರ್ಜುನಕೃಪಧರ್ಮಪುತ್ರಾದಿಭಿರ್ನೃಪೇ ।
ದ್ರೋಣಸ್ಯಾಸ್ಯ ಗತಪ್ರಾಣಾಚ್ಛರೀರಾದಚ್ಛಿನಚ್ಛಿರಃ ॥ ೫೬ ॥
ಭಾರದ್ವಾಜೇ ಹತೇ ಯುದ್ಧೇ ಕೌರವಾಃ ಪ್ರಾದ್ರವನ್ಭಯಾತ್ ।
ಜಹೃಷುಃ ಪಾಂಡವಾ ವಿಪ್ರಾ ಧೃಷ್ಟದ್ಯುಮ್ನಾದಯಸ್ತದಾ ॥ ೫೭ ॥

---

ಹೇಳಲ್ಪಟ್ಟಿರುವುದು. ಹಿಂಸೆಯಿಂದ ದಾರಾಪುತ್ರರನ್ನು ಸಾಕುವುದು ಬೇಡರ ಕೆಲಸ. ನೀನು ಯುದ್ಧದಲ್ಲಿ ನಿಂತು ಒಬ್ಬ ಮಗನಿಗಾಗಿ ಎಷ್ಟೊಂದು ರಾಜರನ್ನು ಹಿಂಸಿಸಿದೆ? ಬ್ರಹ್ಮನ್! ಆವೊಬ್ಬ ಮಗನಾದರೂ ಯುದ್ಧಭೂಮಿಯಲ್ಲಿ ಮಡಿದುಬಿದ್ದಿರುವನು. ಆದರೂ ನಿನಗೆ ನಾಚಿಕೆಯೂ ಇಲ್ಲ; ದುಃಖವೂ ಉಂಟಾಗಿಲ್ಲ'' ಎಂದು ದ್ರೋಣನನ್ನು ಕುರಿತು ಹೇಳಿದನು. ಎಲೈ ಬ್ರಾಹ್ಮಣರುಗಳಿರಾ! ಭೀಮನ ಮಾತು ಸತ್ಯವೆಂದು ಧರ್ಮರಾಯನ ಬಾಯಿಂದ ಕೇಳಿ ಯೋಗವಿದನಾದ ದ್ರೋಣನು ತನ್ನ ಆಯುಧವನ್ನು ರಥದಮೇಲೆ ಬಿಸುಟು ಪ್ರಾಣಾಯಾಮಪರಾಯಣನಾಗಿ ಕುಳಿತುಬಿಟ್ಟನು.

೫೪–೫೬. ಧೃಷ್ಟದ್ಯುಮ್ನನು ಇದೇ ತಕ್ಕ ಸಮಯವೆಂದರಿತು, ಕತ್ತಿಯನ್ನು ಹಿಡಿದು, ಪಾರ್ಥಾದಿಗಳು ತಡೆಯುತಿದ್ದರೂ ಕೇಳದೆ ದ್ರೋಣನ ಶಿರವನ್ನು ಕತ್ತರಿಸಲು ಓಡಿದನು. ಕೃಷ್ಣಾರ್ಜುನ, ಕೃಪ, ಧರ್ಮರಾಜಾದಿಗಳು ನೋಡುತ್ತಿರುವಲ್ಲಿಯೇ ಯೋಗನಿಮಗ್ನನಾದ ಅತನ ಶಿರದಿಂದ ಬ್ರಹ್ಮಜ್ಯೋತಿಯು ಮೇಲಕ್ಕೆ ಹಾರಿಹೋಯಿತು. ಬಳಿಕ ಧೃಷ್ಟದ್ಯುಮ್ನನು ದ್ರೋಣನ ಕಲೇವರದಿಂದ ಮಾತ್ರ ತಲೆಯನ್ನು ತುಂಡರಿಸಿದನು.

೫೭. ಭಾರದ್ವಾಜನೀಬಗೆಯಾಗಿ ಹತನಾದ ಬಳಿಕ ಕೌರವ ಸೈನ್ಯವೆಲ್ಲವೂ ಹೆದರಿ ಓಡಿತು. ಎಲೈ ದ್ವಿಜರೇ! ಆಗ ಧೃಷ್ಟದ್ಯುಮ್ನನೇ ಮೊದಲಾದ ಪಾಂಡವ ಸೈನಿಕರೆಲ್ಲರೂ ಸಂತೋಷಿಸಿದರು.

ಸೇನಾಂ ತಾಂ ವಿದ್ರುತಾಂ ದೃಷ್ಟ್ವಾ ದ್ರೌಣಿರೂಚೇ ಸುಯೋಧನಂ ।
ಏತದ್ದ್ರವತಿ ಕಿಂ ಸೈನ್ಯಂ ತ್ಯಕ್ತಪ್ರಹರಣಂ ನೃಪ ॥ ೫೮ ॥
ತದಾ ದುರ್ಯೋಧನೋ ರಾಜಾ ಸ್ವಯಂ ವಕ್ತುಮಶಕ್ನುವನ್ ।
ಯುದ್ಧೇ ದ್ರೋಣವಧಂ ವಕ್ತುಂ ಕೃಪಾಚಾರ್ಯಮಚೋದಯತ್ ।
ದ್ರೌಣಯೇಽಥ ಕೃಪಾಚಾರ್ಯೋ ವಧಮೂಚೇ ಗುರೋಸ್ತದಾ ॥ ೫೯ ॥

ಕೃಪ ಉವಾಚ :—

ಅಶ್ವತ್ಥಾಮಂಸ್ತವ ಪಿತಾ ಬ್ರಹ್ಮಾಸ್ತ್ರೇಣ ಮೃಧೇ ರಿಪೂನ್ ।
ಹತ್ವಾ ನಿನಾಯ ಸದನಂ ಯಮಸ್ಯ ಶತಶೋ ಬಲೀ ॥ ೬೦ ॥
ದುರಾಧರ್ಷತಮಂ ತದ್ದೃಷ್ಟ್ವಾ ತದ್ವೀರ್ಯಂ ಕೇಶವಸ್ತದಾ ।
ಪಾಂಡವಾನ್ಪ್ರಾಹ ವಿಪ್ರೇಂದ್ರ ವಾಕ್ಯಂ ವಾಕ್ಯವಿಶಾರದಃ ॥ ೬೧ ॥

ಕೇಶವ ಉವಾಚ :—

ದ್ರೋಣಂ ಜೇತುಮುಪಾಯೋಽಸ್ತಿ ಪಾಂಡವಾ ಯುಧಿ ದುರ್ಜಯಂ ॥
ಅಶ್ವತ್ಥಾಮಾ ತವಸುತೋ ಹತೋ ದ್ರೋಣಮೃಧೇಽಧುನಾ ।
ಸತ್ಯವಾದೀ ವದೇದೇವಂ ಯದಿ ಪ್ರಾಮಾಣಿಕೋ ಜನಃ ॥ ೬೨ ॥
ದ್ರೋಣೋ ನಿವರ್ತೇತ ರಣಾತ್ತದಾ ತ್ಯಕ್ತ್ವಾಯುಧಂ ಕ್ಷಣಾತ್ ।
ಅತ ಏನಾಂ ಮೃಷಾವಾರ್ತಾಂ ಧರ್ಮರಾಜೋಽಧುನಾ ವದೇತ್ ॥ ೬೪ ॥
ನಾಽನ್ಯಥಾ ಶಕ್ಯತೇ ಜೇತುಂ ದ್ರೋಣೋ ಯುದ್ಧವಿಶಾರದಃ ।
ಧರ್ಮಾಜ್ಜೇತುಮಶಕ್ಯಂ ಚೇದ್ಧರ್ಮಂ ತ್ಯಕ್ತ್ವಾಽಪ್ಯರಿಂ ಜಯೇತ್ ॥೬೫॥

---

೫೮. ಆಗ ಅಶ್ವತ್ಥಾಮನೀಬಗೆಯಾಗಿ ಓಡುತ್ತಿರುವ ಸೈನ್ಯವನ್ನು ಕಂಡು "ರಾಜಾ! ಇದೇಕೀ ಸೈನ್ಯವು ಯುದ್ಧವನ್ನು ಬಿಟ್ಟು ಹೀಗೆ ಓಡುತ್ತಿದೆ?" ಎಂದು ದುರ್ಯೋಧನನನ್ನು ಕೇಳಿದನು.

೫೯—೬೪. ಆಗ ದುರ್ಯೋಧನನು ಯುದ್ಧದಲ್ಲಿನ ದ್ರೋಣವಧೆಯನ್ನು ತಾನು ಹೇಳಲಾರದವನಾಗಿ ಕೃಪಾಚಾರ್ಯರನ್ನು ಪ್ರೇರೇಪಿಸಿದನು. ಆಗ ಕೃಪನು, "ಅಶ್ವತ್ಥಾಮನ್! ಬಲಶಾಲಿಯಾದ ನಿಮ್ಮ ತಂದೆಯು ಯುದ್ಧದಲ್ಲಿ ಬ್ರಹ್ಮಾಸ್ತ್ರದಿಂದ ಅನೇಕ ಶತ್ರುಗಳನ್ನು ಯಮಪುರಿಗೆ ಕಳುಹಿಸುತ್ತಿರಲು ತಡೆಯಲಾಗದ ಆತನ ಪರಾಕ್ರಮವನ್ನು ಕಂಡು ಮಾತಿನಲ್ಲಿ ಜಾಣನಾದ ಶ್ರೀಕೃಷ್ಣನು "ಪಾಂಡವರೆ! ಯುದ್ಧದಲ್ಲಿ ದುರ್ಜಯನಾದ ದ್ರೋಣನನ್ನು ಗೆಲ್ಲಲು ಒಂದು ಉಪಾಯವಿರುವುದು. 'ದ್ರೋಣ! ನಿನ್ನ ಮಗನಾದ ಅಶ್ವತ್ಥಾಮನು ಯುದ್ಧದಲ್ಲಿ ಹತನಾದನು' ಎಂದು ಪ್ರಾಮಾಣಿಕನಾದ ಸತ್ಯವಾದಿಯಾದವನು ಹೇಳಿದಲ್ಲಿ ದ್ರೋಣನು ಆಗ ಆಯುಧವನ್ನು ಬಿಟ್ಟು ಕೂಡಲೇ ಯುದ್ಧದಿಂದ ಹಿಂದಿರುಗುವನು. ಆದುದರಿಂದ ಧರ್ಮರಾಜನು ಸುಳ್ಳು ಸುದ್ದಿಯನ್ನು ಹೇಳಬೇಕು.

೬೫. ಇಲ್ಲದಿದ್ದಲ್ಲಿ ರಣಪಂಡಿತನಾದ ದ್ರೋಣನನ್ನು ಗೆಲ್ಲಲು ಬೇರೊಂದು

ಇತಿ ಕೇಶವ ವಾಕ್ಯಂ ತಚ್ಛ್ರುತ್ವಾ ಭೀಮಃ ಪೃಥಾಸುತಃ ।
ಪಿತರಂ ತೇ ಸಮಭ್ಯೇತ್ಯ ಮಿಥ್ಯಾವಾಕ್ಯಮಭಾಷತ ॥ ೬೬ ॥
ಅಶ್ವತ್ಥಾಮಾ ಹತೋ ದ್ರೋಣ ಯುದ್ಧೇಽತ್ರ ಪತಿತೋಽಧುನಾ ।
ದ್ರೋಣಾಚಾರ್ಯೋಽಪಿ ತದ್ವಾಕ್ಯಮಮನ್ಯತ ಯಥಾರ್ಥತಃ ॥ ೬೭ ॥
ಅವಿಶ್ವಸ್ಯ ಪುನಃ ಸೋಽಥ ಧರ್ಮಜಂ ಪ್ರಾಪ್ಯ ಚಾಽಬ್ರವೀತ್ ।
ಧರ್ಮಾತ್ಮಜ ವೃಥೇ ಸೂನುರಶ್ವತ್ಥಾಮಾ ಮಮಾಽಧುನಾ ॥ ೬೮ ॥
ಹತಃ ಕಿಂ ತ್ವಂ ವದಸ್ವಾಽದ್ಯ ಸತ್ಯವಾದೀ ಭವಾನ್ಯತಃ ।
ಧರ್ಮಪುತ್ರೋಽಸತ್ಯಭೀರುರಾಸೀಚ್ಚಾರಿಜಯೋತ್ಸುಕಃ ॥ ೬೯ ॥
ಕಿಂ ಕರ್ತವ್ಯಂ ಮಯಾಽದ್ಯೇತಿ ದೋಲಾಲೋಲಮನಾ ಅಭೂತ್ ।
ಸ ದೃಷ್ಟ್ವಾ ಭೀಮನಿಹತಮಶ್ವತ್ಥಾಮಾಽಭಿಧಂ ಗಜಂ ॥ ೭೦ ॥
ಅಶ್ವತ್ಥಾಮಾ ಹತೋ ಯುದ್ಧೇ ಭೀಮೇನಾಽದ್ಯರಣೇ ಮಹಾನ್ ।
ಇತ್ಥಂ ದ್ರೋಣಂ ಬಭಾಷೇಽಸೌ ಧರ್ಮಪುತ್ರಶ್ಛಲೋಕ್ತಿತಃ ॥ ೭೧ ॥
ತಚ್ಛ್ರುತ್ವಾ ತ್ವತ್ಪಿತಾ ಶಸ್ತ್ರಂ ತ್ಯಕ್ತ್ವಾ ಯುದ್ಧಾನ್ನ್ಯವರ್ತತ ।
ಅಥ ಧರ್ಮಸುತಃ ಪ್ರಾಹ ಪರಂ ವಾರಣ ಇತ್ಯಪಿ ॥ ೭೨ ॥

---

ಉಪಾಯವಿಲ್ಲ. ಶತ್ರುವನ್ನು ಧರ್ಮದಿಂದ ಗೆಲ್ಲಲಾಗದಿದ್ದಲ್ಲಿ ಅಧರ್ಮದಿಂದಾದರೂ ಗೆಲ್ಲಬಹುದು" ಎಂದು ಪಾಂಡವರಿಗೆ ತಿಳಿಸಿದನು.

೬೬–೭೧. ಕೇಶವನ ಈ ಮಾತಿನಿಂದ ಪೃಥಾಸುತನಾದ ಭೀಮನು ನಿನ್ನ ತಂದೆಯ ಬಳಿಗೆ ಹೋಗಿ "ದ್ರೋಣನೇ! ನಿನ್ನ ಮಗನಾದ ಅಶ್ವತ್ಥಾಮನು ಯುದ್ಧದಲ್ಲಿ ಮಡಿದನು" ಎಂದು ಸಟಿ ನುಡಿದನು. ದ್ರೋಣನಾತನ ಮಾತನ್ನು ನಿಜವೆಂದಭಿಪ್ರಾಯಪಟ್ಟರೂ ಆತನನ್ನು ನಂಬಲಾರದವನಾಗಿ ಧರ್ಮರಾಜನ ಬಳಿಗೆ ಹೋಗಿ "ಧರ್ಮಪುತ್ರ! ನೀನು ಸತ್ಯವಾದಿಯೆಂದು ಹೆಸರುಗೊಂಡಿರುವೆ. ನನ್ನ ಮಗನಾದ ಅಶ್ವತ್ಥಾಮನು ಕದನದಲ್ಲಿ ಮಡಿದನೆ? ಹೇಳು" ಎಂದು ಕೇಳಿದನು. ಧರ್ಮಪುತ್ರನಿತ್ತ ಅಸತ್ಯಭೀರು ಅತ್ತ ಜಯಾಭಿಲಾಷಿಯಾದುದರಿಂದ ಕಿಂಕರ್ತವ್ಯತಾಮೂಢನಾಗಿ ದೋಲಾಯಮಾನಮನಸ್ಕನಾದನು. ಕಡೆಗೆ ಯುದ್ಧದಲ್ಲಿ ಭೀಮನಿಂದ ಹತವಾದ ಅಶ್ವತ್ಥಾಮವೆಂಬ ಆನೆಯನ್ನು ಕಂಡು "ಅಶ್ವತ್ಥಾಮಾ ಹತೋಯುದ್ಧೇ ಭೀಮೇನಾದ್ಯ ರಣೋಮಹಾನ್" ಎಂದು ಛಲದಿಂದ ದ್ರೋಣನಿಗೆ ಉತ್ತರ ಹೇಳಿದನು.

೭೨. ಅದನ್ನು ಕೇಳಿದೊಡನೆಯೇ ನಿಮ್ಮ ತಂದೆಯು ಶಸ್ತ್ರವನ್ನು ಬಿಟ್ಟು ಯುದ್ಧವನ್ನು ನಿಲ್ಲಿಸಿದನು. ಬಳಿಕ ಧರ್ಮರಾಯನು "ಆದರೆ ಹಾಗೆ ಮಡಿದುದು ಆನೆ 'ಪರಂ ವಾರಣಃ'" ಎಂದು ನುಡಿದನು.

ತ್ಯಕ್ತ್ವಂ ಶಸ್ತ್ರಂ ನ ಗೃಹ್ಣೀಯಾಂ ಯುದ್ಧೇ ಪುನರಿತಿ ಸ್ಮ ಸಃ ।
ಪ್ರತಿಜಜ್ಞೇ ತವ ಪಿತಾ ವತ್ಸ ದ್ರೋಣೋ ಬಲೀ ಪುನಃ ॥ ೭೩ ॥
ಅತಃ ಶಸ್ತ್ರಂ ನ ಜಗ್ರಾಹ ಪ್ರತಿಜ್ಞಾಭಂಗಕಾತರಃ ।
ಧೃಷ್ಟದ್ಯುಮ್ನಂ ತದಾ ದೃಷ್ಟ್ವಾ ಪಿತಾ ತೇ ಮೃತ್ಯುಮಾತ್ಮನಃ ॥ ೭೪ ॥
ಮತ್ವಾ ಪ್ರಾಯೋಪವೇಶೇನ ರಥೋಪಸ್ಥೇ ಸಯೋಗವಿತ್ ।
ಅಶಯಿಷ್ಟ ಸಮಾಧಿಸ್ಥಃ ಪ್ರಾಣಾನಾಯಮ್ಯ ವಾಗ್ಯತಃ ॥ ೭೫ ॥
ತತೋ ನಿರ್ಭಿದ್ಯಮೂರ್ಧಾನಂ ತತ್ಪ್ರಾಣಾ ನಿರ್ಯಯುಃ ಕ್ಷಣಾತ್ ।
ತದಾ ಮೃತಸ್ಯ ದ್ರೋಣಸ್ಯ ವತ್ಸ ಖಡ್ಗೇನ ತಚ್ಛಿರಃ ॥ ೭೬ ॥
ಕೇಶಾನ್ಗೃಹೀತ್ವಾ ಹಸ್ತೇನ ಧೃಷ್ಟದ್ಯುಮ್ನೋಽಚ್ಛಿನದ್ಯುಧಿ ।
ಮಾಽವಧೀರಿತಿ ಪಾರ್ಥಾದ್ಯಾಃ ಪ್ರೋಚುಃ ಸರ್ವೇ ಚ ಸೈನಿಕಾಃ ।
ಸರ್ವೈರ್ನಿವಾರ್ಯಮಾಣೋಽಪಿ ತ್ವತ್ತಾತಂ ಪಾರ್ಶ್ವತೋಽವಧೀತ್ ॥

ಶ್ರೀ ಸೂತ ಉವಾಚ :—

ಪಿತರಂ ನಿಹತಂ ಶ್ರುತ್ವಾ ರುದನ್ದ್ರೌಣಿಶ್ಚಿರಂ ದ್ವಿಜಾಃ ॥ ೭೮ ॥
ಕೋಪೇನ ಮಹತಾ ತತ್ರ ಜ್ವಲನ್ವಾಕ್ಯಮಥಾಽಬ್ರವೀತ್ ।
ಅನೃತಂ ಪ್ರೋಚ್ಯ ಪಿತರಂ ನ್ಯಸ್ತಶಸ್ತ್ರಂ ಚಕಾರ ಯಃ ॥ ೭೯ ॥
ಪಿತರಂ ಮೇಽದ್ಯ ತಂ ಪಾರ್ಥಮಪ್ಯನ್ಯಾನಥ ಪಾಂಡವಾನ್ ।
ಗೃಹೀತ್ವಾ ಕೇಶಪಾಶಂ ಯಸ್ತ್ಯಕ್ತಶಸ್ತ್ರಶಿರೋಽಹನತ್ ॥ ೮೦ ॥

---

೭೩—೭೭. ಶಸ್ತ್ರವನ್ನು ಬಿಟ್ಟ ಬಳಿಕ ಮತ್ತೆ ಮುಟ್ಟೆನೆಂದಲ್ಲವೇ ತಂದೆಯ ಪ್ರತಿಜ್ಞೆ ! ಆದುದರಿಂದ ಮಗೂ! ಪ್ರತಿಜ್ಞಾಭಂಗಕಾರಕನಾದ ನಿಮ್ಮ ತಂದೆಯು ಮತ್ತೆ ಆಯುಧವನ್ನು ಮುಟ್ಟದೆ, ಧೃಷ್ಟದ್ಯುಮ್ನನೇ ತನಗೆ ಮೃತ್ಯುವೆಂಬು ದನ್ನರಿತು ಯೋಗವಿದನಾಗಿ ರಥದಲ್ಲಿ ಪ್ರಾಯೋಪವೇಶ ಮಾಡಿ ಮಲಗಿ ಮೌನಿ ಯಾಗಿ ಪ್ರಾಣಾಯಾಮದಿಂದ ಸಮಾಧಿಮಗ್ನನಾದನು. ಬಳಿಕ ದ್ರೋಣನ ತಲೆಯೊಡೆದು ಪ್ರಾಣಗಳು ಹಾರಿಹೋದವು. ಮಗು! ಆಗ ಪಾಂಡವರೂ, ಸೈನ್ಯದೊಳಗಿನ ಜನರೆಲ್ಲರೂ ಕೊಲ್ಲಬೇಡವೆಂದು ಎಷ್ಟೋ ಹೇಳಿ ತಡೆದರೂ ಕೇಳದೆ, ನಿಲ್ಲದೆ ಧೃಷ್ಟದ್ಯುಮ್ನನು ಖಡ್ಗವನ್ನು ಹಿಡಿದು ನಿಮ್ಮ ತಂದೆಯ ಪಕ್ಕಕ್ಕೆ ಹೋಗಿ ಜುಟ್ಟು ಹಿಡಿದು ಆತನ ಶಿರವನ್ನು ಖಂಡಿಸಿದನು" ಎಂದು ಉಸುರಿದನು.

೭೮—೮೧. ಸೂತನು ಹೇಳುತ್ತಾನೆ:—ತಂದೆಯು ಹತನಾದುದನ್ನು ಕೇಳಿ, ಅಶ್ವತ್ಥಾಮನು ಬಹುವಾಗಿ ಅತ್ತು, ಆ ಬಳಿಕ ಮಹಾಕೋಪದಿಂದ ಉಗ್ರನಾಗಿ "ಯಾವನು ಸುಳ್ಳುನುಡಿದು ನಮ್ಮ ತಂದೆಯನ್ನು ತ್ಯಕ್ತಶಸ್ತ್ರನನ್ನಾಗಿ ಮಾಡಿದನೋ ಆ ಪಾರ್ಥನಾದ ಧರ್ಮರಾಯನನ್ನೂ, ಮಿಕ್ಕ ಪಾಂಡುಪುತ್ರರನ್ನೂ

ಛದ್ಮನಾ ಪಾರ್ಷತಂ ತಂ ಚ ಹನಿಷ್ಯಾಮ್ಯಚಿರಾದಹಂ ।
ಕೃಷ್ಣೇನ ಸಹ ಪಶ್ಯಂತು ಪಾಂಡವಾ ಮತ್ಪರಾಕ್ರಮಂ ॥ ೮೧ ॥
ಇತಿ ದ್ರೌಣಿರ್ದ್ವಿಜಾಸ್ತತ್ರ ಪ್ರತಿಜಜ್ಞೇ ಭಯಂಕರಂ ।
ತತೋಽಸ್ತಂ ಗತ ಆದಿತ್ಯೇ ರಾಜಾನಃ ಸರ್ವ ಏವ ತೇ ॥ ೮೨ ॥
ಉಭಯೇ ನಿಹತೇ ದ್ರೋಣೇ ಪ್ರಾವಿಶನ್ಪಟಮಂಡಪಂ ।
ಅಷ್ಟಾದಶದಿನೈರೇವಂ ನಿವೃತ್ತಮಭವದ್ರಣಂ ॥ ೮೩ ॥
ಶಲ್ಯಂ ಕರ್ಣಂ ತಥಾಽನ್ಯಾಂಶ್ಚ ದುರ್ಯೋಧನಮುಖಾಂಸ್ತತಃ ।
ಧಾರ್ತರಾಷ್ಟ್ರಾನ್ನಿಹತ್ಯಾಜೌ ಧರ್ಮರಾಜೋ ಯುಧಿಷ್ಠಿರಃ ॥ ೮೪ ॥
ಸ್ವೀಯಾನಾಂ ಚ ಪರೇಷಾಂ ಚ ಮೃತಾನಾಂ ಸಾಂಪರಾಯಿಕಂ ।
ಅಕರೋದ್ವಿಧಿವದ್ವಿಪ್ರಾಃ ಸಾರ್ಧಂ ಧೌಮ್ಯಾದಿಭಿರ್ದ್ವಿಜೈಃ ॥ ೮೫ ॥
ವಂದಿತ್ವಾ ಧೃತರಾಷ್ಟ್ರಂ ಚ ಸರ್ವೇ ಸಂಭೂಯ ಪಾಂಡವಾಃ ।
ಧೃತರಾಷ್ಟ್ರಾಽಭ್ಯನುಜ್ಞಾತಾ ಹತಶಿಷ್ಟಜನೈರ್ವೃತಾಃ ॥ ೮೬ ॥
ಸಂಪ್ರಾಪ್ಯ ಹಾಸ್ತಿನಪುರಂ ಪ್ರಾವಿಶಂಸ್ತೇ ಸ್ವಮಂದಿರಂ ।
ತತಃ ಕತಿಪಯಾಽಹಃಸು ಗತೇಷು ಕಿಲ ನಾಗರಾಃ ॥ ೮೭ ॥
ಧೌಮ್ಯಾದಿಮುನಿಭಿಃ ಸಾರ್ಧಂ ಧರ್ಮಜಸ್ಯ ಮಹಾತ್ಮನಃ ।
ರಾಜ್ಯಾಽಭಿಷೇಚನಂ ಕರ್ತುಂ ಪ್ರಾರಭಂತ ಮುನೀಶ್ವರಾಃ ॥ ೮೮ ॥

---

ಶಸ್ತ್ರಹೀನನಾದವನ ಕೂದಲು ಹಿಡಿದು ಮೋಸದಿಂದ ಕತ್ತುಕುಯ್ದನೊ ಆ ಧೃಷ್ಟದ್ಯುಮ್ನನನ್ನೂ ಈ ಕೂಡಲೇ ಧ್ವಂಸಮಾಡುವೆನು. ಪಾಂಡವರಾಗ ಕೃಷ್ಣನೊಡನೆ ನನ್ನ ಪರಾಕ್ರಮವನ್ನು ಕಾಣಲಿ.''

೮೨–೮೫. ಎಂದು ಭಯಂಕರವಾದ ಶಪಥವನ್ನು ಮಾಡಿದನು. ದ್ರೋಣನು ಮಡಿದ ತರುವಾಯ ಸೂರ್ಯನು ಮುಳುಗಲು ಉಭಯಪಕ್ಷದ ರಾಜರೂ ತಮ್ಮ ತಮ್ಮ ಬಿಡದಿಗಳನ್ನು ಸೇರಿದರು. ಆ ಯುದ್ಧವು ಹದಿನೆಂಟು ದಿನಗಳು ನಡೆಯಿತು. ಯುಧಿಷ್ಠಿರನಾದ ಧರ್ಮರಾಜನ ಯುದ್ಧದಲ್ಲಿ ಶಲ್ಯ ಕರ್ಣಾದಿ ವೀರರನ್ನೂ, ದುರ್ಯೋಧನಾದಿ ಧಾರ್ತರಾಷ್ಟ್ರರನ್ನೂ ಕೊಂದು, ಆ ಯುದ್ಧದಲ್ಲಿ ಮಡಿದ ತಮ್ಮವರಿಗೂ, ಇತರರಿಗೂ ಕೂಡ, ಧೌಮ್ಯನೇ ಮೊದಲಾದ ಬ್ರಾಹ್ಮಣರ ಸಹಾಯದಿಂದ ಅಂತ್ಯಸಂಸ್ಕಾರವನ್ನು ಶಾಸ್ತ್ರೋಕ್ತವಾಗಿ ನೆರವೇರಿಸಿದನು.

೮೬–೮೮. ಬಳಿಕ ಪಾಂಡವರೆಲ್ಲರೂ ಒಟ್ಟುಗೂಡಿ ಧೃತರಾಷ್ಟ್ರನಿಗೆರಗಿ, ಆತನ ಅನುಮತಿಯನ್ನು ಪಡೆದು ಹತಶಿಷ್ಟರಾದ ರಾಜರೊಡನೆ ಹಸ್ತಿನಾವತಿಗೆ ಬಂದು ತಮ್ಮ ಗೃಹವನ್ನು ಸೇರಿದನು. ಕೆಲವು ದಿನಗಳು ಕಳೆದ ಬಳಿಕ ಪೌರರು ಮಹಾತ್ಮನಾದ ಧರ್ಮರಾಜನಿಗೆ ಧೌಮ್ಯನಿಂದ ಪಟ್ಟಾಭಿಷೇಕವನ್ನು ಮಾಡಿಸಲು ಪ್ರಯತ್ನಿಸಿದರು.

ರಾಜ್ಯಾಭಿಷೇಚನೇ ತಸ್ಯ ಪ್ರವೃತ್ತೇ ಧರ್ಮಜಸ್ಯತು ।
ಅಶರೀರಾ ತತೋ ವಾಣೀ ಬಭಾಷೇ ಧರ್ಮನಂದನಂ ॥ ೮೯ ॥
ಧರ್ಮಪುತ್ರ ಮಹಾಭಾಗ ರಿಪೂಣಾಮಪಿ ವತ್ಸಲ ।
ರಾಜ್ಯಾಭಿಷೇಕಂ ಮಾ ಕಾರ್ಷೀರ್ನಾರ್ಹಸ್ತ್ವಂ ರಾಜ್ಯಪಾಲನೇ ॥ ೯೦ ॥
ಯತಸ್ತ್ವಂ ಛದ್ಮನಾಽಚಾರ್ಯಮುಕ್ತ್ವಾಸತ್ಯಂ ದ್ವಿಜೋತ್ತಮಂ ।
ನ್ಯಸ್ತಶಸ್ತ್ರಂ ರಣೇ ರಾಜನ್ನಘಾತಯದಲಜ್ಜಕಃ ॥ ೯೧ ॥
ಅತಸ್ತೇ ಪಾಪಬಾಹುಲ್ಯಂ ವಿದ್ಯತೇ ಧರ್ಮನಂದನ ।
ಪ್ರಾಯಶ್ಚಿತ್ತಮಕೃತ್ವಾಽಸ್ಯ ರಾಜ್ಯಪಾಲನಕರ್ಮಣಿ ॥ ೯೨ ॥
ನಾಽರ್ಹತಾ ವಿದ್ಯತೇ ಯಸ್ಮಾತ್ಪ್ರಾಯಶ್ಚಿತ್ತಮತಶ್ಚರ ।
ಇತ್ಯುಕ್ತ್ವಾ ವಿರರಾಮಾಽಥ ಸಾತು ವಾಗಶರೀರಿಣೀ ॥ ೯೩ ॥
ತತೋ ಧರ್ಮಸುತೋ ರಾಜಾ ತದ್ವಾಕ್ಯಂ ಭೃಶಕಾತರಃ ।
ಮೂಢೋಽಹಂ ಸಾಹಸೀ ಕ್ರೂರಃ ಪಿಶುನೋ ಲೋಭಮೋಹಿತಃ ॥ ೯೪ ॥
ತುಚ್ಛರಾಜ್ಯಾಭಿಲಾಷೇಣ ಕೃತವಾನ್ಪಾಪಮೀದೃಶಂ ।
ಏತತ್ಪಾಪವಿಶುದ್ಧ್ಯರ್ಥಂ ಕಿಂ ಕರಿಷ್ಯಾಮಿ ಕಾ ಗತಿಃ ॥ ೯೫ ॥
ಕಿಂ ವಾ ದಾನಂ ಪ್ರದಾಸ್ಯಾಮಿ ಕುತ್ರ ಯಾಸ್ಯಾಮಿ ವಾ ಪುನಃ ।
ಇತಿ ಶೋಕಸಮಾವಿಷ್ಟೇ ತಸ್ಮಿನ್ರಾಜನಿ ಧರ್ಮಜೇ ॥ ೯೬ ॥
ಕೃಷ್ಣದ್ವೈಪಾಯನೋ ವ್ಯಾಸಸ್ಸಮಾಯಾತಸ್ತದಂತಿಕಂ ।
ತತೋಽಭಿವಂದ್ಯ ತಂ ವ್ಯಾಸಂ ಪ್ರತ್ಯುತ್ಥಾಯ ಕೃತಾಂಜಲಿಃ ॥ ೯೭ ॥

---

೮೯–೯೦. ಈ ಬಗೆಯಾಗಿ ಅವರೆಲ್ಲರೂ ಆತನನ್ನು ಪಟ್ಟಕ್ಕೇರಿಸಲು ಸಿದ್ಧರಾದಾಗ ಅಶರೀರವಾಣಿಯೊಂದು ಧರ್ಮರಾಜನನ್ನು ಕುರಿತು, "ಪೂಜ್ಯನಾದ ಧರ್ಮರಾಯನೇ! ನೀನು ಶತ್ರುಗಳಿಗೂ ಇಷ್ಟನಾದವನೇ ಸರಿ. ಆದರೆ ನೀನೀಗ ರಾಜ್ಯಪರಿಪಾಲನಕ್ಕೆ ಅರ್ಹನಲ್ಲ.

೯೧–೯೩. ನೀನು ಸುಳ್ಳುಹೇಳಿ ತ್ಯಕ್ತಶಸ್ತ್ರನೂ, ಬ್ರಾಹ್ಮಣನೂ ಆದ ಗುರುವನ್ನೇ ನಿರ್ಲಜ್ಜನಾಗಿ ಕಪಟದಿಂದ ಸಾಕ್ಷಾತ್ತಾಗಿ ಕೊಲ್ಲಿಸಿದ್ದೀಯೆ. ಆದುದರಿಂದ ಓ ಧರ್ಮಪುತ್ರ! ನಿನ್ನಲ್ಲಿ ಬಹು ದೋಷವಿರುವುದು. ಅದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದೆ ನಿನಗೆ ರಾಜ್ಯಪಾಲನೆಯ ಯೋಗ್ಯತೆಯಿಲ್ಲ. ಆದುದರಿಂದ ಪ್ರಾಯಶ್ಚಿತ್ತವನ್ನು ಮಾಡಿಕೊ" ಎಂದು ನುಡಿದು ಸುಮ್ಮನಾಯಿತು.

೯೪–೯೭. ಬಳಿಕ ಧರ್ಮರಾಯನದನ್ನು ಕೇಳಿ ಬಹಳ ಕಳವಳಗೊಂಡು "ನಾನು ಮೂಢನು; ಹಿಂದುಮುಂದರಿಯದೆ ಕೆಲಸಮಾಡುವ ತಿಳಿಗೇಡಿ; ಕ್ರೂರಿ, ಚಾಡಿಕೋರ, ಆಶಾಪಾತಕಿ; ಅಲ್ಪವಾದ ರಾಜ್ಯದ ಮೇಲಿನ ಆಸೆಯಿಂದ ಇಂತಹ ದುಷ್ಕೃತ್ಯವನ್ನು ಮಾಡಿದೆ! ಈ ಪಾಪವನ್ನು ಕಳೆಯಲೇನು ಮಾಡಲಿ?

ಸಂಪೂಜ್ಯಾರ್ಘ್ಯಾದಿನಾ ವಿಪ್ರಾ ಭಕ್ತಿಯುಕ್ತೇನ ಚೇತಸಾ ।
ಅದೇಹವಾಚಾ ಯತ್ಪ್ರೋಕ್ತಂ ತತ್ಸರ್ವಮಖಿಲೇನ ಸಃ ॥ ೯೮ ॥
ವ್ಯಾಸಾಯ ಶ್ರಾವಯಾಮಾಸ ದುಃಖಿತೋ ಧರ್ಮನಂದನಃ ।
ಶ್ರುತ್ವಾ ತದಖಿಲಂ ವಾಕ್ಯಂ ಧರ್ಮಜಸ್ಯ ಮಹಾಮುನಿಃ ।
ಧ್ಯಾತ್ವಾ ತು ಸುಚಿರಂ ಕಾಲಂ ತತೋ ವಕ್ತುಂ ಪ್ರಚಕ್ರಮೇ ॥ ೯೯ ॥

ವ್ಯಾಸ ಉವಾಚ :—

ಮಾಕಾರ್ಷೀಸ್ತ್ವಂ ಭಯಂ ರಾಜನ್ನುಪಾಯಂ ಪ್ರಬ್ರವೀಮಿ ತೇ ।
ಅಸ್ಯ ಪಾಪಸ್ಯ ಶಾಂತ್ಯರ್ಥಂ ಶ್ರುತ್ವಾಽನುಷ್ಠೀಯತಾಂ ತ್ವಯಾ ॥ ೧೦೦ ॥

ಯುಧಿಷ್ಠಿರ ಉವಾಚ :—

ಕಿಂ ತದ್ಬ್ರೂಹಿ ಮಹಾಯೋಗಿನ್ಪಾರಾಶರ್ಯ ಕೃಪಾನಿಧೇ ।
ಯೇನ ಮೇ ಪಾಪನಾಶಃಸ್ಯಾದಚಿರಾತ್ತದ್ವದಾಽಧುನಾ ॥ ೧೦೧ ॥

ವ್ಯಾಸ ಉವಾಚ :—

ದಕ್ಷಿಣಾಂಭೋನಿಧೌ ಸೇತೌ ಗಂಧಮಾದನಪರ್ವತೇ ॥ ೧೦೨ ॥
ರಾಮಸೇತೌ ಮಹಾರಾಜ ರಾಮತೀರ್ಥಮಿತಿ ಶ್ರುತಂ ।
ಅಸ್ತಿ ಪುಣ್ಯಂ ಸರಃ ಸಿದ್ಧಂ ಮಹಾಪಾತಕನಾಶನಂ ॥ ೧೦೩ ॥

---

ಎಲ್ಲಿಗೆ ಹೋಗಲಿ? ಏನು ಗತಿ? ಯಾವ ದಾನವನ್ನು ಮಾಡಲಿ?'' ಎಂದು ಗೋಳಾಡುತ್ತಿರುವಲ್ಲಿ ಕೃಷ್ಣದ್ವೈಪಾಯನಮುನಿಯು ಆತನ ಬಳಿಗೆ ಬಂದನು. ಆಗ ಧರ್ಮಜನು ಆತನನ್ನು ಎದುರುಗೊಂಡು, ಕೈಮುಗಿದು ಕರೆತಂದು ಅರ್ಘ್ಯ ಪಾದ್ಯಾದಿಗಳಿಂದ ಭಕ್ತಿಯಿಂದ ಪೂಜಿಸಿ ಅಶರೀರವಾಣಿಯು ನುಡಿದೆಲ್ಲವನ್ನೂ ಬಹಳ ದುಃಖದಿಂದ ಆತನಲ್ಲಿ ಹೇಳಿಕೊಂಡನು. ವ್ಯಾಸಮಹರ್ಷಿಯು ಅದೆಲ್ಲ ವನ್ನೂ ಕೇಳಿ ಬಹಳಹೊತ್ತು ಧ್ಯಾನನಿಮಗ್ನನಾಗಿದ್ದು ಬಳಿಕ ಇಂತೆಂದನು.

೧೦೦. ವ್ಯಾಸನು ಹೇಳುತ್ತಾನೆ:—'' ಧರ್ಮರಾಜ! ಹೆದರಬೇಡ; ಅದಕ್ಕೆ ತಕ್ಕ ಉಪಾಯವನ್ನು ಹೇಳುವೆನು. ಈ ಪಾಪನಿವೃತ್ತಿಗಾಗಿ ಅದನ್ನು ಮಾಡು.''

೧೦೧. ಯುಧಿಷ್ಠಿರನು ಕೇಳುತ್ತಾನೆ:—''ಎಲೈ ಪರಾಶರಪುತ್ರನೇ! ಮಹಾನುಭಾವನಾದ ನೀನು ಕೃಪಾನಿಧಿಯು. ಯಾವುದರಿಂದ ನನಗೀಪಾಪವು ಬೇಗನೆ ತೊಲಗುವುದೊ ಆ ಉಪಾಯವನ್ನೀಗಲೇ ಅಪ್ಪಣೆಕೊಡಿಸು.

೧೦೨—೧೦೩. ವ್ಯಾಸನು ಹೇಳುತ್ತಾನೆ:—''ಮಹಾರಾಜ! ದಕ್ಷಿಣಸಮುದ್ರ ದಲ್ಲಿ ಸೇತುವಾಗಿರುವ ಗಂಧಮಾದನಪರ್ವತವಿರುವುದು. ಅದರಲ್ಲಿ ರಾಮ ತೀರ್ಥವೆಂದು ಹೆಸರುಪಡೆದ ಪಾಪನಾಶಕವಾದ ಪುಣ್ಯಸರೋವರವೊಂದು ಇರುವುದು.

ಯಸ್ಯ ದರ್ಶನಮಾತ್ರೇಣ ಮಹಾಪಾತಕಕೋಟಯಃ ।
ಪ್ರಯಾಂತಿ ವಿಲಯಂ ಸದ್ಯಸ್ತಮಃ ಸೂರ್ಯೋದಯೇ ಯಥಾ ॥ ೧೦೪ ॥
ರಾಮತೀರ್ಥಂ ಯದಾ ಪಶ್ಯೇತ್ಸ್ವಯಂ ರಾಮೇಣ ನಿರ್ಮಿತಂ ।
ತದೈವ ಬ್ರಹ್ಮಹತ್ಯಾಯಾ ಮುಚ್ಯತೇ ನಾತ್ರ ಸಂಶಯಃ ॥ ೧೦೫ ॥
ತತ್ರ ಗತ್ವಾ ಮಹಾರಾಜ ರಾಮತೀರ್ಥೇ ವಿಮುಕ್ತಿದೇ ।
ಸ್ನಾಹಿ ತೇ ಪಾಪಶುದ್ಧಿಃ ಸ್ಯಾದ್ರಾಜ್ಯರಕ್ಷಾರ್ಹತಾಽಪಿ ಚ ॥ ೧೦೬ ॥
ದಾನಂ ಕುರುಷ್ವ ತತ್ತೀರೇ ಗೋಭೂಮಿತಿಲವಾಸಸಾಂ ।
ಸುವರ್ಣರಜತಾನಾಂ ಚ ದಾನಂ ಕುರು ಯುಧಿಷ್ಠಿರ ।
ಅವಶ್ಯಮೇತತ್ಪಾಪಾನಾಂ ಶುದ್ಧಿಸ್ತೇನ ಚಿರಾದ್ಭವೇತ್ ॥ ೧೦೭ ॥

ಶ್ರೀ ಸೂತ ಉವಾಚ :—

ವ್ಯಾಸೇನ ಧರ್ಮಪುತ್ರೋಽಯಮೇವಮುಕ್ತೋ ದ್ವಿಜೋತ್ತಮಾಃ ॥
ತತ್ಕ್ಷಣೇನೈವ ಧೌಮ್ಯೇನ ಸಹಿತಃ ಸಾನುಜಸ್ತದಾ ।
ಸಹದೇವಂ ಪ್ರತಿಷ್ಠಾಪ್ಯ ರಾಜ್ಯೇ ಧರ್ಮಾತ್ಮಜಸ್ತದಾ ॥ ೧೦೯ ॥
ರಾಮಸೇತುಂ ಸಮುದ್ದಿಶ್ಯ ಪ್ರತಸ್ಥೇ ವಾಹನಂ ವಿನಾ ।
ದಿನೈಃ ಕತಿಪಯೈರೇವ ರಾಮಸೇತುಂ ಜಗಾಮ ಸಃ ॥ ೧೧೦ ॥
ರಾಮತೀರ್ಥಂ ಸಮಾಸಾದ್ಯ ಧೌಮ್ಯೇನ ಸಹ ಪಾಂಡವಃ ।
ಪುರೋಹಿತೋಕ್ತಮಾರ್ಗೇಣ ಸಂಕಲ್ಪ್ಯ ವಿಧಿಪೂರ್ವಕಂ ॥ ೧೧೧ ॥

---

೧೦೪–೧೦೫. ಅದರ ದರ್ಶನದಿಂದ ಸಮಸ್ತ ಪಾಪಗಳೂ, ಸೂರ್ಯೋದಯದಲ್ಲಿ ಕತ್ತಲಂತೆ ತಾವಾಗಿಯೇ ನಾಶಹೊಂದುವುವು. ಅಂತಹ ರಾಮನಿರ್ಮಿತವಾದ ತೀರ್ಥವನ್ನು ನೋಡುವಾಗಲೇ ನಿನ್ನ ಬ್ರಹ್ಮಹತ್ಯಾಪಾತಕವು ತೊಲಗುವುದರಲ್ಲಿ ಸಂಶಯವಿಲ್ಲ.

೧೦೬. ಮಹಾರಾಜ! ನೀನಲ್ಲಿಗೆ ಹೋಗಿ ಮುಕ್ತಿದಾಯಕವಾದ ಆ ರಾಮತೀರ್ಥದಲ್ಲಿ ಸ್ನಾನಮಾಡು. ಅದರಿಂದ ಪಾಪಶುದ್ಧಿಯೂ, ರಾಜ್ಯಾರ್ಹತೆಯೂ ಸಿದ್ಧಿಸುವುದು.

೧೦೭. ಅದರ ತೀರದಲ್ಲಿ ಗೋಭೂತಿಲಾದಿ ದಶದಾನಗಳನ್ನೂ ಮಾಡು. ನಿಸ್ಸಂಶಯವಾಗಿಯೂ ಬೇಗನೆ ಶುದ್ಧನಾಗುವೆ."

೧೦೮–೧೧೦. ಸೂತನು ಹೇಳುತ್ತಾನೆ :—ದ್ವಿಜೋತ್ತಮರೇ! ಈ ಬಗೆಯಾಗಿ ವ್ಯಾಸನಿಂದ ನಿಯುಕ್ತನಾದ ಧರ್ಮರಾಯನು ಸಹದೇವನನ್ನು ರಾಜ್ಯದಲ್ಲಿ ಇರಿಸಿ ಮಿಕ್ಕ ತಮ್ಮಂದಿರೊಡನೆ ಕೂಡಿದವನಾಗಿ ಧೌಮ್ಯನೊಡನೆ ಪಾದಚಾರಿಯಾಗಿಯೇ ರಾಮಸೇತುವಿಗೆ ತೆರಳಿ ಕೆಲವು ದಿನಗಳಲ್ಲಿಯೇ ಅಲ್ಲಿಗೆ ಸೇರಿದನು.

೧೧೧–೧೧೨. ಬಳಿಕ ಅವರೆಲ್ಲರೊಂದಿಗೂ ರಾಮತೀರ್ಥಕ್ಕೆ ಹೋಗಿ

ಸಸ್ನೌ ರಾಮಸರಸ್ತೀರ್ಥೇ ಪುಣ್ಯೇ ಪಾಪವಿನಾಶನೇ ।
ಸ್ನಾತ್ವಾಚಮ್ಯ ವಿಶುದ್ಧಾತ್ಮಾ ಕ್ಷೇತ್ರಪಿಂಡಂ ಪ್ರದಾಯ ಚ ॥ ೧೧೨ ॥
ವ್ಯಾಸೋಕ್ತಾಽಖಿಲದಾನಾನಿ ಪ್ರದದೌ ಸ ಯುಧಿಷ್ಠಿರಃ ।
ಮಾಸಮೇಕಂ ನಿರಾಹಾರಃ ಸಸ್ನೌ ತತ್ರ ಸ ಧರ್ಮಜಃ ॥ ೧೧೩ ॥
ಪ್ರತ್ಯಹಂ ಚ ದದೌ ದಾನಂ ವಿತ್ತಲೋಭಂ ವಿನಾ ದ್ವಿಜಾಃ ।
ಏಕಮಾಸೇ ಗತೇ ತ್ವೇವಂ ಕಸ್ಮಿಂಶ್ಚಿದ್ದಿವಸೇ ತತಃ ॥ ೧೧೪ ॥
ಆಹ ಧರ್ಮಾತ್ಮಜಂ ವಾಣೀ ಪುನರಪ್ಯಶರೀರಿಣೀ ।
ರಾಜಂಸ್ತೇ ವಿಲಯಂ ಯಾತಂ ಸರ್ವಂ ಪಾಪಂ ಯುಧಿಷ್ಠಿರ ॥ ೧೧೫ ॥
ಛಲೇನಾಽಸತ್ಯವಚಸಾದಾಚಾರ್ಯಸ್ಯ ವಧೇನ ಯಃ ।
ದೋಷಸ್ತೇ ಸಮಭೂತ್ಪೂರ್ವಂ ಸೋಽಪಿ ನಷ್ಟಃ ಪರಂತಪ ॥ ೧೧೬ ॥
ಯಾಹಿ ಸ್ವಂ ನಗರಂ ರಾಜನ್ಗತ್ವಾ ಪಾಲಯ ಮೇದಿನೀಂ ।
ಅಭಿಷೇಚಯ ಚಾತ್ಮಾನಂ ರಾಜ್ಯರಕ್ಷಾಽರ್ಹತಾಽಸ್ತಿ ತೇ ॥ ೧೧೭ ॥
ಇತ್ಯುಕ್ತ್ವಾ ವಿರರಾಮಾಽಥ ಸಾಽಪಿ ವಾಗಶರೀರಿಣೀ ।
ತತೋ ಧರ್ಮಾತ್ಮಜಃ ಪ್ರೀತಸ್ತಾಮುದ್ದಿಶ್ಯ ದಿಶಂ ಪ್ರತಿ ॥ ೧೧೮ ॥
ನಮಸ್ಕೃತ್ವಾಽಶರೀರಿಣ್ಯೈ ತಸ್ಯೈ ವಾಚೇ ಸಹಾಽನುಜಃ ।
ಪ್ರಯಯೌ ಹಾಸ್ತಿನಪುರಂ ಸುಪ್ರೀತೇನಾಂತರಾತ್ಮನಾ ॥ ೧೧೯ ॥

---

ಪುರೋಹಿತನು ಹೇಳಿದ ರೀತಿಯಲ್ಲಿ ಸಂಕಲ್ಪಪೂರ್ವಕವಾಗಿ ಪುಣ್ಯವಾದ ಆ ರಾಮತೀರ್ಥದಲ್ಲಿ ಸ್ನಾನಾಚಮನಗಳನ್ನು ಮಾಡಿ ಶುದ್ಧನಾಗಿ ಕ್ಷೇತ್ರಪಿಂಡ ಪ್ರದಾನವನ್ನು ಮಾಡಿದನು.

೧೧೩–೧೧೬. ವ್ಯಾಸನು ಹೇಳಿದ ಸಮಸ್ತ ದಾನಗಳನ್ನೂ ಮಾಡಿದನು. ಈ ಬಗೆಯಾಗಿ ನಿರಾಹಾರಿಯಾಗಿ ಒಂದು ತಿಂಗಳು ಕಾಲ ಅದರಲ್ಲಿ ಸ್ನಾನ ಮಾಡುತ್ತ ವಿತ್ತಲೋಪವಿಲ್ಲದಂತೆ ದಾನಗಳನ್ನು ಮಾಡುತ್ತಿದ್ದನು. ಒಂದು ತಿಂಗಳು ಕಳೆದ ತರುವಾಯ ಒಂದು ದಿನ ಅಶರೀರವಾಣಿಯು "ರಾಜನಾದ ಯುಧಿಷ್ಠಿರನೇ! ನಿನ್ನ ಸರ್ವ ಪಾಪಗಳೂ ನಾಶಹೊಂದಿದವು. ಕಪಟದಿಂದ ಅಸತ್ಯವನ್ನು ನುಡಿದು ಆಚಾರ್ಯನನ್ನು ಕೊಂದು ಆವ ಪಾತಕವನ್ನು ಗಳಿಸಿದ್ದೆಯೊ ಅದೂ ತೊಲಗಿತು.

೧೧೭. ಶತ್ರುಭೀಕರನಾದ ಎಲೈ ಧರ್ಮಜನೇ! ನೀನೀಗ ನಿನ್ನ ಪಟ್ಟಣಕ್ಕೆ ತೆರಳು. ರಾಜ್ಯಪರಿಪಾಲನೆಯ ಯೋಗ್ಯತೆಯುಂಟಾಗಿರುವುದರಿಂದ ಪಟ್ಟಾಭಿಷೇಕವನ್ನು ಮಾಡಿಕೊಂಡು ರಾಜ್ಯವನ್ನಾಳು."

೧೧೮–೧೨೨. ಎಂದು ಮತ್ತೆ ನುಡಿದು ಸುಮ್ಮನಾಯಿತು. ಬಳಿಕ ಧರ್ಮಪುತ್ರನು ಸಂತುಷ್ಟನಾಗಿ ಅಶರೀರವಾಣಿಯು ನುಡಿದ ಕಡೆಗೆ ತಿರುಗಿ, ಅದಕ್ಕೆ

ಅಭಿಷಿಕ್ತೋಽಥ ರಾಜ್ಯೇಽಸೌ ಪಾಲಯಾಮಾಸ ಮೇದಿನೀಂ ।
ಇತ್ಥಂ ಧರ್ಮಾತ್ಮಜೋ ವಿಪ್ರಾ ರಾಮತೀರ್ಥನಿಮಜ್ಜನಾತ್ ॥ ೧೨೦ ॥
ಗತಪಾಪೋ ವಿಶುದ್ಧಾತ್ಮಾ ಯೋಗ್ಯೋಽಭೂದ್ರಾಜ್ಯರಕ್ಷಣೇ ।
ಏವಂ ವಃ ಕಥಿತಂ ಚಿತ್ರಂ ರಾಮತೀರ್ಥಸ್ಯ ವೈಭವಂ ॥ ೧೨೧ ॥
ಸರ್ವಪಾಪಹರಂ ಪುಣ್ಯಂ ಭುಕ್ತಿ ಮುಕ್ತಿ ಪ್ರದಾಯಕಂ ।
ಯತ್ರ ಸ್ನಾನಾದ್ವಿಮುಕ್ತೋಽಭೂನ್ಮಿಥ್ಯಾದೋಷಾತ್ಸಧರ್ಮಜಃ ॥ ೧೨೨ ॥
ಪಠಂತಿ ಯೇಽಧ್ಯಾಯಮಿದಂ ದ್ವಿಜೋತ್ತಮಾಃ
ಶೃಣ್ವಂತಿ ವಾ ಯೇ ಮನುಜಾ ವಿಪಾತಕಾಃ ।
ಯಾಸ್ಯಂತಿ ಕೈಲಾಸಮನನ್ಯಲಭ್ಯಂ
ಗತ್ವಾ ನ ಸಂಯಾಂತಿ ಪುನಶ್ಚ ಜನ್ಮ ॥ ೧೨೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ರಾಮತೀರ್ಥಪ್ರಶಂಸನಂ— ಧರ್ಮಪುತ್ರಮಿಥ್ಯಾಕಥನದೋಷಶಾಂತಿವರ್ಣನಂ "ನಾಮಾಷ್ಟಾದಶೋಽಧ್ಯಾಯಃ

---

ಎರಗಿ ತಮ್ಮಂದಿರೊಡನೆ ಸಂತೋಷದಿಂದ ಹಸ್ತಿನಾಪುರಿಗೆ ತೆರಳಿ, ಪಟ್ಟಾಭಿಷಿಕ್ತನಾಗಿ ರಾಜ್ಯವಾಳುತ್ತಿದ್ದನು. ಎಲೈ ಬ್ರಾಹ್ಮಣರೆ! ಈ ಬಗೆಯಾಗಿ ಧರ್ಮರಾಜನು ರಾಮತೀರ್ಥಸ್ನಾನದಿಂದ ಪಾಪವನ್ನು ಕಳೆದುಕೊಂಡು ಶುದ್ಧನಾಗಿ ರಾಜ್ಯಪರಿಪಾಲನೆಗೆ ಅರ್ಹನಾದನು. ಯಾವುದರ ನಿಮಜ್ಜನದಿಂದ ಧರ್ಮರಾಜನು ಮಿಥ್ಯಾವಚನದಿಂದ ವಿಮುಕ್ತನಾದನೊ ಅಂತಹ ಭುಕ್ತಿಮುಕ್ತಿದಾಯಕವೂ, ಸರ್ವಪಾಪಹರವೂ ಆದ ಶ್ರೀರಾಮತೀರ್ಥದ ವೈಭವವಿಂತಹುದು.

೧೨೩. ಯಾರು ಈ ಅಧ್ಯಾಯವನ್ನು ಓದುವರೊ, ಯಾರು ಕೇಳುವರೊ ಅವರೆಲ್ಲರೂ ಪಾಪಶುದ್ಧರಾಗಿ, ಹೆರರಿಗೆಟುಕದಂತಹ ಕೈಲಾಸವನ್ನು ಹೊಂದಿ ಮತ್ತೆ ಜನನಕ್ಲೇಶವನ್ನು ಅನುಭವಿಸುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ರಾಮತೀರ್ಥಪ್ರಶಂಸನ—ಧರ್ಮಪುತ್ರನ ಮಿಥ್ಯಾಕಥನದೋಷಶಾಂತಿವರ್ಣನ" ವೆಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನವಿಂಶೋಽಧ್ಯಾಯಃ

### ಲಕ್ಷ್ಮಣತೀರ್ಥಪ್ರಶಂಸನಂ—ಬಲಭದ್ರಬ್ರಹ್ಮಹತ್ಯಾವಿಮೋಕ್ಷಣಂ

ಶ್ರೀ ಸೂತ ಉವಾಚ :—

ತಾರಕ ಬ್ರಹ್ಮಣಸ್ತಸ್ಯ ತೀರ್ಥೇ ಸ್ನಾತ್ವಾ ದ್ವಿಜೋತ್ತಮಾಃ ।
ಲಕ್ಷ್ಮಣಸ್ಯ ತತಸ್ತೀರ್ಥಮಭಿಗಚ್ಛೇತ್ಸಮಾಹಿತಃ ॥ ೧ ॥
ಶ್ರೀ ಲಕ್ಷ್ಮಣಸ್ಯ ತೀರ್ಥೇ ತು ಸ್ನಾತ್ವಾ ಪಾಪೈರ್ವಿನೋಚಿತಾಃ ।
ಮುಕ್ತಿಂ ಪ್ರಯಾಂತಿ ವಿಮಲಾಮಪುನರ್ಭವಲಕ್ಷಣಾತ್ ॥ ೨ ॥
ಸ್ನಾನಾಲ್ಲಕ್ಷ್ಮಣ ತೀರ್ಥೇತು ದಾರಿದ್ರ್ಯಂ ನಶ್ಯತೇಽಖಿಲಂ ।
ಆಯುಷ್ಮಾನ್ಗುಣವಾನ್ವಿದ್ವಾನ್ಪುತ್ರಶ್ಚೈವಾಽಸ್ಯ ಜಾಯತೇ ॥ ೩ ॥
ಕೂಲೇ ಲಕ್ಷ್ಮಣ ತೀರ್ಥಸ್ಯ ತನ್ಮಂತ್ರಂ ಜಪತೇ ತು ಯಃ ।
ಸ ಸರ್ವಶಾಸ್ತ್ರವೇತ್ತಾಸ್ಯಾಚ್ಚತುರ್ವೇದವಿದಪ್ಯಸೌ ॥ ೪ ॥
ತಸ್ಯ ಕೂಲೇ ಮಹಲ್ಲಿಂಗಂ ಸ್ಥಾಪಯಾಮಾಸ ಲಕ್ಷ್ಮಣಃ ।
ತತ್ರ ತೀರ್ಥೇ ತು ಯಃ ಸ್ನಾತ್ವಾ ಸೇವತೇ ಲಕ್ಷ್ಮಣೇಶ್ವರಂ ॥ ೫ ॥

---

## ಕನ್ನಡದ ಅನುವಾದ

### ಲಕ್ಷ್ಮಣತೀರ್ಥಪ್ರಶಂಸನ—ಬಲಭದ್ರಬ್ರಹ್ಮಹತ್ಯಾವಿಮೋಕ್ಷಣ

೧. ಸೂತನು ಹೇಳುತ್ತಾನೆ:— ದ್ವಿಜೋತ್ತಮರೇ! ತಾರಕಬ್ರಹ್ಮನಾದ ಶ್ರೀರಾಮತೀರ್ಥದಲ್ಲಿ ಸ್ನಾನಮಾಡಿದ ಬಳಿಕ ಮಾನವನು ಸಮಾಹಿತನಾಗಿ ಶ್ರೀಲಕ್ಷ್ಮಣತೀರ್ಥಕ್ಕೆ ಹೋಗಬೇಕು.

೨. ಶ್ರೀಲಕ್ಷ್ಮಣತೀರ್ಥದಲ್ಲಿ ಸ್ನಾನಮಾಡಿದವರು ಪುನರ್ಜನ್ಮರಹಿತವೂ, ಶ್ರೇಷ್ಠವೂ ಆದ ಮುಕ್ತಿಯನ್ನು ಹೊಂದುತ್ತಾರೆ.

೩. ಲಕ್ಷ್ಮಣತೀರ್ಥದ ಸ್ನಾನದಿಂದ ಬಡತನವೆಲ್ಲವೂ ತೊಲಗುವುದು. ಆಯುಷ್ಮಂತನೂ, ಗುಣವಂತನೂ, ವಿದ್ವಾಂಸನೂ ಆಗುತ್ತಾನಲ್ಲದೆ ಪುತ್ರ ವಂತನೂ ಆಗುವನು.

೪. ಲಕ್ಷ್ಮಣತೀರ್ಥದ ದಡದಲ್ಲಿ ಶ್ರೀಲಕ್ಷ್ಮಣಮಂತ್ರವನ್ನು ಜಪಿಸುವವನು ಸಕಲಶಾಸ್ತ್ರವಿದನೂ, ಚತುರ್ವೇದಪಾರಂಗತನೂ ಆಗುವನು.

೫–೬. ಅದರ ದಡದಲ್ಲಿ ಶ್ರೀಲಕ್ಷ್ಮಣಸ್ವಾಮಿಯು ಪ್ರತಿಷ್ಠಿಸಿದ ಲಿಂಗವನ್ನು ಸೇವಿಸಿದವರು ಈ ಲೋಕದಲ್ಲಿ ಬಡತನದ ಬೇನೆಗಳಿಲ್ಲದವರಾಗಿ ಸಂಸಾರದಿಂದ ಮುಕ್ತರಾಗುವರು. ಎಲೈ ವಿಪ್ರರೇ! ಹಿಂದೆ ಬಲರಾಮನು ಲಕ್ಷ್ಮಣ

ಇಹ ದಾರಿದ್ರ್ಯರೋಗಾಭ್ಯಾಂ ಸಂಸಾರಾಚ್ಚ ವಿಮುಚ್ಯತೇ ।
ಸ್ನಾತ್ವಾ ಲಕ್ಷ್ಮಣತೀರ್ಥೇತು ಸೇವಿತ್ವಾ ಲಕ್ಷ್ಮಣೇಶ್ವರಂ ।
ಬಲಭದ್ರಃ ಪುರಾ ವಿಪ್ರಾ ಮುಮುಚೇ ಬ್ರಹ್ಮಹತ್ಯಯಾ ॥ ೬ ॥

ಋಷಯ ಊಚುಃ:—

ಬ್ರಹ್ಮಹತ್ಯಾ ಕಥಮಭೂದ್ರೌಹಿಣೇಯಸ್ಯ ಸೂತಜ ।
ಕಥಂಚಾತ್ರ ವಿನಷ್ಟಾ ಸಾ ತನ್ನೋ ಬ್ರೂಹಿ ಮಹಾಮುನೇ ॥ ೭ ॥

ಶ್ರೀ ಸೂತ ಉವಾಚ :—

ಶೇಷಾವತಾರೋ ಭಗವಾನ್ಬಲಭದ್ರಃ ಪುರಾ ದ್ವಿಜಾಃ ॥ ೮ ॥
ಕುರೂಣಾಂ ಪಾಂಡವಾನಾಂ ಚ ಯುದ್ಧೋದ್ಯೋಗಂ ವಿಲೋಕ್ಯ ತು ।
ಬಂಧೂನಾಂ ಸ ವಧಂ ಸೋಢುಮಸಮರ್ಥೋ ಹಲಾಯುಧಃ ॥ ೯ ॥
ವಿಚಾರಮೇವಮಕರೋದ್ಬಲಭದ್ರೋ ಮಹಾಮತಿಃ ।
ಯದ್ಯಹಂ ಕುರುರಾಜಸ್ಯ ಕರಿಷ್ಯಾಮಿ ಸಹಾಯತಾಂ ॥ ೧೦ ॥
ಕೋಪಃ ಸ್ಯಾತ್ಪಾಂಡುಪುತ್ರಾಣಾಂ ಮಯ್ಯನಾರ್ಯೈಃ ಸುದಾರುಣಃ ।
ಉಪಕಾರಂ ಕರಿಷ್ಯಾಮಿ ಪಾಂಡವಾನಾಮಹಂ ಯದಿ ॥ ೧೧ ॥
ದುರ್ಯೋಧನಸ್ಯ ಕೋಪಃ ಸ್ಯಾದಿತಿ ಬುದ್ಧ್ವಾ ಹಲಾಯುಧಃ ।
ತೀರ್ಥಯಾತ್ರಾಚ್ಛಲೇನಾಽಸೌ ಮಧ್ಯಸ್ಥಃ ಪ್ರಯಯೌ ತದಾ ॥ ೧೨ ॥
ಪ್ರಭಾಸಮಭಿಗಮ್ಯಾಽಥ ಸ್ನಾತ್ವಾ ಸಂಕಲ್ಪಪೂರ್ವಕಂ ।
ದೇವಾನೃಷೀನ್ಪಿತೃಗಣಾಂಸ್ತರ್ಪಯಾಮಾಸ ವಾರಿಣಾ ॥ ೧೩ ॥

---

ತೀರ್ಥದಲ್ಲಿ ಸ್ನಾನಮಾಡಿ, ಲಕ್ಷ್ಮಣೇಶ್ವರನನ್ನು ಸೇವಿಸಿ ಬ್ರಹ್ಮಹತ್ಯೆಯಿಂದ ಬಿಡುಗಡೆ ಹೊಂದಿದನು.

೭. ಋಷಿಗಳು ಕೇಳುತ್ತಾರೆ:—ಎಲೈ ಸೂತಪುತ್ರನೇ! ರೋಹಿಣೇಸುತನಾದ ಬಲರಾಮನಿಗೆ ಬ್ರಹ್ಮಹತ್ಯೆಯು ಹೇಗೆ ಬಂದಿತು? ಅದು ಇಲ್ಲಿ ಪರಿಹಾರವಾದುದು ಹೇಗೆ? ಎಲೈ ಮಹಾಮುನಿಯೇ! ಅದನ್ನೆಮಗೆ ತಿಳಿಸು.

೮-೧೨. ಸೂತನು ಹೇಳುತ್ತಾನೆ:— ಎಲೈ ಬ್ರಾಹ್ಮಣರೆ! ಆದಿಶೇಷನ ಅವತಾರವಾದ ಬಲರಾಮನು, ಹಿಂದೆ ಕುರುಪಾಂಡವರಿಗೆ ಯುದ್ಧವೊದಗಿದುದನ್ನು ಕಂಡು, ಬಂಧುಸಂಹಾರವನ್ನು ಸಹಿಸದೆ, ಬಹು ಬುದ್ಧಿಶಾಲಿಯಾದುದರಿಂದ ಈ ರೀತಿ ಯೋಚಿಸಿದನು: "ನಾನೀಗ ಕುರುಪತಿಗೆ ಸಹಾಯಮಾಡಿದಲ್ಲಿ ಪಾಂಡವರಿಗೆ ನನ್ನಮೇಲೆ ಅತಿ ಕೋಪವುಂಟಾಗುವುದು. ಪಾಂಡವರಿಗುಪಕಾರ ಮಾಡಿದಲ್ಲಿ ದುರ್ಯೋಧನನಿಗೆ ಕೋಪಬರುವುದು" ಎಂದು ಚಿಂತಿಸಿ ತೀರ್ಥಯಾತ್ರೆಯ ನೆಪವನ್ನು ಮಾಡಿಕೊಂಡು ತಟಸ್ಥನಾಗಿ ಹೊರಹೊರಟನು.

೧೩. ಬಳಿಕ ಪ್ರಭಾಸತೀರ್ಥಕ್ಕೆ ಹೋಗಿ ಅಲ್ಲಿ ಸಂಕಲ್ಪಪೂರ್ವಕವಾಗಿ ಮಿಂದು ಆ ನೀರಿನಿಂದ ದೇವರ್ಷಿಪಿತೃತರ್ಪಣವನ್ನು ಮಾಡಿದನು.

ಸರಸ್ವತೀಂ ತತಃ ಪ್ರಾಯಾತ್ಪ್ರತೀಚ್ಯಭಿಮುಖಾಂ ಹಲೀ ।
ಪೃಥೂದಕಂ ಬಿಂದುಸರೋ ಮುಕ್ತಿದಂ ಬ್ರಹ್ಮತೀರ್ಥಕಂ ॥ ೧೪ ॥
ಗಂಗಾಂ ಚ ಯಮುನಾಂ ಸಿಂಧುಂ ಶತದ್ರೂಂ ಚ ಸುದರ್ಶನಂ ।
ಸಂಪ್ರಾಪ್ಯ ಬಲಭದ್ರೋಽಯಂ ಸ್ನಾತ್ವಾ ತೀರ್ಥೇಷು ಧರ್ಮತಃ ॥ ೧೫ ॥
ಪ್ರಪೇದೇ ನೈಮಿಷಾರಣ್ಯಂ ಮುನೀಂದ್ರೈರಭಿಸೇವಿತಂ ।
ಆಗತಂ ತಂ ವಿಲೋಕ್ಯಾಽಥ ನೈಮಿಷೀಯಾಸ್ತಪಸ್ವಿನಃ ॥ ೧೬ ॥
ದೀರ್ಘಸತ್ರೇ ಸ್ಥಿತಾಃ ಸಮ್ಯಙ್ನಿಯತಾ ಧರ್ಮತತ್ಪರಾಃ ।
ಅಭ್ಯುದ್ಗಮ್ಯ ಯದುಶ್ರೇಷ್ಠಂ ಪ್ರಣಮ್ಯೋತ್ಥಾಯ ಚಾಸನಾತ್ ॥ ೧೭ ॥
ಆಪೂಜಯನ್ನಿಷ್ಟರಾದ್ಯೈಃ ಕಂದಮೂಲಫಲೈಸ್ತಥಾ ।
ಆಸನಂ ಪರಿಗೃಹ್ಯಾಽಯಂ ಪೂಜಿತಃ ಸ ಪುರಸ್ಸರಃ ॥ ೧೮ ॥
ಉಚ್ಚಾಸನೇ ಸ್ಥಿತಂ ಸೂತಮನಮಂತಮನುತ್ಥಿತಂ ।
ಅಕೃತಾಂಜಲಿಮಾಸೀನಂ ವ್ಯಾಸಶಿಷ್ಯಂ ವಿಲೋಕ್ಯ ಸಃ ॥ ೧೯ ॥
ವಿಪ್ರಾಂಶ್ಚಾಽನಮತೋ ದೃಷ್ಟ್ವಾ ವಿಲೋಕ್ಯಾತ್ಮಾನಮಾಗತಂ ।
ಚುಕ್ರೋಧ ರೋಹಿಣೀಸೂನುಃ ಸೂತಂ ಪೌರಾಣಿಕೋತ್ತಮಂ ॥ ೨೦ ॥
ಮಧ್ಯೇ ಮುನೀನಾಂ ಸೂತೋಽಯಂ ಕಸ್ಮಾನ್ನಿಂದ್ಯೋಽನುಲೋಮಜಃ ।
ಉಚ್ಚಾಸನೇ ಸಮಧ್ಯಾಸ್ತೇ ನ ಯುಕ್ತಮಿದಮಂಜಸಾ ॥ ೨೧ ॥

---

೧೪–೧೫. ತರುವಾಯ ಹಲಾಯುಧನು ಪಶ್ಚಿಮದಿಕ್ಕಿನಲ್ಲಿ ಪ್ರವಹಿಸುತ್ತಿರುವ ಸರಸ್ವತೀನದಿಯನ್ನೂ, ಬಹುಜಲವುಳ್ಳ ಪ್ರಭಾಸತೀರ್ಥವನ್ನೂ, ಮುಕ್ತಿದಾಯಕವಾದ ಬ್ರಹ್ಮತೀರ್ಥವನ್ನೂ, ಗಂಗಾ, ಯಮುನಾ, ಸಿಂಧು, ಶತದ್ರು ನದಿಗಳನ್ನೂ ಸೇವಿಸಿ, ಸುದರ್ಶನತೀರ್ಥದಲ್ಲಿ ಕ್ರಮವಾಗಿ ಸ್ನಾನಮಾಡಿದನು.

೧೬–೧೭. ಅನಂತರ ಬಹುಮುನಿಸೇವಿತವೆಂಬ ಸತ್ರಯಾಗ ನಡೆಯುತ್ತಿದ್ದ ನೈಮಿಷಾರಣ್ಯಕ್ಕೆ ಬಂದನು. ಆಗ ಅಲ್ಲಿನ ಮುನಿಗಳೆಲ್ಲರೂ ದೀರ್ಘಸತ್ರದಲ್ಲಿ ನಿಯತರಾಗಿದ್ದರು. ಧರ್ಮತತ್ಪರರಾದ ಅವರೆಲ್ಲರೂ ಆತನನ್ನು ಕಂಡು, ಎದುರುಗೊಂಡು ಆ ಯದುಶ್ರೇಷ್ಠನಿಗೆರಗಿ, ಆತನಿಗೆ ಆಸನವನ್ನು ಕೊಟ್ಟು ಕಂದಮೂಲಗಳಿಂದುಪಚರಿಸಿದರು.

೧೮–೧೯. ಆಗ ಬಲರಾಮನು ಪೀಠದಮೇಲೆ ಕುಳಿತು ಅವರ ಪೂಜೆಗಳನ್ನು ಸ್ವೀಕರಿಸಿ, ಮೇಲಕ್ಕೆದ್ದು ತನ್ನನ್ನು ಕೈಮುಗಿದು ನಮಸ್ಕರಿಸದೆ, ಉನ್ನತವಾದ ಆಸನದ ಮೇಲೆ ಕುಳಿತಿರುವ ವ್ಯಾಸಶಿಷ್ಯನಾದ ಸೂತನನ್ನು ಕಂಡನು.

೨೦. ತನ್ನನ್ನು ಕಂಡು ಬ್ರಾಹ್ಮಣರೆಲ್ಲರೂ ನಮಸ್ಕರಿಸುತ್ತಿದ್ದರೂ ಆತನು ಆ ರೀತಿಯಾಗಿ ನಮಸ್ಕರಿಸದಿರುವುದಕ್ಕಾಗಿ ಆ ರೋಹಿಣೀಪುತ್ರನು ಬಹಳವಾಗಿ ಕೋಪಗೊಂಡನು.

೨೧. ಕ್ಷತ್ರಿಯನಿಂದ ಬ್ರಾಹ್ಮಣಿಯಲ್ಲಿ ಜನಿಸಿದವನೂ, ನಿಂದ್ಯನೂ ಆದ

ಅವಮತ್ಯ ಭೃಶಂ ಚಾಽಸ್ಮಾನ್ಧರ್ಮಸಂರಕ್ಷಕಾನಯಂ ।
ಆಸ್ತೇಽನುತ್ಥಾಯ ನಿರ್ಭೀತಿರ್ನಚ ಪ್ರಣಮತೇ ತಥಾ ॥ ೨೨ ॥
ಪಠಿತ್ವಾಽಯಂ ಪುರಾಣಾನಿ ದ್ವೈಪಾಯನಸಕಾಶತಃ ।
ಸೇತಿಹಾಸಾನಿ ಸರ್ವಾಣಿ ಧರ್ಮಶಾಸ್ತ್ರಾಣ್ಯನೇಕಶಃ ॥ ೨೩ ॥
ನಮಾಂ ದೃಷ್ಟ್ವಾ ಪ್ರಣಮತೇ ನೈವ ತ್ಯಜತಿ ಚಾಸನಂ ।
ದ್ವೈಪಾಯನಸ್ಯ ಮಹತಃ ಶಿಷ್ಯಾಃ ಪೈಲಾದಯೋ ದ್ವಿಜಾಃ ॥ ೨೪ ॥
ಏವಂ ವಿಧಮಧರ್ಮಂ ತೇನೈವ ಕುರ್ಯುರ್ಯಥಾ ತ್ವಯಂ ।
ತಸ್ಮಾದೇನಂ ವಧಿಷ್ಯಾಮಿ ದುರಾತ್ಮಾನಮಚೇತಸಂ ॥ ೨೫ ॥
ದುಷ್ಟಾನಾಂ ನಿಗ್ರಹಾರ್ಥಂ ಹಿ ಭೂಲೋಕಮುಹಮಾಗಮಂ ।
ಮಯಾ ಹತೋ ಹಿ ದುಷ್ಟಾತ್ಮಾ ಶುದ್ಧಿಮೇಷ್ಯತ್ಯಸಂಶಯಂ ॥ ೨೬ ॥
ಇತ್ಯುಕ್ತ್ವಾ ಭಗವಾನ್ರಾಮೋ ಮುಸಲೀ ಪ್ರಬಲೋ ಹಲೀ ।
ಪಾಣಿಸ್ಥೇನ ಕುಶಾಗ್ರೇಣ ತಚ್ಛಿರಃ ಪ್ರಾಽಚ್ಛಿನದ್ರುಷಾ ॥ ೨೭ ॥
ತತ್ರತ್ಯಾ ಮುನಯಃ ಸರ್ವೇ ಹಾ ಕಷ್ಟಮಿತಿ ಚುಕ್ರುಶುಃ ।
ಅವಾದಿಷುಸ್ತದಾ ರಾಮಂ ಮುನಯೋ ಬ್ರಹ್ಮವಾದಿನಃ ॥ ೨೮ ॥

---

ಈ ಸೂತನು ಮುನಿಗಳ ನಡುವೆ ಉನ್ನತವಾದ ಆಸನದಲ್ಲಿಯೆ ಕುಳಿತಿರುವನು? ಇದು ಸ್ವಲ್ಪವೂ ಯೋಗ್ಯವಾದುದಲ್ಲ.

೨೨. ಇವನು ಧರ್ಮರಕ್ಷಕರಾದ ನಮ್ಮನ್ನು ಬಹಳವಾಗಿ ಅಪಮಾನ ಗೊಳಿಸಿಯೂ, ಮೇಲಕ್ಕೇಳದೆ ನಮಸ್ಕರಿಸದೆಯೂ ಕುಳಿತಿರುವನು.

೨೩–೨೬. ಇವನು ವ್ಯಾಸರ ದೆಸೆಯಿಂದ ಇತಿಹಾಸಗಳೊಡನೆ ಪುರಾಣ ಗಳನ್ನೂ, ಅನೇಕ ಧರ್ಮಶಾಸ್ತ್ರಗಳನ್ನೂ ಓದಿಕೊಂಡು ನನ್ನನ್ನು ಕಂಡರೂ ನಮಸ್ಕರಿಸುತ್ತಿಲ್ಲ; ಪೀಠವನ್ನು ಬಿಟ್ಟೇಳಲೂ ಇಲ್ಲ. ಪೈಲನೇ ಮೊದಲಾದ ದ್ವೈಪಾಯನನ ಶಿಷ್ಯರನೇಕರಿರುವರು. ಅವರೆಲ್ಲರೂ ಇವನಂತೆ ಇಂತಹ ಅಧರ್ಮವನ್ನೆಂದಿಗೂ ಮಾಡಲಾರರು. ಆದುದರಿಂದ ವಿವೇಕವಿಲ್ಲದ ಈ ದುಷ್ಟ ನನ್ನು ಕೊಲ್ಲುವೆನು. ದುಷ್ಟರನ್ನು ನಿಗ್ರಹಿಸುವುದಕ್ಕಾಗಿಯೇ ಅಲ್ಲವೆ ನಾನು ಭೂಲೋಕದಲ್ಲವತರಿಸಿರುವುದು? ನನ್ನಿಂದ ಹತನಾಗುವ ಈ ದುಷ್ಟಾತ್ಮನು ನಿಸ್ಸಂಶಯವಾಗಿಯೂ ಪರಿಶುದ್ಧನಾಗುವನು.

೨೭. ಹೀಗೆ ನುಡಿದು, ಹಲಾಯುಧನೂ, ಮುಸಲಧಾರಿಯೂ, ಬಲ ಶಾಲಿಯೂ, ಭಗವಂತನೂ ಆದ ಆ ಬಲರಾಮನು ರೋಷದಿಂದ ಕೈಯಲ್ಲಿದ್ದ ದರ್ಭೆಯ ತುದಿಯಿಂದ ಆತನ ಶಿರವನ್ನು ಖಂಡಿಸಿದನು.

೨೮. ಆಗ ಅಲ್ಲಿದ್ದ ಬ್ರಹ್ಮವಾದಿಗಳಾದ ಮುನಿಗಳೆಲ್ಲರೂ "ಅಯ್ಯೋ ಕಷ್ಟವಾಯಿತೆ" ಎಂದು ಕೂಗಿಕೊಂಡು ಅವನನ್ನು ಕುರಿತು ಇಂತೆಂದರು.

ರಾಮಾಽಧರ್ಮಃ ಕೃತಃ ಕಷ್ಟಸ್ತ್ವಯಾ ಸಂಕರ್ಷಣ ಪ್ರಭೋ ।
ಅಸ್ಯ ಸೂತಸ್ಯ ಚಾಽಸ್ಮಾಭಿರ್ದತ್ತಂ ಬ್ರಹ್ಮಾಸನಂ ಮಹತ್ ॥ ೨೯ ॥
ಅಕ್ಷಯಂ ಚಾಯುರಸ್ಮಾಭಿರಸ್ಯ ದತ್ತಂ ಹಲಾಯುಧ ।
ಭವತಾಽಜಾನತೈವಾಽದ್ಯ ಕೃತೋ ಬ್ರಹ್ಮವಧೋ ಮಹಾನ್ ॥ ೩೦ ॥
ಯೋಗೇಶ್ವರಸ್ಯ ಭವತೋ ನಾಽಸ್ತಿ ಕಶ್ಚಿನ್ನಿಯಾಮಕಃ ।
ಅಸ್ಯಾಸ್ತು ಬ್ರಹ್ಮಹತ್ಯಾಯಾ ಯತ್ಕರ್ತವ್ಯಂ ವಿಚಾರ್ಯ ತತ್ ॥ ೩೧ ॥
ಪ್ರಾಯಶ್ಚಿತ್ತಂ ಭವಾನೇವ ಲೋಕಸಂಗ್ರಹಣಾಯ ತು ।
ಕುರುಷ್ವ ಭಗವನ್ರಾಮ ನಾಽನ್ಯೇನ ಪ್ರೇರಿತಃ ಕುರು ।
ಇತ್ಯುಕ್ತೋ ಭಗವಾನ್ರಾಮಸ್ತಾನುವಾಚ ಮುನೀನ್ಪ್ರತಿ ॥ ೩೨ ॥

ರಾಮ ಉವಾಚ :—

ಪ್ರಾಯಶ್ಚಿತ್ತಂ ಚರಿಷ್ಯಾಮಿ ಪಾಪಶೋಧಕಮಾಸ್ತಿಕಾಃ ॥ ೩೩ ॥
ಲೋಕಸಂಗ್ರಹಣಾರ್ಥಾಯ ನಾಽನ್ಯಕಾಮನಯಾಽಧುನಾ ।
ಯಾದೃಶೋ ನಿಯಮೋಽಸ್ಮಾಭಿಃ ಕರ್ತವ್ಯಃ ಪಾಪಶಾಂತಯೇ ॥ ೩೪ ॥
ತಾದೃಶಂ ನಿಯಮಂ ತ್ವದ್ಯ ಭವಂತಃ ಪ್ರಬ್ರುವಂತು ನಃ ।
ಭವದ್ಭಿರಸ್ಯ ಸೂತಸ್ಯ ಯದಾಯುರ್ದತ್ತಮಕ್ಷಯಂ ।
ಇಂದ್ರಿಯಾಣಿ ಚ ಸತ್ವಂ ಚ ಕರಿಷ್ಯೇ ಯೋಗಮಾಯಯಾ ॥ ೩೫ ॥

---

೨೯–೩೦. "ಎಲೈ ಸಂಕರ್ಷಣಸ್ವರೂಪಿಯೂ, ಪೂಜ್ಯನೂ ಆದ ಬಲರಾಮನೆ! ಅಧರ್ಮವಾದ ಕೆಲಸವನ್ನು ಮಾಡಿದೆ. ನಾವು ಈ ಸೂತನಿಗೆ ಶ್ರೇಷ್ಠವಾದ ಬ್ರಹ್ಮಾಸನವನ್ನು ಕೊಟ್ಟದ್ದಿವಲ್ಲದೆ, ಅಕ್ಷಯವಾದ ಆಯುಷ್ಯವನ್ನೂ ಕೊಟ್ಟದ್ದೆವು. ನೀನದನ್ನರಿಯದೆ ಬ್ರಹ್ಮಹತ್ಯೆಯನ್ನು ಮಾಡಿದೆ.

೩೧–೩೨. ಯೋಗೇಶ್ವರನಾದ ನಿನಗೆ ಹೇಳಲಾರುಶಕ್ತರು! ಈ ಬ್ರಹ್ಮಹತ್ಯೆಗೆ ತಕ್ಕ ಪ್ರಾಯಶ್ಚಿತ್ತವಾವುದೆಂದು ನೀನೇ ವಿಚಾರಮಾಡಿ ಜನಗಳ ತಿದ್ದುಪಡಿಗಾಗಿ, ಮತ್ತೊಬ್ಬರಿಂದ ಹೇಳಿಸಿಕೊಳ್ಳದೆ ಅದನ್ನಾಚರಿಸು." ಇಂತು ನುಡಿದ ಮುನಿಗಳಿಗೆ ರಾಮನು ಹೇಳುತ್ತಾನೆ.

೩೩–೩೫. ರಾಮನು ಹೇಳುತ್ತಾನೆ— "ಎಲೈ ಆಸ್ತಿಕರೇ! ಲೋಕಾಚಾರಕ್ಕಾಗಿ, ಪಾಪವನ್ನು ನೀಗಿಸುವಂತಹ ಪ್ರಾಯಶ್ಚಿತ್ತವನ್ನೀಗಲೇ ಮಾಡುವೆನು. ಯಾವ ನಿಯಮಾನುಷ್ಠಾನದಿಂದ ನಮಗೆ ಪಾಪನಿವೃತ್ತಿಯಾಗುವುದೆಂಬುದನ್ನು ನೀವೇ ಹೇಳಿರಿ. ನೀವು ಈ ಸೂತನಿಗೆ ಕೊಟ್ಟದ್ದ ಅಕ್ಷಯವಾದ ಆಯುಷ್ಯವನ್ನೂ, ಇಂದ್ರಿಯಶಕ್ತಿಗಳನ್ನೂ ಯೋಗಮಾಯೆಯಿಂದ ಮತ್ತೆ ಉಂಟುಮಾಡುವೆನು."

ಮುನಯ ಊಚುಃ:—
ಪರಾಕ್ರಮಸ್ಯ ತೇಽಸ್ತ್ರಸ್ಯ ಮೃತ್ಯೋರ್ನಶ್ಚ ಯಥಾ ಪ್ರಭೋ ।
ಸ್ಯಾತ್ಸತ್ಯವಚನಂ ರಾಮ ತದ್ಭವಾನ್ಕರ್ತುಮರ್ಹತಿ ॥ ೩೬ ॥
ರಾಮ ಉವಾಚ:—
ಆತ್ಮಾ ವೈ ಪುತ್ರರೂಪೇಣ ಭವತೀತಿ ಶ್ರುತಿಸ್ಸದಾ ॥ ೩೭ ॥
ಉದ್ಘೋಷಯತಿ ವಿಪ್ರೇಂದ್ರಾಸ್ತಸ್ಮಾದಸ್ಯ ಶರೀರತಃ ।
ಪುತ್ರೋ ಭವತು ದೀರ್ಘಾಯುಃ ಸತ್ವೇಂದ್ರಿಯಬಲೋರ್ಜಿತಃ ॥ ೩೮ ॥
ಕಥಯಿಷ್ಯತಿ ಯುಷ್ಮಾಕಂ ಪುರಾಣಾದೀನಿ ಸೋಽನ್ವಹಂ ।
ಸಂಭವಿಷ್ಯತಿ ಸರ್ವಜ್ಞೋ ಯೋಗಮಾಯಾಬಲಾನ್ಮಮ ॥ ೩೯ ॥
ಇತ್ಯುಕ್ತ್ವಾ ರೌಹಿಣೇಯಸ್ತಾನ್ಪುನಃ ಪ್ರಶ್ರಿತಮಬ್ರವೀತ್ ।
ಮನೋಽಭಿಲಷಿತಂ ಕಿಂ ವಾ ಯುಷ್ಮಾಕಂ ಕರವಾಣ್ಯಹಂ ॥ ೪೦ ॥
ತದ್ಬ್ರೂತ ಮುನಯೋ ಯೂಯಂ ಕರಿಷ್ಯಾಮಿ ನ ಸಂಶಯಃ ।
ಅಜ್ಞಾನಾನ್ಮತ್ಕೃತಸ್ಯಾಽಸ್ಯ ಪಾಪಸ್ಯಾಽಪಿ ನಿವರ್ತಕಂ ।
ಪ್ರಾಯಶ್ಚಿತ್ತಂ ಭವಂತೋ ಮೇ ಪ್ರಬ್ರೂತ ಮುನಿಸತ್ತಮಾಃ ॥ ೪೧ ॥
ಮುನಯ ಊಚುಃ:—
ಇಲ್ವಲಸ್ಯಾತ್ಮಜಃ ಕಶ್ಚಿದ್ದಾನವೋ ಬಲ್ವಲಾಽಭಿಧಃ ॥ ೪೨ ॥

---

೩೬. ಮುನಿಗಳು ಹೇಳುತ್ತಾರೆ:—"ಪ್ರಭೋ! ನಿನ್ನ ಪರಾಕ್ರಮಕ್ಕೂ, ಅಸ್ತ್ರಕ್ಕೂ, ಮೃತ್ಯುವಿಗೂ, ನಮ್ಮ ಮಾತಿಗೂ ಚ್ಯುತಿಬರದಂತೆ ಮಾಡಲು ನೀನೇ ಬಲ್ಲೆ."

೩೭–೪೧. ರಾಮನು ಹೇಳುತ್ತಾನೆ:—"ಬ್ರಾಹ್ಮಣಶ್ರೇಷ್ಠರೇ! ತಾನೇ ಪುತ್ರರೂಪದಿಂದ ಹುಟ್ಟುವನು, ಎಂದಾವಾಗಲೂ ವೇದಗಳು ಉದ್ಘೋಷಿಸುತ್ತವೆ. ಆದುದರಿಂದ ಈತನ ದೇಹದಿಂದ ದೀರ್ಘಾಯುಷ್ಮಂತನೂ, ಬಲಿಷ್ಠನೂ, ಇಂದ್ರಿಯನಿಗ್ರಹವುಳ್ಳವನೂ ಆದ ಮಗನು ನನ್ನ ಯೋಗಮಾಯೆಯ ಬಲದಿಂದ ಹುಟ್ಟಲಿ. ಅವನು ಸರ್ವಜ್ಞನಾಗಿ ಯಾವಾಗಲೂ ನಿಮಗೆ ಪುರಾಣಾದಿಗಳನ್ನು ಹೇಳುವವನಾಗುವನು" ಎಂದು ಹೇಳಿ ರೋಹಿಣೀಪುತ್ರನಾದ ಆ ಬಲರಾಮನು "ಮುನಿಗಳೇ! ನಾನು ಮತ್ತಾವ ತಮ್ಮ ಕೋರಿಕೆಯನ್ನು ಈಡೇರಿಸಬೇಕೊ ಹೇಳಿದಲ್ಲಿ ನಿಸ್ಸಂಶಯವಾಗಿಯೂ ನೆರವೇರಿಸುವೆನು. ಅಜ್ಞಾನದಿಂದ ಮಾಡಿದ ನನ್ನ ಈ ಪಾಪಪರಿಹಾರಕ್ಕೆ ತಕ್ಕ ಪ್ರಾಯಶ್ಚಿತ್ತವನ್ನೂ ತಾವೇ ಹೇಳಿರಿ" ಎಂದು ವಿನಯವಾಗಿ ಕೇಳಿದನು.

೪೨–೪೩. ಮುನಿಗಳು ಹೇಳುತ್ತಾರೆ:—"ಎಲೈ ಬಲರಾಮನೆ! ಇಲ್ವಲನ

ಸ ದೂಷಯತಿ ಸೋ ಯಾಗಂ ರಾಮೇಹಾಗತ್ಯ ಪರ್ವಣಿ ।
ದುಷ್ಟಂ ತಂ ದಾನವಂ ಪಾಪಂ ಜಹಿ ಲೋಕೈಕಕಂಟಕಂ ॥ ೪೩ ॥
ಅನೇನ ಪೂಜಾ ಹ್ಯಸ್ಮಾಕಂ ಕೃತಾ ಸ್ಯಾದ್ಭವತಾಽಧುನಾ ।
ಅಸ್ಥಿವಿಣ್ಮೂತ್ರರಕ್ತಾನಿ ಸುರಾಮಾಂಸಾನಿ ಚ ಕ್ರತೌ ॥ ೪೪ ॥
ಸದಾಽಭಿವರ್ಷತೇಽಸ್ಮಾಕಮತ್ರಾಗತ್ಯ ಸ ದಾನವಃ ।
ಅಸ್ಮಿನ್ಭಾರತಭೂಭಾಗೇ ಯಾನಿ ತೀರ್ಥಾನಿ ಸಂತಿ ಹಿ ॥ ೪೫ ॥
ತೇಷು ಸ್ನಾಹ್ಯಬ್ದಮೇಕಂ ತ್ವಂ ಸರ್ವೇಷು ಸುಸಮಾಹಿತಃ ।
ತೇನ ತೇ ಪಾಪಶಾಂತಿಃ ಸ್ಯಾನ್ನಾತ್ರ ಕಾರ್ಯಾ ವಿಚಾರಣಾ ॥ ೪೬ ॥

ಶ್ರೀ ಸೂತ ಉವಾಚ :—

ಪರ್ವಕಾಲೇ ತು ವಿಪ್ರೇಂದ್ರಾಃ ಸಭಾಪ್ರವೃತ್ತೇ ಮುನಿಕ್ರತೌ ।
ಮಹಾಭೀಮೋ ರಜೋವರ್ಷೋ ಝುಂಝಾವಾತಶ್ಚ ಭೀಷಣಃ ॥ ೪೭ ॥
ಪ್ರಾದುರ್ಬಭೂವ ವಿಪ್ರೇಂದ್ರಾಃ ಪೂಯರಕ್ತೈಶ್ಚ ವರ್ಷಣಂ ।
ತತೋ ವಿಣ್ಮೂತ್ರಮಯಾ ವೃಷ್ಟಿರ್ಬಲ್ವಲೇನ ಕೃತಾಽಪ್ಯಭೂತ್ ॥ ೪೮ ॥
ಅಸುರಂ ಯಜ್ಞಶಾಲಾಯಾಂ ಶೂಲಪಾಣಿಮಥ ಕ್ಷಣಾತ್ ।
ಅಪಶ್ಯದ್ಬಲಭದ್ರೋಽಸೌ ಮಹಾಬಲಪರಾಕ್ರಮಂ ॥ ೪೯ ॥

---

ಮಗನಾದ ಬಲ್ವಲನೆಂಬ ರಾಕ್ಷಸನಿರುವನು. ಅವನು ಪರ್ವಕಾಲದಲ್ಲಿ ಇಲ್ಲಿಗೆ ಬಂದು ನಮ್ಮ ಯಾಗವನ್ನು ಕೆಡಿಸುತ್ತಾನೆ. ಲೋಕಕಂಟಕನೂ, ಪಾಪಿಯೂ ಆದ ಆ ದುಷ್ಟದಾನವನನ್ನು ಕೊಲ್ಲು.

೪೪–೪೬. ಅದೇ ನೀನು ನಮಗೆ ಸಲ್ಲಿಸುವ ಪೂಜೆ. ಅವನು ಯಾವಾಗಲೂ ಇಲ್ಲಿಗೆ ಬಂದು ನಮ್ಮ ಯಜ್ಞವಾಟಿಕೆಯಲ್ಲಿ ಎಲುಬು, ಅಮೇಧ್ಯ, ಮೂತ್ರ, ರಕ್ತ, ಮಾಂಸ, ಮದ್ಯಗಳನ್ನು ತಂದುಹಾಕುತ್ತಾನೆ. ಆದುದರಿಂದ ಅವನನ್ನು ಕೊಲ್ಲು. ಭಾರತದೇಶದಲ್ಲಿರುವ ಎಲ್ಲ ತೀರ್ಥಗಳಲ್ಲಿಯೂ ಒಂದು ವರ್ಷಕಾಲ ಸಮಾಹಿತಚಿತ್ತನಾಗಿ ಸ್ನಾನಮಾಡು. ಅದರಿಂದ ನಿನ್ನ ಪಾಪವು ತೊಲಗುವುದು. ಇದರಲ್ಲಿ ಸಂಶಯಪಡಬೇಡ."

೪೭–೪೮. ಸೂತನು ಹೇಳುತ್ತಾನೆ:— ಬ್ರಾಹ್ಮಣಶ್ರೇಷ್ಠರೇ! ಬಳಿಕ ಪರ್ವಕಾಲದಲ್ಲಿ ಯಾಗವು ಮೊದಲಾದಕೂಡಲೆ, ಭಯಂಕರವಾದ ಝುಂಝಾ ಮಾರುತವೂ, ಧೂಳಿನ ಸುರಿಮಳೆಯೂ, ಆ ಬಳಿಕ ಕೀವು ರಕ್ತಗಳ ಮಳೆಯೂ, ಅದಾದಬಳಿಕ ಮಲಮೂತ್ರದ ವೃಷ್ಟಿಯೂ ಬಲ್ವಲನಿಂದುಂಟಾಯಿತು.

೪೯. ಆ ಕೂಡಲೇ ಬಹುಬಲಪರಾಕ್ರಮಸಂಪನ್ನನೂ, ಶೂಲಪಾಣಿಯೂ ಆದ ಅಸುರನೂ ಕಾಣಿಸಿಕೊಂಡನು.

ತಮಾಲೋಕ್ಯ ಮಹಾದೇಹಂ ದಗ್ಧಾಽದ್ರಿಪ್ರತಿಮಂ ತದಾ ।
ಪ್ರತಪ್ತತಾಮ್ರಸಂಕಾಶಶ್ಮಶ್ರುದಂಷ್ಟ್ರೋತ್ಕಟಾನನಂ ॥ ೩೦ ॥
ಚಿಂತಯಾಮಾಸ ಮುಸಲಂ ರಾಮಃ ಪರವಿದಾರಣಂ ।
ಸೀರಂ ಚ ದಾನವಹರಂ ಗದಾಂ ದೈತ್ಯವಿದಾರಿಣೀಂ ॥ ೩೧ ॥
ಯಾನ್ಯಾಯುಧಾನಿ ತಂ ರಾಮಂ ಚಿಂತಿತಾನ್ಯುಪತಸ್ಥಿರೇ ।
ಸೀರಾಗ್ರೇಣ ತಮಾಕೃಷ್ಯ ಬಲ್ವಲಂ ಖೇಚರಂ ತದಾ ॥ ೩೨ ॥
ಮುಸಲೇನ ನಿಜಘ್ನೇ ಸ ಕುಪಿತೋ ಮೂರ್ಧ್ನಿ ವೇಗತಃ ।
ಪಪಾತ ಭುವಿ ಸಂಕ್ಷುಣ್ಣಲಲಾಟೋ ರಕ್ತಮುದ್ವಮನ್ ।
ಬಲ್ವಲೋ ದೀನಕಥನೋ ಗಿರಿರ್ವಜ್ರಹತೋ ಯಥಾ ॥ ೩೩ ॥
ಸ್ತುತ್ವಾಽಥ ಮುನಯೋ ರಾಮಂ ಪ್ರೋಚ್ಚಾರ್ಯ ವಿಮಲಾಶಿಷಃ ।
ಅಭ್ಯಷಿಂಚನ್ನಭೈಸ್ತೋಯೈರ್ವೃತ್ರಶತ್ರುಂ ಯಥಾ ಸುರಾಃ ॥ ೩೪ ॥
ಮಾಲಾಂ ದದುರ್ವೈಜಯಂತೀಂ ಶ್ರೀಮದಂಬುಜಶೋಭಿತಾಂ ।
ಮಾಧವಾಯ ಶುಭೇ ವಸ್ತ್ರೇ ಭೂಷಣಾನಿ ಶುಭಾನಿ ಚ ॥ ೩೫ ॥
ಧಾರಯಂಸ್ತಾನಿ ಸರ್ವಾಣಿ ರೌಹಿಣೇಯೋ ಮಹಾಬಲಃ ।
ಪುಷ್ಪಿತಾಽನೋಕಹೋಪೇತಃ ಕೈಲಾಸ ಇವ ಪರ್ವತಃ ॥ ೩೬ ॥

---

೩೦–೩೨. ದೊಡ್ಡ ದೇಹವುಳ್ಳವನೂ, ಉರಿಯುತ್ತಿರುವ ಬೆಟ್ಟವನ್ನು ಹೋಲುವವನೂ, ಚೆನ್ನಾಗಿ ಕಾದ ತಾಮ್ರದಂತೆ ಕೆಂಪಾದ ಮೀಸೆಗಳಿಂದ ಭೀಕರವಾದ ಮುಖವುಳ್ಳವನೂ ಆದ ಆ ಅಸುರನನ್ನು ಕಂಡು, ಬಲರಾಮನು ಶತ್ರುವಿದಾರಕವಾದ ಒನಕೆಯನ್ನೂ, ದಾನವವಿನಾಶಕವಾದ ನೇಗಿಲನ್ನೂ, ದೈತ್ಯಧ್ವಂಸಿನಿಯಾದ ಗದೆಯನ್ನೂ ಸ್ಮರಿಸಿದನು. ಅವೆಲ್ಲ ಆತನು ಸ್ಮರಿಸಿದೊಡನೆಯೇ ಒದಗಿಬಂದು ಆತನನ್ನು ಓಲೈಸಿದುವು. ಆಗ ಆತನು ಕುಪಿತನಾಗಿ ಖೇಚರನಾದ ಬಲ್ವಲನನ್ನು ನೇಗಿಲು ತುದಿಯಿಂದೆಳೆದು ಒನಕೆಯಿಂದ ಆತನ ತಲೆಯಮೇಲೆ ಬಲವಾಗಿ ಹೊಡೆದನು.

೩೩. ಆ ಅಸುರನು ಚೂರುಚೂರಾದ ಹಣೆಯುಳ್ಳವನಾಗಿ ರಕ್ತವನ್ನು ಕಾರುತ್ತ ದೈನ್ಯದಿಂದ ವಿಲಪಿಸುತ್ತ ವಜ್ರಾಯುಧದಿಂದ ಹೊಡೆಯಲ್ಪಟ್ಟ ಪರ್ವತದಂತೆ ನೆಲಕ್ಕುರುಳಿದನು.

೩೪–೩೬. ಮುನಿಗಳೆಲ್ಲರೂ ರಾಮನನ್ನು ಹೊಗಳುತ್ತ ಆಶೀರ್ವದಿಸಿ ದೇವತೆಗಳು ವೃತ್ರಸಂಹಾರಕನಾದ ಇಂದ್ರನನ್ನೋಪಾದಿಯಲ್ಲಿ, ಪುಣ್ಯೋದಕಗಳಿಂದ ಅಭಿಷೇಕಿಸಿ, ವಿಕಸಿತವಾದ ಕಮಲಗಳಿಂದ ರಚಿತವಾದ ವೈಜಯಂತೀ ಮಾಲೆಯನ್ನೂ, ದಿವ್ಯವಾದ ವಸ್ತ್ರಭೂಷಣಗಳನ್ನೂ ಆತನಿಗೆ ಅರ್ಪಿಸಿದರು.

ಅನುಜ್ಞಾತೋಽಥ ಮುನಿಭಿಃ ಸರ್ವತೀರ್ಥೇಷು ಸ ದ್ವಿಜಾಃ ॥ ೫೭ ॥
ಏಕಮಬ್ದಂ ಚರನ್ಸಸ್ನೌ ನಿಯಮಾಚಾರಸಂಯುತಃ ।
ತತಃ ಸಂವತ್ಸರೇ ಪೂರ್ಣೇ ಕಾಲಿಂದೀಭೇದನೋ ಬಲಃ ॥ ೫೮ ॥
ಸಮಾಪ್ತತೀರ್ಥಯಾತ್ರಃ ಸನ್ಪುರೀಂ ಗಂತುಂ ಪ್ರಚಕ್ರಮೇ ।
ತತಸ್ತಮೋಮಯೀಂ ಛಾಯಾಂ ಪೃಷ್ಠತೋಽನುಗತಾಂ ಕೃಶಾಂ ॥ ೫೯ ॥
ಅಪಶ್ಯದ್ಬಲದೇವೋಽಯಂ ಮಹಾನಾದವಿರಾವಿಣೀಂ ।
ಅಥ ವಾರ್ತಾಂ ಸ ಶುಶ್ರಾವ ಸಮುದ್ಭೂತಾಂ ತದಾಽಂಬರೇ ॥ ೬೦ ॥
ರಾಮ ರಾಮ ಮಹಾಬಾಹೋ ರೌಹಿಣೇಯ ಸಿತಪ್ರಭ ।
ತೀರ್ಥಾಽಭಿಗಮನೇನಾಽದ್ಯ ಚರಿತೇನ ತ್ವಯಾಽನಘ ॥ ೬೧ ॥
ನ ನಷ್ಟಾ ಬ್ರಹ್ಮಹತ್ಯಾ ತೇ ನಿಃಶೇಷಂ ರೋಹಿಣೀಸುತ ।
ಇತಿ ವಾರ್ತಾಂ ಸಮಾಕರ್ಣ್ಯ ಚಿಂತಯಾಮಾಸ ವೈ ಬಲಃ ॥ ೬೨ ॥
ಪ್ರಾಯಶ್ಚಿತ್ತಂ ಮಯಾ ಚೀರ್ಣಮೇಕಾಽಬ್ದಂ ತೀರ್ಥಸೇವಯಾ ।
ತಥಾಽಪಿ ಬ್ರಹ್ಮಹತ್ಯಾ ಸಾ ನ ನಷ್ಟೇತಿ ಶ್ರುತಂ ವಚಃ ॥ ೬೩ ॥
ಕಿಂ ಕುರ್ಮ ಇತಿ ಸಂಚಿಂತ್ಯ ನೈಮಿಷಾರಣ್ಯಮಭ್ಯಗಾತ್ ।
ತತ್ರ ಗತ್ವಾ ಮುನೀನಾಂ ತನ್ನ್ಯವೇದಯದರಿಂದಮಃ ॥ ೬೪ ॥

---

ರೌಹಿಣೇಯನು ಅವುಗಳನ್ನು ಧರಿಸಿ, ಪುಷ್ಪಿತಗಳಾದ ವೃಕ್ಷಗಳಿಂದೊಪ್ಪುವ ಕೈಲಾಸದಂತೆ ಶೋಭಿಸಿದನು.

೫೭–೫೯. ಎಲೈ ಬ್ರಾಹ್ಮಣರೇ! ಬಳಿಕ ಆತನು ಅವರಿಂದ ಬೀಳ್ಕೊಡಲ್ಪಟ್ಟು ಒಂದು ವರ್ಷದವರೆಗೂ ನಿಯಮದೊಡನೆ ಎಲ್ಲ ತೀರ್ಥಗಳಲ್ಲಿಯೂ, ಸ್ನಾನ ಮಾಡಿದನು. ಒಂದು ವರ್ಷವು ಪೂರ್ತಿಯಾದ ಬಳಿಕ, ಕಾಳಿಂದೀ ಭೇದಕನಾದ ಬಲರಾಮನು ತೀರ್ಥಯಾತ್ರೆಯನ್ನು ಪೂರೈಸಿಕೊಂಡು ತನ್ನ ರಾಜಧಾನಿಗೆ ತೆರಳಿದನು. ಆಗ ಬಲರಾಮನು ದೊಡ್ಡ ಶಬ್ದವನ್ನು ಮಾಡುತ್ತಾ ತನ್ನ ಬೆನ್ನುಹತ್ತಿದ ಕತ್ತಲಿನಂತಿರುವ ಛಾಯೆಯೊಂದನ್ನು ಕಂಡನು.

೬೦–೬೨. ಆಗ "ರೋಹಿಣಿಯ ಮಗನೂ, ಬಿಳಿಯ ಕಾಂತಿಯುಳ್ಳವನೂ ಆದ ಓ ಬಲರಾಮ! ಈ ತೀರ್ಥಯಾತ್ರೆಯಿಂದ ನಿನ್ನ ಬ್ರಹ್ಮಹತ್ಯೆಯು ಸಂಪೂರ್ಣವಾಗಿ ಪರಿಹಾರವಾಗಲಿಲ್ಲ." ಎಂಬ ಗಗನವಾಣಿಯು ಆತನಿಗೆ ಕೇಳಿಸಿತು. ಈ ಮಾತನ್ನು ಕೇಳಿ ಬಲರಾಮನು ಚಿಂತಿಸಿದನು.

೬೩–೬೪. "ನಾನು ಒಂದು ವರ್ಷ ಕಾಲ ತೀರ್ಥಸೇವೆಯಿಂದ ಪ್ರಾಯಶ್ಚಿತ್ತವನ್ನಾಚರಿಸಿರುವೆನು. ಹಾಗಾದರೂ ಬ್ರಹ್ಮಹತ್ಯೆಯು ಪರಿಹಾರವಾಗಲಿಲ್ಲ ಎಂಬ ಈ ಮಾತನ್ನು ಕೇಳಿದೆನು. ಏನು ಮಾಡಲಿ" ಎಂದು ಆಲೋಚಿಸಿ, ಮತ್ತೆ ನೈಮಿಷಾರಣ್ಯಕ್ಕೆ ತೆರಳಿದನು.

ಯಚ್ಛ್ರುತಂ ಗಗನೇ ವಾಕ್ಯಂ ಯಾ ಚ ದೃಷ್ಟಾ ತಮೋಮಯೀ ।
ನ್ಯವೇದಯತ ತತ್ಸರ್ವಂ ಮುನೀನಾಂ ರೋಹಿಣೀಸುತಃ ।
ತಚ್ಛ್ರುತ್ವಾ ಮುನಯಃ ಸರ್ವೇ ರಾಮಂ ವಾಕ್ಯಮಥಾಽಬ್ರುವನ್ ॥ ೧೫ ॥
ಮುನಯ ಊಚು :—
ಯದಿ ರಾಮ ನ ನಷ್ಟಾ ತೇ ಬ್ರಹ್ಮಹತ್ಯಾ ತು ಕೃತ್ಸ್ನಶಃ ॥ ೧೬ ॥
ತರ್ಹಿ ಗಚ್ಛ ಮಹಾಭಾಗ ಗಂಧಮಾದನಪರ್ವತಂ ।
ಮಹಾದುಃಖಪ್ರಶಮನಂ ಮಹಾರೋಗವಿನಾಶನಂ ॥ ೧೭ ॥
ರಾಮಸೇತೌ ಮಹಾಪುಣ್ಯೇ ಗಂಧಮಾದನಪರ್ವತೇ ।
ಅಸ್ತಿ ಲಕ್ಷ್ಮಣತೀರ್ಥಾಖ್ಯಂ ಸರಃ ಪಾಪವಿನಾಶನಂ ॥ ೧೮ ॥
ಸ್ನಾನಂ ಕುರುಷ್ವ ತತ್ರ ತ್ವಂ ತಲ್ಲಿಂಗಂ ಚ ನಮಸ್ಕುರು ।
ನಿಃಶೇಷಂ ತೇನ ನಷ್ಟಾ ಸ್ಯಾದ್ಬ್ರಹ್ಮಹತ್ಯಾ ನ ಸಂಶಯಃ ॥ ೧೯ ॥
ಶ್ರೀ ಸೂತ ಉವಾಚ :—
ಏವಮುಕ್ತಸ್ತದಾ ರಾಮೋ ಗಂಧಮಾದನಪರ್ವತಂ ।
ಗತ್ವಾ ಲಕ್ಷ್ಮಣತೀರ್ಥಂ ಚ ಪ್ರಾಪ್ತವಾನ್ಮುನಿಪುಂಗವಾಃ ॥ ೨೦ ॥
ಸ್ನಾತ್ವಾ ಸಂಕಲ್ಪಪೂರ್ವಂ ತು ತತ್ರ ತೀರ್ಥೇ ಹಲಾಯುಧಃ ।
ಬ್ರಾಹ್ಮಣೇಭ್ಯೋ ದದೌ ವಿತ್ತಂ ಧಾನ್ಯಂ ಗಾಶ್ಚ ವಸುಂಧರಾಂ ॥ ೨೧ ॥

---

೧೫. ಅಲ್ಲಿ ಮುನಿಗಳಿಗೆ ತಾನು ಕೇಳಿದ ಆಕಾಶವಾಣಿಯನ್ನೂ, ನೋಡಿದ ಅಂಧಕಾರರೂಪವಾದ ಬ್ರಹ್ಮಹತ್ಯೆಯನ್ನೂ ಸಂಪೂರ್ಣವಾಗಿ ತಿಳಿಸಿದನು. ಅದನ್ನು ಕೇಳಿ ಸಕಲ ಮುನಿಗಳೂ ಬಲರಾಮನನ್ನು ಕುರಿತು ಹೀಗೆಂದರು.

೧೬-೧೭. ಮುನಿಗಳು ಹೇಳುತ್ತಾರೆ:— "ಬಲರಾಮ! ನಿನ್ನ ಬ್ರಹ್ಮ ಹತ್ಯೆಯು ಸಂಪೂರ್ಣವಾಗಿ ಪರಿಹಾರವಾಗದಿದ್ದರೆ ಅತ್ಯಂತ ದುಃಖನಾಶಕವೂ, ಮಹಾರೋಗಪರಿಹಾರಕವೂ ಆದ ಗಂಧಮಾದನಪರ್ವತಕ್ಕೆ ಹೋಗು.

೧೮. ಮಹಾಪುಣ್ಯಕರವಾದ ರಾಮಸೇತುವೆಯಲ್ಲಿರುವ ಗಂಧಮಾದನ ಪರ್ವತದಲ್ಲಿ ಪಾಪವನ್ನು ಪರಿಹರಿಸುವ ಲಕ್ಷ್ಮಣತೀರ್ಥವೆಂಬ ಸರೋವರವು ಇರುವುದು.

೧೯. ನೀನು ಅಲ್ಲಿ ಮಿಂದು ಅಲ್ಲಿರುವ ಲಕ್ಷ್ಮಣೇಶ್ವರನನ್ನು ವಂದಿಸು. ಅದರಿಂದ ನಿನ್ನ ಬ್ರಹ್ಮಹತ್ಯೆಯು ಸಂಪೂರ್ಣವಾಗಿ ನಾಶವಾಗುವುದು."

೨೦. ಶ್ರೀಸೂತನು ಹೇಳುತ್ತಾನೆ:—ಎಲೈ ಮುನಿವರ್ಯರೆ! ಋಷಿಗಳು ಹೀಗೆ ಹೇಳಲು, ರಾಮನು ಗಂಧಮಾದನಪರ್ವತವನ್ನು ಸೇರಿ ಲಕ್ಷ್ಮಣತೀರ್ಥ ವನ್ನು ಹೊಂದಿದನು.

೨೧. ಅಲ್ಲಿ ಅವನು ಸಂಕಲ್ಪಪೂರ್ವಕವಾಗಿ ಮಿಂದು ಬ್ರಾಹ್ಮಣರಿಗೆ ದ್ರವ್ಯ, ಧಾನ್ಯ, ಗೋವು, ಭೂಮಿ ಇವುಗಳನ್ನು ದಾನಮಾಡಿದನು.

ತಸ್ಮಿನ್ನವಸರೇ ತತ್ರ ರಾಮಮಾಹಾಽಶರೀರವಾಕ್ ।
ನಿಃಶೇಷಂ ರಾಮ ನಷ್ಟಾ ತೇ ಬ್ರಹ್ಮಹತ್ಯಾಽಧುನಾ ತ್ವಿಹ ॥ ೭೨ ॥
ಸಂದೇಹೋ ನಾಽತ್ರ ಕರ್ತವ್ಯಃ ಸುಖಂ ಯಾಹಿ ಪುರೀಂ ನಿಜಾಂ ।
ತಚ್ಛ್ರುತ್ವಾ ಬಲಭದ್ರೋಽಥ ತತ್ತೀರ್ಥಂ ಪ್ರಶಶಂಸ ಹ ॥ ೭೩ ॥
ತತಸ್ತತ್ರತ್ಯತೀರ್ಥೇಷು ಸ್ನಾತ್ವಾ ಸರ್ವೇಷು ಮಾಧವಃ ।
ಧನುಷ್ಕೋಟೌ ತಥಾ ಸ್ನಾತ್ವಾ ರಾಮನಾಥಂ ನಿಷೇವ್ಯ ಚ ।
ದ್ವಾರಕಾಂ ಸ್ವಪುರೀಂ ಪ್ರಾಯಾನ್ನಷ್ಟಪಾತಕಸಂಚಯಃ ॥ ೭೪ ॥

ಶ್ರೀ ಸೂತ ಉವಾಚ :—

ಏವಂ ವಃ ಕಥಿತಂ ವಿಪ್ರಾಃ ಶ್ರೀಲಕ್ಷ್ಮಣಸರೋಽಮಲಂ ॥ ೭೫ ॥
ಪುಣ್ಯಂ ಪವಿತ್ರಂ ಪಾಪಘ್ನಂ ಬ್ರಹ್ಮಹತ್ಯಾದಿಶೋಧಕಂ ।
ಯಃ ಪಠೇದಿಮಮಧ್ಯಾಯಂ ಶೃಣುಯಾದ್ವಾ ಸಮಾಹಿತಃ ॥ ೭೬ ॥
ಸ ಯಾತಿ ಮುಕ್ತಿಂ ವಿಪ್ರೇಂದ್ರಾಃ ಪುನರಾವೃತ್ತಿವರ್ಜಿತಾಂ ॥ ೭೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಲಕ್ಷ್ಮಣತೀರ್ಥ ಪ್ರಶಂಸನಂ—
ಬಲಭದ್ರಬ್ರಹ್ಮಹತ್ಯಾವಿಮೋಕ್ಷಣಂ"ನಾಮೈಕೋನವಿಂಶೋಽಧ್ಯಾಯಃ

---

೭೨. ಆ ಸಮಯದಲ್ಲಿ ಅಲ್ಲಿ ಅಶರೀರವಾಣಿಯು ಬಲರಾಮನನ್ನು ಕುರಿತು "ರಾಮ ! ಈಗ ನಿನ್ನ ಬ್ರಹ್ಮಹತ್ಯೆಯು ಸಂಪೂರ್ಣವಾಗಿ ಪರಿಹಾರವಾಯಿತು.

೭೩. ಸಂದೇಹಪಡಬೇಡ. ಸುಖವಾಗಿ ನಿನ್ನ ಪಟ್ಟಣಕ್ಕೆ ತೆರಳು" ಎಂದಿತು. ಅದನ್ನು ಕೇಳಿ ಬಲರಾಮನು ಆ ತೀರ್ಥವನ್ನು ಹೊಗಳಿದನು.

೭೪. ಬಳಿಕ ಬಲರಾಮನು ಅಲ್ಲಿರುವ ಸಕಲ ತೀರ್ಥಗಳಲ್ಲಿಯೂ, ಧನುಷ್ಕೋಟಿಯಲ್ಲಿಯೂ ಮಿಂದು ಶ್ರೀರಾಮನಾಥನನ್ನು ಸೇವಿಸಿ ಪಾಪರಹಿತನಾಗಿ ದ್ವಾರಕಾಪಟ್ಟಣಕ್ಕೆ ಹೋದನು.

೭೫–೭೭. ಶ್ರೀಸೂತನು ಹೇಳುತ್ತಾನೆ:— ಎಲೈ ಬ್ರಾಹ್ಮಣರೇ ! ಹೀಗೆ ನಿಮಗೆ ಪವಿತ್ರವಾದ ಲಕ್ಷ್ಮಣಸರೋವರದ ಮಹಿಮೆಯನ್ನು ಹೇಳಿರುವೆನು. ಪುಣ್ಯಕರವೂ, ಪವಿತ್ರವೂ, ಪಾಪನಾಶಕವೂ, ಬ್ರಹ್ಮಹತ್ಯಾಪರಿಹಾರಕವೂ ಆದ ಈ ಅಧ್ಯಾಯವನ್ನು ಪಠಿಸಿದವನು ಹಿಂದಿರುಗುವಿಕೆಯಿಲ್ಲದ ಮೋಕ್ಷವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ
"ಲಕ್ಷ್ಮಣತೀರ್ಥಪ್ರಶಂಸನ–ಬಲಭದ್ರಬ್ರಹ್ಮಹತ್ಯಾವಿಮೋಕ್ಷಣ"ವೆಂಬ
ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ವಿಂಶೋಽಧ್ಯಾಯಃ

### ಜಟಾತೀರ್ಥ ಪ್ರಶಂಸನಂ — ಶುಕಚಿತ್ತಶುದ್ಧಿ ವರ್ಣನಂ

ಶ್ರೀ ಸೂತ ಉವಾಚ :—

ಲಕ್ಷ್ಮಣಸ್ಯ ಮಹಾತೀರ್ಥೇ ಬ್ರಹ್ಮಹತ್ಯಾವಿನಾಶನೇ ।
ಸ್ನಾತ್ವಾ ಸ್ವಚಿತ್ತಶುದ್ಧ್ಯರ್ಥಂ ಜಟಾತೀರ್ಥಂ ತತೋ ವ್ರಜೇತ್ ॥ ೧ ॥
ಜನ್ಮಮೃತ್ಯುಜರಾಕ್ರಾಂತಸಂಸಾರಾತುರಚೇತಸಾಂ ।
ಅಜ್ಞಾನನಾಶಕಂ ನಾಽಸ್ತಿ ಜಟಾತೀರ್ಥಾದೃತೇ ದ್ವಿಜಾಃ ॥ ೨ ॥
ಲೋಕೇ ಮುಮುಕ್ಷವಃ ಕೇಚಿಚ್ಚಿತ್ತಶುದ್ಧಿಮಭೀಪ್ಸವಃ ।
ವಾಚಾ ಪಠಂತಿ ವೇದಾಂತಾಂಸ್ತೂಷ್ಣೀಸ್ನಾನುಭವಂತಿ ತೇ ॥ ೩ ॥
ಪೂರ್ವಪಕ್ಷಮಹಾಗ್ರಾಹೇ ಸಿದ್ಧಾಂತಝುಷಸಂಕುಲೇ ।
ವೇದಾಂತಾಬ್ಧಾವಿಹಾಽಜ್ಞಾನಂ ಮುಹ್ಯಂತಿ ಪತಿತಾ ದ್ವಿಜಾಃ ॥ ೪ ॥
ಪ್ರಥಮಂ ಚಿತ್ತಶುದ್ಧ್ಯರ್ಥಂ ವೇದಾಂತಾನ್ಸಂಪಠಂತಿ ಯೇ ।
ವಿವದಂತೇ ಪಠಿತ್ವಾ ತೇ ಕಲಹಂ ಚ ವಿತನ್ವತೇ ॥ ೫ ॥

---

## ಕನ್ನಡದ ಅನುವಾದ

### ಜಟಾತೀರ್ಥಪ್ರಶಂಸನ—ಶುಕಚಿತ್ತಶುದ್ಧಿವರ್ಣನ

೧. ಶ್ರೀಸೂತನು ಹೇಳುತ್ತಾನೆ:— ಬ್ರಹ್ಮಹತ್ಯೆಯನ್ನು ಪರಿಹರಿಸುವ ಲಕ್ಷ್ಮಣಮಹಾತೀರ್ಥದಲ್ಲಿ ಮಿಂದು ಯಾತ್ರಿಕನು ಚಿತ್ತಶುದ್ಧಿಗಾಗಿ ಜಟಾತೀರ್ಥಕ್ಕೆ ಹೋಗಬೇಕು.

೨. ಎಲೈ ಬ್ರಾಹ್ಮಣರೆ! ಜನ್ಮ, ಮೃತ್ಯು, ಜರೆಗಳಿಗೆ ತುತ್ತಾಗಿ ಸಂಸಾರದಿಂದ ದುಃಖಗೊಂಡ ಮಾನವರಿಗೆ ಜಟಾತೀರ್ಥವನ್ನು ಬಿಟ್ಟು ಅಜ್ಞಾನವನ್ನು ಪರಿಹರಿಸುವ ಮತ್ತೊಂದು ತೀರ್ಥವಿರುವುದಿಲ್ಲ.

೩. ಲೋಕದಲ್ಲಿ ಮೋಕ್ಷಾರ್ಥಿಗಳಾಗಿ ಚಿತ್ತಶುದ್ಧಿಯನ್ನು ಬಯಸುವ ಕೆಲವು ಜನರು ಸುಮ್ಮನೆ ವೇದಾಂತವನ್ನು ಓದುತ್ತಾರೆ. ಅದನ್ನು ಅನುಭವಿಸುವುದಿಲ್ಲ (ಅನುಷ್ಠಾನಮಾಡುವುದಿಲ್ಲ).

೪. ಪೂರ್ವಪಕ್ಷವೆಂಬ ದೊಡ್ಡ ಮೊಸಳೆಯುಳ್ಳುದೂ, ಸಿದ್ಧಾಂತವೆಂಬ ಮೀನುಗಳುಳ್ಳುದೂ ಆದ ವೇದಾಂತವೆಂಬ ಈ ಸಾಗರದಲ್ಲಿ ಬಿದ್ದು ಅವರೆಲ್ಲರೂ ಮೂಢರಾಗುವರು.

೫. ಮೊದಲು ಮನಸ್ಸಿನ ಶುದ್ಧಿಗಾಗಿ ವೇದಾಂತವನ್ನು ಪಠಿಸಿ ವಿವಾದ ಮಾಡುತ್ತ ಜಗಳವನ್ನು ಹೆಚ್ಚಿಸುವರು.

ಚಿತ್ತಶುದ್ಧಿರ್ನ ವೇದಾಂತಾದ್ಬಹುವ್ಯಾಮೋಹಕಾರಣಾತ್ ।
ತತೋ ವಯಂ ನ ವೇದಾಂತಾನ್ಮುನೀಂದ್ರಾ ಬಹು ಮನ್ಮಹೇ ॥ ೬ ॥
ಚಿತ್ತಶುದ್ಧಿಂ ಯದೀಚ್ಛಧ್ವಂ ಲಘೂಪಾಯೇನ ತಾಪಸಾಃ ।
ಉದ್ಘೋಷಯಾಮಿ ಸರ್ವೇಷಾಂ ಜಟಾತೀರ್ಥಂ ನಿಷೇವತ ॥ ೭ ॥
ಪುರಾ ಸರ್ವೋಪಕಾರಾರ್ಥಂ ತೀರ್ಥಮಜ್ಞಾನನಾಶನಂ ।
ಏತದ್ವಿನಿರ್ಮಿತಂ ಸಾಕ್ಷಾಚ್ಛಂಭುನಾ ಗಂಧಮಾದನೇ ॥ ೮ ॥
ನಿಹತೇ ರಾವಣೇ ವಿಪ್ರಾ ಜಟಾಂ ರಾಮಸ್ತು ಧಾರ್ಮಿಕಃ ।
ಕ್ಷಾಲಯಾಮಾಸ ಯತ್ರೋಯೇ ತಜ್ಜಟಾತೀರ್ಥಮುಚ್ಯತೇ ॥ ೯ ॥
ವರ್ಷಾಣಾಂ ಷಷ್ಟಿಸಾಹಸ್ರಂ ಜಾಹ್ನವೀಜಲಮಜ್ಜನಂ ।
ಗೋದಾವರ್ಯಾಂ ಸಕೃತ್ಸ್ನಾನಂ ಸಿಂಹಸ್ಥೇ ಚ ಬೃಹಸ್ಪತೌ ॥ ೧೦ ॥
ತಾವತ್ಸಹಸ್ರಸ್ನಾನಾನಿ ಸಿಂಹಂ ದೇವಗುರೌ ಗತೇ ।
ಗೋಮತ್ಯಾಂ ಲಭ್ಯತೇ ವರ್ಷೈಸ್ತಜ್ಜಟಾತೀರ್ಥದರ್ಶನಾತ್ ॥ ೧೧ ॥
ಜಟಾತೀರ್ಥೇ ಮನುಷ್ಯಾಣಾಂ ಸ್ನಾತಾನಾಂ ದ್ವಿಜಪುಂಗವಾಃ ।
ಅಂತಃಕರಣಶುದ್ಧಿಃ ಸ್ಯಾತ್ತತೋಽಜ್ಞಾನಂ ವಿನಶ್ಯತಿ ॥ ೧೨ ॥

---

೬. ಅತ್ಯಂತ ಭ್ರಾಂತಿಯನ್ನುಂಟುಮಾಡುವ ವೇದಾಂತದಿಂದ ಚಿತ್ತಶುದ್ಧಿಯಾಗುವುದಿಲ್ಲ. ಆದುದರಿಂದ ನಾವು ವೇದಾಂತವನ್ನು ಗೌರವಿಸುವುದಿಲ್ಲ.

೭. ಎಲೈ ಮುನಿಗಳೆ! ನೀವು ಸಣ್ಣ ಉಪಾಯದಿಂದಲೇ ಮನಶ್ಶುದ್ಧಿಯಾಗಬೇಕೆಂದು ಬಯಸುವುದಾದರೆ, ಸಾರಿ ಹೇಳುತ್ತೇನೆ. ಜಟಾತೀರ್ಥವನ್ನು ಸೇವಿಸಿರಿ.

೮. ಹಿಂದೆ ಪರಮೇಶ್ವರನು ಸಕಲ ಜನರಿಗೂ ಉಪಕಾರಮಾಡಲೋಸುಗ ಗಂಧಮಾದನಪರ್ವತದಲ್ಲಿ ಅಜ್ಞಾನಪರಿಹಾರಕವಾದ ಈ ಜಟಾತೀರ್ಥವನ್ನು ನಿರ್ಮಿಸಿರುವನು.

೯. ರಾಮನು ರಾವಣನನ್ನು ಕೊಂದು ತನ್ನ ಜಟೆಯನ್ನು ಇಲ್ಲಿ ತೊಳೆದುದರಿಂದ ಇದಕ್ಕೆ ಜಟಾತೀರ್ಥವೆಂದು ಹೆಸರುಬಂದಿತು.

೧೦–೧೧. ಅರುವತ್ತುಸಾವಿರ ವರ್ಷಗಳಕಾಲ ಗಂಗಾಸ್ನಾನ, ಬೃಹಸ್ಪತಿಯು ಸಿಂಹರಾಶಿಯಲ್ಲಿರಲು ಗೋದಾವರಿಯಲ್ಲಿ ಒಂದಾವೃತ್ತಿ ಸ್ನಾನ, ಗೋಮತೀನದಿಯಲ್ಲಿ ಸಾವಿರಸ್ನಾನ–ಇವುಗಳ ಫಲವು ಜಟಾತೀರ್ಥದ ದರ್ಶನದಿಂದಲೇ ಲಭಿಸುವುದು.

೧೨. ಜಟಾತೀರ್ಥದಲ್ಲಿ ಮಿಂದ ಮಾನವರ ಅಂತಃಕರಣವು ಶುದ್ಧವಾಗುವುದು. ಅದರಿಂದ ಅಜ್ಞಾನವೂ ಪರಿಹಾರವಾಗುವುದು.

ಅಜ್ಞಾನನಾಶೇ ಜ್ಞಾನಂ ಸ್ಯಾತ್ತತೋ ಮುಕ್ತಿಮವಾಪ್ಸ್ಯತಿ ।
ಅಖಂಡಸಚ್ಚಿದಾನಂದಸಂಪೂರ್ಣಃ ಸ್ಯಾತ್ತತಃ ಪರಂ ॥ ೧೩ ॥
ಅತ್ರಾಽಪ್ಯುದಾಹರಂತೀಮಮಿತಿಹಾಸಂ ಪುರಾತನಂ ।
ಪಿತುಃ ಪುತ್ರಸ್ಯ ಸಂವಾದಂ ವ್ಯಾಸಸ್ಯ ಚ ಶುಕಸ್ಯ ಚ ॥ ೧೪ ॥
ಪುರಾ ಮುನಿವರಂ ಕೃಷ್ಣಂ ಭಾವಿತಾತ್ಮಾನಮಚ್ಯುತಂ ।
ಪಾರಂಪರ್ಯವಿಶೇಷಜ್ಞಂ ಸರ್ವಶಾಸ್ತ್ರಾರ್ಥಕೋವಿದಂ ।
ಪ್ರಣಮ್ಯ ಶಿರಸಾ ವ್ಯಾಸಂ ಶುಕಃ ಪಪ್ರಚ್ಛ ವೈ ದ್ವಿಜಾಃ ॥ ೧೫ ॥

ಶ್ರೀ ಶುಕ ಉವಾಚ:—

ಭಗವಂಸ್ತಾತ ಸರ್ವಜ್ಞ ಬ್ರೂಹಿ ಗುಹ್ಯಮನುತ್ತಮಂ ॥ ೧೬ ॥
ಅಂತಃಕರಣಶುದ್ಧಿಃ ಸ್ಯಾತ್ತಥಾಽಜ್ಞಾನವಿನಾಶನಂ ।
ಜ್ಞಾನೋದಯಶ್ಚ ಯೇನ ಸ್ಯಾದಂತೇ ಮುಕ್ತಿಶ್ಚ ಶಾಶ್ವತೀ ॥ ೧೭ ॥
ತಮುಪಾಯಂ ವದಸ್ವಾಽದ್ಯ ಸ್ನೇಹಾನ್ಮಮ ಮಹಾಮುನೇ ।
ವೇದಾಂತಾಂಶ್ಚೇತಿಹಾಸಾಂಶ್ಚ ಪುರಾಣಾದೀನಿ ಕೃತ್ಸ್ನಶಃ ॥ ೧೮ ॥
ಅಧೀತಾನಿ ಮಯಾ ತ್ವತ್ತಃ ಶೋಧಯಂತಿ ನ ಮಾನಸಂ ।
ಅತೋ ಮೇ ಚಿತ್ತಶುದ್ಧಿಃ ಸ್ಯಾದ್ಯಥಾ ತಾತ ತಥಾ ವದ ॥ ೧೯ ॥

---

೧೩. ಅಜ್ಞಾನವು ತೊಲಗಲು ಜ್ಞಾನವುಂಟಾಗುವುದು. ಅದರಿಂದ ಮಾನವನು ಮುಕ್ತಿಯನ್ನು ಪಡೆಯುವನು. ಅನಂತರ ಅವನು ಸಚ್ಚಿದಾನಂದ ಪೂರ್ಣನಾಗುವನು.

೧೪. ಈ ವಿಷಯದಲ್ಲಿ ತಂದೆಮಕ್ಕಳಾದ ವ್ಯಾಸಶುಕರ ಸಂವಾದರೂಪವೂ, ಪುರಾತನವೂ ಆದ ಈ ಇತಿಹಾಸವನ್ನು ಹೇಳುತ್ತಾರೆ.

೧೫. ಹಿಂದೆ ಶುಕಮುನಿಯು ಬ್ರಹ್ಮಜ್ಞಾನಿಯೂ, ಅಚ್ಯುತರೂಪನೂ, ಪಾರಂಪರ್ಯವಿಶೇಷವನ್ನರಿತವನೂ, ಸಕಲಶಾಸ್ತ್ರಪಂಡಿತನೂ ಆದ ವ್ಯಾಸ ಮುನೀಶ್ವರನನ್ನು ನಮಸ್ಕರಿಸಿ ಹೀಗೆ ಪ್ರಶ್ನಿಸಿದನು.

೧೬–೧೭. ಶ್ರೀಶುಕನು ಹೇಳುತ್ತಾನೆ:—"ಸರ್ವಜ್ಞನೂ, ಪೂಜ್ಯನೂ ಆದ ಎಲೈ ತಂದೆಯೆ! ಈ ಉತ್ತಮ ರಹಸ್ಯವನ್ನು ನನಗೆ ಹೇಳು. ಯಾವುದರಿಂದ ಮನಸ್ಸು ಶುದ್ಧವಾಗಿ ಅಜ್ಞಾನವು ಪರಿಹಾರವಾಗುವುದು? ಯಾವುದರಿಂದ ಜ್ಞಾನೋದಯವಾಗಿ ಕೊನೆಯಲ್ಲಿ ಶಾಶ್ವತ ಮುಕ್ತಿಯು ದೊರಕುವುದು?

೧೮–೧೯. ಮಹರ್ಷಿಯೆ! ಅದಕ್ಕೆ ಉಪಾಯವನ್ನು ಹೇಳು. ನಾನು ನಿನ್ನಿಂದ ವೇದಾಂತ, ಇತಿಹಾಸ, ಪುರಾಣ ಇವೇ ಮೊದಲಾದುವುಗಳನ್ನು ಸಂಪೂರ್ಣವಾಗಿ ಓದಿರುತ್ತೇನೆ. ಆದರೂ ಅವುಗಳು ನನ್ನ ಮನಸ್ಸನ್ನು ಪರಿಶುದ್ಧಿಗೊಳಿಸುವುದಿಲ್ಲ. ಆದುದರಿಂದ ಚಿತ್ತಶುದ್ಧಿಗೆ ಉಪಾಯವನ್ನು ತಿಳಿಯಹೇಳು."

ಇತಿ ಪೃಷ್ಟಸ್ತದಾ ವ್ಯಾಸಃ ಶುಕೇನ ಮುನಿಸತ್ತಮಾಃ ।
ರಹಸ್ಯಂ ಕಥಯಾಮಾಸ ಯೇನಾಽವಿದ್ಯಾ ವಿನಶ್ಯತಿ ॥ ೨೦ ॥

ವ್ಯಾಸ ಉವಾಚ:—

ಶುಕ ವಕ್ಷ್ಯಾಮಿ ತೇ ಗುಹ್ಯಮವಿದ್ಯಾಗ್ರಂಥಿಭೇದನಂ ।
ಬುದ್ಧಿಶುದ್ಧಿಪ್ರದಂ ಪುಂಸಾಂ ಜನ್ಮಾದಿಭಯನಾಶನಂ ॥ ೨೧ ॥
ರಾಮಸೇತೌ ಮಹಾಪುಣ್ಯೇ ಗಂಧಮಾದನಪರ್ವತೇ ।
ವಿದ್ಯತೇ ಪಾಪಸಂಹಾರಿ ಜಟಾತೀರ್ಥಮಿತಿ ಶ್ರುತಂ ॥ ೨೨ ॥
ಜಟಾಂ ಸ್ವಾಂ ಶೋಧಯಾಮಾಸ ಯತ್ರ ರಾಮೋ ಹರಿಃ ಸ್ವಯಂ ।
ರಾಮೋ ದಾಶರಥಿಃ ಶ್ರೀಮಾಂಸ್ತೀರ್ಥಾಯ ಚ ವರಂ ದದೌ ॥ ೨೩ ॥
ಸ್ನಾಂತಿ ಯೇಽತ್ರ ಸಮಾಗತ್ಯ ಜಟಾತೀರ್ಥೇಽತಿಪಾವನೇ ।
ಅಂತಃಕರಣಶುದ್ಧಿಶ್ಚ ತೇಷಾಂ ಭೂಯಾದಿತಿಸ್ಮ ಸಃ ॥ ೨೪ ॥
ವಿನಾ ಯಜ್ಞಂ ವಿನಾ ಜ್ಞಾನಂ ವಿನಾ ಜಾಪ್ಯಮುಪೋಷಣಂ ।
ಸ್ನಾನಮಾತ್ರಾಜ್ಜಟಾತೀರ್ಥೇ ಬುದ್ಧಿಶುದ್ಧಿರ್ಭವೇನ್ನೃಣಾಂ ॥ ೨೫ ॥
ಸರ್ವದಾನಸಮಂ ಪುಣ್ಯಂ ಸ್ನಾನಾದತ್ರ ಭವಿಷ್ಯತಿ ।
ದುರ್ಗಾಣ್ಯನೇನ ತರತಿ ಪುಣ್ಯಲೋಕಾನ್ಸಮಶ್ನುತೇ ॥ ೨೬ ॥

---

೨೦. ಮುನಿವರ್ಯರೆ! ಶುಕನು ಹೀಗೆ ಕೇಳಲು ವ್ಯಾಸನು ಅವಿದ್ಯೆಯ ನಾಶಕ್ಕೆ ಕಾರಣವಾದ ರಹಸ್ಯವನ್ನು ಹೇಳಿದನು.

೨೧. ವ್ಯಾಸನು ಹೇಳುತ್ತಾನೆ:—"ಶುಕ! ಅವಿದ್ಯೆಯೆಂಬ ಗ್ರಂಥಿಯನ್ನು ಭೇದಿಸುವುದೂ, ಮನಸ್ಸನ್ನು ಶುದ್ಧಮಾಡುವುದೂ, ಮಾನವರ ಜನ್ಮಾದಿ ಭಯವನ್ನು ಹೋಗಲಾಡಿಸುವುದೂ ಆದ ರಹಸ್ಯವನ್ನು ನಿನಗೆ ಹೇಳುವೆನು, ಕೇಳು.

೨೨. ರಾಮಸೇತುವೆಯಲ್ಲಿರುವ ಪುಣ್ಯಕರವಾದ ಗಂಧಮಾದನಪರ್ವತದಲ್ಲಿ ಪಾಪಪರಿಹಾರಕವಾದ ಜಟಾತೀರ್ಥವೊಂದಿರುವುದು.

೨೩. ಇದರಲ್ಲಿ ಶ್ರೀರಾಮನು ತನ್ನ ಜಟೆಯನ್ನು ಶೋಧಿಸಿ ಇದಕ್ಕೆ ವರವನ್ನಿತ್ತಿರುವನು.

೨೪. ಅತಿ ಪವಿತ್ರವಾದ ಈ ಜಟಾತೀರ್ಥಕ್ಕೆ ಬಂದು ಇದರಲ್ಲಿ ಸ್ನಾನ ಮಾಡಿದವರ ಮನಸ್ಸು ಶುದ್ಧವಾಗುವುದು.

೨೫. ಯಜ್ಞ, ಜ್ಞಾನ, ಜಪ, ಉಪವಾಸ ಇವುಗಳಿಲ್ಲದೆ ಈ ಜಟಾತೀರ್ಥದಲ್ಲಿ ಸ್ನಾನಮಾಡುವುದರಿಂದ ಮಾತ್ರ ಮಾನವರ ಬುದ್ಧಿಯು ಶುದ್ಧವಾಗುವುದು.

೨೬. ಇಲ್ಲಿ ಸ್ನಾನದಿಂದ ಸಕಲ ದಾನಗಳಿಗೆ ಸಮವಾದ ಪುಣ್ಯವು ಲಭಿಸುವುದು. ಇದರಿಂದಲೇ ಮಾನವರು ಕಷ್ಟಗಳನ್ನು ಕಳೆದು ಪುಣ್ಯಲೋಕಗಳನ್ನು ಸೇರುವರು.

ಮಹತ್ವಮಶ್ನುತೇ ಸ್ನಾನಾಜ್ಜಟಾತೀರ್ಥೇ ಶುಭೋದಕೇ ।
ಜಟಾತೀರ್ಥಂ ವಿನಾ ನಾಽನ್ಯದಂತಃಕರಣಶುದ್ಧಯೇ ॥ ೨೭ ॥
ವಿದ್ಯತೇ ನಿಯಮೋ ವಾಽಪಿ ಜಪೋ ವಾ ನಾನ್ಯದೇವತಾ ।
ಧನ್ಯಂ ಯಶಸ್ಯಮಾಯುಷ್ಯಂ ಸರ್ವಲೋಕೇಷು ವಿಶ್ರುತಂ ॥ ೨೮ ॥
ಪವಿತ್ರಾಣಾಂ ಪವಿತ್ರಂ ಚ ಜಟಾತೀರ್ಥಂ ಶುಕಾಽಧುನಾ ।
ಸರ್ವಪಾಪಪ್ರಶಮನಂ ಮಂಗಲಾನಾಂ ಚ ಮಂಗಲಂ ॥ ೨೯ ॥
ಭೃಗುರ್ವೈ ವಾರುಣಿಃ ಪೂರ್ವಂ ವರುಣಂ ಪಿತರಂ ಶುಕ ।
ಬುದ್ಧಿಶುದ್ಧಿಪ್ರದೋಪಾಯಮಪೃಚ್ಛತ್ಪಾವನಂ ಶುಭಂ ।
ಪ್ರೋವಾಚ ವರುಣಸ್ತಸ್ಮೈ ಬುದ್ಧಿಶುದ್ಧಿಪ್ರದಂ ಶುಭಂ ॥ ೩೦ ॥

ವರುಣ ಉವಾಚ :—

ರಾಮಸೇತೌ ಭೃಗೋ ಪುಣ್ಯೇ ಗಂಧಮಾದನಪರ್ವತೇ ॥ ೩೧ ॥
ಸ್ನಾನಮಾತ್ರಾಜ್ಜಟಾತೀರ್ಥೇ ಬುದ್ಧಿಶುದ್ಧಿರ್ಭವೇದ್ಧ್ರುವಂ ।
ಸ ಪಿತುರ್ವಚನಾತ್ಸದ್ಯೋ ಭೃಗುರ್ವೈ ವರುಣಾತ್ಮಜಃ ॥ ೩೨ ॥
ಗತ್ವಾ ಸ್ನಾತ್ವಾ ಜಟಾತೀರ್ಥೇ ಬುದ್ಧಿಶುದ್ಧಿಮವಾಪ್ತವಾನ್ ।
ವಿನಷ್ಟಜ್ಞಾನಸಂತಾನಸ್ತಯಾ ಶುದ್ಧ್ಯಾ ತದಾ ಭೃಗುಃ ॥ ೩೩ ॥

---

೨೭–೨೯. ಶುಭಜಲವುಳ್ಳ ಜಟಾತೀರ್ಥದಲ್ಲಿ ಸ್ನಾನಮಾಡುವುದರಿಂದ ಮಾನವನು ಮಹತ್ವವನ್ನು ಪಡೆಯುವನು. ಈ ತೀರ್ಥವನ್ನು ಬಿಟ್ಟರೆ ಮನಸ್ಸನ್ನು ಶುದ್ಧಗೊಳಿಸುವ ವ್ರತ, ಜಪ, ಇತರ ದೇವತೆ ಯಾವುದೂ ಇರುವುದಿಲ್ಲ. ಎಲೈ ಶುಕನೇ! ಜಟಾತೀರ್ಥವು ಪುಣ್ಯಕರವೂ, ಕೀರ್ತಿ ಮತ್ತು ಆಯುಸ್ಸುಗಳನ್ನುಂಟು ಮಾಡುವುದೂ, ಸಮಸ್ತ ಲೋಕಗಳಲ್ಲಿ ಪ್ರಸಿದ್ಧವಾದುದೂ, ಪವಿತ್ರವಾದವುಗಳಲ್ಲಿ ಪವಿತ್ರವಾದುದೂ, ಸಕಲ ಪಾಪನಾಶಕವೂ, ಮಂಗಳವಸ್ತುಗಳಿಗೆ ಮಂಗಳವನ್ನುಂಟುಮಾಡುವುದೂ ಆಗಿರುವುದು.

೩೦. ವರುಣನ ಮಗನಾದ ಭೃಗುವು ತಂದೆಯಾದ ಆತನನ್ನು ಕುರಿತು ಮನಸ್ಸನ್ನು ಶುದ್ಧಗೊಳಿಸುವ ಪವಿತ್ರವಾದ ವಸ್ತುವು ಯಾವುದೆಂದು ಕೇಳಿದನು. ವರುಣನು ಅವನಿಗೆ ಮನಸ್ಸಿನ ಶುದ್ಧಿಯನ್ನುಂಟುಮಾಡುವುದೂ, ಶುಭಕರವೂ ಆದ ಈ ಜಟಾತೀರ್ಥದ ವಿಚಾರವನ್ನು ತಿಳಿಸಿರುವನು.

೩೧–೩೪. ವರುಣನು ಹೇಳುತ್ತಾನೆ:—"ಭೃಗುವೆ! ರಾಮಸೇತುವೆಯಲ್ಲಿರುವ ಪುಣ್ಯಕರವಾದ ಗಂಧಮಾದನಪರ್ವತದ ಜಟಾತೀರ್ಥದಲ್ಲಿ ಸ್ನಾನಮಾಡುವುದರಿಂದ ಮನಸ್ಸು ಶುದ್ಧವಾಗುವುದು" ಎನ್ನಲು, ಆ ಭೃಗುವು ತಂದೆಯ ಮಾತಿನಂತೆ ಕೂಡಲೆ ಜಟಾತೀರ್ಥಕ್ಕೆ ಬಂದು ಅಲ್ಲಿ ಮಿಂದು ಶುದ್ಧಮನಸ್ಸುಳ್ಳವನಾದನು. ಆಗ ಅವನು ಆ ಬುದ್ಧಿಶುದ್ಧಿಯಿಂದ ಅಜ್ಞಾನರಹಿತನಾಗಿ ತಂದೆ

ಉತ್ಪನ್ನಾಽದ್ವೈತವಿಜ್ಞಾನಃ ಸ್ವಪಿತುರ್ವರುಣಾದಯಂ ।
ಅಖಂಡಸಚ್ಚಿದಾನಂದಪೂರ್ಣಾಕಾರೋಽಭವಚ್ಛುಕ ॥ ೩೪ ॥
ಶಂಕರಾಂಶೋಽಪಿ ದುರ್ವಾಸಾ ಜಟಾತೀರ್ಥೇಽಭಿಷೇಕತಃ ।
ಮನಃಶುದ್ಧಿಮವಾಪ್ಯಾಶು ಬ್ರಹ್ಮಾನಂದಮಯೋಽಭವತ್ ॥ ೩೫ ॥
ದತ್ತಾತ್ರೇಯೋಽಪಿ ವಿಷ್ಣ್ವಂಶಸ್ತೀರ್ಥೇಽಸ್ಮಿನ್ನಭಿಷೇಚನಾತ್ ।
ಶುದ್ಧಾಂತಃಕರಣೋ ಭೂತ್ವಾ ಬ್ರಹ್ಮಾಕಾರೋಽಭವಚ್ಛುಕ ॥ ೩೬ ॥
ಇಚ್ಛೇದಜ್ಞಾನನಾಶಂ ಯಃ ಸ ಸ್ನಾಯಾತ್ತು ಜಟಾಽಭಿಧೇ ।
ತೀರ್ಥೇ ಶುದ್ಧತಮೇ ಪುಣ್ಯೇ ಸರ್ವಪಾಪವಿನಾಶನೇ ॥ ೩೭ ॥
ಜಟಾತೀರ್ಥಮತಸ್ತ್ವಂ ಚ ಶುಕ ಗಚ್ಛ ಮಹಾಮತೇ ।
ಮನಃಶುದ್ಧಿಪ್ರದೇ ತಸ್ಮಿನ್ ಸ್ನಾನಂ ಚ ಕುರು ಪುಣ್ಯದೇ ॥ ೩೮ ॥
ಪಿತ್ರೈವಮುಕ್ತೋ ವ್ಯಾಸೇನ ಶುಕಃ ಪುತ್ರಸ್ತದಾ ದ್ವಿಜಾಃ ।
ರಾಮಸೇತುಂ ಮಹಾಪುಣ್ಯಂ ಗಂಧಮಾದನಪರ್ವತಂ ॥ ೩೯ ॥
ಅಗಮತ್ಸ್ನಾತುಕಾಮಃ ಸನ್ ಜಟಾತೀರ್ಥೇ ವಿಶುದ್ಧಿದೇ ।
ಸ್ನಾತ್ವಾ ಸಂಕಲ್ಪಪೂರ್ವಂ ಚ ಜಟಾತೀರ್ಥೇ ಶುಕೋ ಮುನಿಃ ॥ ೪೦ ॥
ಮನಃಶುದ್ಧಿಮನುಪ್ರಾಪ್ಯ ತೇನಚಾಽಜ್ಞಾನನಾಶನೇ ।
ಸ್ವಸ್ವರೂಪಂ ಸಮಾಪನ್ನಃ ಪರಮಾನಂದರೂಪಕಂ ॥ ೪೧ ॥

---

ಯಾದ ವರುಣನಿಂದ ಅದ್ವೈತಜ್ಞಾನವನ್ನು ಪಡೆದು ಅಖಂಡಸಚ್ಚಿದಾನಂದ ಪೂರ್ಣನಾದನು.

೩೫. ಶಂಕರನ ಅಂಶವಾದ ದುರ್ವಾಸನು ಜಟಾತೀರ್ಥದಲ್ಲಿ ಸ್ನಾನಮಾಡಿ ಮನಶ್ಶುದ್ಧಿಯನ್ನು ಪಡೆದು ಬ್ರಹ್ಮಾನಂದಪೂರ್ಣನಾದನು.

೩೬. ವಿಷ್ಣ್ವಂಶವಾದ ದತ್ತಾತ್ರೇಯನು ಈ ತೀರ್ಥದಲ್ಲಿ ಸ್ನಾನಮಾಡಿ ಶುದ್ಧಮನಸ್ಸುಳ್ಳವನಾಗಿ ಬ್ರಹ್ಮಾಕಾರನಾದನು.

೩೭. ಅಜ್ಞಾನವನ್ನು ಪರಿಹರಿಸಿಕೊಳ್ಳಬಯಸುವವನು ಶುದ್ಧವೂ, ಪುಣ್ಯಕರವೂ, ಸಕಲ ಪಾಪನಾಶಕವೂ ಆದ ಈ ಜಟಾತೀರ್ಥದಲ್ಲಿ ಸ್ನಾನಮಾಡಬೇಕು.

೩೮. ಆದುದರಿಂದ ಎಲೈ ಶುಕನೆ! ನೀನು ಜಟಾತೀರ್ಥಕ್ಕೆ ಹೋಗು. ಮನಶ್ಶುದ್ಧಿಯನ್ನುಂಟುಮಾಡುವ ಆ ಪುಣ್ಯತೀರ್ಥದಲ್ಲಿ ಸ್ನಾನಮಾಡು.''

೩೯–೪೧. ತಂದೆಯು ಹೀಗೆ ಹೇಳಲು, ಶುಕನು ಪುಣ್ಯಕರವಾದ ಗಂಧಮಾದನಪರ್ವತದಲ್ಲಿರುವ ಶುದ್ಧಿದಾಯಕವಾದ ಜಟಾತೀರ್ಥದಲ್ಲಿ ಸ್ನಾನಮಾಡಲೋಸುಗ ಹೋದನು. ಅಲ್ಲಿ ಜಟಾತೀರ್ಥದಲ್ಲಿ ಸಂಕಲ್ಪಪೂರ್ವಕವಾಗಿ ಮಿಂದು ಮನಶ್ಶುದ್ಧಿಯನ್ನು ಪಡೆದು, ಅಜ್ಞಾನರಹಿತನಾಗಿ ಪರಮಾನಂದರೂಪವಾದ ಸ್ವಸ್ವರೂಪವನ್ನು ಹೊಂದಿದನು.

ಯೇ ಚಾಽಪ್ಯನ್ಯೇ ಮನಃಶುದ್ಧಿಕಾಮಾಃ ಸಂತಿ ದ್ವಿಜೋತ್ತಮಾಃ ।
ಜಟಾತೀರ್ಥೇ ತು ತೇ ಸರ್ವೇ ಸ್ನಾಂತು ಭಕ್ತಿಪುರಸ್ಸರಂ ॥ ೪೨ ॥
ಅಹೋ ಜನಾ ಜಟಾತೀರ್ಥೇ ಕಾಮಧೇನುಸಮೇ ಶುಭೇ ।
ವಿದ್ಯಮಾನೇಽಪಿ ಕಿಂ ತುಚ್ಛೇ ರಮಂತೇಽನ್ಯತ್ರ ಮೋಹಿತಾಃ ॥ ೪೩ ॥
ಭುಕ್ತಿಕಾಮೋ ಲಭೇದ್ಭುಕ್ತಿಂ ಮುಕ್ತಿಕಾಮಸ್ತು ತಾಂ ಲಭೇತ್ ।
ಸ್ನಾನಮಾತ್ರಾಜ್ಜಟಾತೀರ್ಥೇ ಸತ್ಯಮುಕ್ತಂ ಮಯಾ ದ್ವಿಜಾಃ ॥ ೪೪ ॥
ವೇದಾಽಧ್ಯಯನಾತ್ಪುಣ್ಯಾದ್ಯಜ್ಞಾದ್ದಾನಾತ್ತಪೋವ್ರತಾತ್ ।
ಉಪವಾಸಾಜ್ಜಪಾದ್ಯೋಗಾನ್ಮನಃಶುದ್ಧಿರ್ನೃಣಾಂ ಭವೇತ್ ॥ ೪೫ ॥
ವಿನಾಪ್ಯೇತಾನಿ ವಿಪ್ರೇಂದ್ರಾ ಜಟಾತೀರ್ಥೇಽತಿಪಾವನೇ ।
ಸ್ನಾನಮಾತ್ರಾನ್ಮನಃಶುದ್ಧಿರ್ಬ್ರಾಹ್ಮಣಾನಾಂ ಧ್ರುವಂ ಭವೇತ್ ॥ ೪೬ ॥
ಜಟಾತೀರ್ಥಸ್ಯ ಮಾಹಾತ್ಮ್ಯಂ ಮಯಾ ವಕ್ತುಂ ನ ಶಕ್ಯತೇ ।
ಶಂಕರೋ ವೇತ್ತಿ ತತ್ತೀರ್ಥಂ ಹರಿರ್ವೇತ್ತಿ ವಿಧಿಸ್ತಥಾ ॥ ೪೭ ॥
ಜಟಾತೀರ್ಥಸಮಂ ತೀರ್ಥಂ ನ ಭೂತಂ ನ ಭವಿಷ್ಯತಿ ।
ಜಟಾತೀರ್ಥಸ್ಯ ತೀರೇ ಯಃ ಕ್ಷೇತ್ರಪಿಂಡಂ ಸಮಾಚರೇತ್ ॥ ೪೮ ॥

---

೪೨. ಮನಶ್ಶುದ್ಧಿಯನ್ನು ಬಯಸುವ ಇತರರೂ ಜಟಾತೀರ್ಥದಲ್ಲಿ ಭಕ್ತಿಯಿಂದ ಸ್ನಾನಮಾಡಲಿ.

೪೩. ಕಾಮಧೇನುವಿನಂತಿರುವ ಶುಭಜಟಾತೀರ್ಥವಿರಲು ಜನರು ಅಜ್ಞಾನದಿಂದ ಅಲ್ಪವಾದ ಇತರ ಕಡೆಗಳಲ್ಲಿ ವಿನೋದಗೊಳ್ಳುತ್ತಾರೆ. ಇದು ಆಶ್ಚರ್ಯಕರವಾದುದು !

೪೪. ಜಟಾತೀರ್ಥದಲ್ಲಿ ಸ್ನಾನಮಾಡುವುದರಿಂದ ಭೋಜನವನ್ನು ಅಪೇಕ್ಷಿಸುವವನು ಭೋಜನವನ್ನೂ, ಮುಕ್ತಿಯನ್ನು ಬಯಸುವವನು ಮುಕ್ತಿಯನ್ನೂ ಪಡೆಯುವನು. ಸತ್ಯವಾಗಿ ಹೇಳಿರುವೆನು.

೪೫. ವೇದಾಧ್ಯಯನ, ಯಜ್ಞ, ದಾನ, ತಪಸ್ಸು, ಉಪವಾಸ, ಜಪ, ಯೋಗ ಇವುಗಳಿಂದ ಮಾನವರ ಮನಸ್ಸು ಶುದ್ಧವಾಗುವುದು.

೪೬. ಅಯ್ಯಾ ಬ್ರಾಹ್ಮಣೋತ್ತಮರೇ ! ಅತಿ ಪವಿತ್ರವಾದ ಜಟಾತೀರ್ಥದಲ್ಲಿ ಸ್ನಾನಮಾತ್ರದಿಂದ ಇವುಗಳಿಲ್ಲದೆಯೆ ಬ್ರಾಹ್ಮಣರ ಮನಸ್ಸು ಶುದ್ಧವಾಗುವುದು.

೪೭. ಜಟಾತೀರ್ಥದ ಮಾಹಾತ್ಮ್ಯೆಯನ್ನು ನಾನು ಹೇಳಲು ಸಮರ್ಥನಲ್ಲ. ಆ ತೀರ್ಥವನ್ನು ಬ್ರಹ್ಮ, ವಿಷ್ಣು, ಮಹೇಶ್ವರರು ತಿಳಿಯುತ್ತಾರೆ.

೪೮–೪೯. ಜಟಾತೀರ್ಥಕ್ಕೆ ಸಮಾನವಾದ ತೀರ್ಥವು ಹಿಂದೆಯೂ ಇರಲಿಲ್ಲ; ಮುಂದೆಯೂ ಇರುವುದಿಲ್ಲ. ಜಟಾತೀರ್ಥದ ದಡದಲ್ಲಿ ಕ್ಷೇತ್ರಪಿಂಡದಾನವನ್ನು ಮಾಡಿದವನಿಗೆ ಗಯಾಶ್ರಾದ್ಧಸಮವಾದ ಪುಣ್ಯವು ಲಭಿಸುವುದು.

ಗಯಾಶ್ರಾದ್ಧಸಮಂ ಪುಣ್ಯಂ ತಸ್ಯ ಸ್ಯಾನ್ನಾಽತ್ರಸಂಶಯಃ ।
ಜಟಾತೀರ್ಥೇ ನರಃ ಸ್ನಾತ್ವಾ ನ ಪಾಪೇನ ವಿಲಿಪ್ಯತೇ ।
ದಾರಿದ್ರ್ಯಂ ನ ಸಮಾಪ್ನೋತಿ ನೇಯಾಚ್ಚ ನರಕಾಽರ್ಣವಂ ॥ ೪೯ ॥

ಶ್ರೀಸೂತ ಉವಾಚ :-

ಏವಂ ವಃ ಕಥಿತಂ ವಿಪ್ರಾ ಜಟಾತೀರ್ಥಸ್ಯ ವೈಭವಂ ॥ ೫೦ ॥
ಯತ್ರ ವ್ಯಾಸಸುತೋ ಯೋಗೀ ಸ್ನಾತ್ವಾ ಪಾಪವಿಮೋಚನೇ ।
ಅವಾಪ್ತವಾನ್ಮನಃಶುದ್ಧಿಮದ್ವೈತಜ್ಞಾನಸಾಧನಾಂ ॥ ೫೧ ॥
ಯಸ್ತ್ವಿಮಂ ಪಠತೇಽಧ್ಯಾಯಂ ಶೃಣುತೇ ವಾ ಸಮಾಹಿತಃ ।
ಸ ವಿಧೂಯೇಹ ಪಾಪಾನಿ ಲಭತೇ ವೈಷ್ಣವಂ ಪದಂ ॥ ೫೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಜಟಾತೀರ್ಥಪ್ರಶಂಸನಂ—ಶುಕಚಿತ್ತಶುದ್ಧಿವರ್ಣನಂ"ನಾಮ ವಿಂಶೋಽಧ್ಯಾಯಃ

---

ಇಲ್ಲಿ ಮಿಂದವನಿಗೆ ಪಾಪಲೇಪವಿರುವುದಿಲ್ಲವಲ್ಲದೆ, ಅವನು ದಾರಿದ್ರ್ಯವನ್ನೂ ಅನುಭವಿಸನು; ನರಕಭಾಗಿಯೂ ಆಗುವುದಿಲ್ಲ.

೫೦. ಶ್ರೀಸೂತನು ಹೇಳುತ್ತಾನೆ:—ಎಲೈ ಬ್ರಾಹ್ಮಣರೇ! ಹೀಗೆ ಜಟಾತೀರ್ಥದ ಮಾಹಾತ್ಮ್ಯವನ್ನು ನಿಮಗೆ ಹೇಳಿರುವೆನು.

೫೧–೫೨. ಜಟಾತೀರ್ಥದಲ್ಲಿ ವ್ಯಾಸತನಯನಾದ ಶುಕಯೋಗಿಯು ಮಿಂದು ಅದ್ವೈತಜ್ಞಾನಕ್ಕೆ ಕಾರಣವಾದ ಮನಶ್ಶುದ್ಧಿಯನ್ನು ಪಡೆದನು. ಈ ಅಧ್ಯಾಯವನ್ನು ಓದುವವನೂ, ಸಾವಧಾನಮನಸ್ಸಿನಿಂದ ಕೇಳುವವನೂ ಈ ಲೋಕದಲ್ಲಿ ಪಾಪಮುಕ್ತರಾಗಿ ವೈಕುಂಠಕ್ಕೆ ತೆರಳುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಜಟಾತೀರ್ಥಪ್ರಶಂಸನ—ಶುಕಚಿತ್ತಶುದ್ಧಿವರ್ಣನ"ವೆಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕವಿಂಶೋಽಧ್ಯಾಯಃ

### ಲಕ್ಷ್ಮೀತೀರ್ಥಪ್ರಶಂಸನಂ — ಧರ್ಮಪುತ್ರಸ್ಯನಿರತಿಶಯಸಂಪತ್ಪ್ರಾಪ್ತಿವರ್ಣನಂ

ಶ್ರೀಸೂತ ಉವಾಚ :—

ಜಟಾತೀರ್ಥಾಽಭಿಧೇ ತೀರ್ಥೇ ಸರ್ವಪಾತಕನಾಶನೇ ।
ಸ್ನಾನಂ ಕೃತ್ವಾ ವಿಶುದ್ಧಾತ್ಮಾ ಲಕ್ಷ್ಮೀತೀರ್ಥಂ ತತೋ ವ್ರಜೇತ್ ॥ ೧ ॥
ಯಂ ಯಂ ಕಾಮಂ ಸಮುದ್ದಿಶ್ಯ ಲಕ್ಷ್ಮೀತೀರ್ಥೇ ದ್ವಿಜೋತ್ತಮಾಃ ।
ಸ್ನಾನಂ ಸಮಾಚರೇನ್ಮರ್ತ್ಯಸ್ತಂ ತಂ ಕಾಮಂ ಸಮಶ್ನುತೇ ॥ ೨ ॥
ಮಹಾದಾರಿದ್ರ್ಯಶಮನಂ ಮಹಾಧಾನ್ಯಸಮೃದ್ಧಿದಂ ।
ಮಹಾದುಃಖಪ್ರಶಮನಂ ಮಹಾಸಂಪದ್ವಿವರ್ಧನಂ ॥ ೩ ॥
ಅತ್ರ ಸ್ನಾತ್ವಾ ಧರ್ಮಪುತ್ರೋ ಮಹದೈಶ್ವರ್ಯಮಾಪ್ತವಾನ್ ।
ಇಂದ್ರಪ್ರಸ್ಥೇ ವಸನ್ಪೂರ್ವಂ ಶ್ರೀಕೃಷ್ಣೇನ ಪ್ರಚೋದಿತಃ ॥ ೪ ॥

ಋಷಯ ಊಚುಃ :—

ಯಥೈಶ್ವರ್ಯಂ ಧರ್ಮಪುತ್ರೋ ಲಕ್ಷ್ಮೀತೀರ್ಥೇ ನಿಮಜ್ಜನಾತ್ ।
ಆಪ್ತವಾನ್ಕೃಷ್ಣವಚನಾತ್ತನ್ನೋ ಬ್ರೂಹಿ ಮಹಾ ಮುನೇ ॥ ೫ ॥

---

## ಕನ್ನಡದ ಅನುವಾದ

### ಲಕ್ಷ್ಮೀತೀರ್ಥಪ್ರಶಂಸನ — ಧರ್ಮಪುತ್ರನ ನಿರತಿಶಯಸಂಪತ್ಪ್ರಾಪ್ತಿವರ್ಣನ

೧. ಶ್ರೀಸೂತನು ಹೇಳುತ್ತಾನೆ:— ಸಕಲ ಪಾಪಗಳನ್ನೂ ಪರಿಹರಿಸುವ ಜಟಾತೀರ್ಥದಲ್ಲಿ ಮಿಂದ ತರುವಾಯ ಯಾತ್ರಿಕನು ಶುದ್ಧನಾಗಿ ಲಕ್ಷ್ಮೀತೀರ್ಥಕ್ಕೆ ಹೋಗಬೇಕು.

೨. ಎಲೈ ದ್ವಿಜವರ್ಯರೆ! ಮನುಷ್ಯನು ಯಾವ ಯಾವ ಇಷ್ಟಾರ್ಥವನ್ನು ಉದ್ದೇಶಿಸಿ ಲಕ್ಷ್ಮೀತೀರ್ಥದಲ್ಲಿ ಸ್ನಾನಮಾಡುವನೊ ಆಯಾ ಇಷ್ಟಾರ್ಥವನ್ನು ಹೊಂದುವನು.

೩. ಈ ಲಕ್ಷ್ಮೀತೀರ್ಥವು ದಾರಿದ್ರ್ಯವನ್ನು ನೀಗಿಸುವುದು; ಧಾನ್ಯ ಸಮೃದ್ಧಿಯನ್ನುಂಟುಮಾಡುವುದು; ಅತಿಶಯವಾದ ದುಃಖವನ್ನೂ ಶಾಂತ ಗೊಳಿಸುವುದು; ಸಂಪತ್ತನ್ನು ಅತ್ಯಂತವಾಗಿ ಹೆಚ್ಚಿಸುವುದು.

೪. ಹಿಂದೆ ಧರ್ಮರಾಜನು ಇಂದ್ರಪ್ರಸ್ಥದಲ್ಲಿ ವಾಸಿಸುತ್ತ ಶ್ರೀಕೃಷ್ಣನ ಪ್ರೇರಣೆಯಿಂದ ಈ ತೀರ್ಥದಲ್ಲಿ ಮಿಂದು ಅಪಾರವಾದ ಐಶ್ವರ್ಯವನ್ನು ಪಡೆದನು.

೫. ಋಷಿಗಳು ಕೇಳುತ್ತಾರೆ:—"ಧರ್ಮರಾಜನು ಶ್ರೀಕೃಷ್ಣನ ಮಾತಿನಂತೆ ಲಕ್ಷ್ಮೀತೀರ್ಥದಲ್ಲಿ ಸ್ನಾನಮಾಡಿ ಐಶ್ವರ್ಯವನ್ನು ಹೇಗೆ ಹೊಂದಿದನು? ಅದನ್ನು ನಮಗೆ ಹೇಳಬೇಕು."

ಶ್ರೀ ಸೂತ ಉವಾಚ :—

ಇಂದ್ರಪ್ರಸ್ಥೇ ಪುರಾ ವಿಪ್ರಾ ಧೃತರಾಷ್ಟ್ರೇಣ ಚೋದಿತಾಃ ।
ನ್ಯವಸನ್ಪಾಂಡವಾಃ ಪಂಚ ಮಹಾಬಲಪರಾಕ್ರಮಾಃ ॥ ೬ ॥
ಇಂದ್ರಪ್ರಸ್ಥಂ ಯಯೌ ಕೃಷ್ಣಃ ಕದಾಚಿತ್ತಾನ್ನಿರೀಕ್ಷಿತುಂ ।
ತಮಾಗತಮಭಿಪ್ರೇಕ್ಷ್ಯ ಪಾಂಡವಾಸ್ತೇ ಸಮುತ್ಸುಕಾಃ ॥ ೭ ॥
ಸ್ವಗೃಹಂ ಪ್ರಾಪಯಾಮಾಸುರ್ಮುದಾ ಪರಮಯಾ ಯುತಾಃ ।
ಕಂಚಿತ್ಕಾಲಮಸೌ ಕೃಷ್ಣಸ್ತತ್ರಾವಾಸೀತ್ಪುರೋತ್ತಮೇ ॥ ೮ ॥
ಕದಾಚಿತ್ಕೃಷ್ಣಮಾಹೂಯ ಪೂಜಯಿತ್ವಾ ಯುಧಿಷ್ಠಿರಃ ।
ಪಪ್ರಚ್ಛ ಪುಂಡರೀಕಾಕ್ಷಂ ವಾಸುದೇವಂ ಜಗತ್ಪತಿಂ ॥ ೯ ॥

ಯುಧಿಷ್ಠಿರ ಉವಾಚ :—

ಕೃಷ್ಣ ಕೃಷ್ಣ ಮಹಾಪ್ರಾಜ್ಞ ಯೇನ ಧರ್ಮೇಣ ಮಾನವಾಃ ।
ಲಭಂತೇ ಮಹದೈಶ್ವರ್ಯಂ ತನ್ಮೇ ಬ್ರೂಹಿ ಮಹಾಮತೇ ।
ಇತ್ಯುಕ್ತೋ ಧರ್ಮಪುತ್ರೇಣ ಕೃಷ್ಣಃ ಪ್ರಾಹ ಯುಧಿಷ್ಠಿರಂ ॥ ೧೦ ॥

ಶ್ರೀ ಕೃಷ್ಣ ಉವಾಚ :—

ಧರ್ಮಪುತ್ರ ಮಹಾಭಾಗ ಗಂಧಮಾದನಪರ್ವತೇ ॥ ೧೧ ॥

---

೬. ಶ್ರೀಸೂತನು ಹೇಳುತ್ತಾನೆ:—ಎಲೈ ಬ್ರಾಹ್ಮಣರೆ! ಹಿಂದೆ ಮಹಾಬಲಿಷ್ಠರಾದ ಪಾಂಡವರೈವರೂ ಧೃತರಾಷ್ಟ್ರನ ಮಾತಿನಂತೆ ಇಂದ್ರಪ್ರಸ್ಥದಲ್ಲಿ ವಾಸಮಾಡಿದರು.

೭–೮. ಒಂದಾನೊಂದು ದಿನ ಆ ಪಾಂಡವರನ್ನು ನೋಡಲು ಶ್ರೀಕೃಷ್ಣನು ಅಲ್ಲಿಗೆ ಹೋದನು. ಪಾಂಡವರು ಶ್ರೀಕೃಷ್ಣನನ್ನು ಕಂಡು ಅತಿ ಸಂತೋಷದಿಂದ ತಮ್ಮ ಮನೆಗೆ ಕರೆದುಕೊಂಡುಹೋದರು. ಅವನು ಕೆಲಕಾಲ ಆ ಇಂದ್ರಪ್ರಸ್ಥದಲ್ಲಿಯೆ ವಾಸಮಾಡಿದನು.

೯. ಒಂದು ದಿನ ಯುಧಿಷ್ಠಿರನು ಶ್ರೀಕೃಷ್ಣನನ್ನು ಕರೆದು ಪೂಜಿಸಿ ತಾವರೆ ಹೂವಿನಂತೆ ಕಣ್ಣುಳ್ಳವನೂ, ವಸುದೇವನ ಮಗನೂ, ಜಗದೊಡೆಯನೂ ಆದ ಅವನನ್ನು ಹೀಗೆ ಪ್ರಶ್ನಿಸಿದನು.

೧೦. ಯುಧಿಷ್ಠಿರನು ಹೇಳುತ್ತಾನೆ:—"ಪ್ರಾಜ್ಞನಾದ ಎಲೈ ಕೃಷ್ಣನೆ! ಮಾನವರು ಯಾವ ಧರ್ಮದಿಂದ ಅಮಿತೈಶ್ವರ್ಯವನ್ನು ಪಡೆಯುವರು? ಅದನ್ನು ನನಗೆ ಹೇಳು." ಧರ್ಮರಾಜನಿಂತು ಕೇಳಲು ಕೃಷ್ಣನು ಇಂತೆಂದನು.

೧೧–೧೨. ಶ್ರೀಕೃಷ್ಣನು ಹೇಳುತ್ತಾನೆ:—"ಅತಿಶಯ ಭಾಗ್ಯವಂತನಾದ ಓ ಧರ್ಮರಾಜನೆ! ಗಂಧಮಾದನಪರ್ವತದಲ್ಲಿ ಐಶ್ವರ್ಯಕ್ಕೆ ಮುಖ್ಯಕಾರಣ

ಲಕ್ಷ್ಮೀತೀರ್ಥಮಿತಿ ಖ್ಯಾತಂ ಸಮಸ್ತೈಶ್ವರ್ಯಕಾರಣಂ ।
ತತ್ರ ಸ್ನಾನಂ ಕುರುಷ್ವ ತ್ವಮೈಶ್ವರ್ಯಂ ತೇ ಭವಿಷ್ಯತಿ ॥ ೧೨ ॥
ತತ್ರ ಸ್ನಾನೇನ ವರ್ಧಂತೇ ಧನಧಾನ್ಯಸಮೃದ್ಧಯಃ ।
ಸರ್ವೇ ಸಪತ್ನಾ ನಶ್ಯಂತಿ ಕ್ಷಾತ್ರಮೇಷಾಂ ವಿವರ್ಧತೇ ॥ ೧೩ ॥
ತೀರ್ಥೇ ಸಸ್ನುಃ ಪುರಾ ದೇವಾ ಲಕ್ಷ್ಮೀನಾಮನಿ ಪುಣ್ಯದೇ ।
ಅಲಭನ್ಸರ್ವಮೈಶ್ವರ್ಯಂ ತೇನ ಪುಣ್ಯೇನ ಧರ್ಮಜ ॥ ೧೪ ॥
ಅಸುರಾಂಶ್ಚ ಮಹಾವೀರ್ಯಾನ್ಸಮರೇ ಜಘ್ನುರಂಜಸಾ ।
ಮಹೀ ಲಕ್ಷ್ಮೀಶ್ಚ ಧರ್ಮಶ್ಚ ತತ್ತೀರ್ಥಸ್ನಾಯಿನಾಂ ನೃಣಾಂ ॥ ೧೫ ॥
ಭವಿಷ್ಯಂತ್ಯಚಿರಾದೇವ ಸಂಶಯಂ ಮಾ ಕೃಥಾ ಇಹ ।
ತಪೋಭಿಃ ಕ್ರತುಭಿರ್ದಾನೈರಾಶೀರ್ವಾದೈಶ್ಚ ಪಾಂಡವ ॥ ೧೬ ॥
ಐಶ್ವರ್ಯಂ ಪ್ರಾಪ್ಯತೇ ಯದ್ವಲ್ಲಕ್ಷ್ಮೀತೀರ್ಥನಿಮಜ್ಜನಾತ್ ।
ಸರ್ವಪಾಪಾನಿ ನಶ್ಯಂತಿ ವಿಘ್ನಾ ಯಾಂತಿ ಲಯಂ ತಥಾ ॥ ೧೭ ॥
ವ್ಯಾಧಯಶ್ಚ ವಿನಶ್ಯಂತಿ ಲಕ್ಷ್ಮೀತೀರ್ಥನಿಷೇವಣಾತ್ ।
ಶ್ರೇಯಃ ಸುವಿಪುಲಂ ಲೋಕೇ ಲಭ್ಯತೇ ನಾಽತ್ರ ಸಂಶಯಃ ॥ ೧೮ ॥
ಸ್ನಾನಮಾತ್ರೇಣ ವೈ ಲಕ್ಷ್ಮ್ಯಾಸ್ತೀರ್ಥೇಽಸ್ಮಿನ್ಧರ್ಮನಂದನ ।
ರಂಭಾಮಪ್ಸರಸಾಂ ಶ್ರೇಷ್ಠಾಂ ಲಬ್ಧವಾನನಘೋ ನೃಪಃ ॥ ೧೯ ॥

---

ವಾದ ಲಕ್ಷ್ಮೀತೀರ್ಥವಿದೆ. ನೀನು ಅಲ್ಲಿ ಸ್ನಾನಮಾಡು. ನಿನಗೆ ಐಶ್ವರ್ಯವು ಉಂಟಾಗುವುದು.

೧೩. ಅಲ್ಲಿ ಸ್ನಾನಮಾಡುವುದರಿಂದ ಧನಧಾನ್ಯಗಳು ಹೆಚ್ಚುವುವು. ಸಕಲ ಶತ್ರುಗಳೂ ಹಾಳಾಗುವರು. ನಿನ್ನ ಕ್ಷತ್ರಿಯ ಸಾಮರ್ಥ್ಯವೂ ಹೆಚ್ಚುವುದು.

೧೪. ಧರ್ಮರಾಜ! ಹಿಂದೆ ದೇವತೆಗಳು ಪುಣ್ಯಕರವಾದ ಲಕ್ಷ್ಮೀತೀರ್ಥದಲ್ಲಿ ಮಿಂದು ಆ ಪುಣ್ಯದಿಂದಲೇ ಸಕಲೈಶ್ವರ್ಯವನ್ನು ಪಡೆದರು.

೧೫–೧೭. ಅವರು ಯುದ್ಧದಲ್ಲಿ ಅತಿ ಬಲಶಾಲಿಗಳಾದ ಅಸುರರನ್ನು ಕೂಡಲೆ ಕೊಂದರು. ಆ ತೀರ್ಥದಲ್ಲಿ ಸ್ನಾನಮಾಡುವ ಮಾನವರಿಗೆ ಭೂಮಿ, ಸಂಪತ್ತು, ಧರ್ಮ ಇವುಗಳು ಕೂಡಲೆ ಉಂಟಾಗುವುವು. ಸಂಶಯಪಡಬೇಡ. ತಪಸ್ಸು, ಯಜ್ಞ, ದಾನ, ಆಶೀರ್ವಾದಗಳಿಂದ ಐಶ್ವರ್ಯವನ್ನು ಪಡೆಯುವಂತೆ ಲಕ್ಷ್ಮೀತೀರ್ಥದಲ್ಲಿ ಸ್ನಾನಮಾಡುವುದರಿಂದ ಸಕಲ ಪಾಪಗಳೂ ನಾಶವಾಗುವುವು. ವಿಘ್ನಗಳು ಪರಿಹಾರವಾಗುವುವು.

೧೮. ಲಕ್ಷ್ಮೀತೀರ್ಥವನ್ನು ಸೇವಿಸುವುದರಿಂದ ರೋಗಗಳು ಮಾಯವಾಗುವುವು. ಅದರಿಂದ ಮಾನವನು ಅತ್ಯಂತವಾದ ಶ್ರೇಯಸ್ಸನ್ನು ಪಡೆಯುವನು.

೧೯. ಅನಘರಾಜನು (ನಲಕೂಬರನು) ಈ ಲಕ್ಷ್ಮೀತೀರ್ಥದಲ್ಲಿ ಸ್ನಾನ ಮಾಡಿದುದರಿಂದ ಅಪ್ಸರಸ್ತ್ರೀಯರಲ್ಲಿ ಶ್ರೇಷ್ಠಳಾದ ರಂಭೆಯನ್ನು ಹೊಂದಿದನು.

ಸ್ನಾತ್ವಾತ್ರ ತೀರ್ಥೇ ಪುಣ್ಯೇ ತು ಕುಬೇರೋ ನರವಾಹನಃ ।
ಸ ಮಹಾಪದ್ಮಮುಖ್ಯಾನಾಂ ನಿಧೀನಾಂ ನಾಯಕೋಽಭವತ್ ॥ ೨೦ ॥
ತಸ್ಮಾತ್ತ್ವಮಪಿ ರಾಜೇಂದ್ರ ಲಕ್ಷ್ಮೀತೀರ್ಥೇ ಶುಭಪ್ರದೇ ।
ಸ್ನಾತ್ವಾ ವೃಕೋದರಮುಖ್ಯೈರನುಜೈರಪಿ ಸಂವೃತಃ ॥ ೨೧ ॥
ಲಪ್ಸ್ಯಸೇ ಮಹತೀಂ ಲಕ್ಷ್ಮೀಂ ಜೇಷ್ಯಸೇ ಚ ರಿಪೂನಪಿ ।
ಸಂದೇಹೋ ನಾಽತ್ರ ಕರ್ತವ್ಯಃ ಪೈತೃಷ್ವಸ್ರೇಯ ಧರ್ಮಜ ॥ ೨೨ ॥
ಇತ್ಯುಕ್ತೋ ಧರ್ಮಪುತ್ರೋಽಯಂ ಕೃಷ್ಣೇನಾಽದ್ಭುತದರ್ಶನಃ ।
ಸಾಽನುಜಃ ಪ್ರಯಯೌ ತೀರ್ಥಂ ಗಂಧಮಾದನಪರ್ವತಂ ॥ ೨೩ ॥
ಲಕ್ಷ್ಮೀತೀರ್ಥಂ ತತೋ ಗತ್ವಾ ಮಹದೈಶ್ವರ್ಯಕಾರಣಂ ।
ಸಸ್ನೌ ಯುಧಿಷ್ಠಿರಸ್ತತ್ರ ಸಾಽನುಜೋ ನಿಯಮಾನ್ವಿತಃ ॥ ೨೪ ॥
ಲಕ್ಷ್ಮೀತೀರ್ಥಸ್ಯ ತೋಯೇ ಸ ಸರ್ವಪಾತಕನಾಶನೇ ।
ಸಾಽನುಜೋ ಮಾಸಮೇಕಂ ತು ಸಸ್ನೌ ನಿಯಮಪೂರ್ವಕಂ ॥ ೨೫ ॥
ಗೋ ಭೂ ತಿಲ ಹಿರಣ್ಯಾದೀನ್ಬ್ರಾಹ್ಮಣೇಭ್ಯೋ ದದೌ ಬಹೂನ್ ।
ಸಾಽನುಜೋ ಧರ್ಮಪುತ್ರೋಽಸಾವಿಂದ್ರಪ್ರಸ್ಥಂ ಯಯೌ ತತಃ ॥ ೨೬ ॥
ರಾಜಸೂಯಕ್ರತುಂ ಕರ್ತುಂ ತತ ಐಚ್ಛದ್ಯುಧಿಷ್ಠಿರಃ ।
ಕೃಷ್ಣಂ ಸಮಾಹ್ವಯಾಮಾಸ ಯಿಯಕ್ಷುರ್ಧರ್ಮನಂದನಃ ॥ ೨೭ ॥

---

೨೦. ಕುಬೇರನು ಇಲ್ಲಿ ಸ್ನಾನಮಾಡಿದುದರಿಂದ ಮಹಾಪದ್ಮವೇ ಮೊದಲಾದ ನಿಧಿಗಳಿಗೆ ಒಡೆಯನಾದನು.

೨೧–೨೨. ಸೋದರತ್ತೆಯ ಮಗನಾದ ಎಲೈ ಧರ್ಮರಾಜನೇ! ಆದುದರಿಂದ ನೀನೂ ಶುಭದಾಯಕವಾದ ಆ ಲಕ್ಷ್ಮೀತೀರ್ಥದಲ್ಲಿ ಭೀಮಸೇನನೇ ಮೊದಲಾದ ತಮ್ಮಂದಿರೊಡನೆ ಮಿಂದು ಅತಿಶಯವಾದ ಸಂಪತ್ತನ್ನು ಹೊಂದು. ಶತ್ರುಗಳನ್ನು ಜಯಿಸುವೆ. ಈ ವಿಷಯದಲ್ಲಿ ಸಂದೇಹಪಡಬೇಡ."

೨೩. ಶ್ರೀಕೃಷ್ಣನು ಹೀಗೆನ್ನಲು ಆಶ್ಚರ್ಯಗೊಂಡ ಧರ್ಮರಾಜನು ತಮ್ಮಂದಿರೊಡನೆ ಕೂಡಲೆ ಗಂಧಮಾದನಪರ್ವತಕ್ಕೆ ತೆರಳಿದನು.

೨೪–೨೫. ಬಳಿಕ ಅತಿಶಯವಾದ ಐಶ್ವರ್ಯವನ್ನು ಕೊಡುವ ಲಕ್ಷ್ಮೀತೀರ್ಥಕ್ಕೆ ಹೋಗಿ ಒಂದು ತಿಂಗಳು ಕಾಲ ಅವನು ತಮ್ಮಂದಿರೊಡನೆ ನಿಯಮದಿಂದ ಸ್ನಾನಮಾಡಿದನು.

೨೬–೨೭. ಬ್ರಾಹ್ಮಣರಿಗೆ ಗೋವು, ಭೂಮಿ, ಎಳ್ಳು, ಸುವರ್ಣ ಮೊದಲಾದುವುಗಳನ್ನು ಬಹುವಾಗಿ ದಾನಮಾಡಿ ಪುನಃ ತಮ್ಮಂದಿರೊಡನೆ ಇಂದ್ರಪ್ರಸ್ಥಕ್ಕೆ ಹೋದನು. ತರುವಾಯ ಆ ಧರ್ಮಜನು ರಾಜಸೂಯಯಾಗವನ್ನು ಮಾಡಬಯಸಿ ಶ್ರೀಕೃಷ್ಣನನ್ನು ಕರೆಯಿಸಿದನು.

ಕೃಷ್ಣೋ ಧರ್ಮರಾಜದೂತೇನ ಸಮಾಹೂತಃ ಸ ಸಂಭ್ರಮಃ ।
ಚತುರ್ಭಿರಶ್ವೈಃ ಸಂಯುಕ್ತಂ ರಥಮಾರುಹ್ಯ ವೇಗಿನಂ ॥ ೨೮ ॥
ಸತ್ಯಭಾಮಾಸಹಚರ ಇಂದ್ರಪ್ರಸ್ಥಂ ಸಮಾಯಯೌ ।
ತಮಾಗತಂ ಸಮಾಲೋಕ್ಯ ಪ್ರಮೋದಾದ್ಧರ್ಮನಂದನಃ ॥ ೨೯ ॥
ನ್ಯವೇದಯತ್ಸ ಕೃಷ್ಣಾಯ ರಾಜಸೂಯೋದ್ಯಮಂ ತದಾ ।
ಅನ್ವಮನ್ಯತ ಕೃಷ್ಣೋಽಪಿ ತಥೈವ ಕ್ರಿಯತಾಮಿತಿ ॥ ೩೦ ॥
ವಾಕ್ಯಂ ಚ ಯುಕ್ತಿಸಂಯುಕ್ತಂ ಧರ್ಮಪುತ್ರಮಭಾಷತ ।
ಪೈತೃಷ್ವಸ್ರೇಯ ಧರ್ಮಾತ್ಮನ್ ಶೃಣು ಪಥ್ಯಂ ವಚೋ ಮಮ ॥ ೩೧ ॥
ದುಷ್ಕರೋ ರಾಜಸೂಯೋಽಯಂ ಸರ್ವೈರಪಿ ಮಹೀಶ್ವರೈಃ ।
ಅನೇಕಶತಪಾದಾತರಥಕುಂಜರವಾಜಿಮಾನ್ ॥ ೩೨ ॥
ಮಹೀಪತಿರಿಮಂ ಯಜ್ಞಂ ಕರ್ತುಮರ್ಹತಿ ನೇತರಃ ।
ದಿಶೋ ದಶ ವಿಜೇತವ್ಯಾಃ ಪ್ರಥಮಂ ಬಲಿನಾ ತ್ವಯಾ ॥ ೩೩ ॥
ಪರಾಜಿತೇಭ್ಯಃ ಶತ್ರುಭ್ಯೋ ಗೃಹೀತ್ವಾ ಕರಮುತ್ತಮಂ ।
ತೇನ ಕಾಂಚನಜಾತೇನ ಕರ್ತವ್ಯೋಽಯಂ ಕ್ರತೂತ್ತಮಃ ॥ ೩೪ ॥
ರೋಚಯೇ ಯುಕ್ತಿವಿದಹಂ ನಹಿ ತ್ವಾಂ ಭೀಷಯಾಮಿ ಭೋಃ ।
ಅತಃ ಕ್ರತುಸಮಾರಂಭಾತ್ಪೂರ್ವಂ ದಿಗ್ವಿಜಯಂ ಕುರು ॥ ೩೫ ॥

---

೨೮–೩೦. ಧರ್ಮರಾಯನ ದೂತನು ಬಂದು ಶ್ರೀಕೃಷ್ಣನನ್ನು ಕರೆಯಲು ಅವನು ಸತ್ಯಭಾಮೆಯೊಡನೆ ನಾಲ್ಕು ಕುದುರೆಗಳು ಹೂಡಿದ ರಥವನ್ನೇರಿ ಇಂದ್ರಪ್ರಸ್ಥಕ್ಕೆ ಬಂದನು. ಯುಧಿಷ್ಠಿರನು ಹೀಗೆ ಬಿಜೆಮಾಡಿದ ಕೃಷ್ಣನನ್ನು ಕಂಡು ಸಂತೋಷದಿಂದ ರಾಜಸೂಯಯಾಗದ ಪ್ರಯತ್ನವನ್ನು ಅವನಿಗೆ ತಿಳಿಸಿದನು. ಕೃಷ್ಣನೂ ಹಾಗೆಯೇ ಮಾಡೆಂದು ಅನುಮೋದಿಸಿದನು.

೩೧. ಅಲ್ಲದೆ, ಅವನು ಧರ್ಮರಾಜನನ್ನು ಕುರಿತು ಯುಕ್ತಿಸಹಿತವಾಗಿ ಇಂತೆಂದನು : "ಧರ್ಮಜ! ಹಿತವಾದ ನನ್ನ ಮಾತನ್ನು ಕೇಳು.

೩೨–೩೫. ರಾಜರೆಲ್ಲರಿಂದಲೂ ಈ ರಾಜಸೂಯಯಾಗವು ಮಾಡಲಳವಲ್ಲ. ಅನೇಕನೂರು ಕಾಲಾಳುಗಳು, ರಥಗಳು, ಆನೆಗಳು, ಕುದುರೆಗಳು ಇವುಗಳುಳ್ಳ ದೊರೆಯು ಮಾತ್ರ ಈ ಯಜ್ಞವನ್ನು ನೆರವೇರಿಸಲು ಅರ್ಹನು. ಬಲಿಷ್ಠನಾದ ನೀನು ಮೊದಲು ದಶದಿಕ್ಕುಗಳನ್ನು ಜಯಿಸಬೇಕು. ಸೋಲಿಸಿದ ಶತ್ರುಗಳಿಂದ ಕಪ್ಪವನ್ನು ತೆಗೆದುಕೊಂಡು ಅದರಿಂದಲೇ ಉತ್ತಮವಾದ ಈ ಯಜ್ಞವನ್ನು ಮಾಡಬೇಕು. ಯುಕ್ತಿಯನ್ನರಿತ ನಾನು ನಿನಗೆ ಯಾಗದಲ್ಲಿ ಅಭಿರುಚಿಯನ್ನುಂಟು ಮಾಡುತ್ತಿರುವೆನಾಗಲಿ ಹೆದರಿಸುತ್ತಿಲ್ಲ. ಆದುದರಿಂದ ಯಜ್ಞವನ್ನಾರಂಭಿಸುವುದಕ್ಕಿಂತ ಮುಂಚೆ ದಿಗ್ವಿಜಯವನ್ನು ಮಾಡು.

ತತೋ ಧರ್ಮಾತ್ಮಜಃ ಶ್ರುತ್ವಾ ಕೃಷ್ಣಸ್ಯ ವಚನಂ ಹಿತಂ ।
ಪ್ರಶಂಸನ್ದೇವಕೀಪುತ್ರಮಾಜುಹಾವ ನಿಜಾಽನುಜಾನ್ ॥ ೩೬ ॥
ಆಹೂಯ ಚತುರೋ ಭ್ರಾತ್ರೂನ್ಧರ್ಮಜಃ ಪ್ರಾಹ ಹರ್ಷಯನ್ ।
ಅಯಿ ಭೀಮ ಮಹಾಬಾಹೋ ಬಹುವೀರ್ಯ ಧನಂಜಯ ॥ ೩೭ ॥
ಯಮೌ ಚ ಸುಕುಮಾರಾಂಗೌ ಶತ್ರುಸಂಹಾರದೀಕ್ಷಿತೌ ।
ಚಿಕೀರ್ಷಾಮಿ ಮಹಾಯಜ್ಞಂ ರಾಜಸೂಯಮನುತ್ತಮಂ ॥ ೩೮ ॥
ಸ ಚ ಸರ್ವಾನ್ರಣೇ ಜಿತ್ವಾ ಕರ್ತವ್ಯಃ ಪೃಥಿವೀಪತೀನ್ ।
ಅತೋ ವಿಜೇತುಂ ಭೂಪಾಲಾಂಶ್ಚತ್ವಾರೋಽಪಿ ಸ ಸೈನಿಕಾಃ ॥ ೩೯ ॥
ದಿಶಶ್ಚತಸ್ರೋ ಗಚ್ಛಂತು ಭವಂತೋ ವೀರ್ಯವತ್ತರಾಃ ।
ಯುಷ್ಮಾಭಿರಾಹೃತೈರ್ದ್ರವ್ಯೈಃ ಕರಿಷ್ಯಾಮಿ ಮಹಾಕ್ರತುಂ ॥ ೪೦ ॥
ಇತ್ಯುಕ್ತಾಃ ಸಾದರಂ ಸರ್ವೇ ವೃಕೋದರಮುಖಾಸ್ತದಾ ।
ಪ್ರಸನ್ನವದನಾ ಭೂತ್ವಾ ಧರ್ಮಪುತ್ರಾಽನುಜಾಃ ಪುರಾತ್ ॥ ೪೧ ॥
ರಾಜ್ಞಾಂ ಜಯಾಯ ಸರ್ವಾಸು ನಿರ್ಯಯುರ್ದಿಕ್ಷು ಪಾಂಡವಾಃ ।
ತೇ ಸರ್ವೇ ನೃಪತೀನ್ಜಿತ್ವಾ ಚತುರ್ದಿಕ್ಷು ಸ್ಥಿತಾನ್ಬಹೂನ್ ॥ ೪೨ ॥
ಸ್ವವಶೇ ಸ್ಥಾಪಯಿತ್ವಾ ತಾನ್ ನೃಪತೀನ್ಪಾಂಡುನಂದನಾಃ ।
ತೈರ್ದತ್ತಂ ಬಹುಧಾ ದ್ರವ್ಯಮಸಂಖ್ಯಾತಮನುತ್ತಮಂ ॥ ೪೩ ॥

---

೩೬. ತರುವಾಯ ಧರ್ಮರಾಜನು, ಶ್ರೀಕೃಷ್ಣನ ಹಿತವಚನವನ್ನು ಕೇಳಿ ಅವನನ್ನು ಹೊಗಳುತ್ತ ತನ್ನ ತಮ್ಮಂದಿರನ್ನು ಕರೆಯಿಸಿದನು.

೩೭–೪೦. ಧರ್ಮಜನು ನಾಲ್ಕು ಮಂದಿ ಸಹೋದರರನ್ನು ಕರೆದು ಅವರನ್ನು ಸಂತೋಷಗೊಳಿಸುತ್ತ ಇಂತೆಂದನು: "ಮಹಾಭುಜನಾದ ಎಲೈ ಭೀಮನೆ! ಮಹಾ ಪರಾಕ್ರಮಶಾಲಿಯಾದ ಓ ಅರ್ಜುನ! ಕೋಮಲಹೃದಯರೂ, ಶತ್ರುಗಳನ್ನು ಸಂಹರಿಸುವುದರಲ್ಲಿ ದೀಕ್ಷೆಗೊಂಡವರೂ ಆದ ನಕುಲ ಸಹದೇವರೆ! ಈಗ ನಾನು ರಾಜಸೂಯವೆಂಬ ಮಹಾಯಜ್ಞವನ್ನು ಮಾಡ ಬಯಸಿರುವೆನು. ಆ ಯಾಗವು ಸಕಲ ರಾಜರನ್ನೂ ಯುದ್ಧದಲ್ಲಿ ಜಯಿಸಿ ಮಾಡ ತಕ್ಕುದು. ಆದುದರಿಂದ ದೊರೆಗಳನ್ನು ಜಯಿಸುವುದಕ್ಕಾಗಿ ನೀವು ನಾಲ್ವರೂ ಸೈನ್ಯಸಹಿತರಾಗಿ ನಾಲ್ಕು ದಿಕ್ಕುಗಳಿಗೂ ಹೋಗಿರಿ. ನೀವು ತಂದ ದ್ರವ್ಯಗಳಿಂದ ರಾಜಸೂಯ ಮಹಾಯಾಗವನ್ನು ನಾನು ನೆರವೇರಿಸುವೆನು."

೪೧–೪೫. ಅಗ್ರಜನು ಹೀಗೆ ಹೇಳಲು ಭೀಮಸೇನನೇ ಮೊದಲಾದ ಆ ಸಹೋದರರು ನಾಲ್ವರೂ ಪ್ರಸನ್ನಮುಖರಾಗಿ ರಾಜರನ್ನು ಜಯಿಸುವುದಕ್ಕಾಗಿ ಸಕಲ ದಿಕ್ಕುಗಳಿಗೂ ಹೊರಟರು. ಅವರೆಲ್ಲರೂ ನಾಲ್ಕು ದಿಕ್ಕುಗಳಲ್ಲಿರುವ ಬಹುಮಂದಿ ರಾಜರನ್ನು ಜಯಿಸಿ ಅವರನ್ನೆಲ್ಲ ಸ್ವಾಧೀನಪಡಿಸಿಕೊಂಡು, ಅವರು

ಆದಾಯ ಸ್ವಪುರಂ ತೂರ್ಣಮಾಯಯುಃ ಕೃಷ್ಣಸಂಶ್ರಯಾಃ ।
ಭೀಮಃ ಸಮಾಯಯೌ ತತ್ರ ಮಹಾಬಲಪರಾಕ್ರಮಃ ॥ ೪೪ ॥
ಶತಭಾರಸುವರ್ಣಾನಿ ಸಮಾದಾಯ ಪುರೋತ್ತಮಂ ।
ಸಹಸ್ರಂ ಭಾರಮಾದಾಯ ಸುವರ್ಣಾನಾಂ ತತೋಽರ್ಜುನಃ ॥ ೪೫ ॥
ಶಕ್ರಪ್ರಸ್ಥಂ ಸಮಾಯಾತೋ ಮಹಾಬಲಪರಾಕ್ರಮಃ ।
ಶತಭಾರಂ ಸುವರ್ಣಾನಾಂ ಪ್ರಗೃಹ್ಯ ನಕುಲಸ್ತಥಾ ॥ ೪೬ ॥
ಸಮಾಗತೋ ಮಹಾತೇಜಾಃ ಶಕ್ರಪ್ರಸ್ಥಂ ಪುರೋತ್ತಮಂ ।
ದತ್ತಾನ್ವಿಭೀಷಣೇನಾಽಥ ಸ್ವರ್ಣತಾಲಾಂಶ್ಚತುರ್ದಶ ॥ ೪೭ ॥
ದಾಕ್ಷಿಣಾತ್ಯಮಹೀಪಾನಾಂ ಗೃಹೀತ್ವಾ ಧನಸಂಚಯಂ ।
ಸಹದೇವೋಽಪಿ ಸಹಸಾ ಸಮಾಯಾತೋ ನಿಜಾಂ ಪುರೀಂ ॥ ೪೮ ॥
ಲಕ್ಷಕೋಟಿಸಹಸ್ರಾಣಿ ಲಕ್ಷಕೋಟಿಶತಾನ್ಯಪಿ ।
ಸುವರ್ಣಾನಿ ದದೌ ಕೃಷ್ಣೋ ಧರ್ಮಪುತ್ರಾಯ ಯಾದವಃ ॥ ೪೯ ॥
ಸ್ವಾಽನುಜೈರಾಹೃತೈರೇವಮಸಂಖ್ಯಾತೈರ್ಮಹಾಧನೈಃ ।
ಕೃಷ್ಣದತ್ತೈರಸಂಖ್ಯಾತೈರ್ಧನೈರಪಿ ಯುಧಿಷ್ಠಿರಃ ॥ ೫೦ ॥
ಕೃಷ್ಣಾಶ್ರಯೋಽಯಜದ್ವಿಪ್ರಾ ರಾಜಸೂಯೇನ ಪಾಂಡವಃ ।
ತಸ್ಮಿನ್ಯಾಗೇ ದದೌ ದ್ರವ್ಯಂ ಬ್ರಾಹ್ಮಣೇಭ್ಯೋ ಯಥೇಷ್ಟತಃ ॥ ೫೧ ॥
ಅನ್ನಾನಿ ಪ್ರದದೌ ತತ್ರ ಬ್ರಾಹ್ಮಣೇಭ್ಯೋ ಯುಧಿಷ್ಠಿರಃ ।
ವಸ್ತ್ರಾಣಿ ಗಾಶ್ಚ ಭೂಮಿಂ ಚ ಭೂಷಣಾನಿ ದದೌ ತಥಾ ॥ ೫೨ ॥

---

ಕೊಟ್ಟ ಅಸಂಖ್ಯಾತ ದ್ರವ್ಯವನ್ನು ತೆಗೆದುಕೊಂಡು ಜಾಗ್ರತೆಯಾಗಿ ಶ್ರೀಕೃಷ್ಣನೊಡನೆ ತಮ್ಮ ಪಟ್ಟಣಕ್ಕೆ ಬಂದರು. ಅವರಲ್ಲಿ ಅತಿ ಪರಾಕ್ರಮಶಾಲಿಯಾದ ಭೀಮನು ನೂರುಭಾರ ಸುವರ್ಣವನ್ನು ತೆಗೆದುಕೊಂಡುಬಂದನು. ಅರ್ಜುನನು ಸಾವಿರಭಾರ ಸುವರ್ಣವನ್ನೂ, ನಕುಲನು ನೂರುಭಾರ ಸುವರ್ಣವನ್ನೂ, ಸಹದೇವನು ವಿಭೀಷಣನಿತ್ತ ಹದಿನಾಲ್ಕು ಸುವರ್ಣದ ತಾಳೆಮರಗಳನ್ನೂ, ದಕ್ಷಿಣದೇಶದ ಅರಸರು ಕೊಟ್ಟ ದ್ರವ್ಯಗಳನ್ನೂ ತೆಗೆದುಕೊಂಡು ಕೂಡಲೆ ತನ್ನ ಪಟ್ಟಣಕ್ಕೆ ಬಂದನು. ಶ್ರೀಕೃಷ್ಣನು ಅನೇಕಕೋಟಿ ಸಂಖ್ಯೆಯ ಸುವರ್ಣಗಳನ್ನಿತ್ತನು.

೫೦. ಯುಧಿಷ್ಠಿರನು ತಮ್ಮಂದಿರು ತಂದ ದ್ರವ್ಯಗಳಿಂದಲೂ, ಶ್ರೀಕೃಷ್ಣನು ಕೊಟ್ಟ ದ್ರವ್ಯಗಳಿಂದಲೂ ರಾಜಸೂಯಯಾಗವನ್ನು ಕೃಷ್ಣನ ಬೆಂಬಲದಿಂದಲೇ ನೆರವೇರಿಸಿ, ಬ್ರಾಹ್ಮಣರಿಗೆ ಯಥೇಚ್ಛವಾಗಿ ದ್ರವ್ಯವನ್ನು ದಾನಮಾಡಿದನು.

೫೨. ಆ ಯಾಗದಲ್ಲಿ ಯುಧಿಷ್ಠಿರನು ಬ್ರಾಹ್ಮಣರಿಗೆ ಅನ್ನ, ವಸ್ತ್ರ, ಗೋ, ಭೂಮಿ, ಭೂಷಣಗಳನ್ನು ಕೊಟ್ಟನು.

ಅರ್ಥಿನಃ ಪರಿತುಷ್ಯಂತಿ ಯಾವತಾ ಕಾಂಚನಾದಿನಾ ।
ತತೋಽಪಿ ದ್ವಿಗುಣಂ ತೇಭ್ಯೋ ದಾಪಯಾಮಾಸ ಧರ್ಮಜಃ ॥ ೫೩ ॥
ಇಯಂತಿ ದತ್ತಾನ್ಯರ್ಥಿಭ್ಯೋ ಧನಾನಿ ವಿವಿಧಾನ್ಯಪಿ ।
ಇತೀಯತ್ತಾಂ ಪರಿಚ್ಛೇತ್ತುಂ ನ ಶಕ್ತಾ ಬ್ರಹ್ಮಕೋಟಯಃ ॥ ೫೪ ॥
ಅರ್ಥಿಭಿರ್ದೀಯಮಾನಾನಿ ದೃಷ್ಟ್ವಾ ತತ್ರ ಧನಾನಿ ವೈ ।
ಸರ್ವಸ್ವಮಪ್ಯಹೋ ರಾಜ್ಞಾ ದತ್ತಮಿತ್ಯಬ್ರವೀಜ್ಜನಃ ॥ ೫೫ ॥
ದೃಷ್ಟ್ವಾ ಕೋಶಾಂಸ್ತಥಾಽನಂತಾನನಂತಮಣಿಕಾಂಚನಾನ್ ॥ ೫೬ ॥
ಸ್ವಲ್ಪಂ ಹಿ ದತ್ತಮರ್ಥಿಭ್ಯ ಇತ್ಯಮೋಚಂಜನಾಸ್ತದಾ ।
ಇಷ್ಟ್ವೈವಂ ರಾಜಸೂಯೇನ ಧರ್ಮಪುತ್ರಃ ಸಹಾಽನುಜಃ ॥ ೫೭ ॥
ಬಹುವಿತ್ತಸಮೃದ್ಧಃ ಸನ್ರೇಮೇ ತತ್ರ ಪುರೋತ್ತಮೇ ।
ಲಕ್ಷ್ಮೀತೀರ್ಥಸ್ಯ ಮಾಹಾತ್ಮ್ಯಾದ್ಧರ್ಮಪುತ್ರೋ ಯುಧಿಷ್ಠಿರಃ ॥ ೫೮ ॥
ಲೇಭೇ ಸರ್ವಮಿದಂ ವಿಪ್ರಾ ಅಹೋ ತೀರ್ಥಸ್ಯ ವೈಭವಂ ।
ಇದಂ ತೀರ್ಥಂ ಮಹಾಪುಣ್ಯಂ ಮಹಾದಾರಿದ್ರ್ಯನಾಶನಂ ॥ ೫೯ ॥
ಧನಧಾನ್ಯಪ್ರದಂ ಪುಂಸಾಂ ಮಹಾಪಾತಕನಾಶನಂ ।
ಮಹಾನರಕಸಂಹರ್ತೃ ಮಹಾದುಃಖನಿವರ್ತಕಂ ॥ ೬೦ ॥
ಮೋಕ್ಷದಂ ಸ್ವರ್ಗದಂ ನಿತ್ಯಂ ಮಹಾಋಣವಿಮೋಚನಂ ।
ಸುಕಲತ್ರಪ್ರದಂ ಪುಂಸಾಂ ಸುಪುತ್ರಪ್ರದಮೇವ ಚ ॥ ೬೧ ॥

---

೫೩. ಯಾಚಕರಿಗೆ ಅವರು ಅಪೇಕ್ಷಿಸಿದ್ದಕ್ಕಿಂತಲೂ ಇಮ್ಮಡಿಯಾದ ಸುವರ್ಣ ಮೊದಲಾದುವನ್ನು ಕೊಡಿಸಿದನು.

೫೪. ಯುಧಿಷ್ಠಿರನು ಯಾಚಕರಿಗೆ ಎಷ್ಟು ಹಣವನ್ನು ದಾನಮಾಡಿದನೆಂದು ನಿರ್ಣಯಿಸಲು ಕೋಟಿಬ್ರಹ್ಮರೂ ಶಕ್ತರಲ್ಲ.

೫೫. ಅವನು ಅರ್ಥಿಗಳಿಗೆ ಕೊಡುತ್ತಿರುವ ದ್ರವ್ಯಗಳನ್ನು ಕಂಡು ದೊರೆಯು ಸಕಲವನ್ನೂ ದಾನಮಾಡಿದನೆಂದು ಜನರು ಹೇಳಿದರು.

೫೬–೫೮. ಹಾಗೆಯೇ ಉಳಿದಿರುವ ಅಪರಿಮಿತವಾದ ಬೊಕ್ಕಸಗಳನ್ನೂ, ಅಸಂಖ್ಯಾತ ರತ್ನ, ಚಿನ್ನಗಳನ್ನೂ ನೋಡಿ ರಾಜನು ಅರ್ಥಿಗಳಿಗೆ ಸ್ವಲ್ಪವನ್ನೇ ಕೊಟ್ಟಿರುವನೆಂದು ಜನರು ಆಡಿಕೊಂಡರು. ಧರ್ಮನಂದನನು ಹೀಗೆ ಅನುಜರೊಡನೆ ಯಾಗಮಾಡಿ ಲಕ್ಷ್ಮೀತೀರ್ಥದ ಪ್ರಭಾವದಿಂದ ಬಹು ದ್ರವ್ಯಗಳಿಂದ ಸಮೃದ್ಧನಾಗಿ ಆ ಉತ್ತಮ ಪಟ್ಟಣದಲ್ಲಿ ಸುಖವಾಗಿದ್ದನು.

೫೯–೬೧. ಹೀಗೆ ಲಕ್ಷ್ಮೀತೀರ್ಥದ ವೈಭವವು ಆಶ್ಚರ್ಯಕರವಾದುದು. ಈ ತೀರ್ಥವು ಅತಿ ಪುಣ್ಯಕರವೂ, ಅತ್ಯಂತ ದಾರಿದ್ರ್ಯನಾಶಕವೂ, ಧನಧಾನ್ಯಗಳನ್ನು ಕೊಡುವುದೂ, ಮಹಾಪಾತಕಗಳನ್ನು ಪರಿಹರಿಸುವುದೂ, ನರಕವನ್ನು

ಏತತ್ತೀರ್ಥಸಮಂ ತೀರ್ಥಂ ನ ಭೂತಂ ನ ಭವಿಷ್ಯತಿ ।
ಏತದ್ವಃ ಕಥಿತಂ ವಿಪ್ರಾ ಲಕ್ಷ್ಮೀತೀರ್ಥಸ್ಯ ವೈಭವಂ ॥ ೬೨ ॥
ದುಃಸ್ವಪ್ನನಾಶನಂ ಪುಣ್ಯಂ ಸರ್ವಾಭೀಷ್ಟಪ್ರಸಾಧಕಂ ।
ಯಃ ಪಠೇದಿಮಮಧ್ಯಾಯಂ ಶೃಣುತೇ ವಾ ಸಭಕ್ತಿಕಂ ॥ ೬೩ ॥
ಧನಧಾನ್ಯಸಮೃದ್ಧಃ ಸ್ಯಾತ್ಸನರೋ ನಾಸ್ತಿ ಸಂಶಯಃ ।
ಭುಕ್ತ್ವೇಹ ಸಕಲಾನ್ಭೋಗಾನ್ ದೇಹಾಂತೇ ಮುಕ್ತಿಮಾಪ್ನುಯಾತ್ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಲಕ್ಷ್ಮೀತೀರ್ಥಪ್ರಶಂಸನಂ—ಧರ್ಮಪುತ್ರನಿರತಿಶಯಸಂಪತ್ಪ್ರಾಪ್ತಿವರ್ಣನಂ" ನಾಮೈಕವಿಂಶೋಽಧ್ಯಾಯಃ

---

ನಾಶಮಾಡುವುದೂ, ಅತಿಶಯವಾದ ದುಃಖವನ್ನೂ ನಿವಾರಿಸುವುದೂ, ಸ್ವರ್ಗ ಮೋಕ್ಷಗಳನ್ನು ಕೊಡುವುದೂ, ಋಣವನ್ನು ಪರಿಹರಿಸುವುದೂ, ಸುಕಲತ್ರ ಪುತ್ರರನ್ನು ದೊರೆಯಿಸುವುದೂ ಆಗಿರುವುದು.

೬೨-೬೪. ಈ ತೀರ್ಥಕ್ಕೆ ಎಣೆಯಾದುದು ಹಿಂದೆಯೂ ಇರಲಿಲ್ಲ; ಮುಂದೆಯೂ ಯಾವುದೂ ಇರುವುದಿಲ್ಲ. ದುಸ್ವಪ್ನವನ್ನು ನಾಶಗೊಳಿಸುವುದೂ, ಪುಣ್ಯಕರವೂ, ಸಕಲೇಷ್ಟಾರ್ಥವನ್ನು ಕೊಡುವುದೂ ಆದ ಈ ಲಕ್ಷ್ಮೀತೀರ್ಥದ ವೈಭವವನ್ನು ನಿಮಗೆ ಹೇಳಿರುವೆನು. ಈ ಅಧ್ಯಾಯವನ್ನು ಭಕ್ತಿಯಿಂದ ಪಠಿಸು ವವನೂ, ಕೇಳುವವನೂ ಧನಧಾನ್ಯಗಳಿಂದ ಸಮೃದ್ಧನಾಗಿ ಈ ಲೋಕದಲ್ಲಿ ಸಕಲ ಭೋಗಗಳನ್ನೂ ಅನುಭವಿಸಿ ದೇಹಾವಸಾನದಲ್ಲಿ ಮೋಕ್ಷವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಲಕ್ಷ್ಮೀತೀರ್ಥಪ್ರಶಂಸನ—ಧರ್ಮಪುತ್ರನ ನಿರತಿಶಯಸಂಪತ್ಪ್ರಾಪ್ತಿವರ್ಣನ" ವೆಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾವಿಂಶೋಽಧ್ಯಾಯಃ

### ಅಗ್ನಿತೀರ್ಥಪ್ರಶಂಸನಂ—ದುಷ್ಪ್ರಣ್ಯಪೈಶಾಚ್ಯಮೋಕ್ಷಣಂ

ಶ್ರೀ ಸೂತ ಉವಾಚ :—

ಲಕ್ಷ್ಮೀತೀರ್ಥೇ ಶುಭೇ ಪುಂಸಾಂ ಸರ್ವೈಶ್ವರ್ಯೈಕ ಕಾರಣೇ ।
ಸ್ನಾತ್ವಾ ನರಸ್ತತೋ ಗಚ್ಛೇದಗ್ನಿತೀರ್ಥಂ ದ್ವಿಜೋತ್ತಮಾಃ ॥ ೧ ॥
ಅಗ್ನಿತೀರ್ಥಂ ಮಹಾಪುಣ್ಯಂ ಮಹಾಪಾತಕನಾಶನಂ ।
ತೀರ್ಥಾನಾಮುತ್ತಮಂ ತೀರ್ಥಂ ಸರ್ವಾಽಭೀಷ್ಟೈಕಸಾಧನಂ ।
ತತ್ರ ಸ್ನಾಯಾನ್ನರೋ ಭಕ್ತ್ಯಾ ಸ್ವಪಾಪಪರಿಶುದ್ಧಯೇ ॥ ೨ ॥

ಋಷಯ ಊಚುಃ :—

ಅಗ್ನಿತೀರ್ಥಮಿತಿ ಖ್ಯಾತಿಃ ಕಥಂ ತಸ್ಯ ಮುನೀಶ್ವರ ॥ ೩ ॥
ಕುತ್ರೇದಮಗ್ನಿತೀರ್ಥಂ ಚ ಕೀದೃಶಂ ತಸ್ಯ ವೈಭವಂ ।
ಏತನ್ನಃ ಶ್ರದ್ದಧಾನಾನಾಂ ವಿಸ್ತರಾದ್ವಕ್ತುಮರ್ಹಸಿ ॥ ೪ ॥

ಶ್ರೀ ಸೂತ ಉವಾಚ :—

ಸಮ್ಯಕ್ಪೃಷ್ಟಂ ಹಿ ಯುಷ್ಮಾಭಿಃ ಶೃಣುಧ್ವಂ ಮುನಿಪುಂಗವಾಃ ।
ಪುರಾ ಹಿ ರಾಘವೋ ಹತ್ವಾ ರಾವಣಂ ಸಪರಿಚ್ಛದಂ ॥ ೫ ॥

---

### ಕನ್ನಡದ ಅನುವಾದ

#### ಅಗ್ನಿತೀರ್ಥಪ್ರಶಂಸನ—ದುಷ್ಪ್ರಣ್ಯಪೈಶಾಚ್ಯಮೋಕ್ಷಣ

೧. ಸೂತನು ಹೇಳುತ್ತಾನೆ:—ಎಲೈ ದ್ವಿಜವರ್ಯರೆ! ಮಾನವರ ಸಕಲೈಶ್ವರ್ಯಕ್ಕೂ ಕಾರಣವಾದ ಲಕ್ಷ್ಮೀತೀರ್ಥದಲ್ಲಿ ಮಿಂದು ಬಳಿಕ ಅಗ್ನಿತೀರ್ಥಕ್ಕೆ ಹೋಗಬೇಕು.

೨. ಅಗ್ನಿತೀರ್ಥವು ಅತ್ಯಂತ ಪುಣ್ಯಕರವೂ, ಅತಿಶಯವಾದ ಪಾಪವನ್ನು ಪರಿಹರಿಸುವುದೂ, ತೀರ್ಥಗಳಲ್ಲೆಲ್ಲ ಉತ್ತಮವೂ, ಸಕಲೇಷ್ಟಾರ್ಥವನ್ನೀಯುವುದೂ ಆಗಿರುವುದು. ಅಲ್ಲಿ ಮನುಷ್ಯನು ತನ್ನ ಪಾಪಪರಿಹಾರಕ್ಕಾಗಿ ಭಕ್ತಿಯಿಂದ ಸ್ನಾನಮಾಡಬೇಕು.

೩. ಋಷಿಗಳು ಕೇಳುತ್ತಾರೆ:—ಮುನಿವರ್ಯನೆ! ಆ ತೀರ್ಥಕ್ಕೆ ಅಗ್ನಿತೀರ್ಥವೆಂದು ಹೆಸರಾದುದೆಂತು?

೪. ಆ ತೀರ್ಥವು ಎಲ್ಲಿರುವುದು? ಅದರ ವೈಭವವೇನು? ಶ್ರದ್ಧೆಯಿಂದ ಕೇಳುವ ನಮಗಿದನ್ನು ವಿಸ್ತಾರವಾಗಿ ಹೇಳು.

೫–೧೫. ಸೂತನು ಹೇಳುತ್ತಾನೆ:—ಮುನಿವರ್ಯರೆ! ನೀವು ಚೆನ್ನಾಗಿ ಪ್ರಶ್ನೆಮಾಡಿದ್ದೀರಿ. ಕೇಳಿರಿ; ಹಿಂದೆ ಶ್ರೀರಾಮಚಂದ್ರನು ರಾವಣನನ್ನು ಪರಿವಾರ

ಸ್ಥಾಪಯಿತ್ವಾ ತು ಲಂಕಾಯಾಂ ಭರ್ತಾರಂ ಚ ವಿಭೀಷಣಂ ।
ಸೀತಾಸೌಮಿತ್ರಿಸಂಯುಕ್ತೋ ರಾಮೋ ದಶರಥಾತ್ಮಜಃ ॥ ೬ ॥
ಸಿದ್ಧಚಾರಣಗಂಧರ್ವೈರ್ದೇವೈರಪ್ಸರಸಾಂಗಣೈಃ ।
ಸ್ತೂಯಮಾನೋ ಮುನಿಗಣೈಃ ಸತ್ಯಾಶೀಸ್ತೀರ್ಥಕೌತುಕೀ ॥ ೭ ॥
ಧಾರಯಲ್ಲೀಲಯಾ ಚಾಪಂ ರಾಮೋಽಸಹ್ಯಪರಾಕ್ರಮಃ ।
ಆತ್ಮನಃ ಶುದ್ಧಿಮಾಧಾತುಂ ಜಾನಕೀಂ ಶೋಧಿತುಂ ತಥಾ ॥ ೮ ॥
ಇಂದ್ರಾದಿದೇವವೃಂದೈಶ್ಚ ಮುನಿಭಿಃ ಪಿತೃಭಿಸ್ತಥಾ ।
ವಿಭೀಷಣೇನ ಸಹಿತಃ ಸರ್ವೈರಪಿ ಚ ವಾನರೈಃ ॥ ೯ ॥
ಆಯಯೌ ಸೇತುಮಾರ್ಗೇಣ ಗಂಧಮಾದನಪರ್ವತಂ ।
ಲಕ್ಷ್ಮೀತೀರ್ಥತಟೇ ಸ್ಥಿತ್ವಾ ಜಾನಕೀಶೋಧನಾಯ ಸಃ ॥ ೧೦ ॥
ಅಗ್ನಿಮಾವಾಹಯಾಮಾಸ ದೇವರ್ಷಿಪಿತೃಸನ್ನಿಧೌ ।
ಅಥೋತ್ತಸ್ಥೌ ಮಹಾಂಭೋಧೇರ್ಲಕ್ಷ್ಮೀತೀರ್ಥಾದ್ವಿದೂರತಃ ॥ ೧೧ ॥
ಪಶ್ಯತ್ಸು ಸರ್ವಲೋಕೇಷು ಲಿಹನ್ನಂಭಾಂಸಿ ಪಾವಕಃ ।
ಆತಾಮ್ರಲೋಚನಃ ಪೀತಃ ಪೀತವಾಸಾ ಧನುರ್ಧರಃ ॥ ೧೨ ॥
ಸಪ್ತಭಿಶ್ಚೈವ ಜಿಹ್ವಾಭಿರ್ಲೇಲಿಹಾನೋ ದಿಶೋ ದಶ ।
ದೃಷ್ಟ್ವಾ ರಘುಪತಿಂ ಶೂರಂ ಲೀಲಾಮಾನುಷರೂಪಿಣಂ ॥ ೧೩ ॥

---

ಸಹಿತವಾಗಿ ಕೊಂದು, ಲಂಕೆಯಲ್ಲಿ ವಿಭೀಷಣನನ್ನು ರಾಜನನ್ನಾಗಿರಿಸಿ ಸೀತಾ ಲಕ್ಷ್ಮಣರೊಡನೆ ಸಿದ್ಧರು, ಚಾರಣರು, ಗಂಧರ್ವರು, ದೇವತೆಗಳು, ಅಪ್ಸರರು ಇವರ ಸಮೂಹಗಳಿಂದ ಸಂಸ್ತುತನಾಗಿ, ಮುನಿವರ್ಯರ ಸತ್ಯವಾದ ಆಶೀರ್ವಾದವುಳ್ಳವನೂ, ತೀರ್ಥಗಳಲ್ಲಿ ಕುತೂಹಲವುಳ್ಳವನೂ ಆಗಿ ಲೀಲೆಗಾಗಿ ಬಿಲ್ಲನ್ನು ಹಿಡಿದು ತನ್ನ ಶುದ್ಧಿಗಾಗಿಯೂ, ಜಾನಕಿಯ ವಿಶುದ್ಧಿಗಾಗಿಯೂ, ಇಂದ್ರಾದಿ ದೇವತೆಗಳು, ಮುನಿಗಳು, ಪಿತೃಗಳು, ವಿಭೀಷಣ, ಸಕಲ ಕಪಿಗಳು— ಇವರೊಡನೆ ಸೇತುಮಾರ್ಗದಿಂದ ಗಂಧಮಾದನಪರ್ವತಕ್ಕೆ ಬಂದನು. ಅವನು ಲಕ್ಷ್ಮೀತೀರ್ಥದ ದಡದಲ್ಲಿ ನಿಂತು ಜಾನಕಿಯ ಶುದ್ಧಿಗಾಗಿ ದೇವತೆಗಳು, ಋಷಿಗಳು, ಪಿತೃಗಳು— ಎಲ್ಲರೂ ನೋಡುತ್ತಿರುವಂತೆಯೆ ಅಗ್ನಿಯನ್ನು ಆವಾಹನೆ ಮಾಡಿದನು. ಬಳಿಕ ಲಕ್ಷ್ಮೀತೀರ್ಥಕ್ಕೆ ಸ್ವಲ್ಪ ದೂರದಲ್ಲಿ ಸಮಸ್ತ ಜನರೂ ನೋಡುತ್ತಿರುವಂತೆಯೆ ಸ್ವಲ್ಪ ಕೆಂಪಾದ ಕಣ್ಣುಳ್ಳವನೂ, ಹಳದಿಬಣ್ಣದವನೂ, ಹಳದಿ ಬಟ್ಟೆಯುಟ್ಟವನೂ, ಧನುಸ್ಸನ್ನು ಧರಿಸಿದವನೂ, ಏಳು ನಾಲಿಗೆಗಳಿಂದಲೂ ಹತ್ತು ದಿಕ್ಕುಗಳನ್ನು ನೆಕ್ಕುತ್ತಿರುವವನೂ ಆದ ಅಗ್ನಿಯು ಮೇಲಕ್ಕೆದ್ದನು. ಅವನು ಲೀಲೆಯಿಂದ ಮನುಷ್ಯರೂಪಿಯೂ, ಶೂರನೂ ಆದ ಶ್ರೀ ರಾಮನನ್ನು ಕಂಡು, ಜಾನಕಿಯ ಶುದ್ಧಿಗಾಗಿ ರಮ್ಯವಾಗಿ ಹೀಗೆ ನುಡಿದನು: "ದೊಡ್ಡ

ಜಗಾದ ವಚನಂ ರಮ್ಯಂ ಜಾನಕೀಶುದ್ಧಿಕಾರಣಾತ್ ।
ರಾಮರಾಮ ಮಹಾಬಾಹೋ ರಾಕ್ಷಸಾನಾಂ ಭಯಾವಹ ॥ ೧೪ ॥
ಪಾತಿವ್ರತ್ಯೇನ ಜಾನಕ್ಯಾ ರಾವಣಂ ಹತವಾನ್ಭವಾನ್ ।
ಸತ್ಯಂ ಸತ್ಯಂ ಪುನಃ ಸತ್ಯಂ ನಾಽತ್ರ ಕಾರ್ಯಾ ವಿಚಾರಣಾ ॥ ೧೫ ॥
ಕಮಲೇಯಂ ಜಗನ್ಮಾತಾ ಲೀಲಾಮಾನುಷವಿಗ್ರಹಾ ।
ದೇವತ್ವೇ ದೇವದೇಹೇಯಂ ಮಾನುಷತ್ವೇ ಚ ಮಾನುಷೀ ॥ ೧೬ ॥
ವಿಷ್ಣೋರ್ದೇಹಾಽನುರೂಪಾಂ ವೈ ಕರೋತ್ಯೇಷಾತ್ಮನಸ್ತನುಂ ।
ಯದಾ ಯದಾ ಜಗತ್ಸ್ವಾಮಿನ್ದೇವದೇವ ಜನಾರ್ದನ ॥ ೧೭ ॥
ಅವತಾರಾನ್ಕರೋಷಿ ತ್ವಂ ತದೇಯಂ ತ್ವತ್ಸಹಾಯಿನೀ ।
ಯದಾ ತ್ವಂ ಭಾರ್ಗವೋ ರಾಮಸ್ತದಾಽಭೂದ್ಧರಣೀತ್ವಿಯಂ ॥ ೧೮ ॥
ಅಧುನಾ ಜಾನಕೀ ಜಾತಾ ಭವಿತ್ರೀ ರುಕ್ಮಿಣೀ ತತಃ ।
ಅನ್ಯೇಷು ಚಾಽವತಾರೇಷು ವಿಷ್ಣೋರೇಷಾ ಸಹಾಯಿನೀ ॥ ೧೯ ॥
ತಸ್ಮಾನ್ಮದ್ವಚನಾದೇನಾಂ ಪ್ರತಿಗೃಹ್ಣೀಷ್ವ ರಾಘವ ।
ಪಾವಕಸ್ಯ ತು ತದ್ವಾಕ್ಯಂ ಶ್ರುತ್ವಾ ದೇವಾ ಮಹರ್ಷಯಃ ॥ ೨೦ ॥
ವಿದ್ಯಾಧರಾಶ್ಚ ಗಂಧರ್ವಾ ಮಾನವಾಃ ಪನ್ನಗಾಸ್ತಥಾ ।
ಅನ್ಯೇಚ ಭೂತನಿವಹಾ ರಾಮಂ ದಶರಥಾತ್ಮಜಂ ॥ ೨೧ ॥

---

ತೋಳುಗಳುಳ್ಳವನೂ, ರಾಕ್ಷಸರಿಗೆ ಭಯವನ್ನುಂಟುಮಾಡುವವನೂ ಆದ ಓ ರಾಮ! ನೀನು ಜಾನಕಿಯ ಪಾತಿವ್ರತ್ಯದಿಂದ ರಾವಣನನ್ನು ಕೊಂದಿರುವೆ. ಇದು ನಿಜವಾದುದು. ಈ ವಿಷಯದಲ್ಲಿ ಆಲೋಚಿಸಬೇಡ.

೧೬–೧೮. ಈ ಸೀತೆಯು ಜಗನ್ಮಾತೆಯು; ಲೀಲೆಯಿಂದ ಮನುಷ್ಯ ದೇಹವನ್ನು ತಳೆದ ಆದಿಲಕ್ಷ್ಮಿಯು. ನೀನು ದೇವತೆಯಾಗಿರುವಾಗ ಇವಳು ದೇವತಾ ದೇಹವುಳ್ಳವಳೂ, ಮನುಷ್ಯನಾಗಿರುವಾಗಿ ಮನುಷ್ಯದೇಹವುಳ್ಳವಳೂ ಆಗಿ ವಿಷ್ಣುರೂಪನಾದ ನಿನ್ನ ದೇಹಕ್ಕನುಗುಣವಾಗಿ ತನ್ನ ದೇಹವನ್ನು ಮಾರ್ಪಡಿಸುವಳು. ಜಗದೊಡೆಯನಾದ ಓ ನಾರಾಯಣನೆ! ನೀನು ಅವತಾರ ಮಾಡಿದಾಗ ಇವಳು ನಿನಗೆ ಸಹಾಯಕಳಾಗಿರುವಳು. ನೀನು ಪರಶುರಾಮನಾದಾಗ ಇವಳು ಹರಣಿಯಾಗಿದ್ದಳು.

೧೯–೨೨. ಈಗ ಜಾನಕಿಯಾಗಿರುವಳು. ಮುಂದೆ ರುಕ್ಮಿಣಿಯಾಗುವಳು. ಇತರ ಅವತಾರಗಳಲ್ಲಿ ನಿನಗೆ ಇವಳು ಸಹಾಯಕಳಾಗಿರುವಳು. ರಾಮ! ಆದುದರಿಂದ ನನ್ನ ಮಾತಿನಂತೆ ಇವಳನ್ನು ಪರಿಗ್ರಹಿಸು.'' ಅಗ್ನಿಯ ಮಾತನ್ನು ಕೇಳಿ ದೇವತೆಗಳೂ, ಮಹರ್ಷಿಗಳೂ, ವಿದ್ಯಾಧರರೂ, ಗಂಧರ್ವರೂ, ಮಾನವರೂ, ನಾಗರೂ, ಇತರ ಪ್ರಾಣಿಗಳೂ ದಾಶರಥಿಯನ್ನೂ, ಜಾನಕಿಯನ್ನೂ

ಜಾನಕೀಂ ಮೈಥಿಲೀಂ ಚೈವ ಪ್ರಶಶಂಸುಃ ಪುನಃ ಪುನಃ ।
ರಾಮೋಽಗ್ನಿವಚನಾತ್ಸೀತಾಂ ಪ್ರತಿಜಗ್ರಾಹ ನಿರ್ಮಲಾಂ ॥ ೨೨ ॥
ಏವಂ ಸೀತಾವಿಶುದ್ಧ್ಯರ್ಥಂ ರಾಮೇಣಾಕ್ಲಿಷ್ಟಕರ್ಮಣಾ ।
ಆವಾಹನೇ ಕೃತೇ ವಹ್ನಿರ್ಲಕ್ಷ್ಮೀತೀರ್ಥಾದ್ವಿದೂರತಃ ॥ ೨೩ ॥
ಯತಃ ಪ್ರದೇಶಾದುತ್ತಸ್ಥಾವಂಬುಧೇರ್ದ್ವಿಜಸತ್ತಮಾಃ ।
ಅಗ್ನಿತೀರ್ಥಂ ವಿಜಾನೀತ ತಂ ಪ್ರದೇಶಮನುತ್ತಮಂ ॥ ೨೪ ॥
ತತೋ ವಿನಿರ್ಗಮಾದಗ್ನೇರಗ್ನಿತೀರ್ಥಮಿತೀರ್ಯತೇ ।
ಅತ್ರ ಸ್ನಾತ್ವಾ ನರೋ ಭಕ್ತ್ಯಾ ವಹ್ನೇಸ್ತೀರ್ಥೇ ವಿಮುಕ್ತಿದೇ ॥ ೨೫ ॥
ಉಪೋಷ್ಯ ವೇದವಿದುಷೋ ಬ್ರಾಹ್ಮಣಾನಪಿ ಭೋಜಯೇತ್ ।
ತೇಭ್ಯೋ ವಸ್ತ್ರಂ ಧನಂ ಭೂಮಿಂ ದದ್ಯಾತ್ಕನ್ಯಾಂ ಚ ಭೂಷಿತಾಂ ॥ ೨೬ ॥
ಸರ್ವಪಾಪವಿನಿರ್ಮುಕ್ತೋ ವಿಷ್ಣುಸಾಯುಜ್ಯಮಾಪ್ನುಯಾತ್ ।
ಅಗ್ನಿತೀರ್ಥಸ್ಯ ಕೂಲೇಽಸ್ಮಿನ್ನನ್ನದಾನಂ ವಿಶಿಷ್ಯತೇ ॥ ೨೭ ॥
ಅಗ್ನಿತೀರ್ಥಸಮಂ ತೀರ್ಥಂ ನ ಭೂತಂ ನ ಭವಿಷ್ಯತಿ ।
ದುಷ್ಪಣ್ಯೋಽಪಿ ಮಹಾಪಾಪೋ ಯತ್ರ ಸ್ನಾನಾತ್ಪಿಶಾಚತಾಂ ॥ ೨೮ ॥

---

ಬಾರಿಬಾರಿಗೂ ಹೊಗಳಿದರು. ಶ್ರೀರಾಮನು ಅಗ್ನಿಯ ಮಾತಿನಂತೆ ಪರಿಶುದ್ಧಳಾದ ಸೀತೆಯನ್ನು ಪರಿಗ್ರಹಿಸಿದನು.

೨೩–೨೪. ಹೀಗೆ ಸೀತೆಯ ಶುದ್ಧಿಗಾಗಿ ಪವಿತ್ರವಾದ ಕಾರ್ಯವುಳ್ಳ ಶ್ರೀರಾಮನು ಅಗ್ನಿಯನ್ನು ಆವಾಹನೆ ಮಾಡಲು ಲಕ್ಷ್ಮೀತೀರ್ಥಕ್ಕೆ ಸ್ವಲ್ಪ ದೂರದಲ್ಲಿ ಯಾವ ಪ್ರದೇಶದಲ್ಲಿ ಅಗ್ನಿಯು ಉದ್ಭವಿಸಿದನೊ ಆ ಪ್ರದೇಶವೇ ಅಗ್ನಿತೀರ್ಥವೆಂದು ತಿಳಿಯಿರಿ.

೨೫–೨೬. ಅಗ್ನಿಯ ಉತ್ಪತ್ತಿಯಿಂದ ಅಗ್ನಿತೀರ್ಥವೆಂದು ಹೆಸರನ್ನು ಪಡೆದ ಮೋಕ್ಷದಾಯಕವಾದ ಈ ತೀರ್ಥದಲ್ಲಿ ಮಾನವನು ಭಕ್ತಿಯಿಂದ ಮಿಂದು ಉಪವಾಸ ಮಾಡಿ, ವೇದಜ್ಞರಾದ ಬ್ರಾಹ್ಮಣರಿಗೆ ಭೋಜನ ಮಾಡಿಸಿ, ಅವರಿಗೆ ವಸ್ತ್ರ, ಧನ, ಭೂಮಿಗಳನ್ನೂ, ಅಲಂಕೃತಳಾದ ಕನ್ಯೆಯನ್ನೂ ದಾನ ಮಾಡಬೇಕು.

೨೭. ಇದರಿಂದ ಮಾನವನು ಸಕಲ ಪಾಪವಿಮುಕ್ತನಾಗಿ ವಿಷ್ಣುಸಾಯುಜ್ಯವನ್ನು ಹೊಂದುವನು. ಅಗ್ನಿತೀರ್ಥದ ತೀರದಲ್ಲಿ ಮಾಡುವ ಅನ್ನದಾನವು ಶ್ರೇಷ್ಠವಾದುದು.

೨೮–೨೯. ಅಗ್ನಿತೀರ್ಥಕ್ಕೆ ಸಾಟಿಯಾದ ತೀರ್ಥವು ಹಿಂದೆಯೂ ಇರಲಿಲ್ಲ; ಮುಂದೆಯೂ ಇರುವುದಿಲ್ಲ. ಇಲ್ಲಿ ಮಹಾಪಾಪಿಯಾದ ದುಷ್ಪಣ್ಯನೆಂಬವನು

ಪರಿತ್ಯಜ್ಯ ಮಹಾಘೋರಾಂ ದಿವ್ಯಂ ರೂಪಮವಾಪ್ತವಾನ್ ।
ಪಶುಮಾನ್ನಾಮ ವೈಶ್ಯೋಽಭೂತ್ಪುರಾ ಪಾಟಲಿಪುತ್ರಕೇ ॥ ೨೯ ॥
ಸ ವೈ ಧರ್ಮಪರೋ ನಿತ್ಯಂ ಬ್ರಾಹ್ಮಣಾರಾಧನೇ ರತಃ ।
ಕೃಷಿಂ ನಿರಂತರಂ ಕುರ್ವನ್ಗೋರಕ್ಷಾಂ ಚೈವ ಸರ್ವದಾ ॥ ೩೦ ॥
ಪಣ್ಯವೀಥ್ಯಾಂ ಚ ವಿಕ್ರೀಣನ್ಕಾಂಚನಾದೀನಿ ಧರ್ಮತಃ ।
ಪಶುಮನ್ನಾಮಧೇಯಸ್ಯ ವಣಿಕ್ಛ್ರೇಷ್ಠಸ್ಯ ತಸ್ಯ ವೈ ॥ ೩೧ ॥
ಬಭೂವ ಭಾರ್ಯಾತ್ರಿತಯಂ ಪತಿಶುಶ್ರೂಷಣೇ ರತಂ ।
ಜ್ಯೇಷ್ಠಾ ತ್ರೀನ್ಸುಷುವೇ ಪುತ್ರಾನ್ವೈಶ್ಯವಂಶವಿವರ್ಧನಾನ್ ॥ ೩೨ ॥
ಸುಪಣ್ಯಂ ಪಣ್ಯವಂತಂ ಚ ಚಾರುಪಣ್ಯಂ ತಥೈವ ಚ ।
ಮಧ್ಯಮಾ ಸುಷುವೇ ಪುತ್ರೌ ಸುಕೋಶ ಬಹುಕೋಶಕೌ ॥ ೩೩ ॥
ತೃತೀಯಾಯಾಂ ತ್ರಯಃ ಪುತ್ರಾಸ್ತಸ್ಯ ವೈಶ್ಯಸ್ಯ ಜಜ್ಞಿರೇ ।
ಮಹಾಪುಣ್ಯೋ ಮಹಾಕೋಶೋ ದುಷ್ಪಣ್ಯ ಇತಿ ವಿಶ್ರುತಾಃ ॥ ೩೪ ॥
ಏವಂ ಪಶುಮತಸ್ತಸ್ಯ ವೈಶ್ಯಸ್ಯ ದ್ವಿಜಸತ್ತಮಾಃ ।
ಬಭೂವುರಷ್ಟೌ ತನಯಾಸ್ತಾಸು ಸ್ತ್ರೀಷು ತಿಸೃಷ್ವಪಿ ॥ ೩೫ ॥
ತೇ ಸುಪಣ್ಯಮುಖಾಃ ಸರ್ವೇ ಪುತ್ರಾ ವವೃಧಿರೇ ಕ್ರಮಾತ್ ।
ಧೂಲಿಕೇಲಿಂ ವಿತನ್ವಂತಃ ಪಿತರೌ ತೋಷಯಂತಿ ತೇ ॥ ೩೬ ॥

---

ಘೋರವಾದ ಪಿಶಾಚತ್ವವನ್ನು ತ್ಯಜಿಸಿ ದಿವ್ಯರೂಪವನ್ನು ಪಡೆದಿರುವನು. ಹಿಂದೆ ಪಾಟಲಿಪುತ್ರ ಪಟ್ಟಣದಲ್ಲಿ ಪಶುಮಂತನೆಂಬ ವರ್ತಕಶ್ರೇಷ್ಠನಿದ್ದನು.

೩೦–೩೪. ಅವನು ಧರ್ಮನಿರತನೂ, ಯಾವಾಗಲೂ ಬ್ರಾಹ್ಮಣಪೂಜೆಯಲ್ಲಿ ಆಸಕ್ತನೂ, ಕೃಷಿ, ಗೋರಕ್ಷಣೆಯನ್ನು ಮಾಡುವವನೂ, ಅಂಗಡಿ ಬೀದಿಯಲ್ಲಿ ಸುವರ್ಣ ಮೊದಲಾದುವುಗಳನ್ನು ಧರ್ಮದಿಂದ ಮಾರುವವನೂ ಆಗಿದ್ದನು. ಆ ಪಶುಮಂತ ವೈಶ್ಯೋತ್ತಮನಿಗೆ ಪತಿಸೇವೆಯಲ್ಲಿ ನಿರತರಾದ ಮೂವರು ಪತ್ನಿಯರಿದ್ದರು. ಹಿರಿಯ ಹೆಂಡತಿಯು ಸುಪಣ್ಯ, ಪಣ್ಯವಂತ, ಚಾರುಪಣ್ಯ ಎಂಬ ವೈಶ್ಯವಂಶವನ್ನು ಅಭಿವೃದ್ಧಿಗೊಳಿಸುವ ಮೂರು ಮಂದಿ ಮಕ್ಕಳನ್ನು ಪಡೆದಳು. ನಡುಕಲ ಹೆಂಡತಿಯು ಸುಕೋಶ, ಬಹುಕೋಶರೆಂಬ ಪುತ್ರರನ್ನು ಪಡೆದಳು. ಮೂರನೆಯ ಹೆಂಡತಿಯಲ್ಲಿ ಮಹಾಪಣ್ಯ, ಮಹಾಕೋಶ, ದುಷ್ಪಣ್ಯ ಎಂಬ ಪ್ರಸಿದ್ಧರಾದ ಮೂರು ಮಂದಿ ಪುತ್ರರು ಜನಿಸಿದರು.

೩೫. ಎಲೈ ದ್ವಿಜವರ್ಯರೆ! ಹೀಗೆ ಆ ಪಶುಮಂತ ವೈಶ್ಯನಿಗೆ ಮೂವರು ಸತಿಯರಲ್ಲಿಯೂ ಎಂಟು ಮಂದಿ ಪುತ್ರರು ಹುಟ್ಟಿದರು.

೩೬. ಆ ಸುಪಣ್ಯರೇ ಮೊದಲಾದ ಎಲ್ಲ ಮಕ್ಕಳೂ ಕ್ರಮವಾಗಿ ಬೆಳೆದರು. ಅವರು ಧೂಳಿನಲ್ಲಿ ಆಡುತ್ತ ತಂದೆತಾಯಿಗಳನ್ನು ಸಂತೋಷಗೊಳಿಸುತ್ತಿದ್ದರು.

ಪಂಚಹಾಯನತಾಂ ಪ್ರಾಪ್ತಾಃ ಕ್ರಮಾತ್ತೇ ವೈಶ್ಯನಂದನಾಃ ।
ಪಶುಮಾನಪಿ ವೈಶ್ಯೇಂದ್ರಃ ಸರ್ವಾನಪಿ ಚ ತಾನ್ಸುತಾನ್ ॥ ೩೭ ॥
ಬಾಲ್ಯಮಾರಭ್ಯ ಸತತಂ ಸ್ವಕೃತ್ಯೇಷು ವ್ಯಶಿಕ್ಷಯತ್ ।
ಕೃಷಿ ಗೋತ್ರಾಣವಾಣಿಜ್ಯಕರ್ಮಸು ಕ್ರಮಶಿಕ್ಷಿತಾಃ ॥ ೩೮ ॥
ಸುಪಣ್ಯಮುಖ್ಯಾಃ ಸಪ್ತೈವ ಪಿತೃವಾಕ್ಯಮಶೃಣ್ವತ ।
ಪಶುಮಾನ್ವಕ್ತಿ ಯತ್ಕಾರ್ಯಂ ತತ್ಕ್ಷಣಾನ್ನಿರವರ್ತಯನ್ ॥ ೩೯ ॥
ನೈಪುಣ್ಯಂ ಪ್ರಾಪುರತ್ಯಂತಂ ತೇ ಸುವರ್ಣಕ್ರಿಯಾಸ್ವಪಿ ।
ದುಷ್ಪಣ್ಯಸ್ತ್ವಷ್ಟಮಃ ಪುತ್ರೋ ಬಾಲ್ಯಮಾರಭ್ಯ ಸಂತತಂ ॥ ೪೦ ॥
ದುರ್ಮಾರ್ಗನಿರತೋ ಭೂತ್ವಾ ನಾಽಶೃಣೋತ್ಪಿತೃಭಾಷಿತಂ ।
ಧೂಲಿಕೇಲಿಂ ಸಮಾರಭ್ಯ ದುರ್ಮಾರ್ಗನಿರತೋಽಭವತ್ ॥ ೪೧ ॥
ಸ ಬಾಲ ಏವ ಸನ್ಪುತ್ರೋ ಬಾಲಾನನ್ಯಾನಬಾಧತ ।
ದುಷ್ಕರ್ಮನಿರತಂ ದೃಷ್ಟ್ವಾ ತಂ ಪಿತಾ ಪಶುಮಾಂಸ್ತಥಾ ॥ ೪೨ ॥
ಉಪೇಕ್ಷಾಮೇವ ಕೃತವಾನ್ಬಾಲಿಶೋಽಯಮಿತೀರಯನ್ ।
ಅಥಾಽಷ್ಟಾವಪಿ ವೈಶ್ಯಸ್ಯ ಪ್ರಾಪುರ್ಯೌವನಮಾತ್ಮಜಾಃ ॥ ೪೩ ॥
ತತೋಽಯಮಷ್ಟಮಃ ಪುತ್ರೋ ದುಷ್ಪಣ್ಯೋ ಬಲಿನಾಂ ವರಃ ।
ಗೃಹೀತ್ವಾ ಪಾಣಿಷು ಗಲೇ ಬಾಲಾನ್ನಗರವರ್ತಿನಃ ॥ ೪೪ ॥

---

೩೭–೩೯. ಹೀಗೆ ಕ್ರಮವಾಗಿ ಅವರು ಐದು ವರ್ಷ ವಯಸ್ಸುಳ್ಳವರಾದರು. ವೈಶ್ಯಶ್ರೇಷ್ಠನಾದ ಪಶುಮಂತನು ಆ ಎಲ್ಲ ಮಕ್ಕಳಿಗೂ ಬಾಲ್ಯದಿಂದ ಮೊದಲ್ಗೊಂಡು ಯಾವಾಗಲೂ ತನ್ನ ವೃತ್ತಿಯನ್ನು ಹೇಳಿಕೊಟ್ಟನು. ವ್ಯವಸಾಯ, ಗೋರಕ್ಷಣೆ ಮತ್ತು ವ್ಯಾಪಾರಗಳಲ್ಲಿ ಕ್ರಮವಾಗಿ ನೈಪುಣ್ಯವನ್ನು ಪಡೆದ ಸುಪಣ್ಯನೇ ಮೊದಲಾದ ಏಳು ಮಂದಿ ಮಕ್ಕಳೂ ತಂದೆಯ ಮಾತನ್ನು ಕೇಳುತ್ತಿದ್ದರು. ಅವರು ತಂದೆಯು ಹೇಳಿದ ಕೆಲಸವನ್ನೆಲ್ಲ ಕೂಡಲೆ ನೆರವೇರಿಸುತ್ತಿದ್ದರು.

೪೦–೪೧. ಚಿನ್ನದ ಕೆಲಸಗಳಲ್ಲಿಯೂ ಅವರು ಅತ್ಯಂತ ಕುಶಲರಾದರು. ಎಂಟನೆಯವನಾದ ದುಷ್ಪಣ್ಯನು ಬಾಲ್ಯದಲ್ಲಿ ಧೂಳಿನ ಆಟ ಮೊದಲ್ಗೊಂಡು ಯಾವಾಗಲೂ ದುರ್ಮಾರ್ಗನಿರತನಾಗಿ ತಂದೆಯ ಮಾತನ್ನು ಕೇಳಲಿಲ್ಲ.

೪೨–೪೩. ಅವನು ಬಾಲಕನಾಗಿಯೇ ಇತರ ಹುಡುಗರನ್ನು ಪೀಡಿಸಿದನು. ತಂದೆಯಾದ ಪಶುಮಂತನು ದುಷ್ಕೃತ್ಯದಲ್ಲಿ ಆಸಕ್ತನಾದ ಆ ದುಷ್ಪಣ್ಯನಲ್ಲಿ ಇವನು ಮೂಢನೆಂದು ಹೇಳುತ್ತ ಉದಾಸೀನನಾದನು. ಬಳಿಕ ಆ ವೈಶ್ಯನ ಎಂಟು ಮಂದಿ ಮಕ್ಕಳೂ ಯುವಕರಾದರು.

೪೪–೪೭. ತರುವಾಯ ಬಲಿಷ್ಠನಾದ ದುಷ್ಪಣ್ಯನೆಂಬ ಎಂಟನೆ ಮಗನು ಪಟ್ಟಣದಲ್ಲಿರುವ ಹುಡುಗರನ್ನು ಕುತ್ತಿಗೆ ಹಿಡಿದು ಬಾವಿ, ನದಿ, ಸರೋವರಗಳಲ್ಲಿ

ನಿಚಿಕ್ಷೇಪ ಸ ಕೂಪೇಷು ಸರಿತ್ಸುಚ ಸರಃಸ್ವಪಿ ।
ನ ಕೋಽಪಿ ತಸ್ಯ ಜಾನಾತಿ ದುಶ್ಚರಿತ್ರಮಿದಂ ಜನಃ ॥ ೪೫ ॥
ಯಾವನ್ಮ್ರಿಯಂತೇ ತೇ ಬಾಲಾಸ್ತಾವನ್ನಿಕ್ಷಿಪ್ತವಾನ್ಜಲೇ ।
ತೇಷಾಂ ಮೃತಾನಾಂ ಬಾಲಾನಾಂ ಪಿತರೋ ಮಾತರಸ್ತಥಾ ॥ ೪೬ ॥
ಗವೇಷಯಂತಿ ತಾನ್ಸರ್ವಾನ್ನಗರೇಷು ಹಿ ಸರ್ವಶಃ ।
ತಾನ್ದೃಷ್ಟ್ವಾಚ ಮೃತಾನ್ಪುತ್ರಾನ್ಕೇವಲಂ ಪ್ರಾರುದನ್ಜನಾಃ ॥ ೪೭ ॥
ಜಲೇಷ್ವಥ ಶವಾನ್ದೃಷ್ಟ್ವಾ ಜನಾಶ್ಚಕ್ರುರ್ಯಥೋಚಿತಂ ।
ಏವಂ ಪ್ರತಿದಿನಂ ಬಾಲಾನ್ದುಷ್ಪುಣ್ಯೋ ಮಾರಯನ್ಪುರೇ ॥ ೪೮ ॥
ಜನೈರಪ್ಯಪರಿಜ್ಞಾತಶ್ಚಿರಮೇವಮವರ್ತತ ।
ಮ್ರಿಯಮಾಣೇಷು ಬಾಲೇಷು ವೈಶ್ಯಪುತ್ರಸ್ಯ ಕರ್ಮಣಾ ॥ ೪೯ ॥
ಪ್ರಜಾನಾಂ ವೃದ್ಧಿರಾಹಿತ್ಯಾಚ್ಛೂನ್ಯಪ್ರಾಯಮಭೂತ್ಪುರಂ ।
ತತಸ್ಸಮೇತ್ಯ ಪೌರಾಸ್ತದ್ವೃತ್ತಂ ರಾಜ್ಞೇ ನ್ಯವೇದಯನ್ ॥ ೫೦ ॥
ಶ್ರುತ್ವಾ ನೃಪಸ್ತದ್ವಚನಮಾಹೂಯ ಗ್ರಾಮಪಾಲಕಾನ್ ।
ಕಾರಣಂ ಬಾಲಮರಣೇ ಚಿಂತ್ಯತಾಮಿತಿ ಸೋಽನ್ವಶಾತ್ ॥ ೫೧ ॥
ಗ್ರಾಮಪಾಲಾಸ್ತಥೇತ್ಯುಕ್ತ್ವಾ ತತ್ರ ತತ್ರ ವ್ಯವಸ್ಥಿತಾಃ ।
ಸಮ್ಯಗ್ಗವೇಷಯಾಮಾಸುಃ ಕಾರಣಂ ಬಾಲಮಾರಣೇ ॥ ೫೨ ॥

---

ಎಸೆಯುತ್ತಿದ್ದನು. ಅವನ ಈ ದುರ್ನಡತೆಯನ್ನು ಯಾವ ಮನುಷ್ಯನೂ ತಿಳಿಯಲಿಲ್ಲ. ಆ ಹುಡುಗರನ್ನು ಸಾಯುವವರೆಗೂ ನೀರಿನಲ್ಲಿ ಮುಳುಗಿಸಿದನು. ಸತ್ತಿರುವ ಆ ಬಾಲಕರ ತಂದೆತಾಯಿಗಳು ಅವರನ್ನು ನಗರದಲ್ಲೆಲ್ಲ ಹುಡುಕಿದರು. ಜನರು ಮೃತಬಾಲಕರನ್ನು ಉದ್ದೇಶಿಸಿ ಸುಮ್ಮನೆ ಅತ್ತರು.

೪೮–೫೦. ಬಳಿಕ ಜನರು ನೀರಿನಲ್ಲಿ ಶವಗಳನ್ನು ನೋಡಿ ಮುಂದಿನ ಕಾರ್ಯವನ್ನು ನಡೆಸಿದರು. ಹೀಗೆ ದುಷ್ಪುಣ್ಯನು ಪಟ್ಟಣದಲ್ಲಿ ಪ್ರತಿದಿನವೂ ಜನರಿಗೆ ತಿಳಿಯದಂತೆ ಬಾಲಕರನ್ನು ಕೊಲ್ಲುತ್ತ ಬಂದನು. ಈ ವೈಶ್ಯಕುಮಾರನ ದುಷ್ಕಾರ್ಯದಿಂದ ಬಾಲಕರೆಲ್ಲ ಸಾಯುತ್ತಿರಲು ಪ್ರಜಾಭಿವೃದ್ಧಿಯಿಲ್ಲದೆ ಪಟ್ಟಣವು ಬರಿದಾದಂತಾಯಿತು. ಅನಂತರ ಪಟ್ಟಣಿಗರು ಬಂದು ರಾಜನಿಗೆ ಆ ಸಮಾಚಾರವನ್ನು ತಿಳಿಸಿದರು.

೫೧. ದೊರೆಯು ಪಟ್ಟಣಿಗರ ಮಾತನ್ನು ಕೇಳಿ ಗ್ರಾಮರಕ್ಷಕರನ್ನು ಕರೆದು ಹುಡುಗರು ಸಾಯುವುದರ ಕಾರಣವನ್ನು ಕಂಡುಹಿಡಿಯಿರಿ ಎಂದು ಅಪ್ಪಣೆ ಮಾಡಿದನು.

೫೨. ಗ್ರಾಮರಕ್ಷಕರು ಹಾಗೆಯೇ ಆಗಲೆಂದು ಅಲ್ಲಲ್ಲಿ ನಿಂತು ಬಾಲಕರು ಸಾಯಲು ಕಾರಣವನ್ನು ತಿಳಿಯಲು ಚೆನ್ನಾಗಿ ಹುಡುಕತೊಡಗಿದರು.

ತೇ ವೈ ಗವೇಷಯಂತೋಽಪಿ ನಾಽವಿಂದನ್ಬಾಲಮಾರಕಂ ।
ತೇ ಪುನರ್ನೃಪಮಾಸಾದ್ಯ ಭೀತಾ ವಾಕ್ಯಮಥಾಽಬ್ರುವನ್ ॥ ೫೩ ॥
ಗವೇಷಯಂತೋಽಪಿ ವಯಂ ತನ್ನ ವಿಂದಾಮಹೇ ನೃಪ ।
ಯೋ ಬಾಲಾನ್ನಗರೇ ಸ್ಥಿತ್ವಾ ಸಂತತಂ ಮಾರಯತ್ಯಪಿ ॥ ೫೪ ॥
ಪುನಶ್ಚ ನಾಗರಾಃ ಸರ್ವೇ ರಾಜಾನಂ ಪ್ರಾಪ್ಯ ದುಃಖಿತಾಃ ।
ಪುನಃ ಪ್ರಜಾನಾಂ ಮರಣಮಬ್ರುವನ್ಬಾಷ್ಪಸಂಕುಲಾಃ ॥ ೫೫ ॥
ರಾಜಾ ತತ್ಕಾರಣಾಽಜ್ಞಾನಾತ್ತೂಷ್ಣೀಮಾಸ್ತೇ ವಿಚಿಂತ್ಯ ತು ।
ಕದಾಚಿದ್ವೈಶ್ಯಪುತ್ರೋಽಯಂ ಪಂಚಭಿರ್ಬಾಲಕೈಃ ಸಹ ॥ ೫೬ ॥
ತಟಾಕಾಂತಿಕಮಾಪೇದೇ ಪಂಕಜಾಹರಣಚ್ಛಲಾತ್ ।
ಬಲಾದ್ಗೃಹೀತ್ವಾ ತಾನ್ಬಾಲಾನ್ದುಷ್ಪಣ್ಯಃ ಕ್ರೋಶತಸ್ತದಾ ॥ ೫೭ ॥
ಕ್ರೂರಾತ್ಮಾ ಮಜ್ಜಯಾಮಾಸ ಕಂಠದಘ್ನೇ ಸರೋಜಲೇ ।
ಮೃತಾನ್ಮತ್ವಾ ಚ ತಾನ್ಶೀಘ್ರಂ ದುಷ್ಪಣ್ಯಃ ಸ್ವಗೃಹಂ ಯಯೌ ॥ ೫೮ ॥
ಪಂಚಾನಾಂ ಪಿತರಸ್ತೇಷಾಂ ಮಾರ್ಗಯಂತಃ ಸುತಾನ್ಪುರೇ ।
ತೇಷು ವೈ ಮಾರ್ಗಮಾಣೇಷು ಪಂಚ ತೇನಾಽತಿಬಾಲಕಾಃ ॥ ೫೯ ॥
ನಿಕ್ಷಿಪ್ತಾ ಅಪಿ ತೋಯೇಷು ನಾಽಮ್ರಿಯಂತ ಯದೃಚ್ಛಯಾ ।
ತೇ ಶನೈಃ ಕೂಲಮಾಸಾದ್ಯ ಪಂಚಾಽಪಿ ಕ್ಲಿನ್ನಮೌಲಯಃ ॥ ೬೦ ॥

---

೫೩. ನಗರರಕ್ಷಕರು ಎಷ್ಟೇ ಹುಡುಕಿದರೂ ಆ ಬಾಲಹಂತಕನನ್ನು ಕಂಡು ಹಿಡಿಯಲು ಸಮರ್ಥರಾಗದೆ ರಾಜನ ಬಳಿಗೆ ಹೋಗಿ ಭಯದಿಂದ ಇಂತೆಂದರು.

೫೪. "ಅರಸ! ನಾವು ಎಷ್ಟೇ ಹುಡುಕಿದರೂ ಈ ನಗರದಲ್ಲಿ ಬಾಲಕರನ್ನು ಕೊಲ್ಲುತ್ತಿರುವವನು ದೊರಕಲಿಲ್ಲ."

೫೫. ಇಷ್ಟರಲ್ಲಿಯೆ ಮರಳಿಯೂ ಪಟ್ಟಣಿಗರೆಲ್ಲ ರಾಜನ ಬಳಿಗೆ ಹೋಗಿ ದುಃಖದಿಂದ ಕಣ್ಣೀರನ್ನು ಸುರಿಸುತ್ತ ಬಾಲಕರ ಮರಣವನ್ನು ಮತ್ತೆ ತಿಳಿಸಿದರು.

೫೬–೫೮. ದೊರೆಯು ಬಹಳವಾಗಿ ಆಲೋಚಿಸಿ ಕಾರಣವನ್ನರಿಯದೆ ಸುಮ್ಮನೆ ಇದ್ದನು. ಒಂದಾನೊಂದು ದಿನ ಈ ದುಷ್ಪಣ್ಯನು ಐದು ಮಂದಿ ಬಾಲಕರೊಡನೆ ತಾವರೆ ಹೂವುಗಳನ್ನು ತರುವ ನೆಪದಿಂದ ಕೆರೆಯ ಬಳಿಗೆ ಬಂದು ಕಿರುಚುತ್ತಿರುವ ಆ ಬಾಲಕರನ್ನು ಬಲಾತ್ಕಾರದಿಂದ ಹಿಡಿದುಕೊಂಡು ಕುತ್ತಿಗೆಯಷ್ಟು ಸರೋವರದ ನೀರಿನಲ್ಲಿ ಮುಳುಗಿಸಿದನು. ಕೂಡಲೆ ಅವರು ಮೃತರಾದರೆಂದರಿತು ತನ್ನ ಮನೆಗೆ ತೆರಳಿದನು.

೫೯–೬೩. ಆ ಐದು ಮಂದಿ ಹುಡುಗರ ತಂದೆತಾಯಿಗಳೂ ಪಟ್ಟಣದಲ್ಲಿ ಅವರನ್ನು ಹುಡುಕುತ್ತಿದ್ದರು. ಆ ದುಷ್ಪಣ್ಯನು ಆ ಐದು ಮಂದಿ ಬಾಲಕರನ್ನೂ ನೀರಿನಲ್ಲಿ ಮುಳುಗಿಸಿದ್ದರೂ ಅವರು ಅಕಸ್ಮಾತ್ತಾಗಿ ಸಾಯಲಿಲ್ಲ. ಆ ಬಾಲಕರು

ಅಶಕ್ತಾ ನಗರಂ ಗಂತುಂ ಬಾಲ್ಯಾತ್ತತ್ರೈವ ಬಭ್ರಮುಃ ।
ದೂರಾದುಚ್ಚಾರ್ಯಮಾಣಾನಿ ಸ್ವನಾಮಾನಿ ಸ್ವ ಬಂಧುಭಿಃ ॥ ೬೧ ॥
ಶ್ರುತ್ವಾ ಪಂಚಾಽಪಿ ತೇ ಬಾಲಾಃ ಪ್ರತಿಶಬ್ದಮಕುರ್ವತ ।
ತತಸ್ತತ್ಪಿತರಃ ಶ್ರುತ್ವಾ ತತ್ರಾಗತ್ಯ ಸರಸ್ತಟೇ ॥ ೬೨ ॥
ಪುತ್ರಾನ್ದೃಷ್ಟ್ವಾತು ಸಪ್ರಾಣಾನ್ಪ್ರಹರ್ಷಮತುಲಂ ಗತಾಃ ।
ಕಿಮೇತದಿತಿ ಪಿತ್ರಾದ್ಯೈಃ ಪೃಷ್ಟಾಸ್ತೇ ಬಾಲಕಾಸ್ತದಾ ॥ ೬೩ ॥
ದುಷ್ಪಣ್ಯಸ್ಯಾಽಥ ದುಷ್ಕೃತ್ಯಂ ಬಂಧುಭ್ಯಸ್ತೇ ನ್ಯವೇದಯನ್ ।
ತತೋ ವಿದಿತವೃತ್ತಾಂತಾ ರಾಜಾನಂ ಪ್ರಾಪ್ಯ ನಾಗರಾಃ ॥ ೬೪ ॥
ಪಂಚಭಿಃ ಕಥಿತಂ ವೃತ್ತಂ ದುಷ್ಪಣ್ಯಸ್ಯ ನ್ಯವೇದಯನ್ ।
ತತೋ ರಾಜಾ ಸಮಾಹೂಯ ಪಶುಮಂತಂ ವಣಿಗ್ವರಂ ।
ಪೌರೇಷ್ವಪಿ ಚ ಶೃಣ್ವತ್ಸು ವಾಕ್ಯಮೇತದಭಾಷತ ॥ ೬೫ ॥

ರಾಜೋವಾಚ :—

ದುಷ್ಪಣ್ಯನಾಮ್ನಾ ಪಶುಮನ್ಬಹುಪ್ರಜಮಿದಂ ಪುರಂ ॥ ೬೬ ॥
ಶೂನ್ಯಪ್ರಾಯಂ ಕೃತಂ ಪಶ್ಯ ತ್ವತ್ಪುತ್ರೇಣ ದುರಾತ್ಮನಾ ।
ಇದಾನೀಂ ಬಾಲಿಶಾನೇತಾನ್ಮಜ್ಜಯಾಮಾಸ ವೈ ಜಲೇ ॥ ೬೭ ॥
ಯದೃಚ್ಛಯಾ ಚ ಸ ಪ್ರಾಣಾಃ ಪುನರಪ್ಯಾಗತಾಃ ಪುರಂ ।
ಅಸ್ಮಿನ್ನಿತ್ಥಂ ಗತೇ ಕಾರ್ಯೇ ಕಿಂ ಕರ್ತವ್ಯಂ ವದಾಽಧುನಾ ॥ ೬೮ ॥

---

ಮೆಲ್ಲನೆ ದಡಕ್ಕೆ ಬಂದು ಒದ್ದೆಯಾದ ತಲೆಯುಳ್ಳವರಾಗಿ ಕೇವಲ ಬಾಲಕರಾದುದರಿಂದ ನಗರಕ್ಕೆ ಹೋಗಲು ಶಕ್ತರಾಗದೆ ಅಲ್ಲಿಯೇ ಅಲೆಯುತ್ತ ಬಂಧುಗಳು ದೂರದಿಂದ ಉಚ್ಚರಿಸುತ್ತಿರುವ ತಮ್ಮ ಹೆಸರನ್ನು ಕೇಳಿದರು. ಕೂಡಲೆ ಅವರು ಪ್ರತ್ಯುತ್ತರವನ್ನು ಕೊಡಲು ತಂದೆತಾಯಿಗಳು ಅದನ್ನು ಕೇಳಿ ಆ ಕೆರೆಯಹತ್ತಿರ ಬಂದು ಬದುಕಿರುವ ಆ ಮಕ್ಕಳನ್ನು ಕಂಡು ಬಹಳ ಸಂತೋಷಗೊಂಡರು. ಇದೇನೆಂದು ತಂದೆತಾಯಿಗಳು ಕೇಳಲು, ಆ ಹುಡುಗರು ದುಷ್ಪಣ್ಯನ ದುಷ್ಕೃತ್ಯವನ್ನು ಅವರಿಗೆ ತಿಳಿಸಿದರು. ತರುವಾಯ ಈ ಸಮಾಚಾರವನ್ನರಿತ ಪಟ್ಟಣಿಗರು ರಾಜನನ್ನು ಹೊಂದಿ ಆ ಐದು ಮಂದಿ ಹುಡುಗರು ಹೇಳಿದ ವೃತ್ತಾಂತವನ್ನು ತಿಳಿಸಿದರು. ಅನಂತರ ದೊರೆಯು ಪಶುಮಂತನನ್ನು ಕರೆಯಿಸಿ ಪಟ್ಟಣಿಗರು ಕೇಳುತ್ತಿರುವಾಗಲೇ ಇಂತೆಂದನು.

೬೬—೬೭. ರಾಜನು ಹೇಳುತ್ತಾನೆ:—"ಪಶುಮಂತ! ಅನೇಕ ಪ್ರಜೆಗಳು ನೆಲೆಸಿದ್ದ ಈ ಪಟ್ಟಣವನ್ನು, ದುರಾತ್ಮನಾದ ನಿನ್ನ ಮಗ ದುಷ್ಪಣ್ಯನು ಬಹು ಮಟ್ಟಿಗೆ ಬರಿದುಮಾಡಿದ್ದಾನೆ. ಈಗ ಈ ಬಾಲಕರನ್ನು ನೀರಿನಲ್ಲಿ ಮುಳುಗಿಸಿದ್ದಾನೆ.

೬೮. ಈ ಬಾಲಕರು ಆಕಸ್ಮಿಕವಾಗಿ ಬದುಕಿ ಪಟ್ಟಣಕ್ಕೆ ಮರಳಿ ಬಂದಿರು

ಅದ್ಯ ತ್ವಾಮೇವ ಪೃಚ್ಛಾಮಿ ಯತಸ್ತ್ವಂ ಧರ್ಮತತ್ಪರಃ ।
ಇತ್ಯುಕ್ತಃ ಪಶುಮಾನ್ರಾಜ್ಞಾ ಧರ್ಮಜ್ಞೋ ಯುಕ್ತಮಬ್ರವೀತ್ ॥ ೧೯ ॥

ಪಶುಮಾನುವಾಚ :—

ಪುರಂ ನಿಃಶೇಷಿತಂ ಯೇನ ವಧಮೇವಾಽಯಮರ್ಹತಿ ।
ನಹ್ಯತ್ರ ವಿಷಯೇ ಕಿಂಚಿತ್ಪ್ರಷ್ಟವ್ಯಂ ವಿದ್ಯತೇ ನೃಪ ॥ ೨೦ ॥
ನಹ್ಯಯಂ ಮಮ ಪುತ್ರಃ ಸ್ಯಾಚ್ಛತ್ರುರೇವಾಽತಿಪಾಪಕೃತ್ ।
ನಹ್ಯತ್ರ ನಿಷ್ಕೃತಿಂ ಪಶ್ಯೇ ಯೇನ ನಿಃಶೇಷಿತಂ ಪುರಂ ॥ ೨೧ ॥
ವಧ್ಯತಾಮೇವ ದುಷ್ಟಾತ್ಮಾ ಸತ್ಯಮೇವ ಬ್ರವೀಮ್ಯಹಂ ।
ಶ್ರುತ್ವಾ ಪಶುಮತೋ ವಾಕ್ಯಂ ನಾಗರಾಃ ಸರ್ವ ಏವ ಹಿ ॥ ೨೨ ॥
ವಣಿಗ್ವರಂ ಶ್ಲಾಘಮಾನಾ ರಾಜಾನಮಿದಮೂಚಿರೇ ।
ನ ವಧ್ಯತಾಮಯಂ ದುಷ್ಟಸ್ತೂಷ್ಣೀಂ ನಿರ್ವಾಸ್ಯತಾಂ ಪುರಾತ್ ॥ ೨೩ ॥
ತತಃ ಸ ರಾಜಾ ದುಷ್ಪಣ್ಯಂ ಸಮಾಹೂಯೇದಮಬ್ರವೀತ್ ।
ಅಸ್ಮಾದ್ದೇಶಾದ್ಭವಾನ್ಶೀಘ್ರಂ ದುಷ್ಟಾತ್ಮನ್ಗಚ್ಛ ಸಾಂಪ್ರತಂ ॥ ೨೪ ॥
ಯದಿ ತಿಷ್ಠೇಸ್ತ್ವಮತ್ರೈವ ದಂಡಯೇಯಂ ವಧೇನ ವೈ ।
ಇತಿ ರಾಜ್ಞಾ ವಿನಿರ್ಭರ್ತ್ಸ್ಯ ದೂತೈರ್ನಿರ್ವಾಸಿತಃ ಪುರಾತ್ ॥ ೨೫ ॥

---

ವರು. ಈ ರೀತಿ ದುಷ್ಕಾರ್ಯವು ನಡೆದಿರಲು ಈಗ ಏನನ್ನು ಮಾಡಬೇಕು ಹೇಳು.

೧೯. ನೀನು ಧರ್ಮನಿರತನಾದುದರಿಂದ ನಿನ್ನನ್ನೇ ಕೇಳುತ್ತೇನೆ." ರಾಜನು ಹೀಗೆ ನುಡಿಯಲು ಧರ್ಮವನ್ನರಿತ ಪಶುಮಂತನು ಉಚಿತರೀತಿ ಉತ್ತರ ಹೇಳಿದನು.

೨೦–೨೨. ಪಶುಮಂತನು ಹೇಳುತ್ತಾನೆ:—"ಪ್ರಭುವೆ! ಇವನು ಪಟ್ಟಣವನ್ನು ಶೂನ್ಯವಾಗಿ ಮಾಡಿದ್ದರಿಂದ ವಧಿಸಲರ್ಹನೇ ಸರಿ! ಈ ವಿಷಯದಲ್ಲಿ ಕೇಳತಕ್ಕುದಿಲ್ಲ. ಮಹಾ ಪಾಪವನ್ನಾಚರಿಸಿದ ಇವನು ನನ್ನ ಪುತ್ರನಲ್ಲ, ಶತ್ರುವೇ. ಇವನು ಪಟ್ಟಣವನ್ನು ಬರಿದುಮಾಡಿದ್ದರಿಂದ ಇದಕ್ಕೆ ಪರಿಹಾರವೂ ಇರುವುದಿಲ್ಲ. ಈ ದುಷ್ಟನನ್ನು ವಧಿಸು. ನಾನು ಸತ್ಯವಾಗಿ ನುಡಿಯುವೆನು."

೨೩. ಪಶುಮಂತನ ಮಾತನ್ನು ಕೇಳಿ ಪಟ್ಟಣಿಗರೆಲ್ಲ ಆ ವರ್ತಕಶ್ರೇಷ್ಠನನ್ನು ಹೊಗಳುತ್ತ, ರಾಜನನ್ನು ಕುರಿತು ಇಂತೆಂದರು: "ದೊರೆಯೆ! ಈ ದುಷ್ಟನನ್ನು ಕೊಲ್ಲಬೇಡ; ಪಟ್ಟಣದಿಂದ ದೂರಮಾಡು."

೨೪. ತರುವಾಯ ಆ ರಾಜನು ದುಷ್ಪಣ್ಯನನ್ನು ಕರೆದು ಹೀಗೆಂದನು. "ಎಲೈ ದುರಾತ್ಮನೇ! ಈಗ ನೀನು ಈ ದೇಶದಿಂದ ಶೀಘ್ರವಾಗಿ ತೆರಳು.

೨೫. ನೀನು ಇಲ್ಲಿಯೇ ಇದ್ದರೆ ನಿನ್ನನ್ನು ವಧೆಗೆ ಗುರಿಮಾಡುವೆನು."

ದುಷ್ಪಣ್ಯಸ್ತ್ವಥ ತಂ ದೇಶಂ ಪರಿತ್ಯಜ್ಯ ಭಯಾನ್ವಿತಃ ।
ಮುನಿಮಂಡಲಸಂಬಾಧಂ ವನಮೇವ ಯಯೌ ತದಾ ॥ ೭೬ ॥
ತತ್ರಾಪ್ಯೇಕಂ ಮುನಿಸುತಂ ಸ ತೋಯೇಷು ನ್ಯಮಜ್ಜಯತ್ ।
ಕೇಲ್ಯರ್ಥಮಾಗತಾ ದೃಷ್ಟ್ವಾ ಮುನಿಪುತ್ರಾ ಮೃತಂ ಶಿಶುಂ ॥ ೭೭ ॥
ತತ್ಪಿತ್ರೇ ಕಥಯಾಮಾಸುರಭ್ಯೇತ್ಯ ಭೃಶದುಃಖಿತಾಃ ।
ತತ ಉಗ್ರಶ್ರವಾಃ ಶ್ರುತ್ವಾ ತೇಭ್ಯಃ ಪುತ್ರಂ ಜಲೇ ಮೃತಂ ॥ ೭೮ ॥
ತಪೋ ಮಹಿಮ್ನಾ ದುಷ್ಪಣ್ಯಚರಿತಂ ತದಮನ್ಯತ ।
ಉಗ್ರಶ್ರವಾಃ ಶಶಾಪೈನಂ ದುಷ್ಪಣ್ಯಂ ವೈಶ್ಯನಂದನಂ ॥ ೭೯ ॥

ಉಗ್ರಶ್ರವಾ ಉವಾಚ:—

ಮತ್ಸುತಂ ಪಯಸಿ ಕ್ಷಿಪ್ಯ ಯತ್ತ್ವಂ ಮಾರಿತವಾನಸಿ ।
ತವಾಽಪಿ ಮರಣಂ ಭೂಯಾಜ್ಜಲ ಏವ ನಿಮಜ್ಜನಾತ್ ॥ ೮೦ ॥
ಮೃತಶ್ಚ ಸುಚಿರಂ ಕಾಲಂ ಪಿಶಾಚಸ್ತ್ವಂ ಭವಿಷ್ಯಸಿ ।
ಇತಿ ಶಾಪೇ ಶ್ರುತೇ ಸದ್ಯೋ ದುಷ್ಪಣ್ಯಃ ಖಿನ್ನಮಾನಸಃ ॥ ೮೧ ॥
ತದ್ವೈ ವನಂ ಪರಿತ್ಯಜ್ಯ ಘೋರಮನ್ಯದ್ವನಂ ಯಯೌ ।
ಸಿಂಹಾದಿಕ್ರೂರಸತ್ವಾಢ್ಯಂ ತಸ್ಮಿನ್ಪ್ರಾಪ್ತೇ ವನಾಂತರಂ ॥ ೮೨ ॥

---

ಹೀಗೆ ರಾಜನು ಅವನನ್ನು ಗದರಿಸಿ, ದೂತರ ಮೂಲಕ ಪಟ್ಟಣದಿಂದ ಹೊರಡಿಸಿದನು.

೭೬. ಬಳಿಕ ದುಷ್ಪಣ್ಯನು ಭಯದಿಂದ ಆ ದೇಶವನ್ನು ಬಿಟ್ಟು ಮುನಿಗಳಿಂದ ನಿಬಿಡವಾದ ಒಂದು ತಪೋವನಕ್ಕೆ ಹೋದನು.

೭೭–೭೯. ಅವನು ಆ ಕಾಡಿನಲ್ಲಿಯೂ ಒಬ್ಬ ಮುನಿಕುಮಾರನನ್ನು ನೀರಿನಲ್ಲಿ ಮುಳುಗಿಸಿದನು. ಆಟಕ್ಕಾಗಿ ಅಲ್ಲಿಗೆ ಬಂದ ಮುನಿಬಾಲಕರು ಮೃತನಾದ ಆ ಬಾಲಕನನ್ನು ಕಂಡು ಅತಿ ದುಃಖದಿಂದ ಆ ವಿಚಾರವನ್ನು ಅವನ ತಂದೆಗೆ ಹೇಳಿದರು. ಉಗ್ರಶ್ರವನೆಂಬ ಮುನಿಯು ಆ ಬಾಲಕರಿಂದ ತನ್ನ ಮಗನು ನೀರಿನಲ್ಲಿ ಮೃತನಾದನೆಂದು ಕೇಳಿ ತಪಸ್ಸಿನ ಪ್ರಭಾವದಿಂದ ಅದು ದುಷ್ಪಣ್ಯನ ಕಾರ್ಯವೆಂದರಿತನು. ಅದರಿಂದ ಆ ವೈಶ್ಯಕುಮಾರನನ್ನು ಹೀಗೆ ಶಪಿಸಿದನು.

೮೦. ಉಗ್ರಶ್ರವನು ಹೇಳುತ್ತಾನೆ:—"ದುಷ್ಪಣ್ಯ! ನೀನು ನನ್ನ ಮಗನನ್ನು ನೀರಿನಲ್ಲಿ ಎಸೆದು ಕೊಂದುದರಿಂದ ನೀನೂ ನೀರಿನಲ್ಲಿ ಮುಳುಗಿ ಸಾಯುವೆ.

೮೧–೮೨. ಸತ್ತಮೇಲೆ ನೀನು ಬಹಳ ಕಾಲ ಪಿಶಾಚವಾಗಿರುವೆ" ಎಂದು ಶಪಿಸಲು, ಅದನ್ನು ಕೇಳಿ ದುಷ್ಪಣ್ಯನು ವ್ಯಥೆಗೊಂಡು ಆ ಕಾಡನ್ನು ಬಿಟ್ಟು ಭಯಂಕರವಾದ ಮತ್ತೊಂದು ಕಾಡಿಗೆ ಹೋದನು. ಅವನು ಸಿಂಹ ಮೊದಲಾದ ಕ್ರೂರ ಪ್ರಾಣಿಗಳಿಂದ ವ್ಯಾಪ್ತವಾದ ಮತ್ತೊಂದು ಕಾಡಿಗೆ ಬರಲು ಅಲ್ಲಿ

ಪಾಂಸುವರ್ಷಂ ಮಹದ್ವರ್ಷನ್ವೃಕ್ಷಾನಾಮೋಟಯನ್ಮಹುಃ ।
ವಜ್ರಘಾತಸಮಸ್ಪರ್ಶೋ ಪವೌ ಝಂಝಾನಿಲೋ ಮಹಾನ್ ॥ ೮೩ ॥
ವೇಗೇನ ಗಾತ್ರಂ ಭಿಂದಂತೀ ವೃಷ್ಟಿಶ್ಚಾಸೀತ್ಸುದುಃಸಹಾ ।
ತದ್ದೃಷ್ಟ್ವಾ ಸ ತು ದುಷ್ಪುಣ್ಯಶ್ಚಿಂತಯನ್ಭೃಶದುಃಖಿತಃ ॥ ೮೪ ॥
ಮೃತಂ ಶುಷ್ಕಂ ಮಹಾಕಾಯಂ ಗಜಮೇಕಮಪಶ್ಯತ ।
ಮಹಾವಾತಂ ಮಹಾವರ್ಷಂ ತದಾ ಸೋಢುಮಶಕ್ನುವನ್ ॥ ೮೫ ॥
ಗಜಾಸ್ಯ ವಿವರೇಣೈವ ವಿವೇಶೋದರಗಹ್ವರಂ ।
ತಸ್ಮಿನ್ಪ್ರವಿಷ್ಟಮಾತ್ರೇತು ವೃಷ್ಟಿರಾಸೀತ್ಸುಭೂಯಸೀ ॥ ೮೬ ॥
ತತೋ ವರ್ಷಜಲೈಃ ಸರ್ವೈಃ ಪ್ರವಾಹಃ ಸುಮಹಾನಭೂತ್ ।
ಸ ಪ್ರವಾಹೋ ವನೇ ತಸ್ಮಿನ್ನದೀ ಕಾಚಿದಜಾಯತ ॥ ೮೭ ॥
ಅಥ ತೈರ್ವರ್ಷಸಲಿಲೈಃ ಸ ಗಜಃ ಪೂರಿತೋದರಃ ।
ಪ್ಲವಮಾನೋ ಮಹಾಪೂರೇ ನೀರಂಧ್ರಃ ಸಮಜಾಯತ ॥ ೮೮ ॥
ತತೋ ನಿರ್ವಿವರಸ್ಯಾಸ್ಯ ಜಲಪೂರ್ಣೋದರಸ್ಯ ಚ ।
ಗಜಸ್ಯ ಜಠರಾತ್ಸೋಽಯಂ ನಿರ್ಗಂತುಂ ನ ಶಶಾಕ ಹ ॥ ೮೯ ॥
ತತಶ್ಚ ವೃಷ್ಟಿತೋಯಾನಾಂ ಪ್ರವಾಹೋ ಭೀಮವೇಗವಾನ್ ।
ಉದರಸ್ಥಿತದುಷ್ಪುಣ್ಯಂ ಸಮುದ್ರಂ ಪ್ರಾಪಯದ್ಗಜಂ ॥ ೯೦ ॥

---

ದೂಳನ್ನು ಸುರಿಸುವುದೂ, ವೃಕ್ಷಗಳನ್ನು ಬಹಳವಾಗಿ ಮುರಿಯುವುದೂ, ಸಿಡಿಲಿನ ಹೊಡೆತಕ್ಕೆ ಸಮವಾದುದೂ ಆದ ದೊಡ್ಡ ಬಿರುಗಾಳಿಯು ಬೀಸಿತು.

೮೪–೮೬. ವೇಗದಿಂದ ದೇಹವನ್ನು ಸೀಳುವ ಸಹಿಸಲಾಗದ ಮಳೆಯೂ ಸುರಿಯಿತು. ಆ ದುಷ್ಪುಣ್ಯನು ಅದನ್ನು ನೋಡಿ ಅತ್ಯಂತ ದುಃಖಗೊಂಡು ಆಲೋಚಿಸುತ್ತ ಸತ್ತು ಒಣಗಿದ ದೊಡ್ಡ ದೇಹದ ಆನೆಯೊಂದನ್ನು ನೋಡಿದನು. ಆಗ ಅವನು ಬಿರುಗಾಳಿಯನ್ನೂ, ಅತಿವೃಷ್ಟಿಯನ್ನೂ ಸಹಿಸಲು ಶಕ್ತನಾಗದೆ ಆನೆಯ ಬಾಯಿಯ ವಿವರದಿಂದಲೇ ಆದರ ಹೊಟ್ಟೆಯನ್ನು ಹೊಕ್ಕನು. ಅವನು ಒಳಹೊಕ್ಕಕೂಡಲೇ ಇನ್ನೂ ದೊಡ್ಡ ಮಳೆಯು ಸುರಿಯತೊಡಗಿತು.

೮೭. ಅನಂತರ ಮಳೆನೀರೆಲ್ಲ ಸೇರಿ ಆ ಕಾಡಿನಲ್ಲಿ ದೊಡ್ಡ ಪ್ರವಾಹವಾಯಿತು. ಅದರಿಂದ ಒಂದು ನದಿಯುಂಟಾಯಿತು.

೮೮. ಆ ಮಳೆನೀರಿನಿಂದ ತುಂಬಿದ ಹೊಟ್ಟೆಯುಳ್ಳ ಆ ಆನೆಯು ಮಹಾಪ್ರವಾಹದಲ್ಲಿ ತೇಲುತ್ತ ರಂಧ್ರವಿಲ್ಲದ್ದಾಯಿತು.

೮೯. ಬಳಿಕ ರಂಧ್ರವಿಲ್ಲದಂತೆ ನೀರಿನಿಂದ ತುಂಬಿದ ಹೊಟ್ಟೆಯುಳ್ಳ ಆ ಆನೆಯ ಉದರದಿಂದ ದುಷ್ಪುಣ್ಯನು ಹೊರಬರಲು ಸಮರ್ಥನಾಗಲಿಲ್ಲ.

೯೦. ತರುವಾಯ ಮಳೆನೀರಿನ ಭಯಂಕರ ವೇಗವುಳ್ಳ ಪ್ರವಾಹವು ಹೊಟ್ಟೆಯಲ್ಲಿ ದುಷ್ಪುಣ್ಯನಿರುವ ಆನೆಯನ್ನು ಸಮುದ್ರಕ್ಕೆ ಸೇರಿಸಿತು.

ದುಷ್ಪಣ್ಯಃ ಸಲಿಲೇ ಮಗ್ನಃ ಕ್ಷಣಾತ್ಪ್ರಾಣೈರ್ವ್ಯಯುಜ್ಯತ ।
ಮೃತ ಏವ ಸ ದುಷ್ಪಣ್ಯಃ ಪಿಶಾಚತ್ವಮವಾಪ್ತವಾನ್ ॥ ೯೧ ॥
ಪೀಡಿತಃ ಕ್ಷುತ್ಪಿಪಾಸಾಭ್ಯಾಂ ದುರ್ಗಮಂ ವನಮಾಶ್ರಿತಃ ।
ಘೋರೇಷು ಘರ್ಮಕಾಲೇಷು ಸಮಾಕ್ರೋಶನ್ಭಯಾನಕಂ ॥ ೯೨ ॥
ಅತಿಷ್ಠದ್ಗಹನೇಽರಣ್ಯೇ ದುಃಖಾನ್ಯನುಭವನ್ಬಹು ।
ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ॥ ೯೩ ॥
ಸ ಪಿಶಾಚೋ ಮಹಾದುಃಖೀ ನ್ಯವಸದ್ಘೋರಕಾನನೇ ।
ವನಾದ್ವನಾಂತರಂ ಧಾವನ್ದೇಶಾದ್ದೇಶಾಂತರಂ ತಥಾ ॥ ೯೪ ॥
ಸರ್ವತ್ರಾಽನುಭವನ್ದುಃಖಮಾಯಯೌ ದಂಡಕಾನ್ಕ್ರಮಾತ್ ।
ಅಗಸ್ತ್ಯಾದಾಶ್ರಮಾತ್ಪುಣ್ಯಾನ್ನಾಽತಿದೂರೇ ಸ ಸಂಚರನ್ ॥ ೯೫ ॥
ನದನ್ಭೈರವನಾದಂ ಚ ವಾಕ್ಯಮುಚ್ಚೈರಭಾಷತ ।
ಭೋ ಭೋಸ್ತಪೋಧನಾಃ ಸರ್ವೇ ಶೃಣುಧ್ವಂ ಮಾಮಕಂ ವಚಃ ॥ ೯೬ ॥
ಭವಂತೋ ಹಿ ಕೃಪಾವಂತಃ ಸರ್ವಭೂತಹಿತೇ ರತಾಃ ।
ಕೃಪಾದೃಷ್ಟ್ಯಾಽನುಗೃಹ್ಣೀತ ಮಾಂ ದುಃಖೈರತಿಪೀಡಿತಂ ॥ ೯೭ ॥
ಪುರಾ ದುಷ್ಪಣ್ಯನಾಮಾಽಹಂ ವೈಶ್ಯಃ ಪಾಟಲಿಪುತ್ರಕೇ ।
ಪುತ್ರಃ ಪಶುಮತಶ್ಚಾಽಪಿ ಬಹೂನ್ಬಾಲಾನಮಾರಯಂ ॥ ೯೮ ॥

---

೯೧–೯೩. ದುಷ್ಪಣ್ಯನು ನೀರಿನಲ್ಲಿ ಮುಳುಗಿ ಒಂದು ಕ್ಷಣಕಾಲದಲ್ಲಿಯೇ ಮಡಿದನು. ಸತ್ತಕೂಡಲೆ ಅವನು ಪಿಶಾಚವಾದನು. ದುರ್ಗಮವಾದ ಕಾಡನ್ನು ಸೇರಿ ಅವನು ಹಸಿವು ಬಾಯಾರಿಕೆಗಳಿಂದ ಪೀಡಿಸಲ್ಪಟ್ಟವನಾಗಿ ಘೋರವಾದ ಬಿಸಿಲುಕಾಲದಲ್ಲಿ ಭಯಂಕರವಾಗಿ ಕೂಗಿಕೊಂಡನು. ಪಿಶಾಚವಾದ ಆ ದುಷ್ಪಣ್ಯನು ಅನೇಕಕೋಟಿಕಲ್ಪಗಳಕಾಲ ಗಹನವಾದ ಕಾಡಿನಲ್ಲಿದ್ದನು.

೯೪–೯೭. ಅತ್ಯಂತ ದುಃಖದಿಂದ ಕಾಡಿನಲ್ಲಿ ವಾಸಿಸುತ್ತಿರುವ ಅವನು ಕಾಡಿನಿಂದ ಕಾಡಿಗೂ, ದೇಶದಿಂದ ದೇಶಕ್ಕೂ ಓಡುತ್ತ ಎಲ್ಲೆಡೆಯಲ್ಲಿಯೂ ದುಃಖವನ್ನನುಭವಿಸುತ್ತ ಕ್ರಮವಾಗಿ ದಂಡಕಾವನಕ್ಕೆ ಬಂದನು. ಅವನು ಅಗಸ್ತ್ಯನ ಪುಣ್ಯಾಶ್ರಮದ ಹತ್ತಿರದಲ್ಲಿ ಸಂಚರಿಸುತ್ತ ಭಯಂಕರವಾಗಿ ಗರ್ಜಿಸುತ್ತ ಗಟ್ಟಿಯಾಗಿ ಇಂತೆಂದನು: "ಎಲೈ ಮುನಿಗಳೆ! ನೀವೆಲ್ಲರೂ ನನ್ನ ಮಾತನ್ನು ಕೇಳಬೇಕು. ದಯಾಳುಗಳೂ, ಸಕಲಪ್ರಾಣಿಗಳಿಗೂ ಹಿತವನ್ನುಂಟು ಮಾಡುವವರೂ ಆದ ನೀವು ಕೃಪಾದೃಷ್ಟಿಯಿಂದ ದುಃಖಪೀಡಿತನಾದ ನನ್ನನ್ನು ಅನುಗ್ರಹಿಸಿರಿ.

೯೮. ನಾನು ಪಾಟಲಿಪುತ್ರದಲ್ಲಿರುವ ಪಶುಮಂತನೆಂಬ ವೈಶ್ಯನ ಮಗನು. ನನ್ನ ಹೆಸರು ದುಷ್ಪಣ್ಯ; ನಾನು ಹಿಂದೆ ಅನೇಕ ಬಾಲಕರನ್ನು ಕೊಂದಿರುವೆನು.

ತತೋ ವಿವಾಸಿತೋ ರಾಜ್ಞಾ ತಸ್ಮಾದ್ದೇಶಾದ್ವನಂ ಗತಃ ।
ಅಮಾರಯಂ ಜಲೇ ಪುತ್ರಂ ತತ್ರೋಗ್ರಶ್ರವಸೋ ಮುನೇಃ ॥ ೯೯ ॥
ಸಮುನಿರ್ದತ್ತವಾನ್ಶಾಪಂ ಮಮಾಽಪಿ ಮರಣಂ ಜಲೇ ।
ಪಿಶಾಚತಾಂ ಚ ಮೇ ಘೋರಾಂ ದತ್ತವಾನ್ದುಃಖಭೂಯಸೀಂ ॥ ೧೦೦ ॥
ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನ್ಯಪಿ ।
ಪಿಶಾಚತಾಽನುಭೂತೇಯಂ ಶೂನ್ಯಕಾನನಭೂಮಿಷು ॥ ೧೦೧ ॥
ನಾಽಹಂ ಸೋಢುಂ ಸಮರ್ಥೋಽಸ್ಮಿ ಪಿಪಾಸಾಂ ಕ್ಷುಧಮೇವ ಚ ।
ರಕ್ಷಧ್ವಂ ಕೃಪಯಾ ಯೂಯಮತೋ ಮಾಂ ಬಹುದುಃಖಿನಂ॥ ೧೦೨ ॥
ಯಥಾ ಮುಚ್ಯೇಯ ಪೈಶಾಚ್ಯಾತ್ತಥಾ ಕುರುತ ತಾಪಸಾಃ ।
ಇತಿ ಶ್ರುತ್ವಾ ಪಿಶಾಚಸ್ಯ ವಚನಂ ತೇ ತಪೋಧನಾಃ ।
ಲೋಪಾಮುದ್ರಾಸಹಚರಮೂಚಿರೇ ಕುಂಭಸಂಭವಂ ॥ ೧೦೩ ॥

ತಾಪಸಾ ಊಚುಃ:—

ಪಿಶಾಚಸ್ಯಾಽಸ್ಯ ಭಗವನ್ಬ್ರೂಹಿ ನಿಷ್ಕೃತಿಮುತ್ತಮಾಂ ॥ ೧೦೪ ॥
ಏವಂ ವಿಧಾನಾಂ ಪಾಪಾನಾಂ ತ್ವಂ ಸಮರ್ಥೋ ಹಿ ರಕ್ಷಣೇ ।
ತೇಷಾಮಗಸ್ತ್ಯಃ ಶ್ರುತವಾನ್ಕೃಪಯಾ ಪರಯಾ ಯುತಃ ।
ಪ್ರಿಯಶಿಷ್ಯಂ ಸಮಾಹೂಯ ಸುತೀಕ್ಷ್ಣಂ ವಾಕ್ಯಮಬ್ರವೀತ್ ॥ ೧೦೫ ॥

---

೯೯. ಅದರಿಂದ ದೊರೆಯು ನನ್ನನ್ನು ಆ ದೇಶದಿಂದಲೇ ಹೊರಡಿಸಲು ನಾನು ಕಾಡಿಗೆ ಹೋಗಿ ಅಲ್ಲಿ ಉಗ್ರಶವಸ್ಸೆಂಬ ಮುನಿಯ ಮಗನನ್ನು ನೀರಿನಲ್ಲಿ ಮುಳುಗಿಸಿ ಕೊಂದೆನು.

೧೦೦–೧೦೧. ಆದ್ದರಿಂದ ಆ ಮುನಿಯು ನನಗೆ ನೀನು ನೀರಿನಲ್ಲಿ ಮರಣ ವನ್ನು ಹೊಂದುವೆಯೆಂದೂ, ದುಃಖಭೂಯಿಷ್ಠವಾದ ಘೋರ ಪಿಶಾಚತ್ವವನ್ನು ಪಡೆಯುವೆಯೆಂದೂ ಶಾಪವಿತ್ತನು. ಅಂತೆಯೆ ನಾನು ಶೂನ್ಯವಾದ ಕಾಡಿನಲ್ಲಿ ಅನೇಕ ಕೋಟಿಕಲ್ಪಗಳಕಾಲದಿಂದ ಪಿಶಾಚವಾಗಿರುವೆನು.

೧೦೨–೧೦೩. ಈಗ ನನಗೆ ಬಾಯಾರಿಕೆ, ಹಸಿವುಗಳನ್ನು ತಡೆಯಲು ಸಾಮರ್ಥ್ಯವಿರುವುದಿಲ್ಲ. ಆದುದರಿಂದ ನೀವು ಅತ್ಯಂತ ದುಃಖಪಡುತ್ತಿರುವ ನನ್ನನ್ನು ದಯೆಯಿಂದ ರಕ್ಷಿಸಿರಿ. ನನ್ನ ಪಿಶಾಚಜನ್ಮವು ನೀಗುವಂತೆ ಮಾಡಿರಿ" ಎನ್ನಲು, ಆ ಮುನಿಗಳು ಆ ಮಾತನ್ನು ಲಾಲಿಸಿ ಲೋಪಾಮುದ್ರಾಪತಿಯಾದ ಅಗಸ್ತ್ಯನನ್ನು ಕುರಿತು ಇಂತೆಂದರು.

೧೦೪–೧೦೫. ಮುನಿಗಳು ಹೇಳುತ್ತಾರೆ:—"ಪೂಜ್ಯನೆ! ಇವನ ಪಿಶಾಚ ಜನ್ಮವು ತೊಲಗುವ ಉಪಾಯವನ್ನು ಹೇಳು. ಇಂತಹ ಪಾಪಿಗಳನ್ನು ಸಲಹಲು

ಅಗಸ್ತ್ಯ ಉವಾಚ:—
ಸುತೀಕ್ಷ್ಣ ಗಚ್ಛ ತ್ವರಿತಂ ಪರ್ವತಂ ಗಂಧಮಾದನಂ ॥ ೧೦೬ ॥
ತತ್ರಾಽಗ್ನಿತೀರ್ಥಂ ಸುಮಹದ್ವಿದ್ಯತೇ ಪಾಪನಾಶನಂ ।
ಪಿಶಾಚಮೋಕ್ಷಣಾರ್ಥಾಯ ತತ್ರ ಸ್ನಾಹಿ ಮಹಾಮತೇ ॥ ೧೦೭ ॥
ಪಿಶಾಚಾಽರ್ಥಂ ತ್ವಯಿ ಸ್ನಾತೇ ತತ್ರ ಸಂಕಲ್ಪಪೂರ್ವಕಂ ।
ಪಿಶಾಚಭಾವಮುನ್ಮುಚ್ಯ ದಿವ್ಯತಾಮೇಷ ಯಾಸ್ಯತಿ ॥ ೧೦೮ ॥
ನಿಷ್ಕೃತಿಂ ನಾಽಸ್ಯ ಪಶ್ಯಾಮಿ ವಿನಾ ತತ್ತೀರ್ಥಸೇವನಾತ್ ।
ಅತಃ ಸುತೀಕ್ಷ್ಣ ಕೃಪಯಾ ರಕ್ಷಸ್ವೈನಂ ಪಿಶಾಚಕಂ ॥ ೧೦೯ ॥
ಅಗಸ್ತ್ಯೇನೈವಮುಕ್ತಸ್ತು ಸುತೀಕ್ಷ್ಣೋ ಗಂಧಮಾದನಂ ।
ಪ್ರಾಪ್ಯಾಽಗ್ನಿತೀರ್ಥೇ ಸಂಕಲ್ಪ್ಯ ಪಿಶಾಚಾಽರ್ಥಂ ಕೃಪಾನಿಧಿಃ ॥ ೧೧೦ ॥
ಸಸ್ನೌ ತತ್ರ ಪಿಶಾಚಾರ್ಥಂ ನಿಯಮೇನ ದಿನತ್ರಯಂ ।
ರಾಮನಾಥಾದಿಕಂ ಸೇವ್ಯ ತತ್ತೀರ್ಥಂ ಪ್ರತಿಗೃಹ್ಯ ಚ ॥ ೧೧೧ ॥
ಸ್ವಾಶ್ರಮಂ ಪ್ರತಿ ಗತ್ವಾಽಥ ಸುತೀಕ್ಷ್ಣೋ ವಿಪ್ರಸತ್ತಮಃ ।
ತತ್ತೀರ್ಥಪ್ರೋಕ್ಷಣಾತ್ಸದ್ಯಃ ಸ ವಿಸೃಜ್ಯ ಪಿಶಾಚತಾಂ ॥ ೧೧೨ ॥
ವೈಭವಾತ್ತಸ್ಯ ತೀರ್ಥಸ್ಯ ಸದ್ಯೋ ದಿವ್ಯತ್ವಮಾಪ್ತವಾನ್ ।
ವಿಮಾನವರಮಾರೂಢೋ ದಿವ್ಯಸ್ತ್ರೀಪರಿವಾರಿತಃ ॥ ೧೧೩ ॥

---

ನೀನು ಸಮರ್ಥನಾಗಿರುವೆ" ಎನ್ನಲು, ದಯಾಳುವಾದ ಅಗಸ್ತ್ಯನು ಆ ಮುನಿಗಳ ವಚನವನ್ನು ಕೇಳಿ ಸುತೀಕ್ಷ್ಣನೆಂಬ ಶಿಷ್ಯನನ್ನು ಕರೆದು ಹೀಗೆಂದನು.

೧೦೬. ಅಗಸ್ತ್ಯನು ಹೇಳುತ್ತಾನೆ:—"ಸುತೀಕ್ಷ್ಣ! ನೀನು ಜಾಗ್ರತೆಯಾಗಿ ಗಂಧಮಾದನಪರ್ವತಕ್ಕೆ ತೆರಳು.

೧೦೭. ಅಲ್ಲಿ ಪಾಪನಾಶಕವಾದ ದೊಡ್ಡ ಅಗ್ನಿತೀರ್ಥವಿದೆ. ನೀನು ಈತನ ಪಿಶಾಚತ್ವಮೋಕ್ಷಕ್ಕಾಗಿ ಅಲ್ಲಿ ಸ್ನಾನಮಾಡು.

೧೦೮. ನೀನು ಅಲ್ಲಿ ಈ ಪಿಶಾಚನಿಗಾಗಿ ಸಂಕಲ್ಪಪೂರ್ವಕವಾಗಿ ಸ್ನಾನ ಮಾಡಿದರೆ ಇವನು ಪಿಶಾಚತ್ವವನ್ನು ತ್ಯಜಿಸಿ ದೇವತ್ವವನ್ನು ಪಡೆಯುವನು.

೧೦೯. ಆ ತೀರ್ಥಸೇವನೆಯನ್ನು ಬಿಟ್ಟರೆ ಇವನ ಪೈಶಾಚ್ಯಪರಿಹಾರಕ್ಕೆ ಬೇರೆ ಉಪಾಯವನ್ನು ಕಾಣೆನು. ಆದುದರಿಂದ ಎಲೈ ಸುತೀಕ್ಷ್ಣನೆ! ದಯೆಯಿಂದ ಈ ಪಿಶಾಚವನ್ನು ರಕ್ಷಿಸು."

೧೧೦–೧೧೫. ಅಗಸ್ತ್ಯನು ಹೀಗೆನ್ನಲು, ಸುತೀಕ್ಷ್ಣನು ಗಂಧಮಾದನವನ್ನು ಸೇರಿ ಅಗ್ನಿತೀರ್ಥದಲ್ಲಿ ಆ ಪಿಶಾಚನಿಗಾಗಿ ಸಂಕಲ್ಪಪೂರ್ವಕವಾಗಿ ನಿಯಮದಿಂದ ಮೂರು ದಿನ ಸ್ನಾನಮಾಡಿ ರಾಮನಾಥನೇ ಮೊದಲಾದ ದೇವತೆಗಳನ್ನು ಸೇವಿಸಿ ಆ ತೀರ್ಥದ ಜಲವನ್ನು ತೆಗೆದುಕೊಂಡು ತನ್ನ ಆಶ್ರಮಕ್ಕೆ ಹೋಗಿ

ಸುತೀಕ್ಷ್ಣಂಚಾಽಪ್ಯಗಸ್ತ್ಯಂ ಚ ತಥಾಽನ್ಯಾಂಶ್ಚ ತಪೋಧನಾನ್ ।
ಪುನಃ ಪುನರ್ನಮಸ್ಕೃತ್ಯ ತಾಂಶ್ಚಾಮಂತ್ರ್ಯ ಪ್ರಹರ್ಷಿತಃ ॥ ೧೧೪ ॥
ಸ್ವರ್ಗಮೇವಾಽರುಹತ್ತೂರ್ಣಂ ದೇವೈರಪಿ ಸು ಪೂಜಿತಃ ।
ಅಗ್ನಿತೀರ್ಥಸ್ಯ ಮಾಹಾತ್ಮ್ಯಾದ್ದುಷ್ಪಣ್ಯೋ ವೈಶ್ಯನಂದನಃ ॥ ೧೧೫ ॥
ಪೈಶಾಚ್ಯಂ ಶಾಪಜಂ ತ್ಯಕ್ತ್ವಾ ದಿವ್ಯತಾಮಿತ್ಥಮಾಪ್ತವಾನ್ ।
ಏವಂ ವಃ ಕಥಿತಂ ವಿಪ್ರಾ ಅಗ್ನಿತೀರ್ಥಸ್ಯ ವೈಭವಂ ॥ ೧೧೬ ॥
ಯಃ ಪಠೇದಿಮಮಧ್ಯಾಯಂ ಶೃಣುಯಾದ್ವಾ ಸ ಭಕ್ತಿಕಂ ।
ಪಿಶಾಚಮೋಕ್ಷಣಾಖ್ಯಾನಂ ಮುಚ್ಯತೇ ಸರ್ವಪಾತಕೈಃ ॥ ೧೧೭ ॥
ಇಹ ಭುಕ್ತ್ವಾ ಮಹಾಭೋಗಾನ್ಪರತ್ರಾಽಪಿ ಸುಖಂ ಲಭೇತ್ ॥ ೧೧೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಅಗ್ನಿತೀರ್ಥಪ್ರಶಂಸನಂ— ದುಷ್ಪಣ್ಯಪೈಶಾಚ್ಯಮೋಕ್ಷಣಂ"ನಾಮ ದ್ವಾವಿಂಶೋಽಧ್ಯಾಯಃ

---

ಆ ತೀರ್ಥವನ್ನು ಪಿಶಾಚದಮೇಲೆ ಪ್ರೋಕ್ಷಿಸಿದನು. ಕೂಡಲೆ ಆ ದುಷ್ಪಣ್ಯನು ಪಿಶಾಚತ್ವವನ್ನು ತ್ಯಜಿಸಿ ಆ ತೀರ್ಥದ ಮಾಹಾತ್ಮ್ಯೆಯಿಂದ ದೇವತ್ವವನ್ನು ಪಡೆದು ಉತ್ತಮ ವಿಮಾನವನ್ನೇರಿ ದಿವ್ಯಾಂಗನೆಯರಿಂದ ಸಹಿತನಾಗಿ ಸುತೀಕ್ಷ್ಣ, ಅಗಸ್ತ್ಯ, ಇತರ ಋಷಿಗಳು ಇವರನ್ನು ಅನೇಕಸಾರಿ ನಮಸ್ಕರಿಸಿ ಸಂತೋಷಗೊಂಡ ಅವರ ಅನುಮತಿಯಿಂದ ಸ್ವರ್ಗವನ್ನು ಸೇರಿದನು.

೧೧೬. ಹೀಗೆ ದುಷ್ಪಣ್ಯನು ಮುನಿಶಾಪದಿಂದುಂಟಾದ ಪಿಶಾಚತ್ವವನ್ನು ತ್ಯಜಿಸಿ ದೇವತ್ವವನ್ನು ಹೊಂದಿದನು. ಎಲೈ ವಿಪ್ರರೆ! ಹೀಗೆ ನಿಮಗೆ ಅಗ್ನಿತೀರ್ಥದ ವೈಭವವನ್ನು ಹೇಳಿರುವೆನು.

೧೧೭–೧೧೮. ಈ ಪಿಶಾಚಮೋಕ್ಷಣಾಖ್ಯಾನದ ಅಧ್ಯಾಯವನ್ನು ಭಕ್ತಿಯಿಂದ ಹೇಳುವವನೂ, ಕೇಳುವವನೂ ಸಕಲಪಾಪಮುಕ್ತನಾಗುವನು. ಈ ಲೋಕದಲ್ಲಿ ಅತಿಶಯಗಳಾದ ಸುಖಗಳನ್ನನುಭವಿಸಿ ಪರಲೋಕದಲ್ಲಿ ಸುಖಿಯಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಅಗ್ನಿತೀರ್ಥಪ್ರಶಂಸೆ—ದುಷ್ಪಣ್ಯನ ಪೈಶಾಚ್ಯಮೋಕ್ಷಣ"ವೆಂಬ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋವಿಂಶೋಽಧ್ಯಾಯಃ

### ಚಕ್ರತೀರ್ಥಪ್ರಶಂಸನಂ—ಆದಿತ್ಯಸ್ಯ ಹಿರಣ್ಮಯಪಾಣ್ಯಾಪ್ತಿವರ್ಣನಂ

ಶ್ರೀಸೂತ ಉವಾಚ:—

ಅಗ್ನಿತೀರ್ಥಾಽಭಿಧೇ ತೀರ್ಥೇ ಸರ್ವಪಾತಕನಾಶನೇ ।
ಸ್ನಾನಂ ಕೃತ್ವಾ ವಿಶುದ್ಧಾತ್ಮಾ ಚಕ್ರತೀರ್ಥಂ ತತೋ ವ್ರಜೇತ್ ॥ ೧ ॥
ಯಂ ಯಂ ಕಾಮಂ ಸಮುದ್ದಿಶ್ಯ ಚಕ್ರತೀರ್ಥೇ ದ್ವಿಜೋತ್ತಮಾಃ ।
ಸ್ನಾನಂ ಸಮಾಚರೇನ್ಮರ್ತ್ಯಸ್ತಂ ತಂ ಕಾಮಂ ಸಮಶ್ನುತೇ ॥ ೨ ॥
ಪುರಾಽಹಿರ್ಬುಧ್ನ್ಯನಾಮಾತು ಮಹರ್ಷಿಃ ಸಂಶಿತವ್ರತಃ ।
ಸುದರ್ಶನಮುಪಾಸ್ತಾಽಸ್ಮಿಂಸ್ತಪಸ್ವೀ ಗಂಧಮಾದನೇ ॥ ೩ ॥
ತಪಸ್ಯಂತಂ ಮುನಿಂ ತತ್ರ ರಾಕ್ಷಸಾ ಘೋರರೂಪಿಣಃ ।
ಅಬಾಧಂತ ಸದಾ ವಿಪ್ರಾಸ್ತಪೋವಿಘ್ನೈಕತತ್ಪರಾಃ ॥ ೪ ॥
ಸುದರ್ಶನಂ ತದಾಗತ್ಯ ಭಕ್ತರಕ್ಷಣವಾಂಛಯಾ ।
ಯಾತುಧಾನಾನ್ಬಾಧಮಾನಾನ್ನ್ಯವಧೀಲ್ಲೀಲಯಾ ಪುರಾ ॥ ೫ ॥
ತದಾ ಪ್ರಭೃತಿ ತಚ್ಚಕ್ರಂ ಭಕ್ತಪ್ರಾರ್ಥನಯಾ ದ್ವಿಜಾಃ ।
ಅಹಿರ್ಬುಧ್ನ್ಯಕೃತೇ ತೀರ್ಥೇ ಸನ್ನಿಧಾನಂ ಸದಾಽಕರೋತ್ ॥ ೬ ॥

---

## ಕನ್ನಡದ ಅನುವಾದ

### ಚಕ್ರತೀರ್ಥಪ್ರಶಂಸನ—ಆದಿತ್ಯಹಿರಣ್ಮಯಪಾಣ್ಯಾಪ್ತಿವರ್ಣನ

೧. ಸೂತನು ಹೇಳುತ್ತಾನೆ:—ಸಕಲ ಪಾತಕಗಳನ್ನೂ ನಾಶಗೊಳಿಸುವ ಅಗ್ನಿತೀರ್ಥದಲ್ಲಿ ಮಿಂದು ಶುದ್ಧನಾಗಿ ತರುವಾಯ ಯಾತ್ರಿಕನು ಚಕ್ರತೀರ್ಥಕ್ಕೆ ಹೋಗಬೇಕು.

೨. ಬ್ರಾಹ್ಮಣವರ್ಯರೆ! ನರನು ಯಾವ ಯಾವ ಇಷ್ಟಾರ್ಥವನ್ನುದ್ದೇಶಿಸಿ ಚಕ್ರತೀರ್ಥದಲ್ಲಿ ಸ್ನಾನಮಾಡುವನೊ ಆಯಾ ಇಷ್ಟಾರ್ಥವನ್ನು ಪಡೆಯುವನು.

೩. ಹಿಂದೆ ಕಠಿನವ್ರತವನ್ನಾಚರಿಸುತ್ತಿದ್ದ ಅಹಿರ್ಬುಧ್ನ್ಯನೆಂಬ ಮಹರ್ಷಿಯು ಈ ಗಂಧಮಾದನಪರ್ವತದಲ್ಲಿ ಸುದರ್ಶನನನ್ನು (ಚಕ್ರವನ್ನು) ಉಪಾಸನೆಮಾಡುತ್ತಿದ್ದನು.

೪. ಹೀಗೆ ಅಲ್ಲಿ ತಪಸ್ಸನ್ನು ಮಾಡುತ್ತಿರುವ ಆ ಮುನಿಯನ್ನು ಭಯಂಕರ ರೂಪವುಳ್ಳ ರಾಕ್ಷಸರು ಯಾವಾಗಲೂ ವಿಘ್ನವನ್ನುಂಟುಮಾಡುತ್ತ ಪೀಡಿಸಿದರು.

೫. ಆಗ ಸುದರ್ಶನನು ಭಕ್ತನನ್ನು ರಕ್ಷಿಸಲಪೇಕ್ಷೆಯಿಂದ ಬಂದು ಪೀಡಿಸುತ್ತಿರುವ ಆ ರಾಕ್ಷಸರನ್ನು ಲೀಲೆಯಿಂದಲೇ ಕೊಂದನು.

೬. ಎಲೈ ಬ್ರಾಹ್ಮಣರೆ! ಅದು ಮೊದಲ್ಗೊಂಡು ಆ ಚಕ್ರವು ಭಕ್ತನ

ತದಾ ಪ್ರಭೃತಿ ತತ್ತೀರ್ಥಂ ಚಕ್ರತೀರ್ಥಮಿತೀರ್ಯತೇ ।
ಸುದರ್ಶನಪ್ರಸಾದೇನ ತತ್ರ ತೀರ್ಥೇ ನಿಮಜ್ಜನಾತ್ ॥ ೭ ॥
ರಕ್ಷಃ ಪಿಶಾಚಾದಿಕೃತಾ ಪೀಡಾ ನಾಸ್ತ್ಯೇವ ಕರ್ಹಿಚಿತ್ ।
ಸ್ನಾತ್ವಾऽಸ್ಮಿನ್ಪಾವನೇ ತೀರ್ಥೇ ಛಿನ್ನಪಾಣಿಃ ಪುರಾ ರವಿಃ ।
ಸ ಹಿರಣ್ಮಯೌ ಪಾಣೀ ಲಬ್ಧವಾಂಸ್ತೀರ್ಥವೈಭವಾತ್ ॥ ೮ ॥

ಋಷಯ ಊಚುಃ:—

ಛಿನ್ನಪಾಣಿಃ ಕಥಮಭೂದಾದಿತ್ಯಃ ಸೂತನಂದನ ।
ಯಥಾಚ ಲಬ್ಧವಾನ್ಪಾಣೀ ಸೌವರ್ಣೌ ತದ್ವದಸ್ವ ನಃ ॥ ೯ ॥

ಶ್ರೀ ಸೂತ ಉವಾಚ:—

ಇಂದ್ರಾದಯಃ ಸುರಾಃ ಪೂರ್ವಂ ಸಂತತಂ ದೈತ್ಯಪೀಡಿತಾಃ ॥ ೧೦ ॥
ಕಿಂ ಕುರ್ಮ ಇತಿ ಸಂಚಿತ್ಯ ಸಂಭೂಯ ಸಮಮಂತ್ರಯನ್ ।
ಬೃಹಸ್ಪತಿಂ ಪುರಸ್ಕೃತ್ಯ ಮಂತ್ರಯಿತ್ವಾ ಚಿರಂ ಸುರಾಃ ॥ ೧೧ ॥
ತುರಾಷಾಹಂ ಪುರೋಧಾಯ ಧಾಮ ಸ್ವಾಯಂಭುವಂ ಯಯುಃ ।
ತೇ ಬ್ರಹ್ಮಾಣಂ ಸಮಾಸಾದ್ಯ ದೃಷ್ಟ್ವಾ ಸ್ತುತ್ವಾ ಚ ಭಕ್ತಿತಃ ।
ತತೋ ವ್ಯಜಿಜ್ಞಪಂಸ್ತಸ್ಮೈ ಸ್ವೇಷಾಮಾಗಮಕಾರಣಂ ॥ ೧೨ ॥

---

ಪ್ರಾರ್ಥನೆಯಂತೆ ಅಹಿರ್ಬುಧ್ನ್ಯನು ರಚಿಸಿದ ತೀರ್ಥದಲ್ಲಿ ಯಾವಾಗಲೂ ಸನ್ನಿಹಿತವಾಗಿದ್ದಿತು.

೭–೮. ಅದು ಮೊದಲ್ಗೊಂಡು ಆ ತೀರ್ಥವು ಚಕ್ರತೀರ್ಥವೆಂದು ಹೇಳಲ್ಪಡುತ್ತಿದೆ. ಆ ತೀರ್ಥದಲ್ಲಿ ಸ್ನಾನಮಾಡುವುದರಿಂದ ಸುದರ್ಶನಚಕ್ರದ ಅನುಗ್ರಹದಿಂದ ರಾಕ್ಷಸ ಪಿಶಾಚಾದಿಗಳ ಭಯವಿರುವುದಿಲ್ಲ. ಹಿಂದೆ ಕತ್ತರಿಸಿದ ಕೈಯುಳ್ಳ ಸೂರ್ಯನು ಈ ಪವಿತ್ರತೀರ್ಥದಲ್ಲಿ ಮಿಂದು ಇದರ ಮಾಹಾತ್ಮ್ಯೆಯಿಂದ ಚಿನ್ನದ ಕೈಗಳನ್ನು ಪಡೆದನು.

೯. ಋಷಿಗಳು ಕೇಳುತ್ತಾರೆ:—"ಎಲೈ ಸೂತನೆ! ಸೂರ್ಯನ ಕೈಯು ಹೇಗೆ ಕತ್ತರಿಸಿಹೋಯಿತು? ಅವನು ಚಿನ್ನದ ಕೈಗಳನ್ನು ಹೇಗೆ ಹೊಂದಿದನು? ಅದನ್ನು ನಮಗೆ ಹೇಳು."

೧೦–೧೨. ಶ್ರೀಸೂತನು ಹೇಳುತ್ತಾನೆ:— ಹಿಂದೆ ಇಂದ್ರಾದಿ ದೇವತೆಗಳು ಯಾವಾಗಲೂ ದೈತ್ಯರಿಂದ ಪೀಡಿತರಾಗಿ ಒಂದೆಡೆ ಸೇರಿ ಏನನ್ನು ಮಾಡೋಣವೆಂದು ಆಲೋಚಿಸಿದರು. ಅವರು ಬೃಹಸ್ಪತಿಯನ್ನು ಮುಂದಿರಿಸಿಕೊಂಡು ಬಹಳಕಾಲ ಆಲೋಚಿಸಿ ದೇವೇಂದ್ರನನ್ನು ಮುಂದೆ ಮಾಡಿಕೊಂಡು ಬ್ರಹ್ಮಲೋಕಕ್ಕೆ ತೆರಳಿ ಬ್ರಹ್ಮನನ್ನು ಕಂಡು ಭಕ್ತಿಯಿಂದ ಸ್ತುತಿಸಿ ಅವನಿಗೆ ತಾವು ಬಂದ ಕಾರಣವನ್ನು ಬಿನ್ನೈಸಿದರು.

ಸುರಾ ಊಚುಃ:—

ಭಗವನ್ಭಾರತೀನಾಥ ದೈತ್ಯಾ ಹ್ಯಸ್ಮಾನ್ಬಲೋತ್ಕಟಾಃ ॥ ೧೩ ॥
ಬಾಧಂತೇ ಸತತಂ ದೇವ ತತ್ರ ಬ್ರೂಹಿ ಪ್ರತಿಕ್ರಿಯಾಂ ।
ಇತ್ಯುಕ್ತಸ್ಸ ಸುರೈರ್ಬ್ರಹ್ಮಾ ತಾನಾಹ ಕೃಪಯಾ ವಚಃ ॥ ೧೪ ॥

ಬ್ರಹ್ಮೋವಾಚ:—

ಮಾಭೈಷ್ಟ ಯೂಯಂ ವಿಬುಧಾಸ್ತತ್ರೋಪಾಯಂ ಬ್ರವೀಮ್ಯಹಂ ।
ಮಾಹೇಶ್ವರಂ ಮಹಾಯಜ್ಞಮಸುರಾಣಾಂ ವಿನಾಶನಂ ॥ ೧೫ ॥
ಪ್ರಾರಭಧ್ವಂ ಸುರಾ ಯೂಯಂ ಮುನಿಭಿಸ್ತತ್ವದರ್ಶಿಭಿಃ ।
ಅಯಂ ಚ ದೈವತೈಃ ಸರ್ವೈರ್ವಿಧಿಲೋಭಂ ವಿನಾ ಕೃತಃ ॥ ೧೬ ॥
ಮಾಹೇಶ್ವರೋ ಮಹಾಯಜ್ಞಃ ಕ್ರಿಯತಾಂ ಗಂಧಮಾದನೇ ।
ಯದಿ ಹ್ಯನ್ಯತ್ರ ತಂ ಯಜ್ಞಂ ಕುರ್ಯುರ್ಯೂಸ್ತದ್ವಿಬುಧರ್ಷಭಾಃ ॥ ೧೭ ॥
ಯಜ್ಞವಿಘ್ನಂ ತದಾ ಕುರ್ಯುರ್ದುರಾತ್ಮಾನಃ ಸುರದ್ವಿಷಃ ।
ಕ್ರಿಯತೇ ಯದ್ಯಯಂ ಯಜ್ಞೋ ಗಂಧಮಾದನ ಪರ್ವತೇ ॥ ೧೮ ॥
ಸುದರ್ಶನಪ್ರಸಾದೇನ ನೈವ ವಿಘ್ನೋ ಭವೇತ್ತದಾ ।
ಅಹಿರ್ಬುಧ್ನ್ಯಾಭಿಧಾನಸ್ಯ ಮಹರ್ಷೇರ್ಗಂಧಮಾದನೇ ॥ ೧೯ ॥
ಅನುಗ್ರಹಾಯ ತತ್ತೀರ್ಥೇ ಸನ್ನಿಧತ್ತೇ ಸುದರ್ಶನಂ ।
ಅತಃ ಕುರುಧ್ವಂ ಭೋ ಯೂಯಂ ತಂ ಯಜ್ಞಂ ಗಂಧಮಾದನೇ ॥ ೨೦ ॥
ನಾತಿದೂರೇ ಚಕ್ರತೀರ್ಥಾದಸುರಾಣಾಂ ವಿನಾಶಕಂ ।
ತತಸ್ತೇ ಬ್ರಹ್ಮವಚಸಾ ಸಹಸಾ ಗಂಧಮಾದನಂ ॥ ೨೧ ॥

---

೧೩–೧೪. ದೇವತೆಗಳು ಹೇಳುತ್ತಾರೆ:—"ವಾಣೀರಮಣನಾದ ಎಲೈ ಬ್ರಹ್ಮನೆ! ಬಲದಿಂದ ಕೊಬ್ಬಿರುವ ದೈತ್ಯರು ನಮ್ಮನ್ನು ಯಾವಾಗಲೂ ಪೀಡಿಸುತ್ತಿದ್ದಾರೆ. ಇದಕ್ಕೆ ಪ್ರತೀಕಾರವನ್ನು ನಮಗೆ ತಿಳಿಸು." ದೇವತೆಗಳು ಹೀಗೆಂದು ನುಡಿಯಲು ಬ್ರಹ್ಮನು ದಯೆಯಿಂದ ಅವರನ್ನು ಕುರಿತು ಇಂತೆಂದನು.

೧೫–೨೮. ಬ್ರಹ್ಮನು ಹೇಳುತ್ತಾನೆ:—"ವಿಬುಧರೆ! ನೀವು ಹೆದರಬೇಡಿರಿ. ಇದಕ್ಕೆ ಉಪಾಯವನ್ನು ನಾನು ಹೇಳುವೆನು. ನೀವು ಅಸುರರನ್ನು ನಾಶಗೊಳಿಸುವ ಮಾಹೇಶ್ವರವೆಂಬ ಮಹಾಯಜ್ಞವನ್ನು ತತ್ವಜ್ಞಾನಿಗಳಾದ ಮುನಿಗಳೊಡನೆ ಆರಂಭಿಸಿರಿ. ಹಿಂದೆ ಈ ಯಜ್ಞವನ್ನು ಸಕಲ ದೇವತೆಗಳೂ ವಿಧಿಲೋಪವಿಲ್ಲದೆ ಮಾಡಿದ್ದಾರೆ. ಆ ಮಾಹೇಶ್ವರ ಯಜ್ಞವನ್ನು ಗಂಧಮಾದನಪರ್ವತದಲ್ಲಿಯೇ ನೆರವೇರಿಸಬೇಕು. ಎಲೈ ದಿವಿಜರೆ! ಬೇರೆ ಕಡೆಯಲ್ಲಿ ಆ ಯಜ್ಞವನ್ನು ಮಾಡಿದರೆ ದುಷ್ಟ ದೈತ್ಯರು ವಿಘ್ನವನ್ನೆಸಗುವರು. ಗಂಧಮಾದನದಲ್ಲಿ ಈ ಯಜ್ಞವನ್ನು ಮಾಡಿದರೆ ಸುದರ್ಶನನ ಅನುಗ್ರಹದಿಂದ ಅಡ್ಡಿಯುಂಟಾಗುವುದಿಲ್ಲ. ಸುದರ್ಶನನು

ಬೃಹಸ್ಪತಿಂ ಪುರಸ್ಕೃತ್ಯ ಜಗ್ಮುರ್ಯಜ್ಞಚಿಕೀರ್ಷಯಾ ।
ತೇ ಪ್ರಣಮ್ಯ ಮಹಾತ್ಮಾನಮಹಿರ್ಬುಧ್ನ್ಯಂ ಮುನೀಶ್ವರಂ ॥ ೨೨ ॥
ಅಕಲ್ಪಯನ್ಯಜ್ಞವಾಟಾನ್ಮಾಽತಿದೂರೇ ತದಾಶ್ರಮಾತ್ ।
ಯಜ್ಞಕರ್ಮಸು ನಿಷ್ಣಾತೈಃ ಸಹಿತಾಸ್ತೇ ತಪೋಧನೈಃ ॥ ೨೩ ॥
ಇಷ್ಟಿಮಾರೇಭಿರೇ ದೇವಾ ಅಸುರಾಣಾಂ ವಿನಾಶಿನೀಂ ।
ತಸ್ಮಿನ್ಕರ್ಮಣಿ ಹೋತಾಽಽಸೀತ್ಸ್ವಯಮೇವ ಬೃಹಸ್ಪತಿಃ ॥ ೨೪ ॥
ಬಭೂವ ಮೈತ್ರಾವರುಣೋ ಜಯಂತಃ ಪಾಕಶಾಸನಿಃ ।
ಅಚ್ಛಾವಾಕೋ ಬಭೂವಾಽತ್ರ ವಸೂನಾಮಷ್ಟಮೋ ವಸುಃ ॥ ೨೫ ॥
ಗ್ರಾವಸ್ತುದಭವತ್ತತ್ರ ಶಕ್ತಿಪುತ್ರಃ ಪರಾಶರಃ ।
ಅಷ್ಟಾವಕ್ರೋ ಮಹಾತೇಜಾ ಅಧ್ವರ್ಯುರ್ಧುರಮೂಢವಾನ್ ॥ ೨೬ ॥
ತತ್ರ ಪ್ರತಿಪ್ರಸ್ಥಾತಾಽಭೂದ್ವಿಶ್ವಾಮಿತ್ರೋ ಮಹಾಮುನಿಃ ।
ನೇಷ್ಟಾ ಬಭೂವ ವರುಣ ಉನ್ನೇತಾಚ ಧನೇಶ್ವರಃ ॥ ೨೭ ॥
ಬ್ರಹ್ಮಾ ಬಭೂವ ಸವಿತಾ ಯಜ್ಞಸ್ಯಾರ್ಧಧುರಂ ವಹನ್ ।
ಬಭೂವ ಬ್ರಾಹ್ಮಣಾಚ್ಛಂಸೀ ವಸಿಷ್ಠೋ ಬ್ರಾಹ್ಮಣೋತ್ತಮಃ ॥ ೨೮ ॥
ಆಗ್ನೀಧ್ರೋಽಭೂಚ್ಛುನಃಶೇಪಃ ಪೋತಾ ಜಾತಶ್ಚ ಪಾವಕಃ ।
ಉದ್ಗಾತಾ ವಾಯುರಭವತ್ಪ್ರಸ್ತೋತಾಚ ಪರೇತರಾಟ್ ॥ ೨೯ ॥

---

ಅಹಿರ್ಬುಧ್ನ್ಯಮುನಿಯನ್ನು ಅನುಗ್ರಹಿಸುವುದಕ್ಕಾಗಿ ಗಂಧಮಾದನದಲ್ಲಿರುವ ಚಕ್ರತೀರ್ಥದಲ್ಲಿ ಸನ್ನಿಹಿತವಾಗಿರುವನು. ಆದುದರಿಂದ ಗಂಧಮಾದನದ ಚಕ್ರತೀರ್ಥದ ಸಮೀಪದಲ್ಲಿ ಅಸುರನಾಶಕವಾದ ಆ ಮಾಹೇಶ್ವರಯಜ್ಞವನ್ನು ನೆರವೇರಿಸಿರಿ.'' ಬಳಿಕ ಆ ದೇವತೆಗಳು ಬ್ರಹ್ಮನ ಮಾತಿನಂತೆ ಕೂಡಲೆ ಬೃಹಸ್ಪತಿಯನ್ನು ಮುಂದಿರಿಸಿಕೊಂಡು ಯಜ್ಞಮಾಡಲಿಚ್ಛೆಯಿಂದ ಗಂಧಮಾದನಕ್ಕೆ ತೆರಳಿದರು. ಅಲ್ಲಿ ಮಹಾತ್ಮನಾದ ಅಹಿರ್ಬುಧ್ನ್ಯಮುನಿವರ್ಯನನ್ನು ಕಂಡು ನಮಸ್ಕರಿಸಿ, ಅವನ ಆಶ್ರಮದ ಸಮೀಪದಲ್ಲಿಯೆ ಯಜ್ಞಶಾಲೆಯನ್ನು ಕಲ್ಪಿಸಿದರು. ಅನಂತರ ಯಜ್ಞಕರ್ಮದಲ್ಲಿ ಪ್ರವೀಣರಾದ ಮುನಿಗಳೊಡನೆ ಅಸುರನಾಶಕವಾದ ಯಾಗವನ್ನು ಆರಂಭಿಸಿದರು. ಆ ಯಜ್ಞದಲ್ಲಿ ಬೃಹಸ್ಪತಿಯು ತಾನೇ ಹೋಮಮಾಡುವವ (ಹೋತೃ)ನಾದನು.

೨೫–೨೬. ಇಂದ್ರಸುತನಾದ ಜಯಂತನು ಮೈತ್ರಾವರುಣನೂ, ಎಂಟನೆಯ ವಸುವು ಅಚ್ಛಾವಾಕನೂ ಆದನು. ಶಕ್ತಿಪುತ್ರನಾದ ಪರಾಶರನು ಗ್ರಾವಸ್ತುತನೂ, ಮಹಾತೇಜಸ್ವಿಯಾದ ಅಷ್ಟಾವಕ್ರನು ಅಧ್ವರ್ಯುವೂ ಆದರು.

೨೭–೩೧. ವಿಶ್ವಾಮಿತ್ರನು ಪ್ರತಿಪ್ರಸ್ಥಾತನೂ, ವರುಣನು ನೇಷ್ಟನೂ, ಕುಬೇರನು ಉನ್ನೇತನೂ, ಸೂರ್ಯನು ಯಜ್ಞದ ಅರ್ಧಭಾರವನ್ನು ವಹಿಸಿದವನಾಗಿ ಬ್ರಹ್ಮನೂ, ಮುನಿವರ್ಯನಾದ ವಸಿಷ್ಠನು ಬ್ರಾಹ್ಮಣಾಶಂಸಿಯೂ,

ಪ್ರತಿಹರ್ತಾ ತು ತತ್ರಾಽಸೀದಗಸ್ತ್ಯಃ ಕುಂಭಸಂಭವಃ ।
ಸುಬ್ರಹ್ಮಣ್ಯೋ ಮಧುಚ್ಛಂದಾ ವಿಶ್ವಾಮಿತ್ರಾತ್ಮಜೋ ಮಹಾನ್ ॥ ೩೦ ॥
ಯಜಮಾನಃ ಸ್ವಯಮಭೂದ್ದೇವರಾಜಃ ಪುರಂದರಃ ।
ಉಪದ್ರಷ್ಟಾ ಬಭೂವಾಽತ್ರ ವ್ಯಾಸಪುತ್ರಃ ಶುಕೋಮುನಿಃ ॥ ೩೧ ॥
ತತಸ್ತೇ ಋತ್ವಿಜಃ ಸರ್ವೇ ದೇವರಾಜಂ ಪುರಂದರಂ ।
ವಿಧಿವದ್ದೀಕ್ಷಯಾಂಚಕ್ರುಸ್ತತ್ರ ಮಾಹೇಶ್ವರೇ ಕ್ರತೌ ॥ ೩೨ ॥
ಪ್ರಾವರ್ತತ ಮಹಾಯಜ್ಞ ಏವಂ ವೈ ಗಂಧಮಾದನೇ ।
ಸುದರ್ಶನ ಪ್ರಭಾವೇನ ದುಃಸಹೇನಾತಿಪೀಡಿತಾಃ ॥ ೩೩ ॥
ನಾಽವಿಂದನ್ನಸುರಾಸ್ತತ್ರ ರಂಧ್ರಂ ಯಜ್ಞೇ ಪ್ರವರ್ತಿತೇ ।
ಏವಂ ನಿರಂತರಾಯೋಽಸೌ ಪ್ರಾವರ್ತತ ಮಹಾಕ್ರತುಃ ॥ ೩೪ ॥
ಭಕ್ಷಯಂಶ್ಚ ಹವಿಸ್ತತ್ರ ಜಜ್ವಾಲ ಹುತವಾಹನಃ ।
ವಿಧಿವತ್ಕರ್ಮ ಜಾಲಾನಿ ಕೃತ್ವಾಽಧ್ವರ್ಯುರಸಂಭ್ರಮಾತ್ ॥ ೩೫ ॥
ಮಂತ್ರಪೂರ್ವಂ ಪುರೋಡಾಶಂ ಜುಹವಾಮಾಸ ಪಾವಕೇ ।
ಹುತಶೇಷಂ ಪುರೋಡಾಶಂ ವಿಭಜ್ಯಾಽಧ್ವರ್ಯುರಾದರಾತ್ ॥ ೩೬ ॥
ಋತ್ವಿಗ್ಭ್ಯೋ ಹೋತೃಮುಖ್ಯೇಭ್ಯಃ ಪ್ರದದೌ ಪಾಪನಾಶನಂ ।
ಸವಿತ್ರೇ ಬ್ರಹ್ಮಣೇ ಚೈಕಮತ್ಯುಗ್ರತರತೇಜಸಂ ॥ ೩೭ ॥
ದದೌ ತತ್ರ ಪುರೋಡಾಶಭಾಗಂ ಪ್ರಾಶಿತ್ರನಾಮಕಂ ।
ಪ್ರತಿ ಜಗ್ರಾಹ ಪಾಣಿಭ್ಯಾಂ ಪ್ರಾಶಿತ್ರಂ ಸವಿತಾ ತದಾ ॥ ೩೮ ॥

---

ಶುನಶ್ಶೇಪನು ಅಗ್ನೀಧ್ರನೂ, ಅಗ್ನಿಯು ಪೋತನೂ, ವಾಯುವು ಉದ್ಗಾತನೂ, ಯಮನು ಪ್ರಸ್ತೋತನೂ, ಅಗಸ್ತ್ಯನು ಪ್ರತಿಹರ್ತನೂ, ವಿಶ್ವಾಮಿತ್ರನ ಮಗನಾದ ಮಧುಚ್ಛಂದನು ಸುಬ್ರಹ್ಮಣ್ಯನೂ, ದೇವೇಂದ್ರನು ಯಜಮಾನನೂ, ವ್ಯಾಸತನಯನಾದ ಶುಕಮುನಿಯು ಉಪದ್ರಷ್ಟನೂ ಆದರು.

೩೨. ಬಳಿಕ ಆ ಪುರೋಹಿತರು ಮಾಹೇಶ್ವರಯಜ್ಞದಲ್ಲಿ ದೇವೇಂದ್ರನನ್ನು ವಿಧಿಪೂರ್ವಕವಾಗಿ ದೀಕ್ಷೆಗೊಳಿಸಿದರು.

೩೩–೩೪. ಹೀಗೆ ಆರಂಭವಾದ ಯಜ್ಞದಲ್ಲಿ ಶತ್ರುಗಳಿಂದ ಸಹಿಸಲಾಗದ ಸುದರ್ಶನಚಕ್ರದ ಪ್ರಭಾವದಿಂದ ಪೀಡಿತರಾದ ಅಸುರರು ಯಜ್ಞಭಂಗಮಾಡಲು ಅವಕಾಶವನ್ನೇ ಹೊಂದಲಿಲ್ಲ. ಹೀಗೆ ಆ ಮಾಹೇಶ್ವರಕ್ರತುವು ನಿರ್ವಿಘ್ನವಾಗಿ ನಡೆಯಿತು.

೩೫–೩೮. ಅಗ್ನಿಯು ಆ ಯಜ್ಞದಲ್ಲಿ ಹವಿಸ್ಸನ್ನು ಭಕ್ಷಿಸುತ್ತ ಬಹುವಾಗಿ ಜ್ವಲಿಸಿದನು. ಅಧ್ವರ್ಯುವಾದ ಅಷ್ಟಾವಕ್ರನು ತ್ವರೆಗೊಳ್ಳದೆ ವಿಧಿಯಂತೆ ಸಕಲ ಕರ್ಮಗಳನ್ನೂ ನೆರವೇರಿಸಿ ಮಂತ್ರಶುದ್ಧವಾದ ಪುರೋಡಾಶವನ್ನು ಅಗ್ನಿಯಲ್ಲಿ ಹೋಮಮಾಡಿದನು. ಅವನು ಹೋಮಮಾಡಿ ಉಳಿದ ಪಾಪನಾಶಕವಾದ

ಸವಿತ್ರಾ ಸ್ಪೃಷ್ಟಮಾತ್ರಂ ಸತ್ತತ್ಪ್ರಾಶಿತ್ರಂ ದುರಾಸದಂ ।
ತಸ್ಯ ಪಾಣೀ ಪ್ರಚಿಚ್ಛೇದ ಪಶ್ಯತಾಂ ಸರ್ವಋತ್ವಿಜಾಂ ॥ ೩೯ ॥
ತತಃ ಸಂಛಿನ್ನಪಾಣಿಃ ಸ ಪ್ರಾಶಿತ್ರೇಣೋಗ್ರತೇಜಸಾ ।
ಕಿಮೇತದಿತಿ ಸಂತ್ರಸ್ತೋ ವಿಷಣ್ಣವದನೋಽಭವತ್ ॥ ೪೦ ॥
ಸವಿತಾ ಋತ್ವಿಜಃ ಸರ್ವಾನ್ಸಮಾಹೂಯೇದಮಬ್ರವೀತ್ ।

ಸವಿತೋವಾಚ :—

ಪುರೋಡಾಶಸ್ಯ ಭಾಗೋಽಯಂ ಮಮ ಪ್ರಾಶಿತ್ರನಾಮಕಃ ॥ ೪೧ ॥
ದತ್ತಶ್ಚಿಚ್ಛೇದ ಮತ್ಪಾಣೀ ವಿಷಸ್ತ್ರೇಣೇವ ಭವತ್ಸ್ವಪಿ ।
ಅತೋ ಭವಂತಃ ಸಂಭೂಯ ಸರ್ವ ಏವ ಹಿ ಋತ್ವಿಜಃ ॥ ೪೨ ॥
ಕಲ್ಪಯಂತಾಮಿಮೌ ಪಾಣೀ ನೋಚೇದ್ಯಜ್ಞಂ ನಿಹನ್ಮ್ಯಹಂ ।
ಸವಿತುರ್ವಾಕ್ಯಮಾಕರ್ಣ್ಯ ತೇ ಸರ್ವೇ ಸಮಚಿಂತಯನ್ ॥ ೪೩ ॥
ತತ್ರ ಮಧ್ಯೇ ಮುನೀಂದ್ರಾಣಾಂ ದೇವಾನಾಂ ಚೈವ ಸರ್ವಶಃ ।
ಅಷ್ಟಾವಕ್ರೋ ಮಹಾತೇಜಾ ಋತ್ವಿಜಸ್ತಾನಭಾಷತ ॥ ೪೪ ॥

ಅಷ್ಟಾವಕ್ರ ಉವಾಚ :—

ಶೃಣುಧ್ವಮೃತ್ವಿಜಃ ಸರ್ವೇ ಮಮ ವಾಕ್ಯಂ ಸಮಾಹಿತಾಃ ।
ಮಯಿ ಜೀವತಿ ವಿಪ್ರೇಂದ್ರಾ ವಿರಿಂಚಾಂ ತು ಶತಂ ಗತಂ ॥ ೪೫ ॥

---

ಪುರೋಡಾಶವನ್ನು ವಿಭಾಗಿಸಿ ಹೋತೃವೇ ಮೊದಲಾದ ಋತ್ವಿಜರಿಗೆ ಕೊಟ್ಟನು. ಬ್ರಹ್ಮನಾದ ಸೂರ್ಯನಿಗೆ ಅತ್ಯಂತ ತೇಜಸ್ಸುಳ್ಳ ಪ್ರಾಶಿತ್ರವೆಂಬ ಪುರೋಡಾಶ ಭಾಗವನ್ನು ಕೊಟ್ಟನು. ಆಗ ಸೂರ್ಯನು ಅದನ್ನು ಕೈಗಳಿಂದ ತೆಗೆದುಕೊಂಡನು.

೩೯–೪೦. ಸೂರ್ಯನು ಮುಟ್ಟಿದಕೂಡಲೆ ಆ ಪ್ರಾಶಿತ್ರವೆಂಬ ಹಿಡಿಯಲಾಗದ ಪುರೋಡಾಶಭಾಗವು ಸಕಲರೂ ನೋಡುತ್ತಿರುವಾಗಲೆ ಅವನ ಕೈಗಳನ್ನು ಕತ್ತರಿಸಿತು. ತರುವಾಯ ಅತಿ ತೇಜಸ್ಸುಳ್ಳ ಆ ಪ್ರಾಶಿತ್ರದಿಂದ ಸೂರ್ಯನು ಕತ್ತರಿಸಿದ ಕೈಯುಳ್ಳವನಾಗಿ ಭಯಗೊಂಡು ಇದೇನೆಂದು ವ್ಯಥೆಗೊಂಡು ದೀನಮುಖನಾದನು.

೪೧–೪೩. ಆಗ ಆತನು ಸಕಲಋತ್ವಿಜರನ್ನೂ ಕರೆದು ಇಂತೆಂದನು: ಸೂರ್ಯನು ಹೇಳುತ್ತಾನೆ:—"ಎಲೈ ಋತ್ವಿಜರೆ! ನೀವು ನೋಡುತ್ತಿರುವಾಗಲೆ ಅಷ್ಟಾವಕ್ರನು ಕೊಟ್ಟ ಈ ಪ್ರಾಶಿತ್ರವೆಂಬ ಪುರೋಡಾಶಭಾಗವು ನನ್ನ ಕೈಗಳನ್ನು ಕತ್ತರಿಸಿತು. ಆದುದರಿಂದ ನೀವೆಲ್ಲರೂ ಸೇರಿ ನನ್ನ ಕೈಗಳನ್ನು ಸರಿಮಾಡಿರಿ. ಇಲ್ಲದಿದ್ದರೆ ನಾನು ಈ ಯಜ್ಞವನ್ನು ಕೆಡಿಸುವೆನು." ಸೂರ್ಯನು ಹೀಗೆ ಹೇಳಲು ಆ ಮಾತನ್ನುಕೇಳಿ ಅವರೆಲ್ಲರೂ ಆಲೋಚಿಸಿದರು.

೪೪. ಆಗ ಆ ಸಕಲಮುನೀಂದ್ರರ ಮತ್ತು ದೇವತೆಗಳ ಮಧ್ಯದಲ್ಲಿರುವ ಮಹಾ ತೇಜಸ್ವಿಯಾದ ಅಷ್ಟಾವಕ್ರನು ಅವರನ್ನು ಕುರಿತು ಹೀಗೆಂದನು.

೪೫. ಅಷ್ಟಾವಕ್ರನು ಹೇಳುತ್ತಾನೆ:—ಎಲೈ ಋತ್ವಿಜರೆ! ನೀವೆಲ್ಲರೂ

ಜಾಯಂತೇ ಚ ಮ್ರಿಯಂತೇ ಚ ಚತುರಾನನಕೋಟಯಃ ।
ಪಶ್ಯನ್ನೇವ ಚ ತಾನ್ಸರ್ವಾನಹಂ ಪ್ರಾಣಾನಧಾರಯಂ ॥ ೪೬ ॥
ತತ್ರ ಲೋಕೇಶ್ವರಾಽಭಿಖ್ಯೇ ವರ್ತಮಾನೇ ಪ್ರಜಾಪತೌ ।
ವಿಪ್ರೋ ಹರಿಹರೋ ನಾಮ ನಿವಸನ್ಶ್ಯಾಮಲಾಪುರೇ ॥ ೪೭ ॥
ವ್ಯಾಧೇನಾಽರಣ್ಯವಾಸೇನ ಕೇಲ್ಯರ್ಥಂ ಲಕ್ಷ್ಯವೇಧಿನಾ ।
ಭಿನ್ನಪಾದೋಽಭವದ್ಬಾಣೈರ್ಲಕ್ಷ್ಯಮಧ್ಯಂ ಸಮಾಗತಃ ॥ ೪೮ ॥
ಸ ಗಂಧಮಾದನಂ ಪ್ರಾಪ್ಯ ಮುನಿಭಿಃ ಪ್ರೇರಿತಸ್ತದಾ ।
ಸ್ನಾತ್ವಾ ಚ ಮುನಿತೀರ್ಥೇಽಸ್ಮಿನ್ಪ್ರಾಪ್ತವಾಂಶ್ಚರಣೌ ಪುರಾ ॥ ೪೯ ॥
ತದಾ ಪುಣ್ಯಮಿದಂ ತೀರ್ಥಂ ಮುನಿತೀರ್ಥಮಿತೀರಿತಂ ।
ಇದಾನೀಂ ಚಕ್ರತೀರ್ಥಾಖ್ಯಂ ಚಕ್ರನಾಮತ್ವಮಿಂದತ ॥ ೫೦ ॥
ತದತ್ರ ಕ್ರಿಯತಾಂ ಸ್ನಾನಂ ಪ್ರಾಶಿತ್ರಚ್ಛಿನ್ನಪಾಣಿನಾ ।
ಮುನಿತೀರ್ಥೇ ಸವಿತ್ರಾಽಪಿ ಯುಷ್ಮಾಕಂ ಯದಿ ರೋಚತೇ ॥ ೫೧ ॥
ಋತ್ವಿಜಃ ಕಥಿತಾಸ್ತ್ವೇವಮಷ್ಟಾವಕ್ರಮಹರ್ಷಿಣಾ ।
ಸವಿತಾರಮಭಾಷಂತ ಸರ್ವ ಏವ ಪ್ರಹರ್ಷಿತಾಃ ॥ ೫೨ ॥

---

ಸಾವಧಾನದಿಂದ ನನ್ನ ಮಾತನ್ನು ಲಾಲಿಸಿರಿ. ನಾನು ಬದುಕಿರುವಾಗಲೆ ನೂರು ಜನ ಬ್ರಹ್ಮರು ಅವಸಾನಗೊಂಡರು.

೪೬. ಕೋಟಿಬ್ರಹ್ಮರು ಹುಟ್ಟುವರು. ಮಡಿಯುವರು. ನಾನು ಅವರನ್ನೆಲ್ಲ ನೋಡುತ್ತಲೇ ಬದುಕಿರುವೆನು.

೪೭–೪೮. ಆ ಚತುರ್ಮುಖರಲ್ಲಿ ಲೋಕೇಶ್ವರನೆಂಬ ಬ್ರಹ್ಮನಿರಲು ಶ್ಯಾಮಲಾಪುರನಿವಾಸಿಯಾದ ಹರಿಹರನೆಂಬ ಬ್ರಾಹ್ಮಣನು ಅರಣ್ಯದಲ್ಲಿ ವಾಸಿಸುತ್ತಿದ್ದ ಬೇಡನೊಬ್ಬನು ಆಟಕ್ಕಾಗಿ ಬಾಣಗಳಿಂದ ಗುರಿಯನ್ನು ಬೇಧಿಸುತ್ತಿರಲು ಆ ಗುರಿಯ ನಡುವೆ ಬಂದನು. ಆಗ ಆ ಬ್ರಾಹ್ಮಣನ ಕಾಲು ಕತ್ತರಿಸಿ ಹೋಯಿತು.

೪೯–೫೦. ಆಗ ಆ ಬ್ರಾಹ್ಮಣನು ಮುನಿಗಳ ಪ್ರೇರಣೆಯಿಂದ ಈ ಗಂಧಮಾದನವನ್ನು ಸೇರಿ ಇಲ್ಲಿರುವ ಮುನಿತೀರ್ಥದಲ್ಲಿ ಮಿಂದು ಕಾಲುಗಳನ್ನು ಮರಳಿ ಪಡೆದನು. ಆಗ ಪುಣ್ಯಕರವಾದ ಈ ತೀರ್ಥವು ಮುನಿತೀರ್ಥವೆನಿಸಿಕೊಂಡಿದ್ದಿತು. ಈಗ ಚಕ್ರತೀರ್ಥವೆಂಬ ಹೆಸರನ್ನು ಪಡೆದಿರುವುದು.

೫೧. ಆದುದರಿಂದ ನೀವು ಇಷ್ಟಪಡುವುದಾದರೆ ಈ ಮುನಿತೀರ್ಥದಲ್ಲಿ ಪ್ರಾಶಿತ್ರದಿಂದ ಛಿನ್ನಹಸ್ತನಾದ ಈ ಭಾಸ್ಕರನು ಸ್ನಾನಮಾಡಲಿ."

೫೨. ಅಷ್ಟಾವಕ್ರಮಹರ್ಷಿಯು ಹೀಗೆನ್ನಲು, ಋತ್ವಿಜರೆಲ್ಲರೂ ಹರ್ಷಗೊಂಡು ಸೂರ್ಯನನ್ನು ಕುರಿತು ಇಂತೆಂದರು.

ಸವಿತಃ ಸ್ನಾಹಿ ತೀರ್ಥೇಽಸ್ಮಿಂಸ್ತವಪಾಣೀ ಭವಿಷ್ಯತಃ ।
ಅಷ್ಟಾವಕ್ರೋ ಯಥಾ ಪ್ರಾಹ ತಥಾ ಕುರು ಸಮಾಹಿತಃ ॥ ೫೩ ॥
ತತಃ ಸ ಸವಿತಾ ಗತ್ವಾ ಚಕ್ರತೀರ್ಥಂ ಮಹತ್ತರಂ ।
ಸಸ್ನೌ ಪಾಣ್ಯೋರವಾಪ್ತ್ಯರ್ಥಮಿಷ್ಟದಾಯಿನಿ ತತ್ರ ಸಃ ॥ ೫೪ ॥
ಉತ್ತಿಷ್ಠನ್ನೇವ ಸ ತದಾ ತತ್ರ ಸ್ನಾತ್ವಾ ಸಭಕ್ತಿಕಂ ।
ಯುಕ್ತೋ ಹಿರಣ್ಮಯಾಭ್ಯಾಂ ತು ಪಾಣಿಭ್ಯಾಂ ಸಮದೃಶ್ಯತ ॥ ೫೫ ॥
ಹಿರಣ್ಯಪಾಣಿಂ ತಂ ದೃಷ್ಟ್ವಾ ಜಹೃಷುಃ ಸರ್ವಋತ್ವಿಜಃ ।
ತತಃ ಸಮಾಪ್ಯ ತಂ ಯಜ್ಞಂ ದೈತ್ಯಸಂಘಾನ್ವಿಜಿತ್ಯ ಚ ॥ ೫೬ ॥
ಇಂದ್ರಾದಯಃ ಸುರಾಃ ಸರ್ವೇ ಸುಖಿತಾಃ ಸ್ವರ್ಗಮಾಯಯುಃ ।
ತಸ್ಮಾದೇತತ್ಸಮಾಗತ್ಯ ತೀರ್ಥಂ ಸರ್ವೈಶ್ಚ ಮಾನವೈಃ ॥ ೫೭ ॥
ಸೇವನೀಯಂ ಪ್ರಯತ್ನೇನ ಸ್ವಸ್ವಾಽಭೀಷ್ಟಸ್ಯ ಸಿದ್ಧಯೇ ।
ಅಂಧೈಶ್ಚ ಕುಣಿಭಿರ್ಮೂಕೈರ್ಬಧಿರೈಃ ಕುಬ್ಜಕೈರಪಿ ॥ ೫೮ ॥
ಖಂಜೈಃ ಪಂಗುಭಿರಪ್ಯೇತದಂಗಹೀನೈಸ್ತಥಾಽಪರೈಃ ।
ಸಂಛಿನ್ನಪಾಣಿಚರಣೈಃ ಸಂಛಿನ್ನಾನ್ಯಾಂಗಸಂಚಯೈಃ ॥ ೫೯ ॥
ಮನುಷ್ಯೈಶ್ಚ ತಥಾನ್ಯೈಶ್ಚ ವಿಕಲಾಂಗಸ್ಯ ಪೂರ್ತಯೇ ।
ಸೇವನೀಯಮಿದಂ ತೀರ್ಥಂ ಸರ್ವಾಽಭೀಷ್ಟಪ್ರದಾಯಕಂ ॥ ೬೦ ॥

---

೫೩. ಎಲೈ ಸೂರ್ಯನೇ! ನೀನು ಅಷ್ಟಾವಕ್ರನು ನುಡಿದಂತೆ ಸಾವಧಾನ ಮನಸ್ಸಿನಿಂದ ಈ ತೀರ್ಥದಲ್ಲಿ ಸ್ನಾನಮಾಡು. ನಿನ್ನ ಕೈಗಳು ಸರಿಯಾಗುವುವು."

೫೪. ಅನಂತರ ಆದಿತ್ಯನು ಚಕ್ರತೀರ್ಥಕ್ಕೆ ತೆರಳಿ ಇಷ್ಟಾರ್ಥವನ್ನೀಯುವ ಆ ತೀರ್ಥದಲ್ಲಿ ಕೈಗಳನ್ನು ಪಡೆಯಲೋಸುಗ ಮಿಂದನು.

೫೫. ಆ ಭಾಸ್ಕರನು ಅಲ್ಲಿ ಭಕ್ತಿಯಿಂದ ಮಿಂದು ಮೇಲಕ್ಕೇಳುತ್ತಿರುವಾಗಲೆ ಅವನ ಹಸ್ತಗಳು ಸುವರ್ಣಮಯವಾಗಿ ಕಂಡವು.

೫೬–೬೦. ಸಕಲ ಋತ್ವಿಜರೂ ಸುವರ್ಣಹಸ್ತನಾದ ಆ ಸೂರ್ಯನನ್ನು ಕಂಡು ಹರ್ಷಗೊಂಡರು. ತರುವಾಯ ಇಂದ್ರಾದಿ ಸಕಲದೇವತೆಗಳೂ ಆ ಮಾಹೇಶ್ವರಯಜ್ಞವನ್ನು ಪೂರೈಸಿ ದೈತ್ಯಸ್ತೋಮವನ್ನು ಗೆದ್ದು ಸ್ವರ್ಗವನ್ನು ಸೇರಿ ಸುಖಗೊಂಡರು. ಆದುದರಿಂದ ಸಕಲ ಮಾನವರೂ ಈ ತೀರ್ಥಕ್ಕೆ ಬಂದು ಇದನ್ನು ತಮ್ಮ ತಮ್ಮ ಅಭೀಷ್ಟಸಿದ್ಧಿಗಾಗಿ ಪ್ರಯತ್ನದಿಂದ ಸೇವಿಸಬೇಕು. ಕುರುಡರೂ, ವಕ್ರಹಸ್ತರೂ, ಮೂಗರೂ, ಕಿವುಡರೂ, ಗೂನು ಬೆನ್ನಿನವರೂ, ನಡೆಯಲಾಗದವರೂ, ಕುಂಟರೂ, ಇತರ ಅಂಗಹೀನರೂ, ಕತ್ತರಿಸಿದ ಕೈಕಾಲುಗಳೂ, ಇತರ ಅಂಗಗಳೂ ಉಳ್ಳವರೂ ಆದ ಮನುಷ್ಯರೂ, ಬೇರೆ ಪ್ರಾಣಿಗಳೂ ವ್ಯತ್ಯಾಸಗೊಂಡ ತಮ್ಮ ಅಂಗವು ಸರಿಯಾಗುವುದಕ್ಕಾಗಿ ಸಕಲೇಷ್ಟಾರ್ಥವನ್ನೀಯುವ ಈ ತೀರ್ಥವನ್ನು ಸೇವಿಸಬೇಕು.

ಏವಂ ವಃ ಕಥಿತಂ ವಿಪ್ರಾಶ್ಚಕ್ರತೀರ್ಥಸ್ಯ ವೈಭವಂ ।
ಯತ್ರ ಸ್ನಾತ್ವಾ ಪುರಾ ಛಿನ್ನೌ ಪಾಣೀ ಪ್ರಾಪ ಪ್ರಭಾಕರಃ ॥ ೬೧ ॥
ಯಃ ಪಠೇದಿಮಮಧ್ಯಾಯಂ ಶೃಣುಯಾದ್ವಾ ಸಮಾಹಿತಃ ।
ಅಂಗಾನಿ ವಿಕಲಾನ್ಯಸ್ಯ ಪೂರ್ಣಾನಿ ಸ್ಯುರ್ನಸಂಶಯಃ ॥ ೬೨ ॥
ಮೋಕ್ಷಕಾಮಸ್ಯ ಮರ್ತ್ಯಸ್ಯ ಮುಕ್ತಿಃ ಸ್ಯಾತ್ಸ್ನಾತ್ರ ಸಂಶಯಃ ॥ ೬೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಚಕ್ರತೀರ್ಥಪ್ರಶಂಸನಂ—
ಆದಿತ್ಯಸ್ಯ ಹಿರಣ್ಮಯಪಾಣ್ಯವಾಪ್ತಿವರ್ಣನಂ" ನಾಮ ತ್ರಯೋವಿಂಶೋಽಧ್ಯಾಯಃ

---

೬೧. ಎಲೈ ವಿಪ್ರರೆ! ಛಿನ್ನಹಸ್ತನಾದ ಭಾಸ್ಕರನು ಮಿಂದು ಕೈಯನ್ನು ಮರಳಿ ಪಡೆದ ಈ ಚಕ್ರತೀರ್ಥದ ಮಾಹಾತ್ಮ್ಯವನ್ನು ನಿಮಗೆ ಹೇಳಿರುವೆನು.

೬೨. ಈ ಅಧ್ಯಾಯವನ್ನು ಸಾವಧಾನಮನಸ್ಸಿನಿಂದ ಪಠಿಸಿದವನಾಗಲಿ, ಕೇಳಿದವನಾಗಲಿ ಅಂಗವೈಕಲ್ಯವನ್ನು ಪರಿಹರಿಸಿಕೊಂಡು ಸಂಪೂರ್ಣಾಂಗನಾಗುವನು.

೬೩. ಇಲ್ಲಿ ಮಿಂದವನು ಮೋಕ್ಷಾರ್ಥಿಯಾದರೆ ನಿಜವಾಗಿಯೂ ಮೋಕ್ಷವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮೂರಡನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ
"ಚಕ್ರತೀರ್ಥಪ್ರಶಂಸೆ—ಆದಿತ್ಯನ ಹಿರಣ್ಮಯಪಾಣ್ಯವಾಪ್ತಿವರ್ಣನ"ವೆಂಬ
ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ವಿಂಶೋಽಧ್ಯಾಯಃ

### ಶಿವತೀರ್ಥಪ್ರಶಂಸನಂ—ಭೈರವಬ್ರಹ್ಮಹತ್ಯಾವಿಮೋಕ್ಷವರ್ಣನಂ

ಶ್ರೀ ಸೂತ ಉವಾಚ :—

ಚಕ್ರತೀರ್ಥೇ ನರಃ ಸ್ನಾತ್ವಾ ಶಿವತೀರ್ಥಂ ತತೋ ವ್ರಜೇತ್ ।
ಯತ್ರ ಹಿ ಸ್ನಾನಮಾತ್ರೇಣ ಮಹಾಪಾತಕಕೋಟಯಃ ॥ ೧ ॥
ತತ್ಸಂಸರ್ಗಾಶ್ಚ ನಶ್ಯಂತಿ ತತ್ಕ್ಷಣಾದೇವ ತಾಪಸಾಃ ।
ಅತ್ರ ಸ್ನಾತ್ವಾ ಬ್ರಹ್ಮಹತ್ಯಾಂ ಮುಮುಚೇ ಕಾಲಭೈರವಃ ॥ ೨ ॥

ಋಷಯ ಊಚುಃ :—

ಕಾಲಭೈರವರುದ್ರಸ್ಯ ಬ್ರಹ್ಮಹತ್ಯಾ ಮಹಾಮುನೇ ।
ಕಿಮರ್ಥಮಭವತ್ಸೂತ ತನ್ನೋ ವಕ್ತುಮಿಹಾರ್ಹಸಿ ॥ ೩ ॥

ಶ್ರೀ ಸೂತ ಉವಾಚ :—

ವಕ್ಷ್ಯಾಮಿ ಮುನಯಃ ಸರ್ವೇ ಪುರಾವೃತ್ತಂ ವಿಮುಕ್ತಿದಂ ।
ಯಸ್ಯ ಶ್ರವಣಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ॥ ೪ ॥
ಪ್ರಜಾಪತೇಶ್ಚ ವಿಷ್ಣೋಶ್ಚ ಬಭೂವ ಕಲಹಃ ಪುರಾ ।
ಕಿಂಚಿತ್ಕಾರಣಮುದ್ದಿಶ್ಯ ಸಮಸ್ತಜನಸನ್ನಿಧೌ ॥ ೫ ॥

---

## ಕನ್ನಡದ ಅನುವಾದ

### ಶಿವತೀರ್ಥಪ್ರಶಂಸನ—ಭೈರವಬ್ರಹ್ಮಹತ್ಯಾವಿಮೋಕ್ಷಣವರ್ಣನ

೧-೨. ಶ್ರೀಸೂತನು ಹೇಳುತ್ತಾನೆ:— ಮಾನವನು ಚಕ್ರತೀರ್ಥದಲ್ಲಿ ಮಿಂದಮೇಲೆ ಶಿವತೀರ್ಥಕ್ಕೆ ಹೋಗಬೇಕು. ಈ ಶಿವತೀರ್ಥದಲ್ಲಿ ಸ್ನಾನ ಮಾಡುವುದರಿಂದ ಕೋಟಿ ಮಹಾಪಾತಕಗಳೂ, ಆ ಪಾತಕಿಗಳ ಸಂಪರ್ಕದೋಷಗಳೂ ಕೂಡಲೆ ಪರಿಹಾರವಾಗುವುವು. ಪೂರ್ವದಲ್ಲಿ ಕಾಲಭೈರವನು ಇಲ್ಲಿ ಮಿಂದು ಬ್ರಹ್ಮಹತ್ಯೆಯಿಂದ ಮುಕ್ತನಾದನು.

೩. ಋಷಿಗಳು ಕೇಳುತ್ತಾರೆ:–"ಮಹಾಮುನಿಯೆ! ಕಾಲಭೈರವರುದ್ರನಿಗೆ ಬ್ರಹ್ಮಹತ್ಯೆಯು ಹೇಗೆ ಸಂಭವಿಸಿತು? ಅದನ್ನು ನಮಗೆ ತಿಳಿಯಹೇಳುವವನಾಗು."

೪. ಶ್ರೀಸೂತನು ಹೇಳುತ್ತಾನೆ:— ಎಲೈ ಮುನಿಗಳೆ! ಶ್ರೋತೃಗಳಿಗೆ ಮೋಕ್ಷಪ್ರದವಾದ ಪೂರ್ವವೃತ್ತಾಂತವೊಂದನ್ನು ಹೇಳುವೆನು. ಇದನ್ನು ಕೇಳಿದವನು ಸಕಲಪಾಪವಿಮುಕ್ತನಾಗುವನು.

೫. ಹಿಂದೆ ಬ್ರಹ್ಮವಿಷ್ಣುಗಳಿಗೆ ಸಮಸ್ತ ಜನಗಳ ಮುಂದೆ ಯಾವುದೋ ಒಂದು ಕಾರಣವನ್ನುದ್ದೇಶಿಸಿ ಜಗಳವಾಯಿತು.

ಅಹಮೇವ ಜಗತ್ಕರ್ತಾ ನಾಽನ್ಯಃ ಕರ್ತಾಽಸ್ತಿ ಕಶ್ಚನ ।
ಅಹಂ ಸರ್ವಪ್ರಪಂಚಾನಾಂ ನಿಗ್ರಹಾಽನುಗ್ರಹಪ್ರದಃ ॥ ೬ ॥
ಮತ್ತೋ ನಾಽಸ್ತ್ಯಧಿಕಃ ಕಶ್ಚಿನ್ಮತ್ಸಮೋ ವಾ ಸುರೇಷ್ವಪಿ ।
ಏವಂ ಸ ಮನುತೇ ಬ್ರಹ್ಮಾ ದೇವಾನಾಂ ಸನ್ನಿಧೌ ಪುರಾ ॥ ೭ ॥
ತದಾ ನಾರಾಯಣಃ ಪ್ರಾಹ ಪ್ರಹಸನ್ ದ್ವಿಜಪುಂಗವಾಃ ।
ಕಿಮರ್ಥಮೇವಂ ಬ್ರೂಷೇ ತ್ವಮಹಂಕಾರೇಣ ಸಾಂಪ್ರತಂ ॥ ೮ ॥
ವಾಕ್ಯಮೇವಂ ವಿಧಂ ಭೂಯೋ ವಕ್ತುಂ ನಾಽರ್ಹಸಿ ವೈ ವಿಧೇ ।
ಅಹಮೇವ ಜಗತ್ಕರ್ತಾ ಯಜ್ಞೋ ನಾರಾಯಣೋ ವಿಭುಃ ॥ ೯ ॥
ಮಾಂ ವಿನಾಽಸ್ಯ ಪ್ರಪಂಚಸ್ಯ ಜೀವನಂ ದುರ್ಲಭಂ ಭವೇತ್ ।
ಮತ್ಪ್ರಸಾದಾಜ್ಜಗತ್ಸೃಷ್ಟಂ ತ್ವಯಾ ಸ್ಥಾವರಜಂಗಮಂ ॥ ೧೦ ॥
ವಿವಾದಂ ಕುರ್ವತೋರೇವಂ ಬ್ರಹ್ಮವಿಷ್ಣ್ವೋರ್ಜಯೈಷಿಣೋಃ ।
ದೇವಾನಾಂ ಪುರತಸ್ತತ್ರ ವೇದಾಶ್ಚತ್ವಾರ ಆಗತಾಃ ।
ಪ್ರೋಚುರ್ವಾಕ್ಯಮಿದಂ ತಥ್ಯಂ ಪರಮಾಽರ್ಥಪ್ರಕಾಶಕಂ ॥ ೧೧ ॥

ವೇದಾ ಊಚುಃ:—

ತ್ವಂ ವಿಷ್ಣೋ ನ ಜಗತ್ಕರ್ತಾ ನ ತ್ವಂ ಬ್ರಹ್ಮನ್ಪ್ರಜಾಪತೇ ॥ ೧೨ ॥

---

೬–೭. ಬ್ರಹ್ಮನು, "ನಾನೇ ಜಗತ್ತನ್ನು ಸೃಷ್ಟಿಮಾಡುವವನು; ಬೇರೆ ಜಗತ್ಕರ್ತನಿಲ್ಲ. ಸಕಲಪ್ರಪಂಚಗಳನ್ನು ನಿಗ್ರಹಿಸುವವನೂ, ಅನುಗ್ರಹಿಸುವವನೂ ನಾನೇ; ದೇವತೆಗಳಲ್ಲಿ ನನಗಿಂತ ದೊಡ್ಡವನೂ, ನನಗೆ ಸಮಾನನೂ ಯಾರೂ ಇಲ್ಲ" ಎಂದು ದೇವತೆಗಳ ಮುಂದೆ ತಿಳಿಸಿದನು.

೮. ಆಗ ನಾರಾಯಣನು ನಗುತ್ತ ಹೀಗೆಂದನು: "ಎಲೈ ಬ್ರಹ್ಮನೇ! ಏತಕ್ಕೆ ನೀನು ಹೀಗೆ ಅಹಂಕಾರದಿಂದ ಹೇಳುತ್ತಿರುವೆ?

೯. ಚತುರ್ಮುಖ! ನೀನು ಮರಳಿ ಇಂತಹ ಮಾತನ್ನಾಡಬೇಡ. ಸರ್ವತ್ರವ್ಯಾಪ್ತನಾದ ನಾನೇ ಜಗತ್ತನ್ನು ಸೃಷ್ಟಿಮಾಡುವವನು.

೧೦. ನಾನಿಲ್ಲದಿದ್ದರೆ ಈ ಪ್ರಪಂಚವು ಉಳಿಯುವುದೇ ಕಷ್ಟವು. ನೀನು ನನ್ನ ಅನುಗ್ರಹದಿಂದಲೇ ಸ್ಥಾವರಜಂಗಮಾತ್ಮಕವಾದ ಪ್ರಪಂಚವನ್ನು ಸೃಷ್ಟಿಸಿರುವೆ.''

೧೧. ಪರಸ್ಪರವಾಗಿ ಜಯವನ್ನಪೇಕ್ಷಿಸುವ ಆ ಬ್ರಹ್ಮವಿಷ್ಣುಗಳು ದೇವತೆಗಳ ಮುಂದೆ ಹೀಗೆ ಜಗಳವಾಡುತ್ತಿರಲು ನಾಲ್ಕುವೇದಗಳೂ ಮೈತಳೆದುಬಂದು ಪರಮಾರ್ಥವನ್ನು ಪ್ರಕಾಶಿಸುವ ನಿಜವಾದ ಈ ಮಾತನ್ನು ಹೇಳಿದುವು.

೧೨. ವೇದಗಳು ಹೇಳುತ್ತವೆ:—ಎಲೈ ವಿಷ್ಣುವೆ! ನೀನೂ ಜಗತ್ತನ್ನು ಸೃಷ್ಟಿಸಿದವನಲ್ಲ. ಅಯ್ಯಾ ಬ್ರಹ್ಮ! ನೀನೂ ಸೃಷ್ಟಿಸಿದವನಲ್ಲ.

ಕಿಂ ತ್ವೀಶ್ವರೋ ಜಗತ್ಕರ್ತಾ ಪರಾತ್ಪರತರೋ ವಿಭುಃ ।
ತನ್ಮಾಯಾಶಕ್ತಿಸಂಕ್ಲೃಪ್ತಮಿದಂ ಸ್ಥಾವರಜಂಗಮಂ ॥ ೧೩ ॥
ಸರ್ವದೇವಾಭಿವಂದ್ಯೋ ಹಿ ಸಾಂಬಃ ಸತ್ಯಾದಿಲಕ್ಷಣಃ ।
ಸೃಷ್ಟಾಚ ಪಾಲಕೋ ಹರ್ತಾ ಸ ಏವ ಜಗತಾಂ ಪ್ರಭುಃ ॥ ೧೪ ॥
ಏವಂ ಸಮೀರಿತಂ ವೇದೈಃ ಶ್ರುತ್ವಾ ವಾಕ್ಯಂ ಶುಭಾಕ್ಷರಂ ।
ಬ್ರಹ್ಮಾ ವಿಷ್ಣುಸ್ತದಾ ತತ್ರ ಪ್ರೋಚತುರ್ದ್ವಿಜಪುಂಗವಾಃ ॥ ೧೫ ॥

ಬ್ರಹ್ಮವಿಷ್ಣೂ ಊಚತುಃ:—

ಪಾರ್ವತ್ಯಾಲಿಂಗಿತಃ ಶಂಭುರ್ಮೂರ್ತಿಮಾನ್ಪ್ರಮಥಾಧಿಪಃ ।
ಕಥಂ ಭವೇತ್ಪರಂ ಬ್ರಹ್ಮ ಸರ್ವಸಂಗವಿವರ್ಜಿತಂ ॥ ೧೬ ॥
ತಾಭ್ಯಾಮಿತೀರಿತೇ ತತ್ರ ಪ್ರಣವಃ ಪ್ರಾಹ ತೌ ತದಾ ।
ಅರೂಪೋ ರೂಪಮಾದಾಯ ಮಹತಾ ಧ್ವನಿನಾ ದ್ವಿಜಾಃ ॥ ೧೭ ॥

ಪ್ರಣವ ಉವಾಚ :—

ಅಸೌ ಶಂಭುರ್ಮಹಾದೇವಃ ಪಾರ್ವತ್ಯಾ ಸ್ವಾತಿರಿಕ್ತಯಾ ।
ಸಂಕ್ರೀಡತೇ ಕದಾಚಿನ್ನೋ ಕಿಂತು ಸ್ವಾತ್ಮಸ್ವರೂಪಯಾ ॥ ೧೮ ॥

---

೧೩. ಉತ್ತಮರಿಗಿಂತಲೂ ಉತ್ತಮನೂ, ವ್ಯಾಪ್ತನೂ ಆದ ಮಹೇಶ್ವರನು ಜಗತ್ತನ್ನು ಸೃಷ್ಟಿಸಿದನು. ಅವನ ಮಾಯೆಯಿಂದಲೆ ಸ್ಥಾವರಜಂಗಮಾತ್ಮಕವಾದ ಈ ಜಗತ್ತು ನಿರ್ಮಿತವಾಗಿರುವುದು.

೧೪. ಸಕಲ ದೇವತೆಗಳಿಗೆ ವಂದ್ಯನೂ, ಸತ್ಯಜ್ಞಾನಾದಿ ಲಕ್ಷಣವುಳ್ಳವನೂ, ಪಾರ್ವತೀಸಹಿತನೂ, ಜಗತ್ತುಗಳಿಗೆ ಒಡೆಯನೂ ಆದ ಆ ಮಹಾದೇವನೇ ಪ್ರಪಂಚದ ಸೃಷ್ಟಿ, ಪಾಲನೆ, ಸಂಹಾರಗಳಿಗೆ ಕಾರಣನು.''

೧೫. ಎಲೈ ಬ್ರಾಹ್ಮಣರೆ! ಹೀಗೆ ವೇದಗಳುಸುರಿದ ಶುಭಾಕ್ಷರವುಳ್ಳ ವಾಕ್ಯವನ್ನು ಕೇಳಿ ಬ್ರಹ್ಮವಿಷ್ಣುಗಳು ಇಂತೆಂದರು.

೧೬. ಬ್ರಹ್ಮವಿಷ್ಣುಗಳು ಹೇಳುತ್ತಾರೆ:—''ಪಾರ್ವತಿಯಿಂದ ಆಲಿಂಗಿತ ದೇಹವುಳ್ಳವನೂ, ಪ್ರಮಥಗಣಗಳಿಗಧಿಪತಿಯೂ ಆದ ಮಹೇಶ್ವರನು ಸಕಲ ಸಂಗವನ್ನು ಹೇಗೆ ತ್ಯಜಿಸಿದ ಪರಬ್ರಹ್ಮನಾದಾನು.''

೧೭. ಎಲೈ ದ್ವಿಜರೆ! ಅವರಿಬ್ಬರು ಹೀಗೆನ್ನಲು ರೂಪವಿಲ್ಲದ ಓಂಕಾರವು ರೂಪವನ್ನು ತಾಳಿಬಂದು ದೊಡ್ಡ ಧ್ವನಿಯಿಂದ ಇಂತೆಂದಿತು.

೧೮. ಪ್ರಣವವು ಹೇಳುತ್ತದೆ:—''ಮಹಾದೇವನು ತನಗಿಂತ ಭಿನ್ನಳಾದ ಪಾರ್ವತಿಯೊಡನೆ ವಿಹಾರಮಾಡುತ್ತಾನೆ. ತನ್ನ ಸ್ವರೂಪದಿಂದ ಒಂದು ವೇಳೆಯೂ ಹೀಗೆ ವಿಹರಿಸುವುದಿಲ್ಲ.

ಅಸೌ ಶಂಭುರನೀಶಾನಃ ಸ್ವಪ್ರಕಾಶೋ ನಿರಂಜನಃ ।
ವಿಶ್ವಾಽಧಿಕೋ ಮಹಾದೇವೋ ವಿಶ್ವಾಽಧಿಕ ಇತಿ ಶ್ರುತಃ ॥ ೧೯ ॥
ಸರ್ವಾತ್ಮಾ ಸರ್ವಕರ್ತಾಽಸೌ ಸ್ವತಂತ್ರಃ ಸರ್ವಭಾವನಃ ।
ಬ್ರಹ್ಮನ್ನಯಂ ಸೃಷ್ಟಿಕಾಲೇ ತ್ವಾಂ ನಿಯುಂಕ್ತೇ ರಜೋಗುಣೈಃ ॥ ೨೦ ॥
ಸತ್ವೇನ ರಕ್ಷಣೇ ಶಂಭುಸ್ತ್ವಾಂ ಪ್ರೇಷಯತಿ ಕೇಶವ ।
ತಮಸಾ ಕಾಲರುದ್ರಾಖ್ಯಂ ಸಂಪ್ರೇರಯತಿ ಸಂಹೃತೌ ॥ ೨೧ ॥
ಅತಃ ಸ್ವತಂತ್ರತಾ ವಿಷ್ಣೋರ್ಯುವಯೋರ್ನ ಕದಾಚನ ।
ನಾಽಪಿ ಪ್ರಜಾಪತೇರಸ್ತಿ ಕಿಂತು ಶಂಭೋಃ ಸ್ವತಂತ್ರತಾ ॥ ೨೨ ॥
ಬ್ರಹ್ಮನ್ವಿಷ್ಣೋ ಯುವಾಭ್ಯಾಂತು ಕಿಮರ್ಥಂ ನ ಮಹೇಶ್ವರಃ ।
ಜ್ಞಾಯತೇ ಸರ್ವಲೋಕಾನಾಂ ಕರ್ತಾ ವಿಶ್ವಾಽಧಿಕಸ್ತಥಾ ॥ ೨೩ ॥
ಸಾಽಪಿ ಶಕ್ತಿರುಮಾದೇವೀ ನ ಪೃಥಕ್ಛಂಕರಾತ್ಸದಾ ।
ಶಂಭೋರಾನಂದಭೂತಾ ಸಾ ದೇವೀ ನಾಗಂತುಕೀ ಸ್ಮೃತಾ ॥ ೨೪ ॥
ಅತೋ ವಿಶ್ವಾಽಧಿಕೋ ರುದ್ರಃ ಸ್ವತಂತ್ರೋ ನಿರ್ವಿಕಲ್ಪಕಃ ।
ಸರ್ವದೇವೈರಯಂ ವಂದ್ಯೋ ಯುವಾಭ್ಯಾಮಪಿ ಶಂಕರಃ ॥ ೨೫ ॥

---

೧೯. ಈ ಶಿವನು ತನಗೆ ಸ್ವಾಮಿಯಿಲ್ಲದವನೂ, ಸ್ವಪ್ರಕಾಶನೂ, ದೋಷರಹಿತನೂ, ಸಮಸ್ತಪ್ರಪಂಚಕ್ಕಿಂತಲೂ ಉತ್ತಮನೂ ಆಗಿ ವಿಶ್ವಾಧಿಕನೆಂದು ಪ್ರಸಿದ್ಧನಾಗಿರುವನು.

೨೦. ಇವನು ಸರ್ವಾಂತರ್ಯಾಮಿಯೂ, ಸರ್ವಕರ್ತನೂ, ಸ್ವತಂತ್ರನೂ, ಸಕಲವನ್ನು ಸೃಷ್ಟಿಸುವವನೂ ಆಗಿ ಬ್ರಹ್ಮನಾದ ನಿನ್ನನ್ನು ಸೃಷ್ಟಿಕಾಲದಲ್ಲಿ ರಜೋಗುಣದಿಂದ ನೇಮಿಸುತ್ತಾನೆ.

೨೧–೨೨. ನಾರಾಯಣನಾದ ನಿನ್ನನ್ನು ಜಗತ್ತನ್ನು ರಕ್ಷಿಸಲು ಸತ್ವಗುಣದಿಂದ ಪ್ರೇರಿಸುತ್ತಾನೆ. ಸಂಹಾರದಲ್ಲಿ ಕಾಲರುದ್ರನನ್ನು ತಮೋಗುಣದಿಂದ ಪ್ರೇರಿಸುತ್ತಾನೆ. ನಾರಾಯಣ! ಆದುದರಿಂದ ನಿನಗೂ, ಕಾಲರುದ್ರನಿಗೂ, ಬ್ರಹ್ಮನಿಗೂ ಸ್ವಾತಂತ್ರ್ಯವಿಲ್ಲ. ಶಂಕರನೊಬ್ಬನೆ ಸ್ವತಂತ್ರನು.

೨೩. ಎಲೈ ಬ್ರಹ್ಮನೆ! ಓ ನಾರಾಯಣನೆ! ನೀವಿಬ್ಬರೂ ಸಕಲಲೋಕಕರ್ತನೂ, ವಿಶ್ವಾಧಿಕನೂ ಆದ ಮಹೇಶ್ವರನನ್ನು ಏಕೆ ತಿಳಿಯುವುದಿಲ್ಲ.

೨೪. ಶಕ್ತಿರೂಪಳಾದ ಆ ಉಮಾದೇವಿಯೂ ಶಂಕರನಿಗಿಂತ ಬೇರೆಯವಳಲ್ಲ. ಶಿವನ ಆನಂದರೂಪಳಾದ ಆ ದೇವಿಯು ಆಕಸ್ಮಿಕವಾಗಿ ಬಂದವಳಲ್ಲ.

೨೫. ಆದುದರಿಂದ ಸಕಲ ವಸ್ತುಗಳಿಗಿಂತ ಉತ್ತಮನೂ, ಸ್ವತಂತ್ರನೂ, ನಿರ್ವಿಕಾರನೂ ಆದ ಶಿವನು ಸಮಸ್ತ ದೇವತೆಗಳಿಗೇ ಅಲ್ಲದೆ, ನಿಮ್ಮಿಬ್ಬರಿಗೂ ವಂದ್ಯನು.

ಕರ್ತಾ ನಾಽಸ್ಯಾಽಸ್ತಿ ರುದ್ರಸ್ಯ ನಾಽಧಿಕೋಽಸ್ಮಾಚ್ಚ ವಿದ್ಯತೇ ।
ನ ತತ್ಸಮೋಽಪಿ ಲೋಕೇಷು ವಿದ್ಯತೇ ಶತಶಸ್ತ್ವಥಾ ॥ ೨೬ ॥
ಅತೋ ಮೋಹಂ ನ ಕುರುತಂ ಬ್ರಹ್ಮವಿಷ್ಣೂ ಯುವಾಂ ವೃಥಾ ।
ಇತ್ಯುಕ್ತಂ ಪ್ರಣವೇನಾಽಥ ಶ್ರುತ್ವಾ ಬ್ರಹ್ಮಾ ಚ ಕೇಶವಃ ॥ ೨೭ ॥
ಮಾಯಯಾ ಮೋಹಿತೌ ಶಂಭೋರ್ನೈವಾಽಜ್ಞಾನಮುಮುಂಚತಾಂ ।
ಏತಸ್ಮಿನ್ನಂತರೇ ಬ್ರಹ್ಮಾ ಪ್ರದದರ್ಶ ಮಹಾದ್ಭುತಂ ॥ ೨೮ ॥
ವ್ಯಾಪ್ನುವದ್ಗಗನಂ ಸರ್ವಮನಂತಾದಿತ್ಯಸನ್ನಿಭಂ ।
ತೇಜೋ ಮಂಡಲಮಾಕಾಶಮಧ್ಯಗಂ ವಿಶ್ವತೋಮುಖಂ ॥ ೨೯ ॥
ತನ್ನಿರೂಪಯಿತುಂ ಬ್ರಹ್ಮಾ ಸಸರ್ಜೋರ್ಧ್ವಗತಂ ಮುಖಂ ।
ತಪೋಬಲವಿಸೃಷ್ಟೇನ ಪಂಚಮೇನ ಮುಖೇನ ಸಃ ॥ ೩೦ ॥
ನಿರೂಪಯಾಮಾಸ ವಿಭುಸ್ತತ್ತೇಜೋಮಂಡಲಂ ಮುಹುಃ ।
ತತ್ಪ್ರಜಜ್ವಾಲ ಕೋಪೇನ ಮುಖಂ ತೇಜೋ ವಿಲೋಕನಾತ್ ॥ ೩೧ ॥
ಅನಂತಾದಿತ್ಯಸಂಕಾಶಂ ಜ್ವಲತ್ತತ್ಪಂಚಮಂ ಶಿರಃ ।
ದಿಧಕ್ಷುಃ ಪ್ರಲಯೇ ಲೋಕಾನ್ಬಡಬಾಗ್ನಿರಿವಾಬಭೌ ॥ ೩೨ ॥

---

೨೬. ರುದ್ರನನ್ನು ಸೃಷ್ಟಿಸಿದವನೂ, ಅವನಿಗಿಂತ ಅಧಿಕನೂ, ಅವನಿಗೆ ಸಮಾನನೂ ಪ್ರಪಂಚದಲ್ಲಿ ಯಾರೂ ಇಲ್ಲ.

೨೭–೨೯. ಆದುದರಿಂದ ಎಲೈ ಬ್ರಹ್ಮವಿಷ್ಣುಗಳೆ! ನೀವು ವ್ಯರ್ಥವಾಗಿ ಮೋಹಗೊಳ್ಳಬೇಡಿರಿ " ಎಂದು ಪ್ರಣವವು ಹೇಳಲು ಬ್ರಹ್ಮವಿಷ್ಣುಗಳು ಶಂಭುವಿನ ಮಾಯೆಯಿಂದ ಮೂಢರಾಗಿ ಅಜ್ಞಾನಮುಕ್ತರಾಗಲಿಲ್ಲ. ಈ ಮಧ್ಯದಲ್ಲಿ ಬ್ರಹ್ಮನು ಅತ್ಯಾಶ್ಚರ್ಯಕರವೂ, ಸಮಸ್ತಾಕಾಶವನ್ನು ವ್ಯಾಪಿಸುತ್ತಿರುವುದೂ, ಅಪರಿಮಿತರಾದ ಸೂರ್ಯರಿಗೆ ಸಮಾನವೂ, ಆಕಾಶಮಧ್ಯದಲ್ಲಿರುವುದೂ, ಸರ್ವತೋಮುಖವೂ ಆದ ತೇಜಸ್ಸಿನ ಸಮೂಹವನ್ನು ನೋಡಿದನು.

೩೦–೩೧. ಅವನು ಅದನ್ನು ನೋಡುವುದಕ್ಕೆ ಮೇಲ್ಮುಖವಾದ ಮುಖವನ್ನು ಸೃಷ್ಟಿಸಿದನು. ತಪಸ್ಸಿನ ಸಾಮರ್ಥ್ಯದಿಂದ ಸೃಷ್ಟಿಸಿದ ಆ ಐದನೆಯ ಮುಖದಿಂದ ಅವನು ಆ ತೇಜಸ್ಸಿನ ಸಮೂಹವನ್ನು ಕಂಡನು. ಅದನ್ನು ನೋಡಿದುದರಿಂದ ಆ ಮುಖವು ಕೋಪದಿಂದ ಉರಿಯಿತು.

೩೨. ಅನಂತಸೂರ್ಯರಿಗೆ ಸಮಾನವಾಗಿ ಜ್ವಲಿಸುತ್ತಿರುವ ಆ ಐದನೆಯ ತಲೆಯು ಪ್ರಲಯಕಾಲದಲ್ಲಿ ಲೋಕಗಳನ್ನು ಸುಡಲಿಚ್ಛಿಸುವ ಬಡವಾಗ್ನಿಯಂತೆ ಪ್ರಕಾಶಿಸಿತು.

ವ್ಯದೃಶ್ಯತ ಚ ತತ್ತೇಜಃ ಪುರುಷೋ ನೀಲಲೋಹಿತಃ ।
ದೃಷ್ಟ್ವಾ ಸ್ರಷ್ಟಾ ತದಾ ಬ್ರಹ್ಮಾ ಬಭಾಷೇ ಪರಮೇಶ್ವರಂ ॥ ೩೩ ॥
ವೇದಾಽಹಂ ತ್ವಾಂ ಮಹಾದೇವ ಲಲಾಟಾನ್ಮೇ ಪುರಾ ಭವಾನ್ ।
ವಿನಿರ್ಗತೋಽಸಿ ಶಂಭೋ ತ್ವಂ ರುದ್ರನಾಮಾ ಮಮಾತ್ಮಜಃ ॥ ೩೪ ॥
ಇತಿ ಗರ್ವೇಣ ಸಂಯುಕ್ತಂ ವಚಃ ಶ್ರುತ್ವಾ ಮಹೇಶ್ವರಃ ।
ಕಾಲಭೈರವನಾಮಾನಂ ಪುರುಷಂ ಪ್ರಾಹಿಣೋತ್ತದಾ ॥ ೩೫ ॥
ಅಯುಧ್ಯತ ಚಿರಂ ಕಾಲಂ ಬ್ರಹ್ಮಣಾ ಕಾಲಭೈರವಃ ।
ಮಹಾದೇವಾಂಶಸಂಭೂತಃ ಶೂಲಟಂಕಗದಾಧರಃ ॥ ೩೬ ॥
ಯುಧ್ವಾ ತು ಸುಚಿರಂ ಕಾಲಂ ಬ್ರಹ್ಮಣಾ ಕಾಲಭೈರವಃ ।
ವದನಂ ಬ್ರಹ್ಮಣಃ ಶುಭ್ರಂ ವ್ಯಲೋಕಯತ ಪಂಚಮಂ ॥ ೩೭ ॥
ವಿಲೋಕ್ಯೋರ್ಧ್ವಗತಂ ವಕ್ತ್ರಂ ಪಂಚಮಂ ಭಾರತೀಪತೇಃ ।
ಗರ್ವೇಣ ಮಹತಾ ಯುಕ್ತಂ ಪ್ರಜಜ್ವಾಲಾಽತಿಕೋಪಿತಃ ॥ ೩೮ ॥
ತತಸ್ತತ್ಪಂಚಮಂ ವಕ್ತ್ರಂ ಭೈರವಃ ಪ್ರಾಽಚ್ಛಿನದ್ರುಷಾ ।
ತತೋ ಮಮಾರ ಬ್ರಹ್ಮಾಽಸೌ ಕಾಲಭೈರವಹಿಂಸಿತಃ ॥ ೩೯ ॥

---

೩೩. ಆ ತೇಜಸ್ಸು ಪರಮೇಶ್ವರನಾಗಿ ಕಾಣಿಸಿಕೊಳ್ಳಲು ಬ್ರಹ್ಮನು ಆ ಪರಮೇಶ್ವರನನ್ನು ನೋಡಿ ಹೀಗೆಂದನು.

೩೪. "ಮಹಾದೇವ! ನಾನು ನಿನ್ನನ್ನು ಅರಿತಿರುವೆನು. ನೀನು ಹಿಂದೆ ನನ್ನ ಹಣೆಯಿಂದ ಹುಟ್ಟಿದ ರುದ್ರನೆಂಬ ನನ್ನ ಮಗನು."

೩೫. ಮಹೇಶ್ವರನು ಬ್ರಹ್ಮನ ಈ ಗರ್ವದ ಮಾತನ್ನು ಕೇಳಿ ಕಾಲಭೈರವನೆಂಬುವನನ್ನು ಕಳುಹಿಸಿದನು.

೩೬. ಮಹಾದೇವನ ಅಂಶದಿಂದ ಹುಟ್ಟಿದ ಕಾಲಭೈರವನು ಶೂಲ, ಟಂಕ, ಗದೆಗಳನ್ನು ಧರಿಸಿದವನಾಗಿ ಬಹಳಕಾಲ ಬ್ರಹ್ಮನೊಡನೆ ಯುದ್ಧ ಮಾಡಿದನು.

೩೭. ಹೀಗೆ ಬಹಳಕಾಲ ಕಾಲಭೈರವನು ಬ್ರಹ್ಮನೊಡನೆ ಕಾಳಗವಾಡಿ ಶುಭ್ರವಾದ ಅವನ ಐದನೆಯ ಮುಖವನ್ನು ನೋಡಿದನು.

೩೮. ಆ ಕಾಲಭೈರವನು ಬ್ರಹ್ಮನ ಅತಿಯಾಗಿ ಗರ್ವಗೊಂಡ ಮೇಲ್ಮುಖವಾದ ಐದನೆಯ ಮುಖವನ್ನು ನೋಡಿ ಮಹಾಕೋಪದಿಂದ ಉರಿದನು.

೩೯. ತರುವಾಯ ಅವನು ಕೋಪದಿಂದ ಆ ಬ್ರಹ್ಮನ ಐದನೆಯ ಮುಖವನ್ನು ಕತ್ತರಿಸಲು ಬ್ರಹ್ಮನು ಅವನ ಹಿಂಸೆಗೊಳಗಾಗಿ ಮಡಿದನು.

ಈಶ್ವರಸ್ಯ ಪ್ರಸಾದೇನ ಪ್ರಪೇದೇ ಜೀವಿತಂ ಪುನಃ ।
ತತೋ ವಿಲೋಕಯಾಮಾಸ ಶಂಕರಂ ಶಶಿಭೂಷಣಂ ॥ ೪೦ ॥
ವಾಸುಕ್ಯಾದ್ಯಷ್ಟಭೋಗೀಂದ್ರವಿಭೂಷಣವಿಭೂಷಿತಂ ।
ದೃಷ್ಟ್ವಾ ವೇಧಾ ಮಹಾದೇವಂ ಪಾರ್ವತ್ಯಾ ಸಹ ಶಂಕರಂ ॥ ೪೧ ॥
ಲೇಭೇ ಮಾಹೇಶ್ವರಂ ಜ್ಞಾನಂ ಮಹಾದೇವಪ್ರಸಾದತಃ ।
ತತಸ್ತುಷ್ಟಾವ ಗಿರಿಶಂ ವರೇಣ್ಯಂ ವರದಂ ಶಿವಂ ॥ ೪೨ ॥

ಬ್ರಹ್ಮೋವಾಚ :—

ಮಹ್ಯಂ ಪ್ರಸೀದ ಗಿರಿಶ ಶಶಾಂಕಕೃತಶೇಖರ ।
ಯಸ್ಮಯಾಽಪಕೃತಂ ಶಂಭೋ ತತ್ಕ್ಷಮಸ್ವ ದಯಾನಿಧೇ ॥ ೪೩ ॥
ಕ್ಷಮಸ್ವ ಮಮ ಗರ್ವಂ ತ್ವಂ ಶಂಕರೇತಿ ಪುನಃ ಪುನಃ ।
ನಮಶ್ಚಕಾರ ಸೋಮಂ ತಂ ಸೋಮಾರ್ಧಕೃತಶೇಖರಂ ॥ ೪೪ ॥
ಅಥ ದೇವಃ ಪ್ರಸನ್ನೋಽಸ್ಮೈ ಬ್ರಹ್ಮಣೇ ಸ್ವಾಂಶಜಾಯ ತು ।
ಮಾ ಭೈಷೀರಿತ್ಯಬ್ರವೀಚ್ಛಂಭುರ್ಭೈರವಂ ಚಾಽಭ್ಯಭಾಷತ ॥ ೪೫ ॥

ಈಶ್ವರ ಉವಾಚ :—

ಏಷ ಸರ್ವಸ್ಯ ಜಗತಃ ಪೂಜ್ಯೋ ಬ್ರಹ್ಮಾ ಸನಾತನಃ ।
ಹತಸ್ಯಾಽಸ್ಯ ವಿರಿಂಚಸ್ಯ ಧಾರಯ ತ್ವಂ ಶಿರೋಽಧುನಾ ॥ ೪೬ ॥

---

೪೦. ಈಶ್ವರನ ಅನುಗ್ರಹದಿಂದ ಅವನು ಮರಳಿ ಬದುಕಿದನಲ್ಲದೆ ಚಂದ್ರಮೌಳಿಯಾದ ಶಂಕರನನ್ನೂ ಕಂಡನು.

೪೧–೪೨. ವಾಸುಕಿಯೆ ಮೊದಲಾದ ಅಷ್ಟನಾಗಗಳಿಂದ ಭೂಷಿತನಾಗಿ ಪಾರ್ವತಿಯೊಡನೆ ವಿರಾಜಿಸುತ್ತಿರುವ ಆ ಮಹಾದೇವನನ್ನು ಕಂಡು ಅವನ ಅನುಗ್ರಹದಿಂದ ಮಾಹೇಶ್ವರಜ್ಞಾನವನ್ನು ಪಡೆದು ಶ್ರೇಷ್ಠನೂ, ವರದಾತನೂ ಆದ ಶಂಕರನನ್ನು ಆ ಬ್ರಹ್ಮನಿಂತು ಸ್ತುತಿಸಿದನು.

೪೩. ಬ್ರಹ್ಮನು ಸ್ತುತಿಸುತ್ತಾನೆ:—"ಎಲೈ ಚಂದ್ರಮೌಳೀಶ್ವರ! ನನ್ನಲ್ಲಿ ಪ್ರಸನ್ನನಾಗು. ದಯಾನಿಧಿಯೆ! ನನ್ನ ಅಪರಾಧವನ್ನು ಮನ್ನಿಸು.

೪೪. ನೀನು ನನ್ನ ಅಹಂಕಾರವನ್ನು ಕ್ಷಮಿಸು" ಎಂದು ಬಾರಿಬಾರಿಗೂ ಚಂದ್ರಶೇಖರನಾದ ಆ ಶಿವನನ್ನು ನಮಸ್ಕರಿಸಿದನು.

೪೫. ತರುವಾಯ ಶಂಕರನು ತನ್ನ ಅಂಶವಾದ ಆ ಬ್ರಹ್ಮನಲ್ಲಿ ಪ್ರಸನ್ನನಾಗಿ ಹೆದರಬೇಡವೆಂದು ನುಡಿದು ಭೈರವನನ್ನು ಕುರಿತು ಇಂತೆಂದನು.

೪೬. ಈಶ್ವರನು ಹೇಳುತ್ತಾನೆ:— "ಅನಾದಿಯಾದ ಈ ಬ್ರಹ್ಮನು ಸಕಲ ಜಗತ್ತಿಗೂ ಪೂಜ್ಯನು. ಈಗ ನೀನು ವಧಿಸಿದ ಈ ಬ್ರಹ್ಮನ ತಲೆಯನ್ನು ಧರಿಸು.

ಬ್ರಹ್ಮಹತ್ಯಾ ವಿಶುದ್ಧ್ಯರ್ಥಂ ಲೋಕಸಂಗ್ರಹಕಾಮ್ಯಯಾ ।
ಭಿಕ್ಷಾಮಟ ಕಪಾಲೇನ ಭೈರವ ತ್ವಂ ಮಮಾಜ್ಞಯಾ ॥ ೪೭ ॥
ಉಕ್ತ್ವೈವಂ ಶಂಕರೋ ವಿಪ್ರಾಸ್ತತ್ರೈವಾಂತರಧೀಯತ ।
ನೀಲಕಂಠೋ ಮಹಾದೇವೋ ಗಿರಿಜಾಽರ್ಧತನುಸ್ತತಃ ॥ ೪೮ ॥
ಭೈರವಂ ಗ್ರಾಹಯಾಮಾಸ ವದನಂ ವೇಧಸೋ ದ್ವಿಜಾಃ ।
ಚರಸ್ವ ಪಾಪಶುದ್ಧ್ಯರ್ಥಂ ಲೋಕಸಂಗ್ರಹಣಾಯ ವೈ ॥ ೪೯ ॥
ಕಪಾಲಧಾರೀ ಹಸ್ತೇನ ಭಿಕ್ಷಾಂ ಗೃಹ್ಣಾತು ಭೈರವಃ ।
ಇತೀರಯಿತ್ವಾ ಗಿರಿಶಃ ಕನ್ಯಾಂ ಕಾಂಚಿದ್ಭಯಂಕರೀಂ ॥ ೫೦ ॥
ಬ್ರಹ್ಮಹತ್ಯಾಽಭಿಧಾಂ ಕ್ರೂರಾಂ ಬಡಬಾನಲಸನ್ನಿಭಾಂ ।
ತಾಂ ಪ್ರೇರಯಿತ್ವಾ ಗಿರಿಶೋ ಭೈರವಂ ಪುನರಬ್ರವೀತ್ ॥ ೫೧ ॥

ಈಶ್ವರ ಉವಾಚ :—

ಭೈರವೈತದ್ವ್ರತಂ ತ್ವಬ್ದಂ ಬ್ರಹ್ಮಹತ್ಯಾವಿಶುದ್ಧಯೇ ।
ಚರ ತ್ವಂ ಸರ್ವತೀರ್ಥೇಷು ಸ್ನಾಹಿ ಶುದ್ಧ್ಯರ್ಥಮಾತ್ಮನಃ ॥ ೫೨ ॥
ತತೋ ವಾರಾಣಸೀಂ ಗಚ್ಛ ಬ್ರಹ್ಮಹತ್ಯಾಪ್ರಶಾಂತಯೇ ।
ವಾರಾಣಸೀಪ್ರವೇಶೇನ ಬ್ರಹ್ಮಹತ್ಯಾ ತವಾಽಧಮಾ ॥ ೫೩ ॥
ಪಾದಶೇಷಾ ವಿನಷ್ಟಾ ಸ್ಯಾಚ್ಚತುರ್ಥಾಂಶೋ ನ ನಶ್ಯತಿ ।
ತಸ್ಯ ನಾಶಂ ಪ್ರವಕ್ಷ್ಯಾಮಿ ತವ ಭೈರವ ತಚ್ಛೃಣು ॥ ೫೪ ॥

---

೪೭. ಭೈರವ! ನೀನು ನನ್ನ ಅಪ್ಪಣೆಯಿಂದ ಜನರನ್ನು ಸಮಾಧಾನಗೊಳಿಸಲೋಸುಗ ಬ್ರಹ್ಮಹತ್ಯೆಯ ಶುದ್ಧಿಗಾಗಿ ಕಪಾಲದಿಂದ ಭಿಕ್ಷಾಟನೆಮಾಡು."

೪೮. ಗಿರಿಜಾಸಹಿತನಾದ ಮಹಾದೇವನು ಹೀಗೆ ಹೇಳಿ ಅಲ್ಲಿಯೇ ಮಾಯವಾದನು. .

೪೯–೫೧. ಎಲೈ ದ್ವಿಜರೆ! ಅಲ್ಲದೆ ಶಂಕರನು ಲೋಕಸಂಗ್ರಹಕ್ಕಾಗಿಯೂ, ಪಾಪಪರಿಹಾರಕ್ಕಾಗಿಯೂ ಕಪಾಲಧಾರಿಯಾಗಿ ಬಿಕ್ಷಾಟನೆ ಮಾಡೆಂದು ಭೈರವನಿಗೆ ಬ್ರಹ್ಮನ ತಲೆಯನ್ನು ಕೊಟ್ಟು ಬ್ರಹ್ಮಹತ್ಯೆಯೆಂಬ ಬಡವಾಗ್ನಿಸಮಾನಳೂ, ಕ್ರೂರಳೂ ಆದ ಒಬ್ಬ ಕನ್ಯೆಯನ್ನು ಭೈರವನೆಡೆಗೆ ಕಳುಹಿಸಿ ಅವನನ್ನು ಕುರಿತು ಮರಳಿ ಇಂತೆಂದನು.

೫೨–೫೪. ಈಶ್ವರನು ಹೇಳುತ್ತಾನೆ:—" ಭೈರವ! ನೀನು ಒಂದು ವರ್ಷ ಕಾಲ ಈ ಬ್ರಹ್ಮಹತ್ಯೆಯ ಶುದ್ಧಿಗಾಗಿ ಈ ವ್ರತವನ್ನಾಚರಿಸಬೇಕು. ಸಕಲ ತೀರ್ಥಗಳಲ್ಲಿಯೂ ಸಂಚರಿಸಿ ಸ್ನಾನಮಾಡು. ಅನಂತರ ಈ ಬ್ರಹ್ಮಹತ್ಯೆಯ ಶಾಂತಿಗಾಗಿ ಕಾಶಿಗೆ ತೆರಳು. ಕಾಶಿಯನ್ನು ನೀನು ಪ್ರವೇಶಿಸಿದಕೂಡಲೆ ನಿನ್ನನ್ನಂಟಿರುವ ಈ ನೀಚ ಬ್ರಹ್ಮಹತ್ಯೆಯು ನಾಲ್ಕನೇ ಒಂದಂಶದ ಪರಿಹಾರೋಪಾಯವನ್ನು ನಿನಗೆ ಹೇಳುತ್ತೇನೆ ಕೇಳು.

ದಕ್ಷಿಣಾಂಭೋನಿಧೇಸ್ತೀರೇ ಗಂಧಮಾದನಪರ್ವತೇ ।
ಸರ್ವಪ್ರಾಣ್ಯುಪಕಾರಾಯ ಕೃತಂ ತೀರ್ಥಂ ಮಯಾ ಶುಭಂ ॥ ೫೫ ॥
ಶಿವಸಂಜ್ಞಂ ಮಹಾಪುಣ್ಯಂ ತತ್ರ ಯಾಹಿ ತ್ವಮಾದರಾತ್ ।
ತತ್ಪ್ರವೇಶನಮಾತ್ರೇಣ ಬ್ರಹ್ಮಹತ್ಯಾ ತವಾಽಶುಭಾ ॥ ೫೬ ॥
ಶಿವತೀರ್ಥಸ್ಯ ಮಾಹಾತ್ಮ್ಯಾನ್ನಿಃಶೇಷಂ ನಶ್ಯತಿ ಧ್ರುವಂ ।
ಉಕ್ತ್ವೈವಂ ಭೈರವಂ ರುದ್ರಃ ಕೈಲಾಸಂ ಪ್ರಯಯೌ ಕ್ಷಣಾತ್ ॥ ೫೭ ॥
ತತಃ ಕಪಾಲಪಾಣಿಸ್ತು ಭೈರವಃ ಶಿವಚೋದಿತಃ ।
ದೇವದಾನವಯಕ್ಷಾದಿಲೋಕೇಷು ವಿಚಚಾರ ಸಃ ॥ ೫೮ ॥
ತಂ ಯಾಂತಮನುಯಾತಿಸ್ಮ ಬ್ರಹ್ಮಹತ್ಯಾಽತಿಭೀಷಣಾ ।
ಭೈರವಃ ಸರ್ವತೀರ್ಥಾನಿ ಪುಣ್ಯಾನ್ಯಾಯತನಾನಿ ಚ ॥ ೫೯ ॥
ಚರಿತ್ವಾ ಲೀಲಯಾ ದೇವಸ್ತತೋ ವಾರಾಣಸೀಂ ಯಯೌ ।
ವಾರಾಣಸೀಂ ಪ್ರವಿಷ್ಟೇ ತು ಭೈರವೇ ಶಂಕರಾಂಶಜೇ ॥ ೬೦ ॥
ಚತುರ್ಥಾಂಶಂ ವಿನಾ ನಷ್ಟಾ ಬ್ರಹ್ಮಹತ್ಯಾಽತಿಕುತ್ಸಿತಾ ।
ಚತುರ್ಥಾಂಶೇನ ದುದ್ರಾವ ಭೈರವಂ ಶಂಕರಾಂಶಜಂ ॥ ೬೧ ॥

---

೫೫—೫೭. ನಾನು ಸಕಲ ಪ್ರಾಣಿಗಳ ಉಪಕಾರಕ್ಕಾಗಿ ದಕ್ಷಿಣಸಮುದ್ರದ ದಡದಲ್ಲಿರುವ ಗಂಧಮಾದನಪರ್ವತದಲ್ಲಿ ಶಿವ ಎಂಬ ತೀರ್ಥವನ್ನು ನಿರ್ಮಿಸಿರುವೆನು. ನೀನು ಅಲ್ಲಿ ಆದರದಿಂದ ಸ್ನಾನಮಾಡು. ಆ ತೀರ್ಥವನ್ನು ನೀನು ಪ್ರವೇಶಿಸಿದಕೂಡಲೆ ನಿನ್ನ ಅಮಂಗಳಕರವಾದ ಈ ಬ್ರಹ್ಮಹತ್ಯೆಯು ಆ ತೀರ್ಥದ ಮಾಹಾತ್ಮ್ಯೆಯಿಂದ ಸಂಪೂರ್ಣವಾಗಿ ಪರಿಹಾರವಾಗುವುದು" ಎಂದು ಹೇಳಿ ರುದ್ರನು ಕೂಡಲೆ ಕೈಲಾಸಕ್ಕೆ ತೆರಳಿದನು.

೫೮. ಬಳಿಕ ಆ ಭೈರವನು ಶಿವನ ಮಾತಿನಿಂದ ಕಪಾಲಧಾರಿಯಾಗಿ ದೇವತೆಗಳು, ದಾನವರು, ಯಕ್ಷರು ಇವರೆ ಮೊದಲಾದವರ ಲೋಕಗಳಲ್ಲಿ ಸಂಚರಿಸಿದನು.

೫೯—೬೧. ಹಾಗೆ ಸಂಚರಿಸುತ್ತಿರುವ ಅವನನ್ನು ಅತಿ ಭಯಂಕರವಾದ ಬ್ರಹ್ಮಹತ್ಯೆಯೂ ಹಿಂಬಾಲಿಸಿತು. ಹೀಗೆ ಭೈರವನು ಸಕಲ ತೀರ್ಥಗಳಲ್ಲಿಯೂ, ಪುಣ್ಯಕರವಾದ ದೇವಾಲಯಗಳಲ್ಲಿಯೂ ಸಂಚರಿಸಿ ಲೀಲೆಯಿಂದ ಕಾಶಿಗೆ ತೆರಳಿದನು. ಶಂಕರಾಂಶದಿಂದ ಜನಿಸಿದ ಅವನು ಕಾಶಿಯನ್ನು ಪ್ರವೇಶಿಸಿದ ಕೂಡಲೆ ನಾಲ್ಕನೆ ಒಂದಂಶವನ್ನುಳಿದು ಅತಿ ನಿಂದ್ಯವಾದ ಆ ಬ್ರಹ್ಮಹತ್ಯೆಯ ಮೂರುಭಾಗಗಳು ಪರಿಹಾರವಾದುವು. ನಾಲ್ಕನೆಯ ಅಂಶವು ಮಾತ್ರ ಆ ಭೈರವನನ್ನು ಹಿಂಬಾಲಿಸಿತು.

ತತಃ ಸ ಭೈರವೋ ದೇವಃ ಶೂಲಪಾಣಿಃ ಕಪಾಲಧೃಕ್ ।
ಶಿವಾಜ್ಞಯಾ ಯಯೌ ಪಶ್ಚಾದ್ಗಂಧಮಾದನಪರ್ವತಂ ॥ ೬೨ ॥
ಶಿವತೀರ್ಥಂ ತತೋ ಗತ್ವಾ ಭೈರವಃ ಸ್ನಾತವಾನ್ದ್ವಿಜಾಃ ।
ಸ್ನಾನಮಾತ್ರೇಣ ತತ್ರಾಽಸ್ಯ ಶಿವತೀರ್ಥೇ ಮಹತ್ತರೇ ॥ ೬೩ ॥
ನಿಃಶೇಷಂ ವಿಲಯಂ ಯಾತಾ ಬ್ರಹ್ಮಹತ್ಯಾಽತಿಭೀಷಣಾ ।
ಅಸ್ಮಿನ್ನವಸರೇ ಶಂಭುಃ ಪ್ರಾದುರಾಸೀತ್ತದಗ್ರತಃ ।
ಪ್ರಾದುರ್ಭೂತೋ ಮಹಾದೇವೋ ಭೈರವಂ ವಾಕ್ಯಮಬ್ರವೀತ್ ॥ ೬೪ ॥

ಈಶ್ವರ ಉವಾಚ :—

ನಿಃಶೇಷಂ ಬ್ರಹ್ಮಹತ್ಯಾ ತೇ ಶಿವತೀರ್ಥೇ ನಿಮಜ್ಜನಾತ್ ॥ ೬೫ ॥
ನಷ್ಟಾ ಭೈರವ ನಾಽಸ್ತ್ಯತ್ರ ಸಂದೇಹಸ್ತವ ಸುವ್ರತ ।
ಇದಂ ಕಪಾಲಂ ಕಾಶ್ಯಾಂ ತ್ವಂ ಸ್ಥಾಪಯಸ್ವ ಕ್ವಚಿತ್ಸ್ಥಲೇ ॥ ೬೬ ॥
ಇತ್ಯುಕ್ತ್ವಾ ಭಗವಾನ್ಶಂಭುಸ್ತತ್ರೈವಾಂತರಧೀಯತ ।
ಭೈರವೋಽಪಿ ತದಾ ವಿಪ್ರಾ ಬ್ರಹ್ಮಹತ್ಯಾವಿಮೋಚಿತಃ ॥ ೬೭ ॥
ಶಿವತೀರ್ಥಸ್ಯ ಮಾಹಾತ್ಮ್ಯಾದ್ಯಯೌ ವಾರಾಣಸೀಂ ಪುರೀಂ ।
ಕಪಾಲಂ ಸ್ಥಾಪಯಾಮಾಸ ಪ್ರದೇಶೇ ಕುತ್ರಚಿದ್ದ್ವಿಜಾಃ ।
ಕಪಾಲತೀರ್ಥಮಿತ್ಯಾಖ್ಯಾಮಲಭತ್ತತ್ಸ್ಥಲಂ ತದಾ ॥ ೬೮ ॥

ಶ್ರೀ ಸೂತ ಉವಾಚ :—

ಏವಂ ಪ್ರಭಾವಂ ತತ್ಪುಣ್ಯಂ ಶಿವತೀರ್ಥಂ ವಿಮುಕ್ತಿದಂ ॥ ೬೯ ॥

---

೬೨. ಅನಂತರ, ಶೂಲ ಕಪಾಲಗಳನ್ನು ಧರಿಸಿದ ಆ ಭೈರವನು ಶಿವನ ಅಪ್ಪಣೆಯಿಂದ ಗಂಧಮಾದನಪರ್ವತಕ್ಕೆ ಹೋದನು.

೬೩–೬೪. ತರುವಾಯ ಶಿವತೀರ್ಥಕ್ಕೆ ಹೋಗಿ ಸ್ನಾನಮಾಡಲು ಅಲ್ಲಿ ಅವನ ಬ್ರಹ್ಮಹತ್ಯೆಯೆಲ್ಲ ಸಂಪೂರ್ಣವಾಗಿ ನಾಶವಾಯಿತು. ಈ ಸಮಯದಲ್ಲಿ ಶಿವನೂ ಅವನ ಮುಂದೆ ಆವಿರ್ಭವಿಸಿ ಇಂತೆಂದನು.

೬೫–೬೬. ಈಶ್ವರನು ಹೇಳುತ್ತಾನೆ:—"ಭೈರವ! ನೀನು ಈ ಶಿವತೀರ್ಥದಲ್ಲಿ ಮಿಂದುದರಿಂದ ನಿನ್ನ ಬ್ರಹ್ಮಹತ್ಯೆಯು ಸಂಪೂರ್ಣವಾಗಿ ಪರಿಹಾರವಾಯಿತು ಸಂದೇಹವಿಲ್ಲ. ಈ ಕಪಾಲವನ್ನು ನೀನು ಕಾಶಿಯಲ್ಲಿ ಒಂದೆಡೆಯಲ್ಲಿ ಸ್ಥಾಪಿಸು."

೬೭–೬೮. ಪೂಜ್ಯನಾದ ಶಿವನು ಹೀಗೆಂದು ನುಡಿದು ಅಲ್ಲಿಯೇ ಮಾಯವಾದನು. ಹೀಗೆ ಶಿವತೀರ್ಥದ ಮಾಹಾತ್ಮ್ಯೆಯಿಂದ ಬ್ರಹ್ಮಹತ್ಯೆಯಿಂದ ಮುಕ್ತನಾದ ಭೈರವನು ಕಾಶಿಗೆ ತೆರಳಿ ಒಂದು ಸ್ಥಳದಲ್ಲಿ ಕಪಾಲವನ್ನು ಸ್ಥಾಪಿಸಿದನು. ಆಗ ಆ ಸ್ಥಳವು ಕಪಾಲತೀರ್ಥವೆಂದು ಪ್ರಸಿದ್ಧಿಗೊಂಡಿತು.

೬೯–೭೦. ಸೂತನು ಹೇಳುತ್ತಾನೆ:— ಇಂತಹ ಮಾಹಾತ್ಮ್ಯೆಯುಳ್ಳ ಆ ಶಿವತೀರ್ಥವು ಪುಣ್ಯಕರವೂ, ಮೋಕ್ಷದಾಯಕವೂ, ಅತ್ಯಂತ ದುಃಖನಾಶಕವೂ,

ಮಹಾದುಃಖಪ್ರಶಮನಂ ಮಹಾಪಾತಕನಾಶನಂ ।
ನರಕಕ್ಲೇಶಶಮನಂ ಸ್ವರ್ಗದಂ ಮೋಕ್ಷದಂ ತಥಾ ॥ ೭೦ ॥
ಶಿವತೀರ್ಥಸ್ಯ ಮಾಹಾತ್ಮ್ಯಂ ಮಯಾ ಪ್ರೋಕ್ತಂ ವಿಮುಕ್ತಿದಂ ।
ಇದಂ ಪಠನ್ಸದಾ ಮರ್ತ್ಯೋ ದುಃಖಗ್ರಾಮಾದ್ವಿಮುಚ್ಯತೇ ॥ ೭೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಶಿವತೀರ್ಥಪ್ರಶಂಸನಂ—ಭೈರವಬ್ರಹ್ಮಹತ್ಯಾವಿಮೋಕ್ಷಣವರ್ಣನಂ" ನಾಮ ಚತುರ್ವಿಂಶೋಽಧ್ಯಾಯಃ

---

ಮಹಾಪಾತಕಗಳನ್ನು ಪರಿಹರಿಸುವುದೂ, ನರಕದುಃಖವನ್ನು ನಿವಾರಿಸುವುದೂ, ಸ್ವರ್ಗಮೋಕ್ಷಗಳನ್ನು ಕೊಡುವುದೂ ಆಗಿರುವುದು.

೭೧. ನಾನೀಗ ಮೋಕ್ಷವನ್ನೀಯುವ ಶಿವತೀರ್ಥದ ಮಾಹಾತ್ಮ್ಯೆಯನ್ನು ಹೇಳಿರುವೆನು. ಯಾವಾಗಲೂ ಇದನ್ನು ಪಠಿಸುವ ಮನುಷ್ಯನು ದುಃಖದಿಂದ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಶಿವತೀರ್ಥಪ್ರಶಂಸನ—ಭೈರವನ ಬ್ರಹ್ಮಹತ್ಯಾವಿಮೋಕ್ಷಣವರ್ಣನ"ವೆಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚವಿಂಶೋಽಧ್ಯಾಯಃ

## ಶಂಖತೀರ್ಥಪ್ರಶಂಸನಂ— ವತ್ಸನಾಭಕೃತಘ್ನತಾದೋಷಶಾಂತಿವರ್ಣನಂ

ಶ್ರೀ ಸೂತ ಉವಾಚ :—

ಶಿವತೀರ್ಥೇ ನರಃ ಸ್ನಾತ್ವಾ ಬ್ರಹ್ಮಹತ್ಯಾವಿಮೋಕ್ಷಣೇ ।
ಸ್ವಪಾಪಜಾಲಶಾಂತ್ಯರ್ಥಂ ಶಂಖತೀರ್ಥಂ ತತೋ ವ್ರಜೇತ್ ॥ ೧ ॥
ಯತ್ರ ಮಜ್ಜನಮಾತ್ರೇಣ ಕೃತಘ್ನೋಽಪಿ ವಿಮುಚ್ಯತೇ ।
ಮಾತೄಃ ಪಿತೄನ್ ಗುರೂಂಶ್ಚಾಽಪಿ ಯೇ ನ ಮನ್ಯಂತಿ ಮೋಹಿತಾಃ ॥
ಯೇಚಾಽಪ್ಯನ್ಯೇ ದುರಾತ್ಮಾನಃ ಕೃತಘ್ನಾ ನಿರಪತ್ರಪಾಃ ।
ತೇ ಸರ್ವೇ ಶಂಖತೀರ್ಥೇಽಸ್ಮಿನ್ ಶುದ್ಧ್ಯಂತಿ ಸ್ನಾನಮಾತ್ರತಃ ॥ ೩ ॥
ಶಂಖನಾಮಾ ಮುನಿಃ ಪೂರ್ವಂ ಗಂಧಮಾದನಪರ್ವತೇ ।
ಅವರ್ತತ ತಪಃ ಕುರ್ವನ್ವಿಷ್ಣುಂ ಧ್ಯಾಯನ್ಸಮಾಹಿತಃ ॥ ೪ ॥
ಸ ತತ್ರ ಕಲ್ಪಯಾಮಾಸ ಸ್ನಾನಾರ್ಥಂ ತೀರ್ಥಮುತ್ತಮಂ ।
ಶಂಖೇನ ನಿರ್ಮಿತಂ ತೀರ್ಥಂ ಶಂಖತೀರ್ಥಮಿತೀರ್ಯತೇ ॥ ೫ ॥
ತತ್ರ ಸ್ನಾತ್ವಾ ಸಕೃನ್ಮರ್ತ್ಯಃ ಕೃತಘ್ನೋಽಪಿ ವಿಮುಚ್ಯತೇ ।
ಅತ್ರೇತಿಹಾಸಂ ವಕ್ಷ್ಯಾಮಿ ಪುರಾಣಂ ಪಾಪನಾಶನಂ ॥ ೬ ॥

---

## ಕನ್ನಡದ ಅನುವಾದ

### ಶಂಖತೀರ್ಥಪ್ರಶಂಸನ— ವತ್ಸನಾಭಕೃತಘ್ನತಾದೋಷಶಾಂತಿವರ್ಣನ

೧. ಸೂತನು ಹೇಳುತ್ತಾನೆ:—ಮಾನವನು ಬ್ರಹ್ಮಹತ್ಯೆಯನ್ನು ಪರಿಹರಿಸುವ ಶಿವತೀರ್ಥದಲ್ಲಿ ಮಿಂದು ಬಳಿಕ ತನ್ನ ಪಾಪದ ಶಾಂತಿಗಾಗಿ ಶಂಖತೀರ್ಥಕ್ಕೆ ಹೋಗಬೇಕು.

೨–೩. ಈ ಶಿವತೀರ್ಥದಲ್ಲಿ ಸ್ನಾನಮಾಡುವುದರಿಂದ ಕೃತಘ್ನರೂ, ತಾಯಿ, ತಂದೆ ಗುರುಗಳನ್ನು ಅಜ್ಞಾನದಿಂದ ಗೌರವಿಸದವರೂ, ದುಷ್ಟರೂ, ನಾಚಿಕೆಯಿಲ್ಲದವರೂ ಸಹ ಶುದ್ಧರಾಗುವರು.

೪. ಹಿಂದೆ ಗಂಧಮಾದನಪರ್ವತದಲ್ಲಿ ಶಂಖನೆಂಬ ಮುನಿಯು ವಿಷ್ಣುವನ್ನುದ್ದೇಶಿಸಿ ಒಮ್ಮನಸ್ಸಿನಿಂದ ತಪಸ್ಸನ್ನಾಚರಿಸುತ್ತಿದ್ದನು.

೫. ಅಲ್ಲಿ ಅವನು ಸ್ನಾನಕ್ಕೋಸ್ಕರ ಉತ್ತಮತೀರ್ಥವನ್ನು ನಿರ್ಮಿಸಿದನು. ಶಂಖಮುನಿಯು ನಿರ್ಮಿಸಿದ್ದುದರಿಂದ ಇದಕ್ಕೆ ಶಂಖತೀರ್ಥವೆಂದು ಹೆಸರಾಯಿತು.

೬. ಅಲ್ಲಿ ಒಂದುಸಾರಿ ಮಿಂದ ಮಾನವನು ಕೃತಘ್ನನಾದರೂ ಪಾಪಮುಕ್ತನಾಗುವನು. ಈ ವಿಷಯದಲ್ಲಿ ಪುರಾತನವೂ, ಪಾಪನಾಶಕವೂ ಆಗಿರುವ ಒಂದು ಕಥೆಯನ್ನು ಹೇಳುವೆನು.

ಯಸ್ಯ ಶ್ರವಣಮಾತ್ರೇಣ ನರೋ ಮುಕ್ತಿಮುವಾಪ್ನುಯಾತ್ ।
ಪುರಾ ಬಭೂವ ವಿಪ್ರೇಂದ್ರೋ ವತ್ಸನಾಭೋ ಮಹಾಮುನಿಃ ॥ ೭ ॥
ಸತ್ಯವಾನ್ಶೀಲವಾನ್ವಾಗ್ಮೀ ಸರ್ವಭೂತದಯಾಪರಃ ।
ಶತ್ರುಮಿತ್ರಸಮೋ ದಾಂತಸ್ತಪಸ್ವೀ ವಿಜಿತೇಂದ್ರಿಯಃ ॥ ೮ ॥
ಪರಬ್ರಹ್ಮಣಿ ನಿಷ್ಣಾತಸ್ತತ್ವಬ್ರಹ್ಮೈಕಸಂಶ್ರಯಃ ।
ಏವಂ ಪ್ರಭಾವಃ ಸಮುನಿಸ್ತಪಸ್ತೇಪೇ ನಿಜಾಶ್ರಮೇ ॥ ೯ ॥
ಸ ವೈ ನಿಶ್ಚಲಸರ್ವಾಂಗಸ್ತಿಷ್ಠಂಸ್ತತ್ರೈವ ಭೂತಲೇ ।
ಪರಮಾಣ್ವಂತರಂ ವಾಽಪಿ ನ ಸ್ವಸ್ಥಾನಾಚ್ಚಚಾಲ ಸಃ ॥ ೧೦ ॥
ಸ್ಥಿತ್ವೈಕತ್ರ ತಪಸ್ಯಂತಮನೇಕಶತವತ್ಸರಾನ್ ।
ತಮಾಚಕ್ರಾಮ ವಲ್ಮೀಕಂ ಛಾದಿತಾಂಗಂ ಚಕಾರ ಚ ॥ ೧೧ ॥
ವಲ್ಮೀಕಾಕ್ರಾಂತದೇಹೋಽಪಿ ವತ್ಸನಾಭೋ ಮಹಾಮುನಿಃ ।
ಅಕರೋತ್ತಪ ಏವಾಽಸೌ ವಲ್ಮೀಕಂ ನತ್ವಬುಧ್ಯತ ॥ ೧೨ ॥
ತಸ್ಮಿಂಶ್ಚ ತಪ್ಯತಿ ತಪೋ ವಾಸವೋ ಮುನಿಪುಂಗವಾಃ ।
ವಿಸೃಜ್ಯ ಮೇಘಜಾಲಾನಿ ವರ್ಷಯಾಮಾಸ ವೇಗವಾನ್ ॥ ೧೩ ॥
ಏವಂ ದಿನಾನಿ ಸಪ್ತಾಽಯಂ ಸ ವವರ್ಷ ನಿರಂತರಂ ।
ಆಸಾರೇಣಾಽತಿಮಹತಾ ವೃಷ್ಯಮಾಣೋಽಪಿ ಸೈ ಮುನಿಃ ॥ ೧೪ ॥

---

೭–೯. ಇದನ್ನು ಕೇಳಿದ್ದರಿಂದಲೇ ಮಾನವನು ಪಾಪಮುಕ್ತನಾಗುವನು. ಹಿಂದೆ ವತ್ಸನಾಭನೆಂಬ ಮಹರ್ಷಿಯೊಬ್ಬನಿದ್ದನು. ಸತ್ಯವಂತನೂ, ಸುಶೀಲನೂ, ವಾಚಾಲನೂ, ಸಕಲ ಪ್ರಾಣಿಗಳಲ್ಲಿ ದಯಾಳುವೂ, ಶತ್ರು ಮಿತ್ರರಲ್ಲಿ ಸಮನೂ, ಇಂದ್ರಿಯನಿಗ್ರಹವುಳ್ಳವನೂ, ಪರಬ್ರಹ್ಮನಿಷ್ಠನೂ, ಜ್ಞಾನಿಯೂ ಆದ ಆ ಮುನಿಯು ತನ್ನ ಆಶ್ರಮದಲ್ಲಿ ತಪಸ್ಸನ್ನು ಮಾಡಿದನು.

೧೦. ಅವನು ಭೂಮಿಯಲ್ಲಿ ಅಲ್ಲಾಡದಿರುವ ಅಂಗಗಳುಳ್ಳವನಾಗಿ ತನ್ನ ಸ್ಥಳದಿಂದ ಸ್ವಲ್ಪವೂ ಚಲಿಸಲಿಲ್ಲ.

೧೧. ಒಂದೆಡೆಯಲ್ಲಿದ್ದು ಅನೇಕ ನೂರು ವರ್ಷಗಳ ಕಾಲ ತಪಸ್ಸನ್ನಾಚರಿಸುತ್ತಿರುವ ಅವನನ್ನು ಹುತ್ತವು ಆವರಿಸಿ ಅಂಗಗಳು ಕಾಣದಂತೆ ಮಾಡಿತು.

೧೨. ಆ ಮಹರ್ಷಿಯು ಹುತ್ತದಿಂದ ಮುಚ್ಚಲ್ಪಟ್ಟ ಶರೀರವುಳ್ಳವನಾದರೂ ಅದನ್ನರಿಯದೆ ತಪಸ್ಸನ್ನು ಮಾಡಿದನು.

೧೩. ಎಲೈ ಮುನಿವರ್ಯರೆ! ಅವನು ತಪಸ್ಸನ್ನು ಮಾಡುತ್ತಿರಲು ಇಂದ್ರನು ಮೇಘಗಳನ್ನು ಹುಟ್ಟಿಸಿ ಮಳೆಸುರಿಸಿದನು.

೧೪–೧೫. ಆ ಇಂದ್ರನು ಹೀಗೆ ಏಳು ದಿನಗಳು ಎಡೆಬಿಡದೆ ಮಳೆ ಸುರಿಸಿದನು. ಮಳೆಯು ಧಾರಾಕಾರವಾಗಿ ಸುರಿಯುತ್ತಿದ್ದರೂ ವತ್ಸನಾಭನು ಕಣ್ಣು

ತಂ ವರ್ಷಂ ಪ್ರತಿಜಗ್ರಾಹ ನಿಮೀಲಿತವಿಲೋಚನಃ ।
ಮಹತಾ ಸ್ತನಿತೇನಾಶು ತದಾ ಬಧಿರಯನ್ನ್ಪೃತೀ ॥ ೧೫ ॥
ವಲ್ಮೀಕಸ್ಯೋಪರಿಷ್ಟಾದ್ವೈ ನಿಪಪಾತ ಮಹಾಽಶನಿಃ ।
ತಸ್ಮಿನ್ವರ್ಷತಿ ಪರ್ಜನ್ಯೇ ಶೀತವಾತಾಽತಿದುಃಸಹೇ ॥ ೧೬ ॥
ವಲ್ಮೀಕಶಿಖರಂ ಧ್ವಸ್ತಂ ಬಭೂವಾಽಶನಿತಾಡಿತಂ ।
ವಿಶೀರ್ಣಶಿಖರೇ ತಸ್ಮಿನ್ವಲ್ಮೀಕೇಽಶನಿತಾಡಿತೇ ॥ ೧೭ ॥
ಸೇಹೇಽತಿದುಃಸಹಾಂ ವೃಷ್ಟಿಂ ವತ್ಸನಾಭೋ ವಿಚಿಂತಯನ್ ।
ಮಹರ್ಷೌ ವರ್ಷಧಾರಾಭಿಃ ಪೀಡ್ಯಮಾನೇ ದಿವಾನಿಶಂ ॥ ೧೮ ॥
ಧರ್ಮಸ್ಯ ಚೇತಸಿ ಕೃಪಾ ಸಂಬಭೂವಾಽತಿಭೂಯಸೀ ।
ಸ ಧರ್ಮಶ್ಚಿಂತಯಾಮಾಸ ವತ್ಸನಾಭೇ ತಪಸ್ಯತಿ ॥ ೧೯ ॥
ಪತತ್ಯಪ್ಯತಿವರ್ಷೇಽಯಂ ತಪಸೋ ನ ನಿವರ್ತತೇ ।
ಅಹೋಽಸ್ಯ ವತ್ಸನಾಭಸ್ಯ ಧರ್ಮೈಕಾಯತ್ತಚಿತ್ತತಾ ॥ ೨೦ ॥
ಇತಿ ಚಿಂತಯತಸ್ತಸ್ಯ ಮತಿರೇವಮಜಾಯತ ।
ಅಹಂ ವೈ ಮಾಹಿಷಂ ರೂಪಂ ಸುಮಹಾಂತಂ ಮನೋಹರಂ ॥ ೨೧ ॥
ವರ್ಷಧಾರಾನಿಪಾತಾನಾಂ ಸೋಢಾರಂ ಕಠಿನತ್ವಚಂ ।
ಸ್ವೀಕೃತ್ಯ ಮಾಹಿಷಂ ರೂಪಂ ಸ್ಥಾಸ್ಯಾಮ್ಯುಪರಿ ಯೋಗಿನಃ ॥ ೨೨ ॥

---

ಗಳನ್ನು ಮುಚ್ಚಿಕೊಂಡು ಆ ಮಳೆಯನ್ನು ಪರಿಗ್ರಹಿಸಿದನು. ಅನಂತರ ಗರ್ಜನೆಯಿಂದ ಕಿವಿಗಳನ್ನು ಕಿವುಡುಮಾಡುತ್ತ ಹುತ್ತದಮೇಲೆ ಸಿಡಿಲು ಬಡಿಯಿತು. ಚಳಿಗಾಳಿಯಿಂದ ಸಹಿಸಲಾಗದ ಮಳೆಯು ಸುರಿಯುತ್ತಿರಲು ಆ ಸಿಡಿಲಿನ ಹೊಡೆತದಿಂದ ಹುತ್ತದ ತುದಿಯು ಒಡೆಯಲು ವತ್ಸನಾಭನು ಆಲೋಚಿಸುತ್ತಲೇ ಸಹಿಸಲಾಗದ ಆ ಮಳೆಯನ್ನು ಸಹಿಸಿದನು. ಆ ಮಹರ್ಷಿಯು ಹಗಲು ರಾತ್ರಿ ಮಳೆಯಿಂದ ಬಾಧಿಸಲ್ಪಡುತ್ತಿರಲು ಧರ್ಮದೇವತೆಯ ಮನಸ್ಸಿನಲ್ಲಿ ಅತ್ಯಂತ ದಯೆಯುಂಟಾಯಿತು. ವತ್ಸನಾಭನು ತಪಸ್ಸನ್ನು ಮಾಡುತ್ತಿರಲು ಆ ಧರ್ಮದೇವತೆಯು ಹೀಗೆ ಆಲೋಚಿಸಿತು.

೨೦. "ಮಳೆಯು ಧಾರಾಕಾರವಾಗಿ ಸುರಿಯುತ್ತಿದ್ದರೂ ಇವನು ತಪಸ್ಸನ್ನು ನಿಲ್ಲಿಸಲಿಲ್ಲ. ಈತನ ಮನಸ್ಸು ಧರ್ಮಕ್ಕೆ ಅಧೀನವಾಗಿರುವುದು ಆಶ್ಚರ್ಯಕರವಾಗಿದೆ."

೨೧–೨೨. ಹೀಗೆ ಆಲೋಚಿಸುತ್ತಿರುವ ಆ ಧರ್ಮದೇವತೆಯ ಮನಸ್ಸಿಗೆ ಹೀಗೆನ್ನಿಸಿತು: ನಾನು ಮಳೆಯ ಧಾರೆಯನ್ನು ಸಹಿಸುವ ಗಟ್ಟಿಯಾದ ತೊಗಲುಳ್ಳ ದೊಡ್ಡ ಕೋಣದ ರೂಪವನ್ನು ಧರಿಸಿ ಆ ತಪಸ್ವಿಯ ಮೇಲೆ ಮಳೆ ಬೀಳದಂತೆ ಮರೆಮಾಡುವೆನು.

ನ ಹಿ ಬಾಧಿಷ್ಯತೇ ವರ್ಷಂ ಮಹಾವೇಗಯುತಂ ತ್ವಪಿ ।
ಧರ್ಮ ಏವಂ ವಿನಿಶ್ಚಿತ್ಯ ಧಾರಾಃ ಪೃಷ್ಠೇನ ಧಾರಯನ್ ॥ ೨೩ ॥
ವತ್ಸನಾಭೋಪರಿ ತದಾ ಗಾತ್ರಮಾಚ್ಛಾದ್ಯ ತಸ್ಥಿವಾನ್ ।
ತತಃ ಸಪ್ತದಿನಾಂತೇ ತು ತದ್ವೃಷ್ಟಿ ವರ್ಷಮುಪಾರಮತ್ ॥ ೨೪ ॥
ತತೋ ಮಹಿಷರೂಪೀ ಸ ಧರ್ಮೋಽತಿಕೃಪಯಾ ಯುತಃ ।
ತದ್ವೃಷ್ಟಿ ವಲ್ಮೀಕಮುತ್ಸೃಜ್ಯ ನಾಽತಿದೂರೇ ಹ್ಯವರ್ತತ ॥ ೨೫ ॥
ತತೋ ನಿವೃತ್ತೇ ವರ್ಷೇ ತು ವತ್ಸನಾಭೋ ಮಹಾಮುನಿಃ ।
ನಿವೃತ್ತಸ್ತಪಸಸ್ತೂರ್ಣಂ ದಿಶಃ ಸರ್ವಾ ವ್ಯಲೋಕಯನ್ ॥ ೨೬ ॥
ಸ್ಥಿತೋಽಹಂ ವೃಷ್ಟಿಸಂಪಾತೇ ಕುರ್ವನ್ನದ್ಯ ಮಹತ್ತಪಃ ।
ಪೃಥಿವೀ ಸಲಿಲಕ್ಲಿನ್ನಾ ದೃಶ್ಯತೇ ಸರ್ವತೋ ದಿಶಂ ॥ ೨೭ ॥
ಶಿಖರಾಣಿ ಗಿರೀಣಾಂ ಚ ವನಾನ್ಯುಪವನಾನಿ ಚ ।
ಆಶ್ರಮಾಣಿ ಮಹರ್ಷೀಣಾಮಾಪ್ಲುತಾನಿ ಜಲೈರ್ನವೈಃ ॥ ೨೮ ॥
ಏವಮಾದೀನಿ ಸರ್ವಾಣಿ ದೃಷ್ಟ್ವಾ ಪ್ರಮುದಿತೋಽಭವತ್ ।
ಚಿಂತಯಾಮಾಸ ಧರ್ಮಾತ್ಮಾ ವತ್ಸನಾಭೋ ಮಹಾಮುನಿಃ ॥ ೨೯ ॥
ಅಹಮಸ್ಮಿನ್ಮಹಾವರ್ಷೇ ನೂನಂ ಕೇನಾಽಪಿ ರಕ್ಷಿತಃ ।
ವರ್ಷತ್ಯಸ್ಮಿನ್ಮಹಾವರ್ಷೇ ಜೀವಿತಂ ತ್ವನ್ಯಥಾ ಕುತಃ ॥ ೩೦ ॥

---

೨೩–೨೪. ಅದರಿಂದ ಅತ್ಯಂತ ವೇಗವುಳ್ಳುದಾದರೂ ಮಳೆಯು ತೊಂದರೆ ಮಾಡುವುದಿಲ್ಲ.'' ಧರ್ಮದೇವತೆಯು ಹೀಗೆ ನಿಶ್ಚಯಿಸಿ ಮಳೆಯ ಧಾರೆಯನ್ನು ಬೆನ್ನಿನಿಂದ ತಡೆಯುತ್ತ ವತ್ಸನಾಭನ ಮೇಲೆ ತನ್ನ ದೇಹವನ್ನು ಮುಚ್ಚಿಕೊಂಡು ಇದ್ದಿತು. ಬಳಿಕ ಏಳು ದಿನಗಳ ಕೊನೆಯಲ್ಲಿ ಆ ಮಳೆಯು ನಿಂತಿತು.

೨೫. ಅನಂತರ ಕೋಣನ ಆಕೃತಿಯುಳ್ಳ ದಯಾಳುವಾದ ಧರ್ಮ ದೇವತೆಯು ಆ ಹುತ್ತವನ್ನು ಬಿಟ್ಟು ಸಮೀಪದಲ್ಲಿದ್ದಿತು.

೨೬–೨೭. ಮಳೆಯು ನಿಂತಕೂಡಲೆ ವತ್ಸನಾಭನು ತಪಸ್ಸನ್ನು ನಿಲ್ಲಿಸಿ ಶೀಘ್ರವಾಗಿ ಸಕಲದಿಕ್ಕುಗಳನ್ನು ನೋಡುತ್ತ, ''ನಾನು ಈಗ ಮಳೆಯು ಸುರಿಯುತ್ತಿದ್ದರೂ ತಪಸ್ಸನ್ನಾಚರಿಸುತ್ತಿದ್ದೆನು. ಭೂಮಿಯು ಎಲ್ಲೆಡೆಯಲ್ಲಿಯೂ ನೀರಿನಿಂದ ಒದ್ದೆಯಾಗಿರುವುದು.

೨೮. ಗಿರಿಶಿಖರಗಳೂ, ವನಗಳೂ, ಉಪವನಗಳೂ, ಋಷ್ಯಾಶ್ರಮಗಳೂ ಹೊಸ ನೀರಿನಿಂದ ಮುಳುಗಿರುವುವು.

೨೯. ಧರ್ಮಾತ್ಮನಾದ ವತ್ಸನಾಭನು ಇವೇ ಮೊದಲಾದುವುಗಳನ್ನು ನೋಡಿ ಸಂತೋಷಗೊಂಡು ಹೀಗೆ ಆಲೋಚಿಸಿದನು.

೩೦. ಇಂತಹ ಘೋರವೃಷ್ಟಿಯಲ್ಲಿ ನನ್ನನ್ನು ಯಾರೋ ಕಾಪಾಡಿದ್ದಾರೆ. ಹಾಗಿಲ್ಲದಿದ್ದರೆ ಇಂತಹ ಮಳೆಯಲ್ಲಿ ನಾನು ಬದುಕಿದ ಬಗೆ ಹೇಗೆ?''

ವಿಚಿಂತ್ಯೈವಂ ಮುನಿಶ್ರೇಷ್ಠಃ ಸರ್ವತ್ರ ಸಮಲೋಕಯತ್ ।
ತತೋಽಪಶ್ಯನ್ಮಹಾಕಾಯಮದೂರಾದಗ್ರತಃ ಸ್ಥಿತಂ ॥ ೩೧ ॥
ಮಹಿಷಂ ನೀಲವರ್ಣಂ ಚ ವತ್ಸನಾಭಸ್ತಪೋಧನಃ ।
ಮಹಿಷಂ ತಂ ಸಮುದ್ದಿಶ್ಯ ಮನಸಾ ಸಮಚಿಂತಯತ್ ॥ ೩೨ ॥
ತಿರ್ಯಗ್ಯೋನಿಷ್ವಪಿ ಕಥಂ ದೃಶ್ಯತೇ ಧರ್ಮಶೀಲತಾ ।
ಯತೋಽಹ್ಯಹಂ ಮಹಾವರ್ಷಾನ್ಮಹಿಷೇಣಾಽಭಿರಕ್ಷಿತಃ ॥ ೩೩ ॥
ದೀರ್ಘಮಾಯುರವಾಪ್ನೋತು ಯನ್ಮಾಂ ರಕ್ಷಿತವಾನಿಹ ।
ಇತ್ಯಾದಿ ಸ ವಿಚಿಂತ್ಯೈವಂ ತಪಸೇ ಪುನರುದ್ಯಯೌ ॥ ೩೪ ॥
ತಂ ಪುನಶ್ಚ ತಪಸ್ಯಂತಂ ದೃಷ್ಟ್ವಾ ಮಹಿಷರೂಪಧೃಕ್ ।
ರೋಮಾಂಚಾವೃತ ಸರ್ವಾಂಗಃ ಪ್ರಮೋದಮಗಮದ್ಭೃಶಂ ॥ ೩೫ ॥
ವತ್ಸನಾಭಸ್ಯ ಹಿ ಮುನೇಃ ಪುನಶ್ಚೈವ ತಪಸ್ಯತಃ ।
ಮನಃ ಪೂರ್ವವದೇಕಾಗ್ರಂ ಪರಬ್ರಹ್ಮಣಿ ನಾಽಭವತ್ ॥ ೩೬ ॥
ಸ ವಿಷಣ್ಣಮನಾ ಭೂತ್ವಾ ವತ್ಸನಾಭೋ ವ್ಯಚಿಂತಯತ್ ।
ನ ಭವೇದ್ಯದಿ ನೈರ್ಮಲ್ಯಂ ತದಾ ಸ್ಯಾಚ್ಚಂಚಲಂ ಮನಃ ॥ ೩೭ ॥

---

೩೧–೩೨. ವತ್ಸನಾಭಮುನಿವರ್ಯನು ಹೀಗೆ ಆಲೋಚಿಸಿ ಎಲ್ಲ ಕಡೆಯಲ್ಲಿಯೂ ನೋಡಿದನು. ಅನಂತರ ಸಮೀಪದಲ್ಲಿಯೆ ನಿಂತಿರುವ ದೊಡ್ಡ ದೇಹದ ನೀಲವರ್ಣದ ಕೋಣವನ್ನೀಕ್ಷಿಸಿ ಅದನ್ನುದ್ದೇಶಿಸಿ ಮನಸ್ಸಿನಲ್ಲಿ ಹೀಗೆ ಆಲೋಚಿಸಿದನು.

೩೩. "ಪಶುಗಳು ಕೂಡ ಎಷ್ಟು ಧರ್ಮಬುದ್ಧಿಯುಳ್ಳವಾಗಿರುವುವು. ಈಗ ನನ್ನನ್ನು ಈ ಕೋಣವು ಅತಿವೃಷ್ಟಿಯಿಂದ ರಕ್ಷಿಸಿರುವುದಷ್ಟೆ.

೩೪. ಇದು ನನ್ನನ್ನು ಕಾಪಾಡಿರುವುದರಿಂದ ದೀರ್ಘಾಯುಸ್ಸುಳ್ಳದಾಗಲಿ." ಹೀಗೆ ಚಿಂತಿಸಿ ಅವನು ಮರಳಿ ತಪೋನಿರತನಾದನು.

೩೫. ಕೋಣನ ರೂಪವನ್ನು ತಾಳಿದ ಧರ್ಮದೇವತೆಯು ತಿರುಗಿ ತಪಸ್ಸನ್ನು ಮಾಡುತ್ತಿರುವ ಆ ವತ್ಸನಾಭನನ್ನು ಕಂಡು ರೋಮಾಂಚಗೊಂಡು ಅತ್ಯಾನಂದಭರಿತವಾಯಿತು.

೩೬. ಮರಳಿ ತಪಸ್ಸನ್ನಾಚರಿಸುತ್ತಿರುವ ಆ ವತ್ಸನಾಭನ ಮನಸ್ಸುಮಾತ್ರ ಹಿಂದಿನಂತೆ ಪರಬ್ರಹ್ಮನಲ್ಲಿ ಸ್ಥಿರವಾಗಿ ನಿಲ್ಲಲಿಲ್ಲ.

೩೭. ಆಗ ಅವನು ಖಿನ್ನನಾಗಿ ಹೀಗೆ ಚಿಂತಿಸಿದನು. "ಶುದ್ಧಿಯಿಲ್ಲದಿದ್ದರೆ ಮನಸ್ಸು ಚಂಚಲವಾಗುವುದು.

ಮನಶ್ಚ ಪಾಪಬಾಹುಳ್ಯೇ ನಿರ್ಮಲಂ ನೈವ ಜಾಯತೇ ।
ಪಾಪಲೇಶೋಽಪಿ ಮೇ ನಾಽಸ್ತಿ ಕಥಂ ಲೋಲಾಯತೇ ಮನಃ ॥ ೩೮ ॥
ಅಚಿಂತಯದ್ದೋಷಹೇತುಂ ವತ್ಸನಾಭಃ ಪುನಃ ಪುನಃ ।
ಸ ವಿಚಿಂತ್ಯ ವಿನಿಶ್ಚಿತ್ಯ ನಿನಿಂದಾತ್ಮಾನಮಂಜಸಾ ॥ ೩೯ ॥
ಧಿಙ್ಮಾಮದ್ಯ ದುರಾತ್ಮಾನಮಹೋ ಮೂಢೋಸ್ಮ್ಯಹಂ ಭೃಶಂ ।
ಕೃತಘ್ನತಾ ಮಹಾನ್ದೋಷೋ ಮಾಮದ್ಯ ಸಮುಪಾಗತಃ ॥ ೪೦ ॥
ಯದೀದೃಶಾನ್ಮಹಾವರ್ಷಾತ್ತ್ರಾತಾರಂ ಮಹಿಷೋತ್ತಮಂ ।
ತಿಷ್ಠಾಮ್ಯಪೂಜಯನ್ನೇವ ತತೋ ಮೇಽಭೂತ್ಕೃತಘ್ನತಾ ॥ ೪೧ ॥
ಕೃತಘ್ನತಾ ಮಹಾನ್ದೋಷಃ ಕೃತಘ್ನೇ ನಾಸ್ತಿ ನಿಷ್ಕೃತಿಃ ।
ಕೃತಘ್ನಸ್ಯ ನ ವೈ ಲೋಕಾಃ ಕೃತಘ್ನಸ್ಯ ನ ಬಾಂಧವಾಃ ॥ ೪೨ ॥
ಕೃತಘ್ನತಾ ದೋಷಬಲಾನ್ಮಮ ಚಿತ್ತಂ ಮಲೀಮಸಂ ।
ಕೃತಘ್ನಾ ನರಕಂ ಯಾಂತಿ ಯೇಽಚ ವಿಶ್ವಸ್ತಘಾತಿನಃ ॥ ೪೩ ॥
ನಿಷ್ಕೃತಿಂ ನೈವ ಪಶ್ಯಾಮಿ ಕೃತಘ್ನಾನಾಂ ಕಥಂಚನ ।
ಋತೇ ಪ್ರಾಣಪರಿತ್ಯಾಗಾದ್ಧರ್ಮಜ್ಞಾನಾಂ ವಚೋ ಯಥಾ ॥ ೪೪ ॥
ಪಿತ್ರೋರಭರಣಂ ಕೃತ್ವಾ ಹ್ಯದತ್ವಾ ಗುರುದಕ್ಷಿಣಾಂ ।
ಕೃತಘ್ನತಾಂ ಚ ಸಂಪ್ರಾಪ್ಯ ಮರಣಾಂತಾ ಹಿ ನಿಷ್ಕೃತಿಃ ॥ ೪೫ ॥

---

೩೮. ಪಾಪವು ಒಟ್ಟಾಗಿದ್ದರೆ ಮನಸ್ಸು ನಿರ್ಮಲವಾಗಿರುವುದಿಲ್ಲ. ನಾನು ಸ್ವಲ್ಪವೂ ಪಾಪವನ್ನಾಚರಿಸಲಿಲ್ಲ. ಮನಸ್ಸು ಹೇಗೆ ಚಂಚಲವಾಯಿತು?"

೩೯. ವತ್ಸನಾಭನು ಮತ್ತೆ ಮತ್ತೆ ದೋಷದ ಕಾರಣವನ್ನು ಆಲೋಚಿಸಿದನು. ಅವನು ಚಿಂತಿಸಿ, ನಿಶ್ಚಯಿಸಿ ತನ್ನನ್ನು ಬಹುವಾಗಿ ಬೈದುಕೊಂಡನು.

೪೦. "ದುರಾತ್ಮನಾದ ನನಗೆ ಧಿಕ್ಕಾರವಿರಲಿ! ನಾನು ಅತ್ಯಂತ ಮೂಢನಾಗಿರುವೆನು. ಕೃತಘ್ನತಾ ಮಹಾದೋಷವು ನನಗೀಗ ಸಂಭವಿಸಿದೆ.

೪೧. ಇಂತಹ ಮಹಾವೃಷ್ಟಿಯಿಂದ ಕಾಪಾಡಿದ ಉತ್ತಮವಾದ ಈ ಕೋಣವನ್ನು ನಾನು ಪೂಜಿಸದಿರುವುದರಿಂದ ಕೃತಘ್ನನಾದೆನು.

೪೨. ಕೃತಘ್ನತೆಯು ಪ್ರಬಲದೋಷವು. ಕೃತಘ್ನತೆಗೆ ಪ್ರತೀಕಾರವಿಲ್ಲ. ಕೃತಘ್ನನಿಗೆ ಉತ್ತಮಲೋಕಪ್ರಾಪ್ತಿಯೂ, ಬಂಧುಗಳೂ ಇರುವುದಿಲ್ಲ.

೪೩. ಈ ಕೃತಘ್ನತಾದೋಷದಿಂದ ನನ್ನ ಮನಸ್ಸು ಮಲಿನವಾಗಿದೆ. ವಿಶ್ವಾಸಘಾತುಕರಾದ ಕೃತಘ್ನರು ನರಕವಾಸಿಗಳಾಗುವರು.

೪೪. ಧರ್ಮವನ್ನರಿತ ಪ್ರಾಜ್ಞನ ಮಾತಿನಂತೆ ಕೃತಘ್ನರಿಗೆ ಪ್ರಾಣಪರಿತ್ಯಾಗವನ್ನುಳಿದು ಬೇರೆ ಪ್ರಾಯಶ್ಚಿತ್ತವಿಲ್ಲ.

೪೫. ತಾಯಿ ತಂದೆಗಳನ್ನು ಸಲಹದವರಿಗೂ, ಗುರುದಕ್ಷಿಣೆಯನ್ನು ಕೊಡದವರಿಗೂ, ಕೃತಘ್ನರಿಗೂ ಸಾಯುವುದೇ ಪ್ರಾಯಶ್ಚಿತ್ತವು.

ತಸ್ಮಾತ್ಪ್ರಾಣಾನ್ಪರಿತ್ಯಜ್ಯ ಪ್ರಾಯಶ್ಚಿತ್ತಂ ಚರಾಮ್ಯಹಂ ।
ಇತಿ ನಿಶ್ಚಿತ್ಯ ಮನಸಾ ವತ್ಸನಾಭೋ ಮಹಾಮುನಿಃ ॥ ೪೬ ॥
ತೃಣೀಕೃತ್ಯ ನಿಜಾನ್ಪ್ರಾಣಾನ್ನಿಃಸಂಗೇನಾಂತರಾತ್ಮನಾ ।
ಮೇರೋಃ ಶಿಖರಮಾರೂಢಃ ಪ್ರಾಯಶ್ಚಿತ್ತ ಚಿಕೀರ್ಷಯಾ ॥ ೪೭ ॥
ಸುಮೇರುಶಿಖರಾತ್ತಸ್ಮಾದಿಯೇಷ ಪತಿತುಂ ಮುನಿಃ ।
ತಸ್ಮಿನ್ಪತಿತುಮಾರಬ್ಧೇ ಮಾ ತ್ವರಿಷ್ಠಾ. ಇತಿ ಬ್ರುವನ್ ।
ತ್ಯಕ್ತ್ವಾಮಾಹಿಷರೂಪಃ ಸನ್ಧರ್ಮ ಏವ ನ್ಯವಾರಯತ್ ॥ ೪೮ ॥

ಧರ್ಮ ಉವಾಚ :—

ವತ್ಸನಾಭ ಮಹಾಪ್ರಾಜ್ಞ ಜೀವಸ್ವ ಬಹು ವತ್ಸರಾನ್ ॥ ೪೯ ॥
ಪರಿತುಷ್ಟೋಽಸ್ಮಿ ಭದ್ರಂ ತೇ ದೇಹತ್ಯಾಗಚಿಕೀರ್ಷಯಾ ।
ನ ಹಿ ತ್ವದ್ಧರ್ಮಕಕ್ಷಾಯಾಂ ಲೋಕೇ ಕಶ್ಚಿತ್ಸಮೋಽಸ್ತಿ ವೈ ॥ ೫೦ ॥
ಯದ್ಯಪಿ ಪ್ರಾಣಸಂತ್ಯಾಗಃ ಕೃತಘ್ನೇ ನಿಷ್ಕೃತಿರ್ಭವೇತ್ ।
ತಥಾಽಪಿ ಧರ್ಮಶೀಲತ್ವಾತ್ತವಾಽನ್ಯಾಂ ನಿಷ್ಕೃತಿಂ ವದೇ ॥ ೫೧ ॥
ಶಂಖತೀರ್ಥಾಭಿಧಂ ತೀರ್ಥಮಸ್ತಿ ವೈ ಗಂಧಮಾದನೇ ।
ಶಾಂತ್ಯರ್ಥಮಸ್ಯ ಪಾಪಸ್ಯ ತತ್ರ ಸ್ನಾಹಿ ಸಮಾಹಿತಃ ॥ ೫೨ ॥

---

೪೬–೪೮. ಆದುದರಿಂದ ನಾನು ಅಸುವನ್ನು ನೀಗಿ ಪ್ರಾಯಶ್ಚಿತ್ತವನ್ನಾಚರಿಸುವೆನು.'' ವತ್ಸನಾಭನು ಮನಸ್ಸಿನಲ್ಲಿ ಹೀಗೆ ಆಲೋಚಿಸಿ ವಿಷಯಾಸಕ್ತಿಯಿಲ್ಲದ ಮನಸ್ಸಿನಿಂದ ತನ್ನ ಪ್ರಾಣವನ್ನು ತೃಣಕ್ಕೆ ಸಾಟಿಮಾಡಿ ಮೇರುಗಿರಿಯ ಶಿಖರವನ್ನೇರಿ ಪ್ರಾಯಶ್ಚಿತ್ತಮಾಡಬಯಸಿ ಆ ಪರ್ವತದ ತುದಿಯಿಂದ ಬೀಳಲಿಚ್ಛಿಸಿದನು. ಆಗ ಧರ್ಮದೇವತೆಯು ಕೋಣನ ರೂಪವನ್ನು ತ್ಯಜಿಸಿ ಪರ್ವತದ ಶಿಖರದಿಂದ ಬೀಳಲುದ್ಯುಕ್ತನಾದ ಆ ಮುನಿಯನ್ನು ತ್ವರೆಮಾಡಬೇಡವೆಂದು ತಡೆಯಿತು.

೪೯. ಧರ್ಮದೇವತೆಯು ಹೇಳುತ್ತದೆ:—''ಅತಿ ಪ್ರಾಜ್ಞನಾದ ವತ್ಸನಾಭ! ನೀನು ಬಹುವರ್ಷಗಳಕಾಲ ಜೀವಿಸು.

೫೦. ನೀನು ದೇಹವನ್ನು ತ್ಯಜಿಸಲು ಬಯಸಿದ್ದರಿಂದ ನಾನು ಸಂತುಷ್ಟಳಾಗಿದ್ದೇನೆ. ನಿನಗೆ ಮಂಗಳವಾಗಲಿ. ಪ್ರಪಂಚದಲ್ಲಿ ನಿನಗೆ ಸಮಾನರಾದ ಧರ್ಮಿಷ್ಠರಿಲ್ಲ.

೫೧. ಕೃತಘ್ನನಿಗೆ ಪ್ರಾಣಪರಿತ್ಯಾಗವು ಪ್ರಾಯಶ್ಚಿತ್ತವಾಗಿದ್ದರೂ ನೀನು ಧರ್ಮಶೀಲನಾದುದರಿಂದ ನಿನಗೆ ಬೇರೆ ಪ್ರಾಯಶ್ಚಿತ್ತವನ್ನು ಹೇಳುವೆನು.

೫೨. ಗಂಧಮಾದನದಲ್ಲಿ ಶಂಖತೀರ್ಥವೆಂಬುದೊಂದು ತೀರ್ಥವಿದೆ. ನೀನು ಈ ಪಾಪಶಾಂತಿಗಾಗಿ ಅಲ್ಲಿ ಸಾವಧಾನಮನಸ್ಸಿನಿಂದ ಸ್ನಾನಮಾಡು.

ಪ್ರಾಪ್ಸ್ಯಸೇ ಚಿತ್ತಶುದ್ಧಿಂ ತ್ವಮುತೋ ವಿಗತಕಲ್ಮಷಃ ।
ತತಶ್ಚ ಲಬ್ಧವಿಜ್ಞಾನಃ ಪ್ರಾಪ್ಸ್ಯಸೇ ಶಾಶ್ವತಂ ಪದಂ ॥ ೫೩ ॥
ಅಹಂ ಧರ್ಮೋಽಸ್ಮಿ ಯೋಗೀಂದ್ರ ಸತ್ಯಮೇವ ಬ್ರವೀಮಿ ತೇ ।
ಇತಿ ಧರ್ಮವಚಃ ಶ್ರುತ್ವಾ ವತ್ಸನಾಭೋ ಮಹಾಮುನಿಃ ॥ ೫೪ ॥
ಸ್ನಾತುಕಾಮಃ ಶಂಖತೀರ್ಥೇ ಗಂಧಮಾದನಮನ್ವಗಾತ್ ।
ಶಂಖತೀರ್ಥಂ ಚ ಸಂಪ್ರಾಪ್ಯ ತತ್ರ ಸಸ್ನೌ ಮಹಾಮುನಿಃ ॥ ೫೫ ॥
ತತೋ ವಿಗತಪಾಪಸ್ಯ ಮುನೇರ್ನಿರ್ಮಲತಾಂ ಗತಂ ।
ತತೋಽಚಿರೇಣ ಕಾಲೇನ ಬ್ರಹ್ಮಭೂಯಮಗಾನ್ಮುನಿಃ ॥ ೫೬ ॥
ಏವಂ ವಃ ಕಥಿತಂ ವಿಪ್ರಾಃ ಶಂಖತೀರ್ಥಸ್ಯ ವೈಭವಂ ।
ಯತ್ರ ಹಿ ಸ್ನಾನಮಾತ್ರೇಣ ಕೃತಘ್ನೋಽಪಿ ವಿಮುಚ್ಯತೇ ॥ ೫೭ ॥
ಮಾತೃದ್ರೋಹೀ ಪಿತೃದ್ರೋಹೀ ಗುರುದ್ರೋಹೀ ತಥೈವ ಚ ।
ಅನ್ಯೇ ಕೃತಘ್ನನಿವಹಾ ಮುಚ್ಯಂತೇಽತ್ರ ನಿಮಜ್ಜನಾತ್ ॥ ೫೮ ॥
ಅತಃ ಕೃತಘ್ನೈರ್ಮನುಜೈಃ ಸೇವನೀಯಮಿದಂ ಸದಾ ।
ಅಹೋ ತೀರ್ಥಸ್ಯ ಮಾಹಾತ್ಮ್ಯಂ ಯತ್ಕೃತಘ್ನೋಽಪಿ ಮುಚ್ಯತೇ ॥ ೫೯ ॥

---

೫೩. ಅದರಿಂದ ನೀನು ಪಾಪರಹಿತನಾಗಿ ಚಿತ್ತಶುದ್ಧಿಯನ್ನು ಪಡೆಯುವೆ. ಅನಂತರ ಜ್ಞಾನಿಯಾಗಿ ಮೋಕ್ಷವನ್ನು ಹೊಂದುವೆ.

೫೪–೫೫. ಯೋಗಿವರ್ಯನೆ! ನಾನು ಧರ್ಮದೇವತೆಯು. ನಿನಗೆ ನಿಜವಾಗಿ ಹೇಳುವೆನು" ಎನಲು ವತ್ಸನಾಭನು ಆ ದೇವತೆಯ ಮಾತನ್ನು ಕೇಳಿ ಶಂಖ ತೀರ್ಥದಲ್ಲಿ ಸ್ನಾನಮಾಡಲೋಸುಗ ಗಂಧಮಾದನಪರ್ವತಕ್ಕೆ ತೆರಳಿ ಆ ಶಂಖ ತೀರ್ಥವನ್ನು ಸೇರಿ ಅಲ್ಲಿ ಮಿಂದನು.

೫೬. ತರುವಾಯ ಪಾಪರಹಿತನಾದ ಅವನ ಮನಸ್ಸು ನಿರ್ಮಲವಾಯಿತು. ಆ ಮುನಿಯು ಸ್ವಲ್ಪಕಾಲದಲ್ಲಿಯೇ ಮೋಕ್ಷವನ್ನೂ ಪಡೆದನು.

೫೭. ಎಲೈ ಬ್ರಾಹ್ಮಣರೆ! ಹೀಗೆ ನಿಮಗೆ ಶಂಖತೀರ್ಥದ ಮಾಹಾತ್ಮ್ಯೆವನ್ನು ಹೇಳಿರುವೆನು. ಇದರಲ್ಲಿ ಸ್ನಾನಮಾಡುವುದರಿಂದ ಕೃತಘ್ನನೂ ಮುಕ್ತನಾಗುವನು.

೫೮. ತಾಯಿ, ತಂದೆ, ಗುರುಗಳಿಗೆ ದ್ರೋಹಮಾಡಿದವರೂ, ಇತರ ಕೃತಘ್ನರೂ ಇಲ್ಲಿ ಸ್ನಾನಮಾಡುವುದರಿಂದ ಮುಕ್ತರಾಗುತ್ತಾರೆ.

೫೯. ಆದುದರಿಂದ ಕೃತಘ್ನರಾದ ಮಾನವರು ಈ ತೀರ್ಥವನ್ನು ಸೇವಿಸ ಬೇಕು. ಇದರಲ್ಲಿ ಮಿಂದ ಕೃತಘ್ನನೂ ಮುಕ್ತನಾಗುವುದರಿಂದ ಇದರ ಮಾಹಾತ್ಮ್ಯೆವು ಆಶ್ಚರ್ಯಕರವಾದುದು.

ಅಕೃತ್ವಾ ಭರಣಂ ಪಿತ್ರೋರದತ್ವಾ ಗುರುದಕ್ಷಿಣಾಂ ।
ಕೃತಘ್ನತಾಂ ಚ ಸಂಪ್ರಾಪ್ಯ ಮರಣಾಂತಾಹಿ ನಿಷ್ಕೃತಿಃ ॥ ೬೦ ॥
ಇಹತು ಸ್ನಾನಮಾತ್ರೇಣ ಕೃತಘ್ನಸ್ಯಾಪಿ ನಿಷ್ಕೃತಿಃ ।
ಕೃತಘ್ನತಾಽಪಿ ತತ್ತೀರ್ಥೇ ಸ್ನಾನಮಾತ್ರಾದ್ವಿನಶ್ಯತಿ ॥ ೬೧ ॥
ಅನ್ಯೇಷಾಂ ತುಚ್ಛಪಾಪಾನಾಂ ಸರ್ವೇಷಾಂ ಕಿಮುತಾಽಧುನಾ ॥ ೬೨ ॥
ಅಧ್ಯಾಯಮೇನಂ ಪಠೇದ್ಭಕ್ತಿಯುಕ್ತಃ
ಕೃತಘ್ನೋಽಪಿ ಮರ್ತ್ಯಾಃ ಸ ಪಾಪಾದ್ವಿಮುಕ್ತಃ ।
ವಿಶುದ್ಧಾಂತರಾತ್ಮಾ ಗತಃ ಸತ್ಯಲೋಕಂ
ಸಮಂ ಬ್ರಹ್ಮಣಾ ಮೋಕ್ಷಮಪ್ಯಾಶು ಗಚ್ಛೇತ್ ॥ ೬೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಶಂಖತೀರ್ಥಪ್ರಶಂಸನಂ— ವತ್ಸನಾಭಕೃತಘ್ನತಾದೋಷಶಾಂತಿವರ್ಣನಂ" ನಾಮ ಪಂಚವಿಂಶೋಽಧ್ಯಾಯಃ

---

೬೦. ತಂದೆ ತಾಯಿಗಳನ್ನು ಕಾಪಾಡದವನಿಗೂ, ಗುರುದಕ್ಷಿಣೆಯನ್ನು ಕೊಡದವನಿಗೂ, ಕೃತಘ್ನನಿಗೂ ಸಾಯುವುದೇ ಪ್ರಾಯಶ್ಚಿತ್ತವಾಗಿರುವುದು.

೬೧. ಆದರೆ ಇಲ್ಲಿ ಸ್ನಾನಮಾಡುವುದೇ ಕೃತಘ್ನನಿಗೆ ಪ್ರಾಯಶ್ಚಿತ್ತವಾಗಿರುವುದು. ಇಲ್ಲಿಯ ಸ್ನಾನದಿಂದ ಕೃತಘ್ನತೆಯು ಪರಿಹಾರವಾಗುವುದು.

೬೨. ಬೇರೆ ಅಲ್ಪವಾದ ಸಕಲ ಪಾಪಗಳ ವಿಷಯದಲ್ಲಿ ಏನುಹೇಳತಕ್ಕುದು.

೬೩. ಕೃತಘ್ನನೂ ಈ ಅಧ್ಯಾಯವನ್ನು ಪಠಿಸಿದರೆ ಅವನು ಪಾಪಮುಕ್ತನಾಗಿ ಶುದ್ಧಮನಸ್ಕನಾಗಿ ಸತ್ಯಲೋಕಕ್ಕೆ ತೆರಳಿ ಬ್ರಹ್ಮನೊಡನೆ ಮೋಕ್ಷಕ್ಕೆ ಹೋಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಶಂಖತೀರ್ಥಪ್ರಶಂಸನ—ವತ್ಸನಾಭಕೃತಘ್ನತಾದೋಷಶಾಂತಿವರ್ಣನ"ವೆಂಬ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಡ್ತ್ರಿಂಶೋಽಧ್ಯಾಯಃ

### ಯಮುನಾಗಂಗಾ ಗಯಾತೀರ್ಥ ಪ್ರಶಂಸನಂ—ಜಾನಶ್ರುತಿಜ್ಞಾನಾಽವಾಪ್ತಿ ವರ್ಣನಂ

ಶ್ರೀ ಸೂತ ಉವಾಚ :—

ವಿಧಾಯಾಽಭಿಷವಂ ಮರ್ತ್ಯಾಃ ಶಂಖತೀರ್ಥೇ ದ್ವಿಜೋತ್ತಮಾಃ ।
ಯಮುನಾಂ ಚೈವ ಗಂಗಾಂ ಚ ಗಯಾಂ ಚಾಽಪಿ ಕ್ರಮಾದ್ವ್ರಜೇತ್ ॥೧॥
ಯಮುನಾಖ್ಯಂ ಮಹಾತೀರ್ಥಂ ಗಂಗಾತೀರ್ಥಮನುತ್ತಮಂ ।
ಗಯಾತೀರ್ಥಂ ಚ ಮರ್ತ್ಯಾನಾಂ ಮಹಾಪಾತಕನಾಶನಂ ॥ ೨ ॥
ಏತತ್ತೀರ್ಥತ್ರಯಂ ಪುಣ್ಯಂ ಸರ್ವಲೋಕೇಷು ವಿಶ್ರುತಂ ।
ಸರ್ವವಿಘ್ನಪ್ರಶಮನಂ ಸರ್ವರೋಗನಿಬರ್ಹಣಂ ॥ ೩ ॥
ಏತದ್ಧಿ ತೀರ್ಥತ್ರಿತಯಂ ಸಕಲಾಽಜ್ಞಾನನಾಶನಂ ।
ಅವಿದ್ಯಾಯಾಂ ವಿನಷ್ಟಾಯಾಂ ತಥಾ ಜ್ಞಾನಪ್ರದಂ ನೃಣಾಂ ॥ ೪ ॥
ಜಾನಶ್ರುತಿರ್ಮಹಾರಾಜ ಏಷು ತೀರ್ಥೇಷು ವೈ ಪುರಾ ।
ಸ್ನಾತ್ವಾ ರೈಕ್ವಾದ್ದ್ವಿಜಶ್ರೇಷ್ಠಾತ್ಪ್ರಾಪ್ತವಾನ್ಜ್ಞಾನಸಮುತ್ತಮಂ ॥ ೫ ॥

ಋಷಯ ಊಚುः :—

ಸೂತ ಸರ್ವಾಽರ್ಥತತ್ವಜ್ಞ ವ್ಯಾಸಶಿಷ್ಯ ಮಹಾಮತೇ ।
ಯಮುನಾ ಚೈವ ಗಂಗಾಚ ಗಯಾಚೈವೇತಿ ವಿಶ್ರುತಂ ॥ ೬ ॥

---

## ಕನ್ನಡದ ಅನುವಾದ

### ಯಮುನಾ ಗಂಗಾ ಗಯಾತೀರ್ಥಪ್ರಶಂಸನ—ಜಾನಶ್ರುತಿಜ್ಞಾನಾವಾಪ್ತಿವರ್ಣನ

೧. ಸೂತನು ಹೇಳುತ್ತಾನೆ:—ಎಲೈ ದ್ವಿಜವರ್ಯರೆ! ಮಾನವರು ಶಂಖತೀರ್ಥದಲ್ಲಿ ಮಿಂದು ಯಮುನಾ, ಗಂಗಾ, ಗಯಾತೀರ್ಥಗಳಿಗೆ ಹೋಗಬೇಕು.

೨. ಯಮುನಾ, ಗಂಗಾ, ಗಯಾತೀರ್ಥಗಳು ಅತ್ಯುತ್ತಮಗಳೂ, ಮಹಾಪಾತಕಪರಿಹಾರಕಗಳೂ ಆಗಿರುವುವು.

೩—೪. ಸಮಸ್ತ ಪ್ರಪಂಚಗಳಲ್ಲಿಯೂ ಪ್ರಸಿದ್ಧವಾದ ಈ ಮೂರು ತೀರ್ಥಗಳು ಸಮಸ್ತ ವಿಘ್ನಗಳನ್ನು ಪರಿಹರಿಸುವುವೂ, ಸಕಲ ರೋಗಗಳನ್ನು ನಿವಾರಿಸುವುವೂ ಸಮಸ್ತ ಅಜ್ಞಾನಗಳನ್ನು ನಾಶಗೊಳಿಸುವುವೂ ಆಗಿ ಮಾನವರ ಅವಿದ್ಯೆಯು ನಷ್ಟವಾದೊಡನೆ ಜ್ಞಾನವನ್ನೀಯುವುವಾಗಿರುವುವು.

೫. ಹಿಂದೆ ಜಾನಶ್ರುತಿಯೆಂಬ ಮಹಾರಾಜನು ಈ ತೀರ್ಥಗಳಲ್ಲಿ ಮಿಂದು ರೈಕ್ವವೆಂಬ ಬ್ರಾಹ್ಮಣನಿಂದ ಉತ್ತಮ ತತ್ವಜ್ಞಾನವನ್ನು ಪಡೆದನು.

೬—೭. ಋಷಿಗಳು ಕೇಳುತ್ತಾರೆ:— ಸಕಲ ತತ್ವವನ್ನರಿತವನೂ, ವ್ಯಾಸಶಿಷ್ಯನೂ, ಪ್ರಾಜ್ಞನೂ ಆದ ಎಲೈ ಸೂತನೆ! ಪ್ರಸಿದ್ಧವಾದ ಯಮುನಾ, ಗಂಗಾ,

ಏತತ್ತೀರ್ಥ ತ್ರಯಂ ಕಸ್ಮಾದಾಗತಂ ಗಂಧಮಾದನೇ ।
ಜಾನಶ್ರುತೇಶ್ಚ ರಾಜರ್ಷೇಃ ಸ್ನಾನಾತ್ತೀರ್ಥತ್ರಯೇಽಪಿ ಚ ।
ಜ್ಞಾನಾಽವಾಪ್ತಿಃ ಕಥಂ ರೈಕ್ವಾದಸ್ಮಾಕಂ ಸೂತ ತದ್ವದ ॥ ೭ ॥
ಶ್ರೀ ಸೂತ ಉವಾಚ:—
ರೈಕ್ವನಾಮಾ ಮಹರ್ಷಿಸ್ತು ಪುರಾ ವೈ ಗಂಧಮಾದನೇ ॥ ೮ ॥
ತಪಃ ಸುದುಶ್ಚರಂ ಕುರ್ವನ್ನ್ಯವಸತ್ತಪಸಾಂ ನಿಧಿಃ ।
ದೀರ್ಘಕಾಲಂ ತಪಃ ಕುರ್ವನ್ಸ ವೈ ರೈಕ್ವೋ ಮಹಾಮುನಿಃ ॥ ೯ ॥
ತಪೋಬಲೇನ ಮಹತಾ ದೀರ್ಘಮಾಯುರವಾಪ್ತವಾನ್ ।
ಜನ್ಮನಾ ಪಂಗುರೇವಾಽಽಸೀದ್ರೈಕ್ವನಾಮಾ ಮಹಾಮುನಿಃ ॥ ೧೦ ॥
ಪಂಗುತ್ವಾದಸಮರ್ಥೋಽಭೂದ್ಗಂತುಂ ತೀರ್ಥಾನ್ಯಸೌ ಮುನಿಃ ।
ಸಂತಿ ಯಾನಿತು ತೀರ್ಥಾನಿ ಗಂಧಮಾದನಪರ್ವತೇ ॥ ೧೧ ॥
ತಾನಿ ಗಚ್ಛತಿ ಸಾಮೀಪ್ಯಾಚ್ಛಕಟೇನೈವ ಸಂಚರನ್ ।
ಸ ಯದ್ರೈಕ್ವೋ ಮುನಿವರೋ ಯುಗ್ವೇನ ಸಹ ವರ್ತತೇ ॥ ೧೨ ॥
ತಪಸ್ವೀ ವೈದಿಕೈರ್ಲೋಕೇ ಸಯುಗ್ವೇತ್ಯಭಿಧೀಯತೇ ।
ಯುಗ್ವೇತಿ ಶಕಟಂ ಪ್ರೋಕ್ತಂ ಸ ತೇನ ಸಹ ವರ್ತತೇ ॥ ೧೩ ॥
ಸ ಖಲ್ವೇವಂ ಮುನಿಶ್ರೇಷ್ಠಃ ಸಯುಗ್ವಾ ನಾಮ ವೈ ಮುನಿಃ ।
ಪೂರ್ಣಜ್ಞಾನಸ್ತಪಸ್ತೇಪೇ ಗಂಧಮಾದನಪರ್ವತೇ ॥ ೧೪ ॥

---

ಗಯಾತೀರ್ಥಗಳು ಗಂಧಮಾದನಪರ್ವತಕ್ಕೆ ಏಕೆ ಬಂದವು? ಇವುಗಳಲ್ಲಿ ಮಿಂದ ಜಾನಶ್ರುತಿಮಹಾರಾಜನಿಗೆ ರೈಕ್ವನಿಂದ ತತ್ವಜ್ಞಾನವು ಹೇಗೆ ಲಭಿಸಿತು. ಅದನ್ನು ನಮಗೆ ತಿಳಿಸು.

೮–೧೦. ಸೂತನು ಹೇಳುತ್ತಾನೆ:—ಹಿಂದೆ ಗಂಧಮಾದನದಲ್ಲಿ ತಪಸ್ಸುಗಳಿಗೆ ಆಶ್ರಯನಾದ ರೈಕ್ವನೆಂಬ ಮಹರ್ಷಿಯು ಕಠಿನವಾದ ತಪಸ್ಸನ್ನಾಚರಿಸುತ್ತಿದ್ದನು. ಹುಟ್ಟು ಕುಂಟನಾದ ಅವನು ಬಹುಕಾಲ ತಪಸ್ಸನ್ನು ಮಾಡುತ್ತ ತಪಸ್ಸಿನ ಸಾಮರ್ಥ್ಯದಿಂದಲೇ ದೀರ್ಘಾಯುಷ್ಯವನ್ನು ಪಡೆದನು.

೧೧–೧೩. ಆ ಮುನಿಯು ಕುಂಟನಾದುದರಿಂದ ತೀರ್ಥಗಳಿಗೆ ನಡೆದು ಹೋಗಲಸಮರ್ಥನಾಗಿ ಗಂಧಮಾದನದಲ್ಲಿರುವ ಸಮೀಪದ ತೀರ್ಥಗಳಿಗೆ ಗಾಡಿಯಿಂದಲೆ ಹೋಗುತ್ತಿದ್ದನು. ಅವನು ಯಾವಾಗಲೂ ಗಾಡಿಯೊಡನೆ ಇರುತ್ತಿದ್ದರಿಂದ ಅವನನ್ನು ವೈದಿಕರು ಸಯುಗ್ವಾ ಎಂದು ಕರೆಯುತ್ತಿದ್ದರು.

೧೪. ಆ ಸಯುಗ್ವ ಮುನಿವರನು ಜ್ಞಾನಿಯಾಗಿ ಗಂಧಮಾದನ ಪರ್ವತದಲ್ಲಿ ತಪಸ್ಸನ್ನು ಮಾಡುತ್ತಿದ್ದನು.

ಗ್ರೀಷ್ಮೇ ಪಂಚಾಽಗ್ನಿಮಧ್ಯಸ್ಥಃ ಸೋಽತಪ್ಯತ ಮಹತ್ತಪಃ ।
ವರ್ಷಾಯಾಂ ಕಂಠದಘ್ನೇಷು ಜಲೇಷು ಸಮವರ್ತತ ॥ ೧೫ ॥
ತಪಸಾ ಶೋಷಿತೇ ಗಾತ್ರೇ ಪಾಮಾ ತಸ್ಯ ವ್ಯಜಾಯತ ।
ಕಂಡೂಯತ ಸಪಾಮಾನಂ ದಿವಾರಾತ್ರಂ ಮುನೀಶ್ವರಃ ॥ ೧೬ ॥
ಕಂಡೂಯಮಾನ ಏವಾಽಯಂ ಪಾಮಾನಂ ನ ತಪೋಽತ್ಯಜತ್ ।
ಅಜಾಯತ ಮನಸ್ತ್ವೇವಂ ತಸ್ಯ ಸಯುಗ್ವನೋ ಮುನೇಃ ॥ ೧೭ ॥
ಯಮುನಾಯಾಂ ಚ ಗಂಗಾಯಾಂ ಗಯಾಯಾಂ ಚಾಽಧುನೈವ ಹಿ ।
ಅಸ್ಮಿಂಸ್ತೀರ್ಥತ್ರಯೇ ಪುಣ್ಯೇ ಸ್ನಾತವ್ಯಂ ಹಿ ಮಯಾತ್ವಿತಿ ॥ ೧೮ ॥
ಏವಂ ವಿಚಿಂತ್ಯ ಸಮುನಿರನ್ಯಾಂ ಚಿಂತಾಮಥಾಽಕರೋತ್ ।
ಅಹಂ ಹಿ ಜನ್ಮನಾ ಪಂಗುರತಃ ಸ್ನಾನಂ ಹಿ ದುರ್ಲಭಂ ॥ ೧೯ ॥
ಅತಿದೂರಂ ಮಯಾ ಗಂತುಂ ಶಕಟೇನ ನ ಶಕ್ಯತೇ ।
ಕಿಂ ಕರೋಮ್ಯಧುನೇತ್ಯೇವಂ ಸ ವಿತರ್ಕ್ಯ ಮಹಾಮತಿಃ ॥ ೨೦ ॥
ತೀರ್ಥತ್ರಯೇಷು ಸ್ನಾನಾರ್ಥಂ ಕರ್ತವ್ಯಂ ನಿಶ್ಚಿಕಾಯ ವೈ ।
ಅಪ್ರಸಹ್ಯಮನಾಧೃಷ್ಯಂ ವಿದ್ಯತೇ ಮೇ ತಪೋಬಲಂ ॥ ೨೧ ॥
ತೇನೈವಾವಾಹಯಿಷ್ಯಾಮಿ ತದ್ಧಿ ತೀರ್ಥತ್ರಯಂ ತ್ವಿಹ ।
ಇತಿ ನಿಶ್ಚಿತ್ಯ ಮನಸಾ ಪ್ರಾಙ್ಮುಖೋ ನಿಯತೇಂದ್ರಿಯಃ ॥ ೨೨ ॥

---

೧೫. ಅವನು ಗ್ರೀಷ್ಮರ್ತುವಿನಲ್ಲಿ ಪಂಚಾಗ್ನಿಮಧ್ಯದಲ್ಲಿಯೂ, ಮಳೆಗಾಲದಲ್ಲಿ ಕಂಠಪರಿಮಾಣದ ನೀರಿನಲ್ಲಿಯೂ ನಿಂತು ತಪಸ್ಸನ್ನಾಚರಿಸುತ್ತಿದ್ದನು.

೧೬. ಅವನ ದೇಹವು ತಪಸ್ಸಿನಿಂದ ಒಣಗಲು ಕಜ್ಜಿಯುಂಟಾಯಿತು. ಆ ಮುನಿಯು ಹಗಲು ರಾತ್ರಿ ಆ ಕಜ್ಜಿಯನ್ನು ತುರಿಸಿಕೊಳ್ಳುತ್ತಿದ್ದನು.

೧೭. ಕಜ್ಜಿಯನ್ನು ತುರಿಸಿಕೊಳ್ಳುತ್ತಿದ್ದರೂ ಅವನು ತಪಸ್ಸನ್ನು ಬಿಡಲಿಲ್ಲ. ತಪಸ್ಸನ್ನು ಮಾಡುತ್ತಲೇ ಅವನು ಹೀಗೆ ಚಿಂತಿಸಿದನು.

೧೮. "ಈಗ ನಾನು ಪುಣ್ಯಕರವಾದ ಗಂಗಾ, ಯಮುನಾ, ಗಯಾ ತೀರ್ಥಗಳಲ್ಲಿ ಸ್ನಾನಮಾಡಬೇಕು."

೧೯. ಹೀಗೆ ಆಲೋಚಿಸುತ್ತಿರುವ ಅವನಿಗೆ ಮತ್ತೊಂದು ಚಿಂತೆಯುಂಟಾಯಿತು. "ಹುಟ್ಟುಕುಂಟನಾದ ನನಗೆ ಗಂಗಾಸ್ನಾನವು ದುರ್ಲಭವಾದುದು.

೨೦–೨೨. ಬಂಡಿಯಲ್ಲಿ ಬಹಳದೂರ ಹೋಗಲು ಶಕ್ಯವಲ್ಲ. ಈಗ ನಾನೇನುಮಾಡಲಿ" ಎಂದಾಲೋಚಿಸಿ ಅವನು ಆ ಮೂರು ತೀರ್ಥಗಳಲ್ಲಿಯೂ ಸ್ನಾನಮಾಡಲೇಬೇಕೆಂದರಿತು ನಿಶ್ಚಯಿಸಿದನು. ಅದರಂತೆ ಅವನು "ನನ್ನಲ್ಲಿ ಅಸಾಧ್ಯವಾದ ತಪಸ್ಸಿನ ಬಲವಿರುವುದು. ಅದರಿಂದಲೆ ನಾನು ಆ ಮೂರು ತೀರ್ಥಗಳನ್ನೂ ಇಲ್ಲಿ ಆವಾಹನೆಮಾಡುವೆನು" ಎಂದು ನಿಶ್ಚಯಿಸಿ ಜಿತೇಂದ್ರಿಯ

ತ್ರಿರಾಚಮ್ಯ ಚ ಸಯುಗ್ವಾನ್ದಧ್ಯೌ ಕ್ಷಣಮತಂದ್ರಿತಃ ।
ತಸ್ಯ ಮಂತ್ರಪ್ರಭಾವೇನ ಯಮುನಾ ಸಾ ಮಹಾನದೀ ॥ ೨೩ ॥
ಗಂಗಾಚ ಜಹ್ನುತನಯಾ ಗಯಾ ಸಾ ಪಾಪನಾಶಿನೀ ।
ಭೂಮಿಂ ನಿರ್ಭಿದ್ಯ ತಿಸ್ರೋಽಪಿ ಪಾತಾಲಾತ್ಸಹಸೋತ್ಥಿತಾಃ ॥ ೨೪ ॥
ಮಾನುಷಂ ರೂಪಮಾಸ್ಥಾಯ ಸಯುಗ್ವಾನಮುಪೇತ್ಯ ಚ ।
ಊಚುಃ ಪರಮಸಂಹೃಷ್ಟಾ ಹರ್ಷಯಂತ್ಯಶ್ಚ ತಂ ಮುನಿಂ ॥ ೨೫ ॥
ಸ ಯುಗ್ವನ್ರೈಕ್ವ ಭದ್ರಂತೇ ಧ್ಯಾನಾದಸ್ಮಾದುಪಾರಮ ।
ತ್ವನ್ಮಂತ್ರೇಣ ಸಮಾಕೃಷ್ಟಾ ವಯಮತ್ರ ಸಮಾಗತಾಃ ॥ ೨೬ ॥
ಕಿಂ ಕರ್ತವ್ಯಂ ತವಾಽಸ್ಮಾಭಿಸ್ತದ್ವದಸ್ವ ಮುನೀಶ್ವರ ।
ಇತಿ ತಾಸಾಂ ವಚಃ ಶ್ರುತ್ವಾ ಸಯುಗ್ವಾನ್ಹಿ ಮಹಾಮುನಿಃ ॥ ೨೭ ॥
ಧ್ಯಾನಾದುಪಾರಮತ್ತೂರ್ಣಂ ತಾಶ್ಚಾಽಪಶ್ಯತ್ಪುರಃ ಸ್ಥಿತಾಃ ।
ಸ ತಾಃ ಸಂಪೂಜ್ಯ ವಿಧಿವದ್ರೈಕ್ವೋ ವಾಚಮಭಾಷತ ॥ ೨೮ ॥
ಯಮುನೇ ದೇವಿ ಹೇ ಗಂಗೇ ಹೇ ಗಯೇ ಪಾಪನಾಶಿನಿ ।
ಸನ್ನಿಧಾನಂ ಕುರುಧ್ವಂ ಮೇ ಗಂಧಮಾದನಪರ್ವತೇ ॥ ೨೯ ॥
ಯತ್ರ ಭೂಮಿಂ ವಿನಿರ್ಭಿದ್ಯ ಭವತ್ಯ ಇಹ ನಿರ್ಗತಾಃ ।
ತಾನಿ ಪುಣ್ಯಾನಿ ತೀರ್ಥಾನಿ ಭವೇಯುರ್ವೋಽಭಿಧಾನತಃ ॥ ೩೦ ॥

---

ನಾಗಿ ಪೂರ್ವಮುಖವಾಗಿ ಕುಳಿತು, ಮೂರುಸಾರಿ ಆಚಮನಮಾಡಿ ಜಾಗರೂಕತೆಯಿಂದ ಕ್ಷಣಕಾಲ ಧ್ಯಾನಿಸಿದನು. ಅವನ ಮಂತ್ರದ ಶಕ್ತಿಯಿಂದ ಗಂಗಾ, ಯಮುನಾ, ಗಯೆಗಳೆಂಬ ಮೂರು ನದಿಗಳೂ ಭೂಮಿಯನ್ನು ಭೇದಿಸಿ ಪಾತಾಳದಿಂದ ಕೂಡಲೆ ಮೇಲಕ್ಕೆದ್ದುವು.

೨೫–೨೬. ಅವು ಮನುಷ್ಯಾಕೃತಿಯನ್ನು ಧರಿಸಿ ಸಯುಗ್ವನನ್ನು ಹೊಂದಿ ಅತ್ಯಾನಂದದಿಂದ ಅವನನ್ನು ಸಂತೋಷಗೊಳಿಸುತ್ತ, "ರೈಕ್ವ! ನಿನಗೆ ಮಂಗಳವಾಗಲಿ, ನೀನು ಈ ಧ್ಯಾನವನ್ನು ನಿಲ್ಲಿಸು. ನಾವು ನಿನ್ನ ಮಂತ್ರದಿಂದ ಆಕರ್ಷಿಸಲ್ಪಟ್ಟು ಇಲ್ಲಿಗೆ ಬಂದಿರುವೆವು.

೨೭–೨೮. ಮುನಿವರ್ಯ! ನಮ್ಮಿಂದ ನಿನಗೇನಾಗಬೇಕು. ಅದನ್ನು ಹೇಳು" ಎನ್ನಲು, ಸಯುಗ್ವನು ಆ ನದಿಗಳ ಮಾತನ್ನು ಕೇಳಿ ಕೂಡಲೆ ಧ್ಯಾನವನ್ನು ನಿಲ್ಲಿಸಿ ಮುಂದಿರುವ ಆ ನದಿಗಳನ್ನು ನೋಡಿ ವಿಧಿಯಂತೆ ಅವುಗಳನ್ನು ಪೂಜಿಸಿ ಇಂತೆಂದನು.

೨೯. "ಓ ಯಮುನೆ! ಗಂಗೆ! ಗಯೆ! ನೀವು ನನಗಾಗಿ ಈ ಗಂಧಮಾದನ ಪರ್ವತದಲ್ಲಿ ನೆಲೆಸಿರಿ.

೩೦. ನೀವು ಭೂಮಿಯನ್ನು ಭೇದಿಸಿಕೊಂಡು ಮೇಲಕ್ಕೆ ಬಂದ ಸ್ಥಳಗಳು ನಿಮ್ಮ ಹೆಸರಿನಿಂದ ಪುಣ್ಯತೀರ್ಥಗಳಾಗಲಿ.

ಸಹಸ್ರಾಽಂತರಧೀಯಂತ ತಥಾಽಸ್ತ್ವಿತ್ಯೇವ ತತ್ರ ತಾಃ ।
ತದಾ ಪ್ರಭೃತಿ ತೀರ್ಥಾನಿ ತಾನಿ ತ್ರೀಣ್ಯಪಿ ಭೂತಲೇ ॥ ೩೧ ॥
ತೇನ ತೇನಾಽಭಿಧಾನೇನ ಗೀಯಂತೇ ಸರ್ವದಾ ಜನೈಃ ।
ಯತ್ರ ಭೂಮಿಂ ವಿನಿರ್ಭಿದ್ಯ ಯಮುನಾ ನಿರ್ಗತಾ ತದಾ ॥ ೩೨ ॥
ಯಮುನಾತೀರ್ಥಮಿತಿ ವೈ ತಜ್ಜ್ಞೈರಭಿಧೀಯತೇ ।
ಯತೋ ವೈ ಪೃಥಿವೀರಂಧ್ರಾಜ್ಜಾಹ್ನವೀ ಸಹಸೋತ್ಥಿತಾ ॥ ೩೩ ॥
ಗಂಗಾತೀರ್ಥಮಿತಿ ಖ್ಯಾತಂ ತಲ್ಲೋಕೇ ಪಾಪನಾಶನಂ ।
ಗಯಾ ಹಿ ಮಾನುಷಂ ರೂಪಂ ಯತ ಆಸ್ಥಾಯ ನಿರ್ಯಯೌ ॥ ೩೪ ॥
ತದೇವ ಭೂಮಿವಿವರಂ ಗಯಾತೀರ್ಥಂ ಪ್ರಚಕ್ಷತೇ ।
ಏವಮೇತನ್ಮಹಾಪುಣ್ಯಂ ತೀರ್ಥತ್ರಯಮನುತ್ತಮಂ ॥ ೩೫ ॥
ರೈಕ್ವಮಂತ್ರಪ್ರಭಾವೇಣ ಪೃಥಿವ್ಯಾಃ ಸಹಸೋತ್ಥಿತಂ ।
ಅತ್ರ ತೀರ್ಥತ್ರಯೇ ಸ್ನಾನಂ ಯೇ ಕುರ್ವಂತಿ ನರೋತ್ತಮಾಃ ॥ ೩೬ ॥
ತೇಷಾಮಜ್ಞಾನನಾಶಃ ಸ್ಯಾದ್ಜ್ಞಾನಸಮುಪ್ಯುದಯಂ ಲಭೇತ್ ।
ಸ್ವಮಂತ್ರೇಣ ಸಮಾಕೃಷ್ಟೇ ತತ್ರ ತೀರ್ಥತ್ರಯೇ ಮುನಿಃ ॥ ೩೭ ॥
ಸ್ನಾನಂ ಸಮಾಚರನ್ನಿತ್ಯಂ ಸ ಕಾಲಾನತ್ಯವಾಹಯತ್ ।
ಏತಸ್ಮಿನ್ನೇವ ಕಾಲೇತು ರಾಜಾ ಜಾನಶ್ರುತಿರ್ಮಹಾನ್ ॥ ೩೮ ॥
ಪುತ್ರಸಂಜ್ಞಸ್ಯ ರಾಜರ್ಷೇಃ ಪೌತ್ರೋ ಧರ್ಮೈಕತತ್ಪರಃ ।
ದೇಯಮನ್ನಾದಿ ಸ ತದಾ ಹ್ಯರ್ಥಿಭ್ಯಃ ಶ್ರದ್ಧಯೈವ ಯತ್ ॥ ೩೯ ॥

---

೩೧–೪೧. ಆ ನದಿಗಳು ಹಾಗೆಯೇ ಆಗಲೆಂದು ಅಲ್ಲಿಯೇ ಅಡಗಿ ಹೋದುವು. ಅದು ಮೊದಲ್ಗೊಂಡು ಆ ಮೂರು ತೀರ್ಥಗಳೂ ಭೂಮಿಯಲ್ಲಿ ಆಯಾ ಹೆಸರಿನಿಂದ ಯಾವಾಗಲೂ ಜನರಿಂದ ಕರೆಯಲ್ಪಡುತ್ತಿವೆ. ಯಮುನೆಯು ಭೇದಿಸಿಕೊಂಡು ಮೇಲಕ್ಕೆದ್ದ ಸ್ಥಳಕ್ಕೆ ಯಮುನಾತೀರ್ಥ ವೆಂದೂ, ಜಾಹ್ನವಿಯು ಭೇದಿಸಿಕೊಂಡು ಮೇಲಕ್ಕೆದ್ದ ಸ್ಥಳಕ್ಕೆ ಗಂಗಾತೀರ್ಥ ವೆಂದೂ, ಗಯೆಯು ಮನುಷ್ಯಾಕೃತಿಯಿಂದ ಮೇಲಕ್ಕೆ ಬಂದ ಸ್ಥಳಕ್ಕೆ ಗಯಾ ತೀರ್ಥವೆಂದೂ ಹೆಸರಾಯಿತು. ಹೀಗೆ ರೈಕ್ವನ ಮಂತ್ರಮಾಹಾತ್ಮ್ಯೆಯಿಂದ ಭೂಮಿಯಿಂದ ಮೇಲಕ್ಕೆದ್ದ ಅತ್ಯಂತ ಪುಣ್ಯಕರವೂ, ಶ್ರೇಷ್ಠವೂ ಆದ ಮೂರು ತೀರ್ಥಗಳೂ ಕೂಡಲೆ ಹುಟ್ಟಿದುವು. ಈ ಮೂರು ತೀರ್ಥಗಳಲ್ಲಿ ಮಿಂದ ಮಾನವೋತ್ತಮರ ಅಜ್ಞಾನವು ನಾಶವಾಗಿ ಜ್ಞಾನವುಂಟಾಗುವುದು. ಆ ಸಯುಗ್ವನು ತನ್ನ ಮಂತ್ರಪ್ರಭಾವದಿಂದ ಆಕರ್ಷಿಸಲ್ಪಟ್ಟ ಆ ಮೂರು ತೀರ್ಥಗಳಲ್ಲಿ ನಿತ್ಯವೂ ಸ್ನಾನಮಾಡುತ್ತ ಕಾಲವನ್ನು ಕಳೆಯುತ್ತಿದ್ದನು. ಈ ಸಮಯದಲ್ಲಿಯೇ ಪುತ್ರನೆಂಬ ರಾಜರ್ಷಿಯ ಮೊಮ್ಮಗನಾದ ಜಾನಶ್ರುತಿ

ತಸ್ಮಾದೇನಂ ಜನಾ ಲೋಕೇ ಶ್ರದ್ಧಾದೇಯಂ ಪ್ರಚಕ್ಷತೇ ।
ಯತೋ ಬಹುತರಂ ವಾಕ್ಯಮನ್ನಾದ್ಯಸ್ಯ ಮಹೀಪತೇಃ ॥ ೪೦ ॥
ಅರ್ಥಿನಾಂ ಕ್ಷುಧಿತಾನಾಂ ತು ತೃಪ್ತ್ಯರ್ಥಂ ವರ್ತತೇ ಗೃಹೇ ।
ಅತೋಽಯಮರ್ಥಿಭಿಸ್ಸರ್ವೈರ್ಬಹುವಾಕ್ಯ ಇತೀರ್ಯತೇ ॥ ೪೧ ॥
ಸ ವೈ ಪೌತ್ರಾಯಣೋ ರಾಜಾ ಜಾನಶ್ರುತಸುತೋ ಬಲೀ ।
ಪ್ರಿಯಾಽತಿಥಿರ್ಬಭೂವಾಽಸೌ ಬಹುದಾಯೀ ತಥಾಽಭವತ್ ॥ ೪೨ ॥
ನಗರೇಷು ಚ ರಾಷ್ಟ್ರೇಷು ಗ್ರಾಮೇಷು ಚ ವನೇಷು ಚ ।
ಚತುಷ್ಪಥೇಷು ಸರ್ವೇಷು ಮಹಾಮಾರ್ಗೇಷು ಸರ್ವಶಃ ॥ ೪೩ ॥
ಬಹ್ವನ್ನಪಾನಸಂಯುಕ್ತಂ ಸೂಪಶಾಕಾದಿ ಸಂಯುತಂ ।
ಆತಿಥ್ಯಂ ಕಲ್ಪಯಾಮಾಸ ತೃಪ್ತಯೇಽರ್ಥಿಜನಸ್ಯ ವೈ ॥ ೪೪ ॥
ಅನ್ನಪಾನಾದಿಕಂ ಸರ್ವಮುಪಯುಙ್ಧ್ವಮಿಹಾಽರ್ಥಿನಃ ।
ಇತ್ಯಸೌ ಘೋಷಯಾಮಾಸ ತತ್ರ ತತ್ರ ಜನಾಸ್ಪದೇ ॥ ೪೫ ॥
ತಸ್ಯ ಪ್ರಿಯಾಽತಿಥೇರೇವ ನೃಪಸ್ಯ ಬಹುದಾಯಿನಃ ।
ಅರ್ಥಿಭ್ಯೋ ದಾನಶೌಂಡಸ್ಯ ಗುಣಾಃ ಸರ್ವತ್ರ ವಿಶ್ರುತಾಃ ॥ ೪೬ ॥
ಅಥ ಪೌತ್ರಾಯಣಸ್ಯಾಽಸ್ಯ ಗುಣಗ್ರಾಮೇಣ ವರ್ತತಃ ।
ದೇವರ್ಷಯೋ ಮಹಾಭಾಗಾಸ್ತಸ್ಯಾಽನುಗ್ರಹಕಾಂಕ್ಷಿಣಃ ॥ ೪೭ ॥

---

ಯೆಂಬ ಧರ್ಮನಿರತನಾದ ದೊರೆಯು ಇದ್ದನು. ಇವನು ಅನ್ನ ಮೊದಲಾದುವುಗಳನ್ನು ಯಾಚಕರಿಗೆ ಶ್ರದ್ಧೆಯಿಂದ ಕೊಡುತ್ತಿದ್ದುದರಿಂದ ಇವನನ್ನು ಜನರು ಶ್ರದ್ಧಾದೇಯನೆಂದು ಕರೆಯುತ್ತಿದ್ದರು. ಇವನ ಮನೆಯಲ್ಲಿ ಅನ್ನಕ್ಕಿಂತಲೂ ಹಸಿವುಗೊಂಡ ಅರ್ಥಿಗಳಿಗೆ ಮಾತುಗಳು ಅತ್ಯಂತ ತೃಪ್ತಿಯನ್ನುಂಟುಮಾಡುತ್ತಿದ್ದುದರಿಂದ ಅವರು ಇವನನ್ನು ಬಹುವಾಕ್ಯನೆಂದು ಕರೆಯುತ್ತಿದ್ದರು.

೪೨. ಜಾನಶ್ರುತನ ಮಗನೂ, ಬಲಿಷ್ಠನೂ ಆದ ಈ ಪೌತ್ರಾಯಣನು ಅತಿಥಿಗಳಲ್ಲಿ ಪ್ರೀತಿಯುಳ್ಳವನಾಗಿ ಬಹುವಾಗಿ ದಾನಮಾಡುತ್ತಿದ್ದನು.

೪೩–೪೪. ಇವನು ಪಟ್ಟಣ, ರಾಜ್ಯ, ಹಳ್ಳಿ, ಕಾಡು, ಚೌಕಗಳು, ದಾರಿಗಳು ಇವುಗಳಲ್ಲಿ ಅತಿಥಿಗಳ ತೃಪ್ತಿಗಾಗಿ ಅನ್ನ, ನೀರು, ತೊವ್ವೆ, ಕಾಯಿಪಲ್ಯ ಮೊದಲಾದವುಗಳಿಂದ ಕೂಡಿದ ಆತಿಥ್ಯವನ್ನು ಕಲ್ಪಿಸಿದ್ದನು.

೪೫. ಇವನು ಅಲ್ಲಲ್ಲಿ ಜನರು ನೆರೆದಿರುವಾಗ "ಅರ್ಥಿಗಳೇ ಇಲ್ಲಿ ಬನ್ನಿರಿ. ಅನ್ನಪಾನಾದಿಗಳನ್ನೆಲ್ಲ ಉಪಯೋಗಿಸಿರಿ" ಎಂದು ಸಾರಿಸಿದನು.

೪೬. ಅತಿಥಿಗಳಲ್ಲಿ ಪ್ರೀತಿಯುಳ್ಳವನೂ, ಬಹುದಾನಮಾಡುವವನೂ ಆದ ಈ ಪೌತ್ರಾಯಣನ ಗುಣಗಳು ಎಲ್ಲೆಡೆಯಲ್ಲಿಯೂ ಪ್ರಸಿದ್ಧವಾದುವು.

೪೭–೪೮. ಬಳಿಕ ಗುಣಶಾಲಿಯಾದ ಪೌತ್ರಾಯಣನಿಗೆ ಅನುಗ್ರಹ

ಹಂಸರೂಪಂ ಸಮಾಸ್ಥಾಯ ನಿದಾಘಸಮಯೇ ನಿಶಿ ।
ರಮಣೀಯಾಂ ವಿಧಾಯಾಶು ಶ್ರೇಣೀಮಾಕಾಶಮಾರ್ಗತಃ ॥ ೪೮ ॥
ಸೌಧವಾತಾಯನಸ್ಥಸ್ಯ ತಸ್ಯೋಪರಿ ಮಹೀಪತೇಃ ।
ಉಡ್ಡೀಯೋಡ್ಡೀಯ ವೇಗೇನ ತರಸಾ ಜಗ್ಮುರುಚ್ಚಕೈಃ ॥ ೪೯ ॥
ತರಸಾ ಪತತಾಂ ತೇಷಾಂ ಹಂಸಾನಾಂ ಪೃಷ್ಠತೋ ವ್ರಜನ್ ।
ಏಕೋ ಹಂಸಸ್ತು ಸಂಬೋಧ್ಯ ಹಂಸಮಗ್ರೇಸರಂ ತದಾ ॥ ೫೦ ॥
ಸೋಪಹಾಸಮಿದಂ ವಾಕ್ಯಂ ಪ್ರಾಹ ಶೃಣ್ವತಿ ರಾಜನಿ ।
ಭೋ ಭೋ ಭಲ್ಲಾಕ್ಷ ಭಲ್ಲಾಕ್ಷ ಪುರೋ ಗಚ್ಛಸ್ಮರಾಲಕ ॥ ೫೧ ॥
ಸೌಧಮಧ್ಯೇ ಪುರಸ್ತಾದ್ವೈ ಜಾನಶ್ರುತಸುತೋ ನೃಪಃ ।
ವರ್ತತೇ ಪೂಜನೀಯೋಽಯಂ ನ ಪಶ್ಯಸಿ ಕಿಮಂಧವತ್ ॥ ೫೨ ॥
ಯಸ್ಯ ತೇಜೋ ದುರಾಧರ್ಷಮಾಬ್ರಹ್ಮಭವನಾದಿದಂ ।
ಅನಂತಾದಿತ್ಯಸಂಕಾಶಂ ಜ್ವಲತೇ ಪುರತೋ ಭೃಶಂ ॥ ೫೩ ॥
ತಮತಿಕ್ರಮ್ಯ ರಾಜರ್ಷಿಂ ಮಾಽಗಾಸ್ತ್ವಮುಪರಿ ದ್ರುತಂ ।
ಯದಿ ಗಚ್ಛಸಿ ತತ್ತೇಜಸ್ತ್ವಾಂಪ್ರತಂ ತ್ವಾಂ ಪ್ರಧಕ್ಷ್ಯತಿ ॥ ೫೪ ॥
ಇತ್ಯುಕ್ತವಂತಂ ತಂ ಹಂಸಮಗ್ರತಃ ಪ್ರತ್ಯಭಾಷತ ।
ಅಹೋ ಭವಾನಭಿಜ್ಞೋಽಸಿ ಶ್ಲಾಘನೀಯೋಽಸಿ ಸೂರಿಭಿಃ ॥ ೫೫ ॥

---

ಮಾಡಲು ಮಹಾಭಾಗ್ಯವಂತರಾದ ದೇವರ್ಷಿಗಳು ಬೇಸಗೆಯ ರಾತ್ರಿಯಲ್ಲಿ ಹಂಸಗಳ ರೂಪವನ್ನು ತಾಳಿ ಮನೋಹರವಾದ ಸಾಲನ್ನು ಕಟ್ಟಿಕೊಂಡು ಉಪ್ಪರಿಗೆಯ ಕಿಟಕಿಯಲ್ಲಿರುವ ರಾಜನಮೇಲೆ ವೇಗದಿಂದ ಹಾರಿ ಹಾರಿ ಮೇಲೆ ಮೇಲಕ್ಕೆ ಹೋಗುತ್ತಿದ್ದರು.

೫೦–೫೨. ವೇಗದಿಂದ ಹಾರುತ್ತಿರುವ ಆ ಹಂಸಗಳ ಹಿಂದೆ ಹೋಗುತ್ತಿರುವ ಮತ್ತೊಂದು ಹಂಸವು ಮುಂದೆ ಹೋಗುತ್ತಿರುವ ಹಂಸವನ್ನು ಸಂಬೋಧಿಸಿ ರಾಜನು ಕೇಳುವಂತೆ ಹಾಸ್ಯದಿಂದ ಇಂತೆಂದಿತು : "ಎಲಾ ಭಲ್ಲಾಕ್ಷ! ಮುಂದಕ್ಕೆ ಸರಿ. ಅದೊ ನಿನ್ನ ಮುಂದೆ ಉಪ್ಪರಿಗೆಯ ನಡುವೆ ಪೂಜ್ಯನಾದ ಜಾನಶ್ರುತ ಮಹಾರಾಜನ ತನಯನು ನಿಂತಿರುವನು. ನೀನು ಕುರುಡನಂತೆ ಅವನನ್ನು ನೋಡದೆಯೆ ಮುಂದುವರಿಯುತ್ತಿರುವೆಯಲ್ಲ!

೫೩–೫೪. ತಿರಸ್ಕರಿಸಲಾಗದ ಅವನ ತೇಜಸ್ಸು ಬ್ರಹ್ಮಲೋಕದವರೆಗೆ ಆವರಿಸಿ ಅಮಿತಸೂರ್ಯರಂತೆ ಮುಂಭಾಗದಲ್ಲಿ ಅತಿಶಯವಾಗಿ ಜ್ವಲಿಸುತ್ತಿದೆ. ನೀನು ಆ ರಾಜರ್ಷಿಯನ್ನು ಅತಿಕ್ರಮಿಸಿ ಮೇಲ್ಭಾಗದಲ್ಲಿ ತ್ವರೆಗೊಂಡು ಹಾರ ಬೇಡ. ಹಾಗೆ ಹಾರಿಹೋದರೆ ಅವನ ತೇಜಸ್ಸು ನಿನ್ನನ್ನು ಸುಡುವುದು."

೫೫. ಹೀಗೆ ಹೇಳಿದ ಆ ಹಂಸವನ್ನು ಕುರಿತು ಮುಂದಿನ ಹಂಸವು

ಅಶ್ಲಾಘನೀಯಂ ಕಿತವಂ ಯತ್ತ್ವಮೇನಂ ಪ್ರಶಂಸಸೇ ।
ಪ್ರಶಂಸಸೇ ಕಿಮರ್ಥಂ ತ್ವಮಲ್ಪಂ ಸಂತಮಿಮಂ ಜನಂ ॥ ೫೬ ॥
ಭಸ್ತ್ರಾವತ್ಪಶುವಚ್ಚೈವ ಕೇವಲಂ ಶ್ವಾಸಧಾರಿಣಂ ।
ನ ಹ್ಯಯಂ ವೇತ್ತಿ ಧರ್ಮಾಣಾಂ ರಹಸ್ಯಂ ಪೃಥಿವೀಪತಿಃ ॥ ೫೭ ॥
ತತ್ವಜ್ಞಾನೀ ಯಥಾ ರೈಕ್ವಃ ಸಯುಗ್ವಾಬ್ರಾಹ್ಮಣೋತ್ತಮಃ ।
ರೈಕ್ವಸ್ಯ ಹಿ ಮಹಜ್ಜ್ಯೋತೀರಹಸ್ಯಂ ದೈವತೈರಪಿ ॥ ೫೮ ॥
ನ ಹ್ಯಸ್ಯ ಪ್ರಾಣಿಮಾತ್ರಸ್ಯ ತೇಜಸ್ತಾದೃಶಮಸ್ತಿ ವೈ ।
ರೈಕ್ವಸ್ಯ ಪುಣ್ಯರಾಶೀನಾಮಿಯತ್ತಾ ನೈವ ವಿದ್ಯತೇ ॥ ೫೯ ॥
ಗಣ್ಯಂತೇ ಪಾಂಸವೋ ಭೂಮೇರ್ಗಣ್ಯಂತೇ ದಿವಿ ತಾರಕಾಃ ।
ರೈಕ್ವಪುಣ್ಯಮಹಾಮೇರುಸಮೂಹೋ ನೈವ ಗಣ್ಯತೇ ॥ ೬೦ ॥
ಕಿಂ ಚ ತಿಷ್ಠಂತ್ವಿಮೇ ಧರ್ಮಾ ನಶ್ವರಾಸ್ತಸ್ಯ ವೈ ಮುನೇಃ ।
ಬ್ರಹ್ಮಜ್ಞಾನಮಬಾಧ್ಯಂ ಯತ್ತೇನ ಸ ಶ್ಲಾಘ್ಯತೇ ಮುನಿಃ ॥ ೬೧ ॥
ಜಾನಶ್ರುತೇಸ್ತು ತಾದೃಕ್ಕೋ ಧರ್ಮ ಏವ ನ ವಿದ್ಯತೇ ।
ದುರ್ಲಭಂ ಯತ್ತು ಯೋಗೀಂದ್ರೈಃ ಕುತಸ್ತದ್ಜ್ಞಾನವೈಭವಂ ॥ ೬೨ ॥

---

ಹೀಗೆಂದಿತು: "ಆಶ್ಚರ್ಯ! ನೀನು ಪ್ರಾಜ್ಞನೂ, ಪ್ರಾಜ್ಞರಿಗೆ ಶ್ಲಾಘ್ಯನೂ ಆಗಿರುವೆ.

೫೬. ನೀನು ಶ್ಲಾಘನೆಗೆ ಅನರ್ಹನೂ, ವಂಚಕನೂ, ಅಲ್ಪನೂ ಆಗಿರುವ ಇವನನ್ನು ಏತಕ್ಕೆ ಹೊಗಳುತ್ತಿರುವೆ?

೫೭. ಈ ದೊರೆಯು ತಿದಿಯಂತೆಯೂ, ಪಶುವಿನಂತೆಯೂ ಕೇವಲ ಉಸಿರಾಡುತ್ತಿರುವನೇ ಹೊರತು ಧರ್ಮದ ರಹಸ್ಯವನ್ನರಿತವನಲ್ಲ.

೫೮–೫೯. ಇವನು ರೈಕ್ವನೆಂಬ ಸಯುಗ್ವಬ್ರಾಹ್ಮಣೋತ್ತಮನಂತೆ ತತ್ವಜ್ಞಾನಿಯಾಗಿರುವನೆ? ಆ ರೈಕ್ವನ ಮಹಾ ತೇಜಸ್ಸಿನ ರಹಸ್ಯವನ್ನು ದೇವತೆಗಳೂ ತಿಳಿದಿರುವುದಿಲ್ಲ. ಸುಮ್ಮನೆ ಜೀವಿಸಬೇಕೆಂದು ಜೀವಿಸುತ್ತಿರುವ ಇವನಲ್ಲಿ ಅಂತಹ ತೇಜಸ್ಸಿರುವುದೆ? ರೈಕ್ವನ ಪುಣ್ಯರಾಶಿಯನ್ನಳೆಯಲಳವಲ್ಲ.

೬೦. ಭೂಮಿಯ ದೂಳೂ, ಆಕಾಶದಲ್ಲಿರುವ ತಾರೆಗಳೂ ಎಣಿಸಲ್ಪಡುವುವು. ಆದರೆ ರೈಕ್ವನ ಮಹಾಮೇರುವಿನಂತಹ ಪುಣ್ಯದ ಸಮೂಹವು ಎಣಿಸಲು ಅಶಕ್ಯವು.

೬೧. ನಶ್ವರವಾದ ಈ ಧರ್ಮಗಳಿರಲಿ. ಆ ಮುನಿಯ ಬ್ರಹ್ಮಜ್ಞಾನವು ಅಬಾಧ್ಯವಾಗಿರುವುದರಿಂದ ಅವನು ಶ್ಲಾಘಿಸಲ್ಪಡುತ್ತಿದ್ದಾನೆ.

೬೨. ಜಾನಶ್ರುತಿಯಲ್ಲಿ ಅಂತಹ ಧರ್ಮವೇ ಇಲ್ಲ. ಯೋಗಿಗಳಿಗೆ ದುರ್ಲಭವಾದ ಆ ರೈಕ್ವನ ಜ್ಞಾನದ ವೈಭವವು ಇವನಿಗೆ ಹೇಗೆ ಉಂಟಾದೀತು?

ಪರಿತ್ಯಜ್ಯ ದುರಾತ್ಮಾನಂ ತದ್ವರಾಕಮಿಮಂ ಜನಂ ।
ಸ ಏವ ರೈಕ್ವಃ ಸಯುಗ್ವಾನ್ಶ್ಲಾಘ್ಯತಾಂ ಭವತಾ ಮುನಿಃ ॥ ೬೩ ॥
ಜನ್ಮನಾ ಪಂಗುರಪಿ ಯಃ ಸ್ವಸ್ಯ ಸ್ನಾನಚಿಕೀರ್ಷಯಾ ।
ಗಂಗಾಂ ಚ ಯಮುನಾಂ ಚಾಽಪಿ ಗಯಾಮಪಿ ಮುನೀಶ್ವರಃ ॥ ೬೪ ॥
ಆಹ್ವಯಾಮಾಸ ಮಂತ್ರೇಣ ನಿಜಾಶ್ರಮಸಮೀಪತಃ ।
ತಸ್ಯ ಬ್ರಹ್ಮವಿದೋ ರೈಕ್ವಮಹರ್ಷೇರ್ಧರ್ಮಸಂಚಯೇ ॥ ೬೫ ॥
ಅಂತರ್ಭವಂತಿ ಧರ್ಮೌಘಾಸ್ತ್ರೈಲೋಕ್ಯೋದರವರ್ತಿನಾಂ ।
ರೈಕ್ವಸ್ಯ ಧರ್ಮಕಕ್ಷ್ಯಾ ತು ನ ಹಿ ತ್ರೈಲೋಕ್ಯವರ್ತಿನಾಂ ॥ ೬೬ ॥
ಪ್ರಾಣಿನಾಂ ಧರ್ಮಕಕ್ಷ್ಯಾಯಾಂ ಅಂತರ್ಭವತಿ ಕರ್ಹಿಚಿತ್ ।
ಏವಮುಗ್ರೇಸರೇ ಹಂಸೇ ಕಥಿತ್ವೋಪರತೇ ಸತಿ ॥ ೬೭ ॥
ಹಂಸರೂಪಾ ಮುನೀಂದ್ರಾಸ್ತೇ ಬ್ರಹ್ಮಲೋಕಂ ಯಯುಃ ಪುನಃ ।
ಅಥ ಪೌತ್ರಾಯಣೋ ರಾಜಾ ಜಾನಶ್ರುತಿರರಿಂದಮಃ ॥ ೬೮ ॥
ರೈಕ್ವಂ ಚೋತ್ಕರ್ಷಕಾಷ್ಠಾಯಾಂ ನಿಶಮ್ಯ ಪರಮಾವಧಿಂ ।
ವಿಷಣ್ಣೋಽಭವದತ್ಯರ್ಥಂ ಪರಾಕೋಽಕ್ಷಜಿತೋ ಯಥಾ ॥ ೬೯ ॥
ಚಿಂತಯಾಮಾಸ ಸ ನೃಪಃ ಪೌನಃಪುನ್ಯೇನ ನಿಃಶ್ವಸನ್ ।
ಹಂಸ ಉತ್ಕರ್ಷಯನ್ರೈಕ್ವಂ ನಿಕೃಷ್ಟಂ ಮಾಮಿಹಾಽಬ್ರವೀತ್ ॥ ೭೦ ॥

---

೬೩. ಆದುದರಿಂದ ನೀನು ಈ ನೀಚರಾಜನನ್ನು ಬಿಟ್ಟು ರೈಕ್ವಮುನಿಯನ್ನು ಬೇಕಾದಷ್ಟು ಹೊಗಳು.

೬೪. ರೈಕ್ವನು ಹುಟ್ಟುಕುಂಟನಾದರೂ, ತನ್ನ ಸ್ನಾನಕ್ಕಾಗಿ ಗಂಗಾ ಯಮುನಾ ನದಿಗಳನ್ನೂ ಗಯೆಯನ್ನೂ ಮಂತ್ರಬಲದಿಂದ ತನ್ನ ಆಶ್ರಮದ ಸಮೀಪಕ್ಕೆ ಕರೆದಿರುವನು.

೬೫–೬೯. ಬ್ರಹ್ಮಜ್ಞಾನಿಯಾದ ಆ ರೈಕ್ವಮಹರ್ಷಿಯ ಧರ್ಮಸಂಚಯದಲ್ಲಿ ಮೂರು ಲೋಕದಲ್ಲಿರುವ ಜನರ ಧರ್ಮಸಮೂಹಗಳೆಲ್ಲ ಅಡಗಿಹೋಗುವುವು. ರೈಕ್ವನ ಧರ್ಮದ ರೀತಿಯು (ಅಂತಸ್ತು) ಮೂರು ಲೋಕದ ಪ್ರಾಣಿಗಳ ಧರ್ಮ ಕಕ್ಷ್ಯೆಯಲ್ಲಿ ಅಡಗುವುದಿಲ್ಲ.'' ಹಂಸವು ಹೀಗೆ ಹೇಳಿ ಸುಮ್ಮನಾಗಲು, ಹಂಸ ರೂಪರಾದ ಆ ಮುನಿವರ್ಯರು ಬ್ರಹ್ಮಲೋಕಕ್ಕೆ ತೆರಳಿದರು. ಬಳಿಕ ಶತ್ರು ನಾಶಕನಾದ ಪೌತ್ರಾಯಣರಾಜನು, ರೈಕ್ವನು ಅತ್ಯುತ್ಕೃಷ್ಟನಾಗಿರುವನೆಂದು ಕೇಳಿ ಜೂಜಿನಲ್ಲಿ ಸೋತವನಂತೆ ಅತ್ಯಂತ ಖೇದಗೊಂಡನು.

೭೦–೮೦. ಆ ರಾಜನು ಪುನಃ ಪುನಃ ನಿಟ್ಟುಸಿರುಬಿಡುತ್ತ ಚಿಂತಿಸಿದನು: ''ಹಂಸವು ರೈಕ್ವನನ್ನು ಉತ್ಕೃಷ್ಟನನ್ನಾಗಿ ಮಾಡಿ ನನ್ನನ್ನು ನೀಚನೆಂದು ಹೇಳಿತು. ರೈಕ್ವನ ಮಾಹಾತ್ಮ್ಯೆಯು ಆಶ್ಚರ್ಯಕರವಾದುದು. ಅವನನ್ನು ಪಕ್ಷಿಗಳೂ

ಅಹೋ ರೈಕ್ವಸ್ಯ ಮಾಹಾತ್ಮ್ಯಂ ಯಂ ಪ್ರಶಂಸಂತಿ ಪಕ್ಷಿಣಃ ।
ತತ್ಪರಿತ್ಯಜ್ಯ ಸಂಸಾರಂ ಸರ್ವಂ ರಾಜ್ಯಮಿಹಾಽಧುನಾ ॥ ೭೧ ॥
ಸಯುಗ್ವಾನಂ ಮಹಾತ್ಮಾನಂ ತಮೇವ ಶರಣಂ ವ್ರಜೇ ।
ಕೃಪಾನಿಧಿಃ ಸ ವೈ ರೈಕ್ವಃ ಶರಣಂ ಮಾಮುಪಾಗತಂ ॥ ೭೨ ॥
ಪ್ರತಿಗೃಹ್ಯಾತ್ಮವಿಜ್ಞಾನಂ ಮಹ್ಯಂ ಸಮುಪದೇಕ್ಷ್ಯತಿ ।
ಇತ್ಯಸೌ ಚಿಂತಯನ್ನೇವ ಕಥಂ ಕಥಮಪಿ ದ್ವಿಜಾಃ ॥ ೭೩ ॥
ಜಾಗ್ರನ್ನೇವಾಽಯಮುದ್ವೇಲಾಂ ರಾತ್ರಿಂ ತಾಮತ್ಯವಾಹಯತ್ ।
ನಿಶಾಽವಸಾನೇ ಸಂಪ್ರಾಪ್ತೇ ಬಂದಿವೃಂದಪ್ರವರ್ತಿತಂ ॥ ೭೪ ॥
ಅಶೃಣೋನ್ಮಂಗಲರವಂ ತೂರ್ಯಘೋಷಸಮನ್ವಿತಂ ।
ತದಾಕರ್ಣ್ಯ ಮಹಾರಾಜಸ್ತದಾ ತಲ್ಪಸ್ಥ ಏವ ಸಸ್ ॥ ೭೫ ॥
ಸಾರಥಿಂ ಶೀಘ್ರಮಾಹೂಯ ಬಭಾಷೇ ಸಾದರಂ ವಚಃ ।
ಸಾರಥೇ ಸತ್ವರಂ ಗತ್ವಾ ರಥಮಾರುಹ್ಯ ವೇಗವತ್ ॥ ೭೬ ॥
ಆಶ್ರಮೇಷು ಮಹರ್ಷೀಣಾಂ ಪುಣ್ಯೇಷು ವಿಪಿನೇಷು ಚ ।
ವಿವಿಕ್ತೇಷು ಪ್ರದೇಶೇಷು ಸತಾಮಾವಾಸಭೂಮಿಷು ॥ ೭೭ ॥
ತೀರ್ಥಾನಾಂ ಚ ನದೀನಾಂ ಚ ಕೂಲೇಷು ಪುಲಿನೇಷು ಚ ।
ಅನ್ಯೇಷು ಚ ಪ್ರದೇಶೇಷು ಯತ್ರ ಸಂತಿ ಮುನೀಶ್ವರಾಃ ॥ ೭೮ ॥
ತೇಷು ಸರ್ವೇಷು ಯೋಗೀಂದ್ರಂ ಪಂಗುಂ ಶಕಟಸಂಸ್ಥಿತಂ ।
ರೈಕ್ವಾಭಿಧಾನಂ ಸರ್ವೇಷಾಂ ಧರ್ಮಾಣಾಮೇಕಸಂಶ್ರಯಂ ॥ ೭೯ ॥

---

ಹೊಗಳುತ್ತಿವೆ. ಆದುದರಿಂದ ಈಗ ನಾನು ಸಂಸಾರವನ್ನೂ, ಸಕಲ ರಾಜ್ಯವನ್ನೂ ಬಿಟ್ಟು ಮಹಾತ್ಮನಾದ ಆ ಸಯುಗ್ವನನ್ನು ಮರೆಹೋಗುವೆನು. 'ದಯಾಳುವಾದ ಆ ರೈಕ್ವನು ಶರಣುಹೊಂದಿದ ನನ್ನನ್ನು ಪರಿಗ್ರಹಿಸಿ ನನಗೆ ಬ್ರಹ್ಮಜ್ಞಾನವನ್ನು ಉಪದೇಶಿಸುವನು.'' ಅಯ್ಯಾ ಬ್ರಾಹ್ಮಣರೆ! ಈ ಪೌತ್ರಾಯಣರಾಜನು ಹೀಗೆ ಚಿಂತಿಸುತ್ತ ಜಾಗರೂಕನಾಗಿಯೇ ಅತಿ ಕಷ್ಟದಿಂದ ಅಪಾರವಾದ ಆ ರಾತ್ರಿಯನ್ನು ಕಳೆದನು. ಬೆಳಗಾಗಲು ಅವನು, ಸ್ತುತಿಪಾಠಕರು ಹೇಳುತ್ತಿದ್ದ ವಾದ್ಯದ ಧ್ವನಿಸಹಿತವಾದ ಮಂಗಲಗೀತವನ್ನು ಕೇಳಿ ಹಾಸಿಗೆಯಿಂದಲೇ ಶೀಘ್ರವಾಗಿ ಸಾರಥಿಯನ್ನು ಕರೆದು ಪ್ರೀತಿಯಿಂದ ಅವನನ್ನು ಕುರಿತು ಇಂತೆಂದನು: " ಎಲೈ ಸಾರಥಿಯೆ! ಶೀಘ್ರವಾಗಿ ಹೋಗಿ ವೇಗವುಳ್ಳ ರಥವನ್ನು ಹತ್ತಿ ಮಹರ್ಷಿಗಳ ಆಶ್ರಮಗಳಲ್ಲಿಯೂ, ಪುಣ್ಯಕರವಾದ ವನಗಳಲ್ಲಿಯೂ, ನಿರ್ಜನವಾದ ಸ್ಥಳಗಳಲ್ಲಿಯೂ, ಸಜ್ಜನರ ವಾಸಸ್ಥಾನಗಳಲ್ಲಿಯೂ, ತೀರ್ಥ ಮತ್ತು ನದಿಗಳ ದಡಗಳಲ್ಲಿಯೂ, ಮರಳುದಿಣ್ಣೆಗಳಲ್ಲಿಯೂ, ಮುನಿವರ್ಯರಿರುವ ಇತರ ಪ್ರದೇಶಗಳಲ್ಲಿಯೂ, ಶಕಟದಲ್ಲಿರುವವನೂ, ಸಮಸ್ತ ಧರ್ಮಗಳಿಗೆ ಮುಖ್ಯಾಶ್ರಯನೂ,

ಬ್ರಹ್ಮಜ್ಞಾನೈಕನಿಲಯಂ ಸಯುಗ್ವಾನಂ ಗವೇಷಯ ।
ಅನ್ವಿಷ್ಯ ತೂರ್ಣಂ ಮತ್ಪ್ರೀತ್ಯೈ ಪುನರಾಗಚ್ಛ ಸಾರಥೇ ॥ ೮೦ ॥
ಸ ತಥೇತಿ ವಿನಿರ್ಗತ್ಯ ವೇಗವದ್ರಥಸಂಸ್ಥಿತಃ ।
ಸರ್ವತ್ರಾಽನ್ವೇಷಯಾಮಾಸ ರೈಕ್ವಂ ಬ್ರಹ್ಮವಿದಂ ಮುನಿಂ ॥ ೮೧ ॥
ಗುಹಾಸು ಪರ್ವತಾನಾಂ ಚ ಮುನೀನಾಮಾಶ್ರಮೇಷು ಚ ।
ಸಂಚಚಾರ ಮಹೀಂ ಕೃತ್ಸ್ನಾಂ ತತ್ರ ತತ್ರ ಗವೇಷಯನ್ ॥ ೮೨ ॥
ಅನ್ವಿಷ್ಯ ವಿವಿಧಾನ್ದೇಶಾನ್ಸಾರಥಿಸ್ತ್ವರಯಾ ಸಹ ।
ಕ್ರಮಾನ್ಮಹರ್ಷಿಸಂಬಾಧಂ ಗಂಧಮಾದನಮನ್ವಗಾತ್ ॥ ೮೩ ॥
ಮಾರ್ಗಮಾಣಃ ಸ ತತ್ರಾಽಪಿ ತಂ ದದರ್ಶ ಮುನೀಶ್ವರಂ ।
ಕಂಡೂಯಮಾನಂ ಪಾಮಾನಂ ಶಕಟೀಯಸ್ಥಲಸ್ಥಿತಂ ॥ ೮೪ ॥
ಅದ್ವೈತನಿಷ್ಕಲಂ ಬ್ರಹ್ಮ ಚಿಂತಯಂತಂ ನಿರಂತರಂ ।
ತಂ ದೃಷ್ಟ್ವಾ ಸಾರಥಿಸ್ತತ್ರ ಸಯುಗ್ವಾನಂ ಮಹಾಮುನಿಂ ॥ ೮೫ ॥
ರೈಕ್ವೋಽಯಮಿತಿ ಸಂಚಿಂತ್ಯ ತಮಾಸಾದ್ಯ ಪ್ರಣಮ್ಯ ಚ ।
ವಿನಯಾನ್ಮುನಿಮುಪ್ರಾಕ್ಷೀದುಪವಿಶ್ಯ ತದಂತಿಕೇ ॥ ೮೬ ॥
ಸಯುಗ್ವನ್ರೈಕ್ವನಾಮಾ ಚ ಬ್ರಹ್ಮನ್ಕಿಂ ವೈ ಭವಾನಿತಿ ।
ತಸ್ಯ ವಾಕ್ಯಂ ಸಮಾಕರ್ಣ್ಯ ಸ ಮುನಿಃ ಪ್ರತ್ಯಭಾಷತ ॥ ೮೭ ॥

---

ಬ್ರಹ್ಮಜ್ಞಾನಿಯೂ ಆಗಿರುವ ರೈಕ್ವನೆಂಬ ಮುನಿವರ್ಯನನ್ನು ನನ್ನ ಪ್ರೀತಿಗಾಗಿ ಹುಡುಕಿ ಮರಳಿ ಬಾ.”

೮೧–೮೪. ಸಾರಥಿಯು ಹಾಗೆಯೆ ಆಗಲೆಂದು ಹೊರಟು ವೇಗವಾಗಿ ಹೋಗುವ ರಥದಲ್ಲಿ ಕುಳಿತು ಬ್ರಹ್ಮಜ್ಞಾನಿಯಾದ ರೈಕ್ವಮುನಿವರ್ಯನನ್ನು ಎಲ್ಲೆಡೆಯಲ್ಲಿಯೂ ಹುಡುಕಿದನು. ಸಾರಥಿಯು ಪರ್ವತಗಳ ಗುಹೆಗಳಲ್ಲಿಯೂ, ಮುನಿಗಳ ಆಶ್ರಮಗಳಲ್ಲಿಯೂ ರೈಕ್ವನನ್ನು ಹುಡುಕುತ್ತ ಅಖಿಲಭೂಮಂಡಲದಲ್ಲೆಲ್ಲ ಸಂಚರಿಸಿದನು. ಅವನು ನಾನಾ ದೇಶಗಳಲ್ಲಿ ಕ್ರಮವಾಗಿ ಹುಡುಕುತ್ತ ಎಲ್ಲಿಯೂ ಕಾಣದೆ ಮಹರ್ಷಿಗಳಿಂದ ನಿಬಿಡವಾದ ಗಂಧಮಾದನಪರ್ವತಕ್ಕೆ ಹೋದನು. ಅವನು ಆ ಪರ್ವತದಲ್ಲಿಯೂ ಅತ್ತಿತ್ತ ಹುಡುಕುತ್ತ ಬಂಡಿಯಲ್ಲಿ ಕುಳಿತು ಕಜ್ಜಿಯನ್ನು ಕೆರೆದುಕೊಳ್ಳುತ್ತಿರುವ ಆ ರೈಕ್ವನನ್ನು ಕಂಡನು.

೮೫–೮೭. ಅದ್ವಿತೀಯನೂ, ಪೂರ್ಣನೂ (ವಿಕಾರರಹಿತನೂ), ಆದ ಬ್ರಹ್ಮನನ್ನು ಎಡಬಿಡದೆ ಧ್ಯಾನಿಸುತ್ತಿರುವ ಆ ಸಯುಗ್ವಮುನಿಯನ್ನು ನೋಡಿ ಆ ಸಾರಥಿಯು ಇವನೇ ರೈಕ್ವನೆಂದಾಲೋಚಿಸಿ ಅವನನ್ನು ಸಮೀಪಿಸಿ ವಂದಿಸಿ ಅವನ ಬಳಿ ಕುಳಿತು ವಿನಯದಿಂದ, “ಬ್ರಾಹ್ಮಣನೆ! ರೈಕ್ವನೆಂಬ ಮಹಾತ್ಮನಾದ ಸಯುಗ್ವನು ನೀನೇಯೆ?” ಎಂದು ಪ್ರಶ್ನಿಸಿದನು. ಅವನ ಮಾತನ್ನು ಕೇಳಿ ಆ ಮುನಿಯು ಪ್ರತ್ಯುತ್ತರಕೊಟ್ಟನು.

ಅಹಮೇವ ಸಯುಗ್ವಾನ್ಸ್ವೈ ರೈಕ್ವನಾಮೇತಿ ವೈ ತದಾ ।
ಇತ್ಯಾಕರ್ಣ್ಯ ಮುನೇರ್ವಾಕ್ಯಮಿಂಗಿತೈರ್ಬಹುಭಿಸ್ತಥಾ ॥ ೮೮ ॥
ಕುಟುಂಬಭರಣಾರ್ಥಾಯ ಧನೇಚ್ಛಾಮವಗಮ್ಯ ಚ ।
ಸರ್ವಂ ನ್ಯವೇದಯದ್ರಾಜ್ಞೋ ನಿವೃತ್ತೋ ಗಂಧಮಾದನಾತ್ ॥ ೮೯ ॥
ಜಾನಶ್ರುತಿರ್ನಿಶಮ್ಯಾಥ ಸಾರಥೇರ್ವಾಕ್ಯಮಾದರಾತ್ ।
ಷಟ್ಛತಾನಿ ಗವಾಂ ಚಾಪಿ ನಿಷ್ಕಭಾರಂ ಧನಸ್ಯ ಚ ॥ ೯೦ ॥
ರಥಂ ಚಾಶ್ವತರೀಯುಕ್ತಂ ಸಮಾದಾಯ ತ್ವರಾನ್ವಿತಃ ।
ಪೌತ್ರಾಯಣಃ ಸ ರಾಜರ್ಷಿಸ್ತಂ ರೈಕ್ವಂ ಪ್ರತಿಚಕ್ರಮೇ ॥ ೯೧ ॥
ಗತ್ವಾ ಚ ವಚನಂ ಪ್ರಾಹ ತಂ ರೈಕ್ವಂ ಸ ಮಹೀಪತಿಃ ।
ಭಗವನ್ರೈಕ್ವ ಸಯುಗ್ವನ್ಮದ್ದತ್ತಂ ಪ್ರತಿಗೃಹ್ಯತಾಂ ॥ ೯೨ ॥
ಷಟ್ಛತಾನಿ ಗವಾಂ ಚಾಪಿ ನಿಷ್ಕಭಾರಂ ಧನಸ್ಯ ಚ ।
ರಥಂ ಚಾಶ್ವತರೀಯುಕ್ತಂ ಪ್ರತಿಗೃಹ್ಣೀಷ್ವ ಮಾಮಕಂ ॥ ೯೩ ॥
ಗೃಹೀತ್ವಾ ಸರ್ವಮೇತತ್ತು ಭೋ ಬ್ರಹ್ಮನ್ನನುಶಾಧಿ ಮಾಂ ।
ಅದ್ವೈತಬ್ರಹ್ಮವಿಜ್ಞಾನಂ ಮಹ್ಯಂ ಸಮುಪದಿಶ್ಯತಾಂ ॥ ೯೪ ॥
ಇತಿ ತಸ್ಯ ವಚಃ ಶ್ರುತ್ವಾ ಸಸ್ಪೃಹಂ ಚ ಸಸಂಭ್ರಮಂ
ರೈಕ್ವಃ ಪ್ರತ್ಯಾಹ ಸಯುಗ್ವಾನ್ಜಾನಶ್ರುತಿಮರಿಂದಮಂ ॥ ೯೫ ॥

---

೮೮–೮೯. "ರೈಕ್ವನೆಂಬ ಸುಯುಗ್ವನು ನಾನೇ" ಎನ್ನಲು, ಆ ಸಾರಥಿಯು ಮುನಿಯ ಆ ಮಾತನ್ನು ಕೇಳಿ ಬಹುಪ್ರಕಾರವಾದ ಅವನ ಇಂಗಿತಗಳಿಂದ ಕುಟುಂಬರಕ್ಷಣೆಗಾಗಿ ಅವನಿಗೆ ದ್ರವ್ಯವು ಬೇಕೆಂಬ ಅಪೇಕ್ಷೆಯಿರುವುದೆಂದರಿತು ಆ ಗಂಧಮಾದನದಿಂದ ಮರಳಿ ಬಂದು ಎಲ್ಲವನ್ನೂ ಪೌತ್ರಾಯಣ ದೊರೆಗೆ ತಿಳಿಸಿದನು.

೯೦–೯೧. ತರುವಾಯ ಜಾನಶ್ರುತಿಯು ಸಾರಥಿಯ ಮಾತನ್ನು ಆದರದಿಂದ ಕೇಳಿ ಆರುನೂರು ಗೋವುಗಳನ್ನೂ, ನಿಷ್ಕನಾಣ್ಯಗಳ ಹೊರೆಯನ್ನೂ, (೨೦ ತೊಲೆ ತೂಕ ಚಿನ್ನ-ಒಂದು ನಿಷ್ಕ) ಹೇಸರಕತ್ತೆಗಳನ್ನು ಕಟ್ಟಿರುವ ರಥವನ್ನೂ ತೆಗೆದುಕೊಂಡು ವೇಗದಿಂದ ಆ ರೈಕ್ವನಿರುವ ಸ್ಥಳಕ್ಕೆ ಹೊರಟನು.

೯೨–೯೪. ಆ ರಾಜನು ರೈಕ್ವನ ಬಳಿಗೆ ಹೋಗಿ ಇಂತೆಂದನು: "ಪೂಜ್ಯನಾದ ರೈಕ್ವನೆ! ನಾನು ಅರ್ಪಿಸುವ ಆರುನೂರು ಗೋವುಗಳು, ಹಣದ ಹೊರೆ, ಹೇಸರಕತ್ತೆಯ ರಥ ಇವುಗಳನ್ನೆಲ್ಲ ತೆಗೆದುಕೊಂಡು ನನಗೆ ಅದ್ವೈತಬ್ರಹ. ಜ್ಞಾನವನ್ನು ಉಪದೇಶಮಾಡು."

೯೫. ಆಶೆಯಿಂದಲೂ, ಸಂಭ್ರಮದಿಂದಲೂ ಕೂಡಿ ಆ ರಾಜನು ಹೇಳಿದ ಈ ಮಾತನ್ನು ಕೇಳಿ ರಿಪುನಾಶಕನಾದ ಅವನನ್ನು ಕುರಿತು ರೈಕ್ವನು ಹೀಗೆಂದನು.

ರೈಕ್ವ ಉವಾಚ :—

ಏತಾ ಗಾವಸ್ತ್ವದೀಯಾಸ್ತು ನಿಷ್ಕಭಾರಸ್ತಥಾ ರಥಃ ।
ಕಿಮಲ್ಪೇನ ಮಮಾನೇನ ಬಹುಕಲ್ಪೇಷು ಜೀವತಃ ॥ ೯೬ ॥
ನ ಮೇ ಕುಟುಂಬನಿರ್ವಾಹೇ ಪರ್ಯಾಪ್ತಮಿದಮಂಜಸಾ ।
ಏವಂ ಶತಗುಣಂ ಚಾಽಪಿ ಯದಿ ದತ್ತಂ ತ್ವಯಾ ಮಮ ॥ ೯೭ ॥
ನಾಽಲಂ ತದಪಿ ರಾಜೇಂದ್ರ ಕುಟುಂಬಭರಣಾಯ ವೈ ।
ಇತಿ ರೈಕ್ವವಚಃ ಶ್ರುತ್ವಾ ಜಾನಶ್ರುತಿರಭಾಷತ ॥ ೯೮ ॥

ಜಾನಶ್ರುತಿರುವಾಚ :—

ತ್ವಯೋಪದಿಶ್ಯಮಾನಸ್ಯ ಬ್ರಹ್ಮಜ್ಞಾನಸ್ಯ ವೈ ಮುನೇ ।
ನ ಹಿ ಮೂಲ್ಯಮಿದಂ ಬ್ರಹ್ಮನ್ಗೋಘಸಂ ರಥ ಏವ ಚ ॥ ೯೯ ॥
ಪ್ರತಿಗೃಹ್ಣೀಷ್ವ ವಾ ಮಾ ವಾ ಮನ್ಯೈತತ್ತು ಗವಾದಿಕಂ ।
ನಿಷ್ಕಲಾಽದ್ವೈತವಿಜ್ಞಾನಂ ಬ್ರಹ್ಮನ್ನುಪದಿಶಸ್ವ ಮೇ ।
ತದಾಕರ್ಣ್ಯ ವಚಸ್ತಸ್ಯ ಸಯುಗ್ವಾನ್ವಾಕ್ಯಮಬ್ರವೀತ್ ॥ ೧೦೦ ॥

ರೈಕ್ವ ಉವಾಚ :—

ನಿರ್ವೇದೋ ಯಸ್ಯ ಸಂಸಾರೇ ತಥಾ ವೈ ಪುಣ್ಯಪಾಪಯೋಃ ॥ ೧೦೧ ॥
ಪ್ರಾರಬ್ಧಯೋರ್ವಿನಾಶಶ್ಚ ಸ ವೈ ಜ್ಞಾನೋಪದೇಶಭಾಕ್ ।
ತವ ಯದ್ಯಪಿ ಸಂಸಾರೇ ನಿರ್ವೇದಃ ಸಮುಜಾಯತ ॥ ೧೦೨ ॥

---

೯೬. ರೈಕ್ವನು ಹೇಳುತ್ತಾನೆ :—"ಅನೇಕ ಕಲ್ಪಗಳಕಾಲದಿಂದಲೂ ಜೀವಿಸುತ್ತಿರುವ ನನಗೆ ಅಲ್ಪವಾದ ನಿನ್ನ ಈ ಗೋವುಗಳು, ಹಣ, ರಥಗಳಿಂದೇನೂ ಪ್ರಯೋಜನವಿಲ್ಲ. ಇವೆಲ್ಲ ನಿನ್ನಲ್ಲಿಯೇ ಇರಲಿ.

೯೭–೯೮. ಇದು ನನ್ನ ಕುಟುಂಬರಕ್ಷಣೆಗೆ ಸಾಲದು. ನೀನು ಇದಕ್ಕಿಂತ ನೂರಮಡಿಯಷ್ಟು ಇತ್ತರೂ ಅದೂ ನನ್ನ ಕುಂಟುಂಬರಕ್ಷಣೆಗೆ ಸಾಲದು" ಎನ್ನಲು ಜಾನಶ್ರುತಿಯು ಇಂತೆಂದನು.

೯೯. ಜಾನಶ್ರುತಿಯು ಹೇಳುತ್ತಾನೆ:— "ಮುನಿಯೆ! ಈ ಗೋವುಗಳ ಸಮೂಹ, ರಥಗಳು ನೀನು ಉಪದೇಶಿಸುವ ಬ್ರಹ್ಮಜ್ಞಾನಕ್ಕೆ ಬೆಲೆಯಲ್ಲ.

೧೦೦. ಇದನ್ನು ನೀನು ತೆಗೆದುಕೊ ಅಥವಾ ಬಿಡು. ನನಗೆ ನಿರ್ದುಷ್ಟವಾದ ಅದ್ವೈತಜ್ಞಾನವನ್ನು ಉಪದೇಶಿಸು." ಅವನ ಆ ಮಾತನ್ನು ಕೇಳಿ ರೈಕ್ವನು ಇಂತೆಂದನು.

೧೦೧–೧೦೨. ರೈಕ್ವನು ಹೇಳುತ್ತಾನೆ:—"ಸಂಸಾರದಲ್ಲಿ ವೈರಾಗ್ಯವನ್ನು ಹೊಂದಿದವನೂ, ಪ್ರಾರಬ್ಧಗಳಾದ ಪುಣ್ಯಪಾಪಗಳನ್ನು ಪರಿಹರಿಸಿಕೊಂಡವನೂ ಆದವನೇ ಜ್ಞಾನೋಪದೇಶಕ್ಕೆ ಅರ್ಹನು. ನಿನಗೆ ಸಂಸಾರದಲ್ಲಿ ವೈರಾಗ್ಯ

ತಥಾಽಪಿ ಪುಣ್ಯಪಾಪಾನಾಂ ನ ಹಿ ನಾಶೋ ವ್ಯಜಾಯತ ।
ಪುಣ್ಯಪಾಪೌಘಸಂಘಾಶ್ಚ ಪುನರ್ಜನ್ಮನಿ ಹೇತವಃ ॥ ೧೦೩ ॥
ನ ಹಿ ಭೋಗಂ ವಿನಾ ತೇಷಾಂ ನಾಶೋ ಭವತಿ ಭೂಪತೇ ।
ತನ್ನಾಶೋಪಾಯಮದ್ಯಾಽಹಂ ತಥಾಪಿ ಪ್ರಬ್ರವೀಮಿ ತೇ ॥ ೧೦೪ ॥
ಯತೋ ಮಾಂ ಶರಣಂ ಪ್ರಾಪ್ತಸ್ತಚ್ಛೃಣುಷ್ವ ಸಮಾಹಿತಃ ।
ಅಥ ತೀರ್ಥತ್ರಯಂ ಪುಣ್ಯಂ ವರ್ತತೇಽಭೀಷ್ಟದಾಯಕಂ ॥ ೧೦೫ ॥
ಮುಮುಕ್ಷೂಣಾಂ ಹಿ ಸರ್ವೇಷಾಂ ಸರ್ವಪ್ರಾರಬ್ಧನಾಶನಂ ।
ಏತದ್ಧಿ ಯಮುನಾತೀರ್ಥಂ ಗಂಗಾತೀರ್ಥಂ ತಥೈವ ಚ ॥ ೧೦೬ ॥
ಗಯಾತೀರ್ಥಮಿದಂ ಚಾಽಪಿ ತದೇಷು ಸ್ನಾಹಿ ಮಾ ಚಿರಂ ।
ಸರ್ವಪ್ರಾರಬ್ಧನಾಶಃ ಸ್ಯಾತ್ತದಾ ನೈವಾತ್ರ ಸಂಶಯಃ ॥ ೧೦೭ ॥
ತತಸ್ತೇ ಶುದ್ಧಚಿತ್ತಸ್ಯ ಜ್ಞಾನಂ ಚೈವ ದಿಶಾಮ್ಯಹಂ ।
ಇತ್ಯುಕ್ತೇ ರೈಕ್ವಮುನಿನಾ ಹರ್ಷಸಂಪುಲ್ಲಲೋಚನಃ ॥ ೧೦೮ ॥
ಸಸಂಭ್ರಮಮುಪಾಗಮ್ಯ ಸಸ್ನೌ ತೀರ್ಥತ್ರಯೇಽಪಿ ಸಃ ।
ತತ್ತೀರ್ಥಸ್ನಾನಮಾತ್ರೇಣ ಶುದ್ಧಚಿತ್ತೋಽಭವನ್ನೃಪಃ ॥ ೧೦೯ ॥
ಉಪಾತಿಷ್ಠತ ರಾಜಾಽಸೌ ಸಯುಗ್ವಾನಂ ಗುರುಂ ಪುನಃ ।
ಸಯುಗ್ವಾ ಸ ಚ ರೈಕ್ವೋಽಪಿ ಮುನೀಂದ್ರೈರಪಿ ದುರ್ಲಭಂ ॥ ೧೧೦ ॥

---

ವುಂಟಾಗಿದ್ದರೂ ನಿನ್ನ ಪುಣ್ಯಪಾಪಗಳು ನಾಶವಾಗಲಿಲ್ಲ. ಪುಣ್ಯಪಾಪಗಳ ಸಮೂಹವು ಪುನರ್ಜನ್ಮಕ್ಕೆ ಕಾರಣ. ಮಹಾರಾಜ! ಅನುಭವಿಸಿದಲ್ಲದೆ ಆ ಪ್ರಾರಬ್ಧ ಪುಣ್ಯಪಾಪಗಳು ನಾಶವಾಗುವುದಿಲ್ಲ. ಹಾಗಾದರೂ ಈಗ ನೀನು ಶರಣಾಗತ ನಾದ್ದರಿಂದ ನಾನು ಅವುಗಳನ್ನು ನಾಶಗೊಳಿಸುವ ಉಪಾಯವನ್ನು ಹೇಳುತ್ತೇನೆ. ಮನಸ್ಸಿಟ್ಟು ಕೇಳು. ಇಲ್ಲಿ ಇಷ್ಟಾರ್ಥಗಳನ್ನೀಯುವ ಸಮಸ್ತ ಮುಮುಕ್ಷುಗಳ ಸಕಲ ಪ್ರಾರಬ್ಧಗಳನ್ನೂ ಪರಿಹರಿಸುವ ಮೂರು ಪುಣ್ಯಕರಗಳಾದ ತೀರ್ಥಗಳಿವೆ. ಇದು ಯಮುನಾತೀರ್ಥ, ಇದು ಗಂಗಾತೀರ್ಥ, ಇದು ಗಯಾತೀರ್ಥ. ಇವು ಗಳಲ್ಲಿ ಸ್ನಾನಮಾಡು. ವಿಳಂಬಮಾಡಬೇಡ. ಹಾಗೆ ಸ್ನಾನಮಾಡುವುದರಿಂದ ನಿನ್ನ ಸಮಸ್ತ ಪ್ರಾರಬ್ಧಗಳೂ ನಾಶವಾಗುವುವು. ಈ ವಿಷಯದಲ್ಲಿ ಸಂದೇಹವಿಲ್ಲ.

೧೦೮–೧೦೯. ಅನಂತರ ಶುದ್ಧಚಿತ್ತನಾದ ನಿನಗೆ ಜ್ಞಾನವನ್ನು ಉಪದೇಶಿಸುವೆನು.'' ಹೀಗೆ ರೈಕ್ವಮುನಿಯು ಹೇಳಲು ಆ ರಾಜನು ಸಂತೋಷಗೊಂಡು ಶೀಘ್ರವಾಗಿ ಆ ತೀರ್ಥಗಳನ್ನು ಸಮೀಪಿಸಿ ಅವುಗಳಲ್ಲಿ ಮಿಂದನು. ಅದರಿಂದ ಅವನು ಒಡನೆಯೆ ಶುದ್ಧಮನಸ್ಸುಳ್ಳವನಾದನು.

೧೧೦–೧೧೩. ಅವನು ಮರಳಿಯೂ ಗುರುವಾದ ರೈಕ್ವನನ್ನು ಸಮೀಪಿಸಲು ಆ ಮುನಿಯು, ಮುನಿವರ್ಯರಿಗೂ ದುರ್ಲಭವಾದ ಬ್ರಹ್ಮಜ್ಞಾನವನ್ನು ಆ ಜಾನ

ತಜ್ಜ್ಞಾನಶ್ರುತಯೇ ಜ್ಞಾನಂ ಕೃಪಯಾ ಸಮುಪಾದಿಶತ್ ।
ತೇನೋಪದಿಷ್ಟಮಾತ್ರೇ ತು ವಿಜ್ಞಾನೇ ಬ್ರಹ್ಮರೂಪಿಣಿ ॥ ೧೧೧ ॥
ಅಬಾಧಿತಾಽನುಭವವಾನಭವದ್ರಾಜಸತ್ತಮಃ ।
ಬ್ರಹ್ಮರೂಪಂಗತಸ್ಯಾಽಸ್ಯ ಪ್ರಸಾದಾದ್ರೈಕ್ವಯೋಗಿನಃ ॥ ೧೧೨ ॥
ಘಟಕುಡ್ಯಕುಸೂಲಾತ್ಮಾ ನ ಪ್ರಪಂಚಸ್ಸಮುಸ್ಫುರತ್ ।
ನಿರ್ಭಿದ್ಯ ಸಹಸಾ ಮಾಯಾಮಭೂದ್ಬ್ರಹ್ಮೈವ ಕೇವಲಂ ॥ ೧೧೩ ॥
ಇತ್ಥಂ ತೀರ್ಥತ್ರಯೇ ಸ್ನಾನಾಜ್ಜಾನಶ್ರುತಿರಹೋ ನೃಪಃ ।
ದುರ್ಲಭಂ ಯೋಗಿವೃಂದೈಶ್ಚ ಬ್ರಹ್ಮಭೂಯತ್ವಮಾಪ್ತವಾನ್ ॥ ೧೧೪ ॥
ಏವಂ ವಃ ಕಥಿತಂ ವಿಪ್ರಾಸ್ತತ್ತೀರ್ಥತ್ರಯವೈಭವಂ ।
ಯಸ್ತ್ವಿಮಂ ಪಠತೇಽಧ್ಯಾಯಂ ತೀರ್ಥತ್ರಿತಯವೈಭವಂ ॥ ೧೧೫ ॥
ನಿರ್ಭಿದ್ಯಾಜ್ಞಾನತಿಮಿರಂ ಬ್ರಹ್ಮಭೂಯಾಯ ಕಲ್ಪತೇ ॥ ೧೧೬ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಗಂಗಾ ಯಮುನಾ ಗಯಾತೀರ್ಥ ಪ್ರಶಂಸನಂ—ಜಾನಶ್ರುತಿಜ್ಞಾನಾಽವಾಪ್ತಿವರ್ಣನಂ"ನಾಮ ಷಡ್ವಿಂಶೋಽಧ್ಯಾಯಃ

---

ಶ್ರುತಿಗೆ ದಯೆಯಿಂದ ಉಪದೇಶಮಾಡಿದನು. ಅವನು ಉಪದೇಶಮಾಡಿದ್ದರಿಂದಲೇ ಆ ನೃಪೋತ್ತಮನು ಬ್ರಹ್ಮಜ್ಞಾನದಲ್ಲಿ ನಿರರ್ಗಳವಾದ ಅನುಭವವನ್ನು ಪಡೆದನು. ರೈಕ್ವಯೋಗಿಯ ಅನುಗ್ರಹದಿಂದ ಬ್ರಹ್ಮಭಾವವನ್ನು ಪಡೆದ ಅವನಿಗೆ ಗಡಿಗೆ, ಗೋಡೆ, ಕಣಜಗಳ ರೂಪವಾದ ಈ ಪ್ರಪಂಚವೇ ಮಿಥ್ಯಾರೂಪದಿಂದ ತೋರಿತು. ಕೂಡಲೆ ಮಾಯೆಯನ್ನು ಭೇದಿಸಿ ಅವನು ಕೇವಲ ಬ್ರಹ್ಮನಾದನು.

೧೧೪. ಹೀಗೆ ಜಾನಶ್ರುತಿಯು ಆ ಮೂರು ತೀರ್ಥಗಳಲ್ಲಿಯೂ ಮಿಂದುದರಿಂದ ಯೋಗಿಗಳಿಗೂ ದುರ್ಲಭವಾದ ಬ್ರಹ್ಮಭಾವವನ್ನು ಪಡೆದನು.

೧೧೫–೧೧೬. ಎಲೈ ಬ್ರಾಹ್ಮಣರೆ! ಹೀಗೆ ನಿಮಗೆ ಈ ಮೂರು ತೀರ್ಥಗಳ ಮಾಹಾತ್ಮ್ಯೆಯನ್ನು ಹೇಳಿರುವೆನು. ಈ ಅಧ್ಯಾಯವನ್ನು ಪಠಿಸುವವನು ಅಜ್ಞಾನಾಂಧಕಾರವನ್ನು ಭೇದಿಸಿ ಬ್ರಹ್ಮತ್ವಕ್ಕೆ ಅರ್ಹನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಗಂಗಾ, ಯಮುನಾ, ಗಯಾತೀರ್ಥಗಳ ಪ್ರಶಂಸನ—ಜಾನಶ್ರುತಿಜ್ಞಾನಾವಾಪ್ತಿ ವರ್ಣನ"ವೆಂಬ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತವಿಂಶೋಽಧ್ಯಾಯಃ

### ಕೋಟಿತೀರ್ಥಪ್ರಶಂಸನಂ—ಕೃಷ್ಣಸ್ಯಮಾತುಲವಧದೋಷಶಾಂತಿವರ್ಣನಂ

ಶ್ರೀ ಸೂತ ಉವಾಚ:—

ಯಮುನಾಯಾಂ ಚ ಗಂಗಾಯಾಂ ಗಯಾಯಾಂ ಚ ನರೋ ಮುದಾ ।
ಸ್ನಾನಂ ವಿಧಾಯ ವಿಧಿವತ್ಕೋಟಿತೀರ್ಥಂ ತತೋ ವ್ರಜೇತ್ ॥ ೧ ॥
ಕೋಟಿತೀರ್ಥಂ ಮಹಾಪುಣ್ಯಂ ಸರ್ವಲೋಕೇಷು ವಿಶ್ರುತಂ ।
ಸರ್ವಸಂಪತ್ಕರಂ ಶುದ್ಧಂ ಸರ್ವಪಾಪಪ್ರಣಾಶನಂ ॥ ೨ ॥
ದುಃಸ್ವಪ್ನನಾಶನಂ ಹ್ಯೇತನ್ಮಹಾಪಾತಕನಾಶನಂ ।
ಮಹಾವಿಘ್ನಪ್ರಶಮನಂ ಮಹಾಶಾಂತಿಕರಂ ನೃಣಾಂ ॥ ೩ ॥
ಸ್ಮೃತಿಮಾತ್ರೇಣ ಯತ್ಪುಂಸಾಂ ಸರ್ವಪಾಪನಿಷೂದನಂ ।
ಲೀಲಯಾ ಧನುಷಃ ಕೋಟ್ಯಾ ಸ್ವಯಂ ರಾಮೇಣ ನಿರ್ಮಿತಂ ॥ ೪ ॥
ಪುರಾ ದಾಶರಥೀ ರಾಮೋ ನಿಹತ್ಯ ಯುಧಿ ರಾವಣಂ ।
ಬ್ರಹ್ಮಹತ್ಯಾವಿಮೋಕ್ಷಾಯ ಗಂಧಮಾದನಪರ್ವತೇ ॥ ೫ ॥
ಪ್ರತಿಷ್ಠಾಪ್ಯ ಲಿಂಗಮೇಕಂ ಲೋಕಾನುಗ್ರಹಕಾಮ್ಯಯಾ ।
ಲಿಂಗಸ್ಯಾಸ್ಯಾಭಿಷೇಕಾಯ ಶುದ್ಧಂ ವಾರಿ ಗವೇಷಯನ್ ॥ ೬ ॥

---

## ಕನ್ನಡದ ಅನುವಾದ

### ಕೋಟಿತೀರ್ಥಪ್ರಶಂಸನ—ಕೃಷ್ಣನ ಮಾತುಲವಧದೋಷಶಾಂತಿವರ್ಣನ

೧. ಸೂತನು ಹೇಳುತ್ತಾನೆ:—ಮಾನವನು ಗಂಗಾ, ಯಮುನಾ, ಗಯಾ ತೀರ್ಥಗಳಲ್ಲಿ ವಿಧಿಯಿಂದ ಸಂತೋಷದಿಂದ ಮಿಂದು ತರುವಾಯ ಕೋಟಿ ತೀರ್ಥಕ್ಕೆ ತೆರಳಬೇಕು.

೨-೪. ಅತ್ಯಂತ ಪುಣ್ಯಕರವೂ, ಸಕಲಲೋಕಪ್ರಸಿದ್ಧವೂ, ಸಮಸ್ತಸಂಪತ್ ಪ್ರದವೂ, ನಿಖಿಲಪಾಪನಾಶಕವೂ, ದುಸ್ಸ್ವಪ್ನ, ಮಹಾಪಾತಕ, ಮಹಾವಿಘ್ನ ಗಳನ್ನು ಪರಿಹರಿಸುವುದೂ, ಮನುಷ್ಯರಿಗೆ ಶಾಂತಿಯನ್ನುಂಟುಮಾಡುವುದೂ, ಸ್ಮರಣಮಾತ್ರದಿಂದಲೇ ಮಾನವರ ಸಮಸ್ತ ಪಾಪಗಳನ್ನೂ ನಾಶಗೊಳಿಸುವುದೂ ಆದ ಈ ಕೋಟಿತೀರ್ಥವನ್ನು ರಾಮನು ತಾನೆ ಸ್ವಂತವಾಗಿ ಅನಾಯಾಸದಿಂದ ಬಿಲ್ಲಿನ ಕೊನೆಯಿಂದ ರಚಿಸಿರುತ್ತಾನೆ.

೫-೧೧. ಹಿಂದೆ ದಶರಥನ ಮಗನಾದ ಶ್ರೀರಾಮನು ಯುದ್ಧದಲ್ಲಿ ರಾವಣ ನನ್ನು ಕೊಂದ ಬ್ರಹ್ಮಹತ್ಯೆಯ ಪರಿಹಾರಕ್ಕಾಗಿ ಗಂಧಮಾದನಪರ್ವತದಲ್ಲಿ ಲೋಕಕ್ಕೆ ಅನುಗ್ರಹಮಾಡಲಿಚ್ಛೆಯಿಂದ ಶಿವಲಿಂಗವೊಂದನ್ನು ಪ್ರತಿಷ್ಠೆಮಾಡಿ

ನಾಽವಿಂದತ ಜಲಂ ತತ್ರ ಪಾರ್ಶ್ವೇ ದಶರಥಾತ್ಮಜಃ ।
ಲಿಂಗಾಽಭಿಷೇಕಯೋಗ್ಯಂ ಚ ಜಲಂ ಕಿಮಿತಿ ಚಿಂತಯನ್ ॥ ೭ ॥
ನವೇನ ವಾರಿಣಾ ಲಿಂಗಂ ಸ್ನಾಪನೀಯಂ ಮಯೇತಿ ಸಃ ।
ನಿಶ್ಚಿತ್ಯ ಮನಸಾ ತತ್ರ ಧನುಷ್ಕೋಟ್ಯಾ ರಘೂದ್ವಹಃ ॥ ೮ ॥
ಬಿಭೇದ ಧರಣೀಂ ಶೀಘ್ರಂ ಮನಸಾ ಜಾಹ್ನವೀಂ ಸ್ಮರನ್ ।
ರಾಮಕಾರ್ಮುಕಕೋಟಿಃ ಸಾ ತದಾ ಪ್ರಾಪ ರಸಾತಲಂ ॥ ೯ ॥
ತತ ಉದ್ಧಾರಯಾಮಾಸ ತದ್ಧನುರ್ಧನ್ವಿನಾಂ ವರಃ ।
ಧನುಷ್ಯುದ್ಧ್ರಿಯಮಾಣೇ ತು ರಾಘವೇಣ ಮಹೀತಲಾತ್ ॥ ೧೦ ॥
ಕಾಕುತ್ಸ್ಥೇನ ಸ್ಮೃತಾ ಗಂಗಾ ನಿರ್ಯಯೌ ವಿವರಾತ್ತತಃ ।
ವಾರಿಣಾ ತೇನ ತಲ್ಲಿಂಗಮಭ್ಯಷಿಂಚದ್ರಘೂದ್ವಹಃ ॥ ೧೧ ॥
ರಾಮಕಾರ್ಮುಕಕೋಟ್ಯೈವ ಯತಸ್ತನ್ನಿರ್ಮಿತಂ ಪುರಾ ।
ಅತಃ ಕೋಟಿರಿತಖ್ಯಾತಂ ತತ್ತೀರ್ಥಂ ಭುವನತ್ರಯೇ ॥ ೧೨ ॥
ಯಾನಿ ಯಾನೀಹ ತೀರ್ಥಾನಿ ಸಂತಿ ವೈ ಗಂಧಮಾದನೇ ।
ಪ್ರಥಮಂ ತೇಷು ತೀರ್ಥೇಷು ಸ್ನಾತ್ವಾ ವಿಗತಕಲ್ಮಷಃ ॥ ೧೩ ॥
ಶೇಷಪಾಪವಿಮೋಕ್ಷಾಯ ಸ್ನಾಯಾತ್ಕೋಟೌ ನರಸ್ತತಃ ।
ತೀರ್ಥಾಂತರೇಷು ಸ್ನಾನೇನ ಯಃ ಪಾಪೌಘೋ ನ ನಶ್ಯತಿ ॥ ೧೪ ॥

---

ದನು. ಆ ಶಿವಲಿಂಗದ ಅಭಿಷೇಕಕ್ಕಾಗಿ ಶುದ್ಧಜಲವನ್ನು ಹುಡುಕುತ್ತ ಎಲ್ಲಿಯೂ ನೀರನ್ನು ಕಾಣಲಿಲ್ಲ. ಅವನು ಆ ಶಿವಲಿಂಗಾಭಿಷೇಕಕ್ಕೆ ಉಚಿತವಾದ ನೀರು ಯಾವುದೆಂದು ಆಲೋಚಿಸುತ್ತ ನಾನು ಹೊಸ ನೀರಿನಿಂದಲೇ ಲಿಂಗಕ್ಕೆ ಅಭಿಷೇಕ ಮಾಡಬೇಕೆಂದು ನಿಶ್ಚಯಿಸಿ ಮನಸ್ಸಿನಿಂದ ಗಂಗೆಯನ್ನು ಸ್ಮರಿಸುತ್ತ ಶೀಘ್ರ ವಾಗಿ ಭೂಮಿಯನ್ನು ಸೀಳಿದನು. ಆಗ ಆತನ ಬಿಲ್ಲಿನ ತುದಿಯು ಪಾತಾಳವನ್ನು ಭೇದಿಸಿತು. ತರುವಾಯ ಧನುರ್ಧಾರಿಗಳಲ್ಲಿ ಉತ್ತಮನಾದ ಶ್ರೀರಾಮನು ಆ ಧನುಸ್ಸನ್ನು ಮೇಲಕ್ಕೆಳೆದನು. ಅದರಿಂದುಂಟಾದ ರಂಧ್ರದಿಂದ ಆತನು ಸ್ಮರಿಸಿದಮಾತ್ರವೇ ಗಂಗೆಯು ಮೇಲಕ್ಕೆ ಚಿಮ್ಮಿತು. ಆ ನೀರಿನಿಂದಲೇ ಆ ಲಿಂಗಕ್ಕೆ ಅಭಿಷೇಕಮಾಡಿದನು.

೧೨. ಹಿಂದೆ ಶ್ರೀರಾಮನ ಬಿಲ್ಲಿನ ತುದಿಯಿಂದ ನಿರ್ಮಿತವಾದುದರಿಂದ ಆ ತೀರ್ಥವು ಕೋಟಿತೀರ್ಥವೆಂದು ಮೂರುಲೋಕದಲ್ಲಿಯೂ ಪ್ರಸಿದ್ಧವಾಯಿತು.

೧೩–೧೫. ಈ ಗಂಧಮಾದನಪರ್ವತದಲ್ಲಿರುವ ತೀರ್ಥಗಳಲ್ಲೆಲ್ಲ ಮೊದಲು ಮಿಂದು ಪಾಪರಹಿತನಾಗಿ ಬಳಿಕ ಉಳಿದ ಪಾಪಪರಿಹಾರಕ್ಕಾಗಿ ಯಾತ್ರಿಕನು ಕೋಟಿತೀರ್ಥದಲ್ಲಿ ಸ್ನಾನಮಾಡಬೇಕು. ಇತರ ತೀರ್ಥಗಳಲ್ಲಿ ಸ್ನಾನಮಾಡು ವುದರಿಂದ ಪರಿಹಾರವಾಗದೆ ಅನೇಕ ಕೋಟಿ ಜನ್ಮಗಳಿಂದ ಸಂಪಾದಿಸಲ್ಪಟ್ಟ

ಅನೇಕಜನ್ಮಕೋಟೀಭಿರರ್ಜಿತೋ ಹ್ಯಸ್ಥಿಸಂಸ್ಥಿತಃ ।
ವಿನಶ್ಯತಿ ಸ ಸರ್ವೋಽಪಿ ಕೋಟಿಸ್ನಾನಾನ್ನ ಸಂಶಯಃ ॥ ೧೫ ॥
ಯದಿ ಹಿ ಪ್ರಥಮಂ ಸ್ನಾಯಾದತ್ರ ಕೋಟೌ ನರೋ ದ್ವಿಜಾಃ ।
ತಸ್ಯ ಮುಕ್ತಸ್ಯ ತೀರ್ಥಾನಿ ವ್ಯರ್ಥಾನ್ಯೇವಾಽಪರಾಣಿ ಹಿ ॥ ೧೬ ॥

ಋಷಯ ಊಚುಃ—

ಸೂತ ಸರ್ವಾಽರ್ಥತತ್ವಜ್ಞ ವ್ಯಾಸಶಿಷ್ಯ ಮುನೀಶ್ವರ ।
ಅಸ್ಮಾಕಂ ಸಂಶಯಂ ಕಂಚಿಚ್ಛಿಂದಿ ಪೌರಾಣಿಕೋತ್ತಮ ॥ ೧೭ ॥
ಕೋಟೌ ಸ್ನಾತಸ್ಯ ಮರ್ತ್ಯಸ್ಯ ಯದಿ ತೀರ್ಥಾಂತರಂ ವೃಥಾ ।
ಕಿಮರ್ಥಂ ಧರ್ಮತೀರ್ಥಾದಿ ತೀರ್ಥೇಷು ಸ್ನಾಂತಿ ಮಾನವಾಃ ॥ ೧೮ ॥
ತೀರ್ಥಾನಿ ತಾನಿ ಸರ್ವಾಣಿ ಸಮತಿಕ್ರಮ್ಯ ಮಾನವಾಃ ।
ಅತ್ರೈವ ಕೋಟೌ ಕಿಂ ಸ್ನಾನಂ ನ ಕುರ್ವಂತಿ ಹಿ ತದ್ವದ ॥ ೧೯ ॥

ಶ್ರೀ ಸೂತ ಉವಾಚ :—

ಅಹೋ ರಹಸ್ಯಂ ಯುಷ್ಮಾಭಿಃ ಪೃಷ್ಟಮೇತನ್ಮುನೀಶ್ವರಾಃ ।
ನಾರದಾಯ ಪುರಾ ಶಂಭುಃ ಪೃಚ್ಛತೇ ಯತ್ಕಿಲಾಽಬ್ರವೀತ್ ॥ ೨೦ ॥
ತದ್ಬ್ರವೀಮಿ ಮುನಿಶ್ರೇಷ್ಠಾಃ ಶೃಣುಧ್ವಂ ಶ್ರದ್ಧಯಾ ಸಹ ।
ಗಚ್ಛನ್ಯದೃಚ್ಛಯಾ ವಾಽಪಿ ತೀರ್ಥಯಾತ್ರಾಪರೋಽಪಿ ವಾ ॥ ೨೧ ॥

---

ಅಸ್ಥಿಗತವಾದ ಪಾಪಸಮೂಹವು ಈ ಕೋಟಿತೀರ್ಥದಲ್ಲಿ ಸ್ನಾನಮಾಡುವುದರಿಂದ ನಾಶವಾಗುವುದು.

೧೬. ಎಲೈ ದ್ವಿಜರೆ! ಮಾನವನು ಮೊದಲು ಕೋಟಿತೀರ್ಥದಲ್ಲಿ ಸ್ನಾನಮಾಡಿದರೆ ಮುಕ್ತನಾಗುತ್ತಾನೆ. ಮುಕ್ತನಾದ ಅವನಿಗೆ ಇತರ ತೀರ್ಥಗಳು ನಿಷ್ಫಲವು.

೧೭. ಋಷಿಗಳು ಹೇಳುತ್ತಾರೆ:—ಸಮಸ್ತ ತತ್ವಗಳನ್ನರಿತವನೂ, ವ್ಯಾಸ ಶಿಷ್ಯನೂ ಆದ ಸೂತನೆ! ನಮ್ಮ ಈ ಒಂದು ಸಂಶಯವನ್ನು ಪರಿಹರಿಸು.

೧೮. ಕೋಟಿತೀರ್ಥದಲ್ಲಿ ಮಿಂದವನಿಗೆ ಇತರ ತೀರ್ಥಗಳು ನಿಷ್ಫಲವಾದರೆ ಮಾನವರು ಧರ್ಮತೀರ್ಥ ಮೊದಲಾದ ತೀರ್ಥಗಳಲ್ಲಿ ಏತಕ್ಕೆ ಸ್ನಾನಮಾಡುವರು?

೧೯. ಇತರ ತೀರ್ಥಗಳನ್ನು ಬಿಟ್ಟು ಈ ಕೋಟಿತೀರ್ಥದಲ್ಲಿಯೇ ಏತಕ್ಕೆ ಸ್ನಾನಮಾಡುವುದಿಲ್ಲ? ಅದನ್ನು ನಮಗೆ ಹೇಳು.

೨೦. ಸೂತನು ಹೇಳುತ್ತಾನೆ:—ಎಲೈ ಮುನಿವರ್ಯರೆ! ನೀವು ರಹಸ್ಯ ವಿಷಯವನ್ನು ಕೇಳಿದ್ದೀರಿ. ಇದನ್ನು ಹಿಂದೆ ಶಂಕರನು ಪ್ರಶ್ನಿಸುತ್ತಿರುವ ನಾರದನಿಗೆ ಹೇಳಿರುತ್ತಾನೆ.

೨೧—೨೪. ಅದನ್ನು ಹೇಳುತ್ತೇನೆ; ಶ್ರದ್ಧೆಯಿಂದ ಕೇಳಿರಿ. ಆಕಸ್ಮಿಕವಾಗಿಯಾಗಲಿ, ತೀರ್ಥಯಾತ್ರೆಗಾಗಿಯೆ ಆಗಲಿ ಹೋಗುವ ಮಾನವನು ದಾರಿಯ

ಮಾರ್ಗಮಧ್ಯೇ ದ್ವಿಜಶ್ರೇಷ್ಠಾಸ್ತೀರ್ಥಂ ದೇವಾಲಯಂ ತಥಾ ।
ದೃಷ್ಟ್ವಾ ಶ್ರುತ್ವಾಽಪಿ ವಾ ಮೋಹಾನ್ನ ಸೇವೇತ ನರಾಧಮಃ ॥ ೨೨ ॥
ನಿಷ್ಕೃತಿಸ್ತಸ್ಯ ನಾಽಸ್ತೀತಿ ಪ್ರಾಽಬ್ರುವನ್ಪರಮರ್ಷಯಃ ।
ಸೇತುಂ ಗಚ್ಛಂಸ್ತತೋಽನ್ಯೇಷು ನ ಸ್ನಾಯಾದ್ಯದಿ ಮಾನವಃ ॥ ೨೩ ॥
ತೀರ್ಥಾಽತಿಕ್ರಮದೋಷೈಃ ಸ ಬಹಿಷ್ಕಾರ್ಯೋಽನ್ತ್ಯವದ್ದ್ವಿಜೈಃ
ಅತಃ ಸ್ನಾತವ್ಯಮೇವೈಷು ಚಕ್ರತೀರ್ಥಾದಿಷು ದ್ವಿಜಾಃ ॥ ೨೪ ॥
ಸ್ನಾತ್ವಾ ಚೈತೇಷು ತೀರ್ಥೇಷು ಶೇಷಪಾಪವಿಮುಕ್ತಯೇ ।
ಪ್ರಯತ್ನೈರ್ಮನುಜೈರತ್ರ ಸ್ನಾತವ್ಯಂ ಕೋಟಿತೀರ್ಥಕೇ ॥ ೨೫ ॥
ಕೋಟೌ ಚಾಭಿಷವಂ ಕೃತ್ವಾ ನ ತಿಷ್ಠೇದ್ಗಂಧಮಾದನೇ ।
ನಿವರ್ತೇತ್ತತ್ಕ್ಷಣಾದೇವ ನಿಷ್ಪಾಪೋ ಗಂಧಮಾದನಾತ್ ॥ ೨೬ ॥
ರಾಮೋಽಪಿ ಹಿ ಪುರಾ ಕೋಟಿತೀರ್ಥಸಂಭೂತವಾರಿಣಾ ।
ರಾಮನಾಥೇಽಭಿಷಿಕ್ತೇ ತು ಸ್ವಯಂ ಸ್ನಾತ್ವಾ ಚ ತತ್ರ ವೈ ॥ ೨೭ ॥
ಬ್ರಹ್ಮಹತ್ಯಾವಿಮುಕ್ತಃ ಸಂಸ್ತತ್ಕ್ಷಣಾದೇವ ಸಾಽನುಜಃ ।
ಆರೂಢಪುಷ್ಪಕೋಽಯೋಧ್ಯಾಂ ಪ್ರಯಯೌ ಕಪಿಭಿರ್ವೃತಃ ॥ ೨೮ ॥
ಅತಃ ಕೋಟೌ ನರಃ ಸ್ನಾತ್ವಾ ಪಾಪಶೇಷವಿಮೋಚಿತಃ ।
ನಿವರ್ತೇತ್ತತ್ಕ್ಷಣಾದೇವ ರಾಮೋ ದಾಶರಥಿರ್ಯಥಾ ॥ ೨೯ ॥

---

ನಡುವೆ ದೊರಕುವ ತೀರ್ಥವನ್ನೂ, ದೇವಾಲಯವನ್ನೂ, ನೋಡಿ ಅಥವಾ ಕೇಳಿ ಅಜ್ಞಾನದಿಂದ ಸೇವಿಸದಿದ್ದರೆ ಅವನಿಗೆ ಪ್ರಾಯಶ್ಚಿತ್ತವೇ ಇಲ್ಲವೆಂದು ಮಹರ್ಷಿಗಳು ಹೇಳಿರುತ್ತಾರೆ. ಸೇತುಯಾತ್ರೆಗೆ ಹೋಗುತ್ತಿರುವವನು ಆ ಸೇತುವೆಗಿಂತ ಬೇರೆಯಾದ ತೀರ್ಥಗಳಲ್ಲಿ ಸ್ನಾನಮಾಡದಿದ್ದರೆ ತೀರ್ಥಾತಿಕ್ರಮ ದೋಷಗಳಿಂದ ದುಷ್ಟನಾಗುತ್ತಾನೆ. ಅವನನ್ನು ಬ್ರಾಹ್ಮಣರು ಅಂತ್ಯಜನಂತೆ ಬಹಿಷ್ಕರಿಸಬೇಕು. ಆದುದರಿಂದ ಈ ಚಕ್ರತೀರ್ಥಾದಿಗಳಲ್ಲಿ ಸ್ನಾನಮಾಡಬೇಕು.

೨೫. ಈ ತೀರ್ಥದಲ್ಲಿ ಮಿಂದು, ಉಳಿದ ಪಾಪಶಾಂತಿಗಾಗಿ ಕೋಟಿ ತೀರ್ಥದಲ್ಲಿ ಪರಿಶುದ್ಧತೆಯಿಂದ ಸ್ನಾನಮಾಡಬೇಕು.

೨೬. ಕೋಟಿತೀರ್ಥದಲ್ಲಿ ಮಿಂದು ಪಾಪರಹಿತನಾಗಿ ಗಂಧಮಾದನದಲ್ಲಿ ನಿಲ್ಲದೆ ಹಿಂದಿರುಗಬೇಕು.

೨೭–೨೮. ರಾಮನೂ ಹಿಂದೆ ಕೋಟಿತೀರ್ಥದಿಂದುಂಟಾದ ನೀರಿನಿಂದ ರಾಮನಾಥನಿಗೆ ಅಭಿಷೇಕಮಾಡಿ ತಾನೂ ಅಲ್ಲಿಯೇ ಸ್ನಾನಮಾಡಿ ಬ್ರಹ್ಮಹತ್ಯೆಯಿಂದ ವಿಮುಕ್ತನಾಗಿ ಕೂಡಲೆ ಲಕ್ಷ್ಮಣ, ಸೀತೆ, ಕಪಿಗಳೊಡನೆ ಪುಷ್ಪಕ ವಿಮಾನವನ್ನೇರಿ ಅಯೋಧ್ಯೆಗೆ ಹೋದನು.

೨೯. ಆದುದರಿಂದ ಮಾನವನು ಕೋಟಿತೀರ್ಥದಲ್ಲಿ ಮಿಂದು ಪಾಪಶೇಷದಿಂದ ಮುಕ್ತನಾಗಿ ಕೂಡಲೆ ಶ್ರೀರಾಮನಂತೆ ಅಲ್ಲಿಂದ ಹಿಂದಿರುಗಬೇಕು.

ಏತದ್ಧಿ ತೀರ್ಥಪ್ರವರಂ ಸರ್ವಲೋಕೇಷು ವಿಶ್ರುತಂ ।
ರಾಮನಾಥಾಽಭಿಷೇಕಾಯ ನಿರ್ಮಿತಂ ರಾಘವೇಣ ಯತ್ ॥ ೩೦ ॥
ಸ್ವಯಂ ಭಗವತೀ ಯತ್ರ ಸನ್ನಿಧತ್ತೇ ಚ ಜಾಹ್ನವೀ ।
ತಾರಕಬ್ರಹ್ಮಣಾ ಯತ್ರ ರಾಮೇಣ ಸ್ನಾತಮಾದರಾತ್ ॥ ೩೧ ॥
ತಸ್ಯ ವೈ ಕೋಟಿತೀರ್ಥಸ್ಯ ಮಹಿಮಾ ಕೇನ ಕಥ್ಯತೇ ।
ಯತ್ರ ಸ್ನಾತ್ವಾ ಪುರಾ ಕೃಷ್ಣೋ ಲೋಕಸಂಗ್ರಹಣೇಚ್ಛಯಾ ॥ ೩೨ ॥
ಮಾತುಲಸ್ಯ ತು ಕಂಸಸ್ಯ ವಧದೋಷಾದ್ವಿಮೋಚಿತಃ ।
ತಸ್ಸ ವೈ ಕೋಟಿತೀರ್ಥಸ್ಯ ಮಹಿಮಾ ಕೇನ ಕಥ್ಯತೇ ॥ ೩೩ ॥

ಋಷಯ ಊಚುಃ:—

ಕಿಮರ್ಥಮವಧೀತ್ಕಂಸಂ ಮಾತುಲಂ ಯದುನಂದನಃ
ಯದ್ದೋಷಶಾಂತಯೇ ಸೂತ ಸಸ್ನೌ ಕೊಟೌ ಮಹಾಮನಾಃ ॥ ೩೪ ॥

ಶ್ರೀ ಸೂತ ಉವಾಚ:—

ವಸುದೇವ ಇತಿ ಖ್ಯಾತಃ ಶೂರಪುತ್ರೋ ಯದೋಃ ಕುಲೇ ।
ಆಸೀತ್ಸ ದೇವಕಸುತಾಂ ದೇವಕೀಮಿತಿ ವಿಶ್ರುತಾಂ ॥ ೩೫ ॥
ಉದ್ವಾಹ್ಯ ರಥಮಾರೂಢಃ ಸ್ವಪುರಂ ಪ್ರಸ್ಥಿತಃ ಪುರಾ ।
ಅಥ ಸೂತೋ ಬಭೂವಾಽಥ ಕಂಸೋ ಹ್ಯಾನಕದುಂದುಭೇಃ ॥ ೩೬ ॥

---

೩೦. ರಾಮನಾಥನ ಅಭಿಷೇಕಕ್ಕಾಗಿ ರಾಮನು ನಿರ್ಮಿಸಿದ ಈ ಉತ್ತಮ ತೀರ್ಥವು ಸಮಸ್ತ ಲೋಕಗಳಲ್ಲಿಯೂ ಪ್ರಸಿದ್ಧವಾಗಿದೆ.

೩೧. ಇದರಲ್ಲಿ ಪೂಜ್ಯಳಾದ ಗಂಗೆಯು ಸನ್ನಿಹಿತಳಾಗಿರುವಳು. ಇದರಲ್ಲಿಯೆ ತಾರಕಬ್ರಹ್ಮರೂಪಿಯಾದ ಶ್ರೀರಾಮನು ಪ್ರೀತಿಯಿಂದ ಮಿಂದಿರುವನು.

೩೨–೩೩. ಈ ಕೋಟಿತೀರ್ಥದ ಮಾಹಾತ್ಮ್ಯವನ್ನು ಯಾರು ಹೇಳಿ ಯಾರು? ಇದರಲ್ಲಿ ಹಿಂದೆ ಶ್ರೀಕೃಷ್ಣನು ಲೋಕಸಂಗ್ರಹಕ್ಕಾಗಿ ಮಿಂದು ಮಾವನಾದ ಕಂಸನನ್ನು ಕೊಂದ ದೋಷದಿಂದ ಮುಕ್ತನಾಗಿರುವನು.

೩೪. ಋಷಿಗಳು ಹೇಳುತ್ತಾರೆ:—"ಸೂತ! ಕೃಷ್ಣನು ಮಾವನ ವಧೆಯಿಂದುಂಟಾದ ದೋಷಶಾಂತಿಗಾಗಿ ಕೋಟಿತೀರ್ಥದಲ್ಲಿ ಮಿಂದನಷ್ಟೆ. ಅವನು ಮಾವನಾದ ಕಂಸನನ್ನು ಏತಕ್ಕೆ ಕೊಂದನು?"

೩೫–೩೬. ಸೂತನು ಹೇಳುತ್ತಾನೆ:—ಹಿಂದೆ ಯದುವಂಶದಲ್ಲಿ ಶೂರನೆಂಬ ಯಾದವನ ಸುತನಾದ ವಸುದೇವನೆಂಬವನಿದ್ದನು. ಅವನು ದೇವಕನ ಮಗಳಾದ ದೇವಕಿಯೆಂಬವಳನ್ನು ಮದುವೆಮಾಡಿಕೊಂಡು ರಥವನ್ನೇರಿ ತನ್ನ ಪಟ್ಟಣಕ್ಕೆ ಹೊರಟನು. ಆಗ ಆ ವಸುದೇವನಿಗೆ ಕಂಸನು ಸಾರಥಿಯಾದನು.

ಅಶರೀರಾ ತದಾ ವಾಣೀ ಕಂಸಂ ಸಾರಥಿಮಬ್ರವೀತ್ ।
ಭಗಿನೀಂ ಚ ತಥಾ ಭಾವಂ ವಾಹಯಂತಂ ರಥೋತ್ತಮೇ ॥ ೩೭ ॥
ಯಾಮಿಮಾಂ ವಾಹಯಸ್ಯತ್ರ ರಥೇನ ತ್ವಮರಿಂದಮ ।
ಅಸ್ಯಾಸ್ತ್ವಾಮಷ್ಟಮೋ ಗರ್ಭೋ ವಧಿಷ್ಯತಿ ನ ಸಂಶಯಃ ॥ ೩೮ ॥
ಇತ್ಯಾಕರ್ಣ್ಯ ವಚೋ ದಿವ್ಯಂ ಕಂಸಃ ಖಡ್ಗಂ ಪ್ರಗೃಹ್ಯ ಚ ।
ಸ್ವಸಾರಂ ಹಂತುಮುದ್ಯೋಗಂ ಚಕಾರ ದ್ವಿಜಪುಂಗವಾಃ ॥ ೩೯ ॥
ತತಃ ಪ್ರೋವಾಚ ತಂ ಕಂಸಂ ವಸುದೇವಃ ಸ ಸಾಂತ್ವಯನ್ ॥ ೪೦ ॥

ವಸುದೇವ ಉವಾಚ :—

ಅಸ್ಯಾಂ ಪ್ರಸೂತಾನ್ದಾಸ್ಯಾಮಿ ತುಭ್ಯಂ ಕಂಸ ಸುತಾನಹಂ ।
ಏನಾಂ ಸ್ವಸಾರಂ ಮಾ ಹಿಂಸೀರ್ನಾಽಸ್ಯಾಸ್ತೇ ಭೀತಿರಸ್ತಿ ಹಿ ।
ಶ್ರುತ್ವಾ ತದ್ವಚನಂ ಕಂಸೋ ನಿವೃತ್ತಸ್ತದ್ವಧಾತ್ತದಾ ॥ ೪೧ ॥
ದೇವಕೀವಸುದೇವಾಭ್ಯಾಂ ಸಹಿತಃ ಸ್ವಪುರಂ ಯಯೌ ।
ಪಾದಾವಸಕ್ತನಿಗಡೌ ದೇವಕೀವಸುದೇವಕೌ ॥ ೪೨ ॥
ಸ್ಥಾಪಯಾಮಾಸ ದುಷ್ಟಾತ್ಮಾ ಕಂಸಃ ಕಾರಾಗೃಹೇ ತದಾ ।
ತತಃ ಕಾಲೇನ ಮಹತಾ ವಸುದೇವಾದ್ಧಿ ದೇವಕೀ ॥ ೪೩ ॥

---

೩೭. ಸಹೋದರಿಯನ್ನೂ, ಭಾವನನ್ನೂ ರಥಶ್ರೇಷ್ಠದಲ್ಲಿ ಕುಳ್ಳಿರಿಸಿಕೊಂಡು ಹೋಗುತ್ತಿರುವ ಸಾರಥಿಯಾದ ಕಂಸನನ್ನು ಕುರಿತು ಅಶರೀರವಾಣಿಯು ಹೀಗೆಂದಿತು.

೩೮. "ರಿಪುನಾಶಕನಾದ ಎಲೈ ಕಂಸನೆ! ನೀನು ರಥದಲ್ಲಿ ಕುಳ್ಳಿರಿಸಿ ಕರೆದುಕೊಂಡುಹೋಗುತ್ತಿರುವ ಇವಳ ಎಂಟನೆ ಗರ್ಭಸಂಭೂತನಾದವನು ನಿನ್ನನ್ನು ನಿಶ್ಚಯವಾಗಿಯೂ ಕೊಲ್ಲುವನು."

೩೯–೪೦. ದ್ವಿಜೋತ್ತಮರೆ! ಈ ದಿವ್ಯವಾಣಿಯನ್ನು ಕೇಳಿ ಆ ಕಂಸನು ಖಡ್ಗವನ್ನು ಹಿರಿದು ಸಹೋದರಿಯನ್ನು ಕೊಲ್ಲಲುದ್ಯುಕ್ತನಾದನು. ಬಳಿಕ ಆ ವಸುದೇವನು ಆ ಕಂಸನನ್ನು ಸಮಾಧಾನಗೊಳಿಸುತ್ತ ಇಂತೆಂದನು :

೪೧. ವಸುದೇವನು ಹೇಳುತ್ತಾನೆ:—"ಕಂಸ! ಈ ದೇವಕಿಯಲ್ಲಿ ಜನಿಸಿದ ಮಕ್ಕಳನ್ನು ನಾನು ನಿನಗೆ ಒಪ್ಪಿಸುವೆನು. ಸಹೋದರಿಯನ್ನು ಕೊಲ್ಲಬೇಡ. ಇವಳಿಂದ ನಿನಗೆ ಯಾವ ಹೆದರಿಕೆಯೂ ಉಂಟಾಗುವುದಿಲ್ಲ." ಆಗ ಕಂಸನು ಅವನ ಮಾತನ್ನು ಕೇಳಿ ಅವಳನ್ನು ಕೊಲ್ಲಲಿಲ್ಲ.

೪೨–೪೪. ದುಷ್ಟನಾದ ಆ ಕಂಸನು ದೇವಕೀವಸುದೇವರೊಡನೆ ತನ್ನ ಪಟ್ಟಣಕ್ಕೆ ಹೋಗಿ ಅವರಿಬ್ಬರ ಕಾಲಿಗೆ ಬೇಡಿಯನ್ನು ಹಾಕಿ ಬಂಧನದಲ್ಲಿಟ್ಟನು. ಅನಂತರ ಬಹಳಕಾಲದಮೇಲೆ ದೇವಕಿಯು ವಸುದೇವನಿಂದ ಕ್ರಮವಾಗಿ

ಷಟ್ಪುತ್ರಾನ್ಸ್ವನಯಾಮಾಸ ಕ್ರಮೇಣ ಮುನಿಪುಂಗವಾಃ ।
ಜಾತಾಂಸ್ತಾನ್ವಸುದೇವೇನ ದತ್ತಾನ್ಕಂಸೋಽಪಿ ಸೋಽವಧೀತ್ ॥ ೪೪ ॥
ಹತೇಷು ಷಟ್ಸು ಪುತ್ರೇಷು ದೇವಕ್ಯುದರಜನ್ಮಸು ।
ಕಂಸೇನ ಕ್ರೂರಮತಿನಾ ನಿಷ್ಕೃಪೇಣ ದ್ವಿಜೋತ್ತಮಾಃ ॥ ೪೫ ॥
ಶೇಷೋಽಭೂತ್ಸಪ್ತಮೋ ಗರ್ಭೋ ದೇವಕ್ಯಾ ಜಠರೇ ತದಾ ।
ಮಾಯಾದೇವೀ ತತೋ ಗರ್ಭಂ ತಂ ವೈ ವಿಷ್ಣುಪ್ರಚೋದಿತಾ ॥ ೪೬ ॥
ನಂದಗೋಪಗೃಹಸ್ಥಾಯಾಂ ರೋಹಿಣ್ಯಾಂ ಸಮವೇಶಯತ್ ।
ದೇವಕ್ಯಾಃ ಸಪ್ತಮೋ ಗರ್ಭಃ ಪತಿತೋ ಜಠರಾದಿತಿ ॥ ೪೭ ॥
ಲೋಕೇ ಪ್ರಸಿದ್ಧಿರಭವನ್ಮಹತೀ ವಿಷ್ಣುಲೀಲಯಾ ।
ದೇವಕೀ ಜಠರೇ ಪಶ್ಚಾದ್ವಿಷ್ಣುರ್ಗರ್ಭತ್ವಮಾಪ್ತವಾನ್ ॥ ೪೮ ॥
ತತೋ ದಶಸು ಮಾಸೇಷು ಗತೇಷು ಹರಿರವ್ಯಯಃ ।
ದೇವಕೀಜಠರಾಜ್ಜಜ್ಞೇ ಕೃಷ್ಣ ಇತ್ಯಭಿವಿಶ್ರುತಃ ॥ ೪೯ ॥
ಶಂಖಚಕ್ರಗದಾಖಡ್ಗವಿರಾಜಿತಚತುರ್ಭುಜಃ ।
ಕಿರೀಟೀ ವನಮಾಲೀ ಚ ಪಿತ್ರೋಃ ಶೋಕವಿನಾಶನಃ ॥ ೫೦ ॥
ತಂ ದೃಷ್ಟ್ವಾ ಹರಿಮೀಶಾನಂ ತುಷ್ಟಾವಾನಕದುಂದುಭಿಃ ॥ ೫೧ ॥

---

ಆರು ಮಕ್ಕಳನ್ನು ಪಡೆದಳು. ವಸುದೇವನು ಆ ಮಕ್ಕಳನ್ನು ಕಂಸನಿಗೆ ಒಪ್ಪಿಸಲು ಅವನು ಆ ಮಕ್ಕಳನ್ನೆಲ್ಲ ಕೊಂದನು.

೪೫–೪೮. ನಿರ್ದಯನಾದ ಆ ಕಂಸನು ದೇವಕಿಯ ಹೊಟ್ಟೆಯಲ್ಲಿ ಹುಟ್ಟಿದ ಆರು ಮಕ್ಕಳನ್ನೂ ಕೊಲ್ಲಲು ದೇವಕಿಯ ಉದರದಲ್ಲಿ ಆದಿಶೇಷನೇ ಏಳನೆಯ ಗರ್ಭವಾಗಿ ಉಳಿದನು. ತರುವಾಯ ವಿಷ್ಣುವಿನಿಂದ ಪ್ರೇರಿತಳಾದ ಮಾಯಾ ದೇವಿಯು ಆ ದೇವಕಿಯ ಏಳನೆಯ ಗರ್ಭವನ್ನು ಸೆಳೆದು ನಂದಗೋಪನ ಮನೆಯಲ್ಲಿರುವ ರೋಹಿಣಿಯ ಹೊಟ್ಟೆಯಲ್ಲಿ ಸೇರಿಸಿದಳು. ಬಳಿಕ ಲೋಕದಲ್ಲಿ ದೇವಕಿಯ ಏಳನೆಯ ಗರ್ಭವು ಸ್ರಾವವಾಯಿತೆಂದು ಪ್ರಸಿದ್ಧಿಯಾಯಿತು. ತರುವಾಯ ಶ್ರೀಮನ್ನಾರಾಯಣನು ಲೀಲಾರ್ಥವಾಗಿ ದೇವಕಿಯ ಹೊಟ್ಟೆಯಲ್ಲಿ ಗರ್ಭವಾಗಿ ಬೆಳೆದನು.

೪೯–೫೦. ಅನಂತರ ಹತ್ತು ತಿಂಗಳು ಕಳೆಯಲು ಶ್ರೀಮಹಾವಿಷ್ಣುವು ದೇವಕಿಯ ಹೊಟ್ಟೆಯಿಂದ ಶಂಖ, ಚಕ್ರ, ಗದಾ, ಖಡ್ಗಗಳಿಂದೊಪ್ಪುವ ನಾಲ್ಕು ತೋಳುಗಳುಳ್ಳವನಾಗಿಯೂ, ಕಿರೀಟ ವನಮಾಲೆಗಳನ್ನು ಧರಿಸಿದವನಾಗಿಯೂ, ತಂದೆ ತಾಯಿಗಳ ದುಃಖವನ್ನು ಪರಿಹರಿಸಲೋಸುಗ ಕೃಷ್ಣನೆಂಬ ಹೆಸರಿನಿಂದ ಜನಿಸಿದನು.

೫೧. ವಸುದೇವನು ಜಗದೀಶನಾದ ಆ ಹರಿಯನ್ನು ಕಂಡು ಸ್ತುತಿಸಿದನು :

ವಸುದೇವ ಉವಾಚ :—

ವಿಶ್ವಂ ಭವಾನ್ವಿಶ್ವಪತಿಸ್ತ್ವಮೇವ
ವಿಶ್ವಸ್ಯ ಯೋನಿಸ್ತ್ವಯಿ ವಿಶ್ವಮಾಸ್ತೇ ।
ಮಹಾನ್ಪ್ರಧಾನಶ್ಚ ವಿರಾಟ್ಸ್ವರಾಟ್ ಚ
ಸಮ್ರಾಡಸಿ ತ್ವಂ ಭಗವನ್ಸಮಸ್ತಂ ॥ ೫೨ ॥
ಏವಂ ಜಗತ್ಕಾರಣಭೂತಧಾಮ್ನೇ
ನಾರಾಯಣಾಯಾಮಿತವಿಕ್ರಮಾಯ ।
ಶ್ರೀ ಶಾರ್ಙ್ಗಚಕ್ರಾಸಿಗದಾಧರಾಯ
ನಮೋನಮಃ ಕೃತ್ರಿಮಮಾನುಷಾಯ ॥ ೫೩ ॥
ಸ್ತುವಂತಮೇವಂ ಶೌರಿಂ ತಂ ವಸುದೇವಂ ಹರಿಸ್ತದಾ ।
ಅವೋಚತ್ಪ್ರೀಣಯಂಸ್ತಂ ಚ ದೇವಕೀಂ ಚ ದ್ವಿಜೋತ್ತಮಾಃ ॥ ೫೪ ॥

ಹರಿರುವಾಚ :—

ಅಹಂ ಕಂಸಂ ವಧಿಷ್ಯಾಮಿ ಮಾಭೀರ್ವಾಂ ಪಿತರಾವಿತಿ ।
ನಂದಗೋಪಸ್ಯ ಗೃಹಿಣೀ ಯಶೋದಾಽಜನಯತ್ಸುತಾಂ ।
ಮಮ ಮಾಯಾಂ ಪೂರ್ವದಿನೇ ಸರ್ವಲೋಕವಿಮೋಹಿನೀಂ ॥ ೫೫ ॥
ಮಾಂ ತಸ್ಯಾಃ ಶಯನೇ ನ್ಯಸ್ಯ ಯಶೋದಾಯಾಃ ಸುತಾಂ ತು ತಾಂ ।
ಆದಾಯ ದೇವಕೀಶಯ್ಯಾಂ ಪ್ರಾಪಯಸ್ವ ಯದೂತ್ತಮ ॥ ೫೬ ॥

---

೫೨. ವಸುದೇವನು ಹೇಳುತ್ತಾನೆ :—"ನೀನು ಸಮಸ್ತಪ್ರಪಂಚರೂಪನೂ, ವಿಶ್ವದೊಡೆಯನೂ, ವಿಶ್ವಕ್ಕೆ ಕಾರಣನೂ ಆಗಿರುವೆ. ನಿನ್ನಲ್ಲಿ ಸಕಲಪ್ರಪಂಚವೂ ನೆಲಸಿರುವುದು. ನೀನು ಪ್ರಧಾನನೂ, ವಿರಾಟ್ಸ್ವರೂಪನೂ, ಸ್ವಪ್ರಕಾಶನೂ, ಸಾರ್ವಭೌಮನೂ, ಸಮಸ್ತ ವಸ್ತುರೂಪನೂ ಆಗಿರುವೆ.

೫೩. ಹೀಗೆ ಜಗತ್ತಿಗೆ ಕಾರಣವಾದ ತೇಜಸ್ಸುಳ್ಳವನೂ, ಅಪರಿಮಿತ ಪರಾಕ್ರಮವುಳ್ಳವನೂ, ಶಾರ್ಙ್ಗಚಾಪ, ಚಕ್ರ, ಖಡ್ಗ, ಗದೆಗಳನ್ನು ಧರಿಸಿದವನೂ, ಕೃತ್ರಿಮಮನುಷ್ಯನೂ ಆದ ಓ ನಾರಾಯಣನೆ! ನಿನಗೆ ನಮಸ್ಕಾರವು."

೫೪. ಎಲೈ ದ್ವಿಜವರ್ಯರೆ! ಆಗ ವಿಷ್ಣುವು ಹೀಗೆ ಸ್ತೋತ್ರಮಾಡುತ್ತಿರುವ ಆ ವಸುದೇವನನ್ನೂ, ದೇವಕಿಯನ್ನೂ ಸಂತೋಷಗೊಳಿಸುತ್ತ ಇಂತೆಂದನು :

೫೫–೫೬. ಹರಿಯು ಹೇಳುತ್ತಾನೆ :—"ಎಲೈ ತಂದೆ ತಾಯಿಗಳೆ! ನಾನು ಕಂಸನನ್ನು ಕೊಲ್ಲುವೆನು. ನೀವು ಹೆದರಬೇಡಿರಿ; ನಂದಗೋಪನ ಪತ್ನಿಯಾದ ಯಶೋದೆಯು ನಿನ್ನೆಯ ದಿನವೆ, ಸಕಲ ಲೋಕಗಳನ್ನೂ ಮೋಹಗೊಳಿಸುವ ನನ್ನ ಮಾಯೆಯನ್ನು ಮಗಳನ್ನಾಗಿ ಪಡೆದಿರುವಳು. ಯಾದವೋತ್ತಮ! ನನ್ನನ್ನು ಅವಳ ಹಾಸಿಗೆಯಲ್ಲಿಟ್ಟು ಯಶೋದೆಯ ಸುತಳಾದ ಆ ಮಾಯೆಯನ್ನು ತೆಗೆದುಕೊಂಡುಬಂದು ಈ ದೇವಕಿಯ ಹಾಸಿಗೆಯಲ್ಲಿ ಮಲಗಿಸು."

ಏವಮುಕ್ತಃ ಸ ಕೃಷ್ಣೇನ ತಥೈವ ಹ್ಯಕರೋದ್ದ್ವಿಜಾಃ ।
ರುರೋದ ಮಾಯಾ ತನಯಾ ದೇವಕೀಶಯನೇ ಸ್ಥಿತಾ ॥ ೫೭ ॥
ಅಥ ಬಾಲಧ್ವನಿಂ ಶ್ರುತ್ವಾ ಕಂಸಃ ಸಂಕುಲಮಾನಸಃ ।
ಸೂತಿಕಾಗೃಹಮಾಗಮ್ಯ ತಾಮಾದಾಯ ಚ ದಾರಿಕಾಂ ॥ ೫೮ ॥
ಶಿಲಾಯಾಂ ಪೋಥಯಾಮಾಸ ನಿರ್ದಯೋ ನಿರಪತ್ರಪಃ ।
ಅಥ ತದ್ಧಸ್ತಮಾಚ್ಛಿದ್ಯ ಸಾಯುಧಾಷ್ಟಮಹಾಭುಜಾ ।
ಮಹಾದೇವ್ಯಬ್ರವೀತ್ಕಂಸಂ ಸಮಾಹೂಯಾಽತಿಕೋಪನಾ ॥ ೫೯ ॥

ಮಾಯೋವಾಚ :—

ಅರೇ ರೇ ಕಂಸ ಪಾಪಾತ್ಮನ್ದುರ್ಬುದ್ಧೇ ಮೂಢಚೇತನ ॥ ೬೦ ॥
ಯತ್ರ ಕುತ್ರಾಽಪಿ ಶತ್ರುಸ್ತೇ ವರ್ತತೇ ಪ್ರಾಣಹಾರಕಃ ।
ಮಾರ್ಗಯಸ್ವಾತ್ಮನೋ ಮೃತ್ಯುಂ ತಂ ಶತ್ರುಂ ಕಂಸ ಮಾ ಚಿರಂ ॥ ೬೧ ॥
ಇತೀರಯಿತ್ವಾ ಸಾ ದೇವೀ ದಿವ್ಯಸ್ಥಾನಾನ್ಯವಾಪ್ಯ ಚ ।
ಲಬ್ಧಪೂಜಾ ಮನುಷ್ಯೇಭ್ಯೋ ಬಭೂವಾಽಭೀಷ್ಟದಾಯಿನೀ ॥ ೬೨ ॥
ಶ್ರುತ್ವಾ ಸ ದೇವೀವಚನಂ ಕಂಸೋಽಪಿ ಭೃಶಮಾಕುಲಃ ।
ಬಾಲಗ್ರಹಾನ್ಪೂತನಾದೀನ್ಸ್ವಾಂತಕಂ ಬಾಧಿತುಂ ರಿಪುಂ ॥ ೬೩ ॥

---

೫೭. ಎಲೈ ಬ್ರಾಹ್ಮಣರೆ! ಶ್ರೀಕೃಷ್ಣನು ಹೀಗೆನ್ನಲು, ವಸುದೇವನು ಹಾಗೆಯೇ ಮಾಡಿದನು. ದೇವಕಿಯ ಹಾಸಿಗೆಯಲ್ಲಿರುವ ಮಾಯೆಯು ರೋದಿಸ ತೊಡಗಿದಳು.

೫೮–೫೯. ಬಳಿಕ ಕಂಸನು ಮಗುವಿನ ಧ್ವನಿಯನ್ನು ಕೇಳಿ ವ್ಯಥೆಗೊಂಡ ಮನಸ್ಸುಳ್ಳವನಾಗಿ ಪ್ರಸವಗೃಹಕ್ಕೆ ಬಂದು ಆ ಶಿಶುವನ್ನು ಹಿಡಿದುಕೊಂಡು ನಿರ್ದಯನೂ, ನಾಚಿಕೆಯಿಲ್ಲದವನೂ ಆಗಿ ಕಲ್ಲಿನಮೇಲೆ ಅಪ್ಪಳಿಸಿದನು. ಅನಂತರ ಆ ಮಹಾದೇವಿಯು ಆ ಕಂಸನ ಕೈಯಿಂದ ತಪ್ಪಿಸಿಕೊಂಡು ಆಯುಧಗಳನ್ನು ಹಿಡಿದ ಎಂಟು ತೋಳುಗಳುಳ್ಳವಳೂ, ಅತಿಕ್ರುದ್ಧಳೂ ಆಗಿ ಅವನನ್ನು ಕರೆದು ಇಂತೆಂದಳು.

೬೦–೬೧. ಮಾಯೆಯು ಹೇಳುತ್ತಾಳೆ:—"ಪಾಪಾತ್ಮನೂ, ದುರ್ಬುದ್ಧಿಯೂ, ಮೂಢನೂ ಆದ ಎಲಾ ಕಂಸನೆ! ನಿನ್ನನ್ನು ಸಂಹರಿಸುವ ಶತ್ರುವು ಎಲ್ಲಿಯೋ ಇದ್ದಾನೆ. ನಿನಗೆ ಮೃತ್ಯುವಾದ ಆ ಶತ್ರುವನ್ನು ಜಾಗ್ರತೆಯಾಗಿ ಹುಡುಕು."

೬೨. ದೇವಿಯು ಹೀಗೆಂದು ನುಡಿದು ದಿವ್ಯಸ್ಥಾನವನ್ನು ಹೊಂದಿ ಮನುಷ್ಯರಿಂದ ಪೂಜೆಯನ್ನು ಕೈಕೊಳ್ಳುತ್ತ ಇಷ್ಟಾರ್ಥವನ್ನೀಯುತ್ತಿದ್ದಳು.

೬೩–೬೪. ಆ ಕಂಸನಾದರೊ ದೇವಿಯಮಾತನ್ನು ಕೇಳಿ ಅತ್ಯಂತ ವ್ಯಾಕುಲಗೊಂಡು ತನಗೆ ಅಂತಕನಾದ ಶತ್ರುವನ್ನೂ, ಇತರ ಶಿಶುಗಳನ್ನೂ ಪೀಡಿಸು

ಪ್ರೇಷಯಾಮಾಸ ದೇಶೇಷು ಶಿಶೂನನ್ಯಾಂಶ್ಚ ಬಾಧಿತುಂ ।
ತೇ ಚ ಬಾಲಗ್ರಹಾಃ ಸರ್ವೇ ಪ್ರಯಯುರ್ನಂದಗೋಕುಲಂ ॥ ೬೪ ॥
ಹತಾಶ್ಚ ಕೃಷ್ಣೇನ ತದಾ ಪ್ರಯಯುರ್ಯಮಸಾದನಂ ।
ತತಃ ಕತಿಪಯಾಽಹಸ್ಸು ಗತೇಷು ದ್ವಿಜಪುಂಗವಾಃ ॥ ೬೫ ॥
ರಾಮಕೃಷ್ಣೌ ವ್ಯವರ್ಧೇತಾಂ ಗೋಕುಲೇ ಬಾಲಕೌ ತದಾ ।
ಅನೇಕಬಾಲಕ್ರೀಡಾಭಿಶ್ಚಿಕ್ರೀಡತುರರಿಂದಮೌ ॥ ೬೬ ॥
ಕಂಚಿತ್ಕಾಲಂ ವತ್ಸಪಾಲೌ ವೇಣುನಾದಮಕುರ್ವತಾಂ ।
ಕಂಚಿತ್ಕಾಲಂ ಚ ಗೋಪಾಲೌ ಗುಂಜಾತಾಪಿಚ್ಛಭೂಷಿತೌ ॥ ೬೭ ॥
ರೇಮಾತೇ ಬಹುಕಾಲಂ ತೌ ಗೋಕುಲೇ ರಾಮಕೇಶವೌ ।
ಕಂಸಃ ಕದಾಚಿದಕ್ರೂರಂ ಗೋಕುಲೇ ರಾಮಕೇಶವೌ ॥ ೬೮ ॥
ಪ್ರೇಷಯಾಮಾಸ ವಿಪ್ರೇಂದ್ರಾಃ ಸಮಾನಯಿತುಮಂಜಸಾ ।
ಆನಯಾಮಾಸ ಚಾಽಕ್ರೂರೋ ರಾಮಕೃಷ್ಣೌ ಸ ಗೋಕುಲಾತ್ ॥ ೬೯ ॥
ಮಥುರಾಂ ಕಂಸನಿರ್ದೇಶಾತ್ಸ್ವರ್ಣತೋರಣರಾಜಿತಾಂ ॥ ೭೦ ॥

ತತಃ ಸಮಾನೀಯ ಸ ರಾಮಕೇಶವೌ
ಯಯೌ ಪುರೀಂ ಗಾಂದಿನಿಜಸ್ತದಗ್ರೇ ।
ದೃಷ್ಟ್ವಾ ಚ ಕಂಸಂ ವಿನಿವೇದ್ಯ ಕಾರ್ಯಂ
ತಸ್ಮೈ ಸ್ವಗೇಹಂ ಪ್ರವಿವೇಶ ಪಶ್ಚಾತ್ ॥ ೭೧ ॥

---

ವುದಕ್ಕಾಗಿ ಪೂತನಿ, ಬಾಲಗ್ರಹರನ್ನು (ಮಕ್ಕಳನ್ನು ಹಿಡಿಯುವವರು) ಅನೇಕ ದೇಶಗಳಿಗೆ ಕಳುಹಿಸಿದನು. ಆ ಬಾಲಗ್ರಹರು ನಂದಗೋಕುಲಕ್ಕೆ ಹೋದರು.

೬೫–೬೬. ಎಲೈ ದ್ವಿಜವರ್ಯರೆ! ಅವರು ಆ ಗೋಕುಲದಲ್ಲಿ ಕೃಷ್ಣನಿಂದ ಕೊಲ್ಲಲ್ಪಟ್ಟವರಾಗಿ ಯಮಪುರಿಗೆ ತೆರಳಿದರು. ಬಳಿಕ ಕೆಲವು ದಿನಗಳು ಕಳೆಯಲು ಬಾಲಕರಾದ ರಾಮಕೃಷ್ಣರು ಗೋಕುಲದಲ್ಲಿ ಅನೇಕ ಬಗೆಯ ಬಾಲಕ್ರೀಡೆಗಳಿಂದ ಶತ್ರುಗಳನ್ನು ನಿಗ್ರಹಿಸುತ್ತ ಬಾಲಲೀಲೆಯಲ್ಲಿ ತೊಡಗಿದರು.

೬೭–೭೦. ಅವರು ಕೆಲವು ಕಾಲ ಕರುಗಳನ್ನು ಕಾಯುತ್ತ ಕೊಳಲನ್ನೂದುತ್ತಿದ್ದರು. ಕೆಲವು ಕಾಲ ಗುರುಗುಂಜಿ, ಹೊಂಗೆ ಹೂವುಗಳನ್ನು ಧರಿಸಿ ಗೋವುಗಳನ್ನು ಕಾಯುತ್ತ ಬಹುಕಾಲದವರೆಗೆ ಗೋಕುಲದಲ್ಲಿ ಆಡುತ್ತಿದ್ದರು. ವಿಪ್ರವರ್ಯರೆ! ಒಂದಾನೊಂದು ದಿನ ಕಂಸನು ಗೋಕುಲದಲ್ಲಿರುವ ರಾಮಕೃಷ್ಣರನ್ನು ಕೂಡಲೆ ಕರೆತರುವುದಕ್ಕಾಗಿ ಅಕ್ರೂರನನ್ನು ಕಳುಹಿಸಿದನು. ಅದರಂತೆ ಆ ಅಕ್ರೂರನು ಗೋಕುಲದಿಂದ ರಾಮಕೃಷ್ಣರನ್ನು ಚಿನ್ನದ ತೋರಣದಿಂದ ವಿರಾಜಿಸುವ ಮಥುರೆಗೆ ಕರೆತಂದನು.

೭೧. ಅಂತೆಯೆ ಅಕ್ರೂರನು ರಾಮಕೃಷ್ಣರನ್ನು ಮಥುರೆಗೆ ಕರೆತಂದು ನಡೆದ ವಿಷಯವನ್ನು ಕಂಸನಿಗೆ ತಿಳಿಸಿ ತನ್ನ ಮನೆಗೆ ತೆರಳಿದನು.

ಅಥಾಽಪರಾಹ್ಣೇ ವಸುದೇವಪುತ್ರಾ
ವನ್ಯೇದ್ಯುರಿಷ್ಟೈಃ ಸಹ ಗೋಪಪುತ್ರೈಃ ।
ಉಪೇಯತುಃ ಸಾಲನಿಖಾತಯುಕ್ತಾಂ
ಸಗೋಪುರಾಟ್ಟಾಂ ಮಥುರಾಪುರೀಂ ತೌ ॥ ೭೨ ॥
ಸ್ತೋತ್ರಾಣಿ ಶೃಣ್ವನ್ಪುರಯೌವತಾನಾಂ
ಕೃಷ್ಣಸ್ತು ರಾಮೇಣ ಸಹೈವ ಗತ್ವಾ ।
ಧನುರ್ನಿವೇಶಂ ಸಹಸೈವ ತತ್ರ
ದದರ್ಶ ಚಾಪಂ ಚ ಮಹದ್ದೃಢಜ್ಯಂ ॥ ೭೩ ॥
ವಿದ್ರಾವ್ಯ ಸರ್ವಾನಪಿ ಚಾಪಪಾಲಾನ್
ಧನುಃ ಸಮಾದಾಯ ಸ ಲೀಲಯಾಽಽಶು ।
ಮೌರ್ಯಾಂ ನಿಯೋಕ್ತುಂ ನಮಯಾಂ ಚಕಾರ
ತದಂತರೇ ಭಗ್ನಮಭೂದ್ದ್ವಿಧೈವ ॥ ೭೪ ॥
ಕೋದಂಡಭಂಗೋತ್ಥಿತಶಬ್ದಮಾಶು
ಶ್ರುತ್ವಾಽಭಿಯಾತಾನ್ಬಲಿನೋ ನಿಹಂತುಂ ।
ನಿಜಘ್ನತುಸ್ತೌ ಪ್ರತಿಗೃಹ್ಯ ಖಂಡೌ
ಚಾಪಸ್ಯ ಪಾಲಾನ್ಬಲಿನೌ ದ್ವಿಜೇಂದ್ರಾಃ ॥ ೭೫ ॥
ತತಃ ಕುವಲಯಾಪೀಡಂ ಗಜಂ ದ್ವಾರಿ ಸ್ಥಿತಂ ಕ್ಷಣಾತ್ ।
ನಿಹತ್ಯ ರಾಮಕೃಷ್ಣೌ ತೌ ಮಹಾಬಲ ಪರಾಕ್ರಮೌ ॥ ೭೬ ॥

---

೭೨. ತರುವಾಯ ಮಾರನೆಯ ದಿನ ವಸುದೇವನ ತನಯರಾದ ಆ ರಾಮ ಕೃಷ್ಣರು ಅಪರಾಹ್ಣಕಾಲದಲ್ಲಿ ತಮಗೆ ಪ್ರಿಯರಾದ ಗೋಪಾಲಕರೊಡನೆ ಕೋಟೆ, ಕಂದಕ, ಗೋಪುರಗಳಿಂದ ಸಹಿತವಾದ ಮಥುರೆಯನ್ನು ಸೇರಿದರು.

೭೩. ಶ್ರೀಕೃಷ್ಣನು ಬಲರಾಮನೊಡನೆ ಪಟ್ಟಣದ ಸುಂದರ ಸ್ತ್ರೀಯರ ಸ್ತೋತ್ರಗಳನ್ನು ಕೇಳುತ್ತ ಅಲ್ಲಿಯೆ ಬಳಿಯಲ್ಲಿದ್ದ ಧನುಶ್ಶಾಲೆಯನ್ನು ಪ್ರವೇಶಿಸಿ ಗಟ್ಟಿಯಾದ ಸಿಂಜಿನಿಯುಳ್ಳ ಮಹಾಧನುಸ್ಸನ್ನು ಕಂಡನು.

೭೪. ಆಗ ಅವನು ಸಮಸ್ತ ಚಾಪಪಾಲಕರನ್ನೂ ಅಲ್ಲಿಂದ ಓಡಿಸಿ ಬಿಲ್ಲನ್ನು ತೆಗೆದುಕೊಂಡು ಅನಾಯಾಸವಾಗಿ ಹೆದೆಯೇರಿಸುವುದಕ್ಕಾಗಿ ಅದನ್ನು ಬಗ್ಗಿಸಲು ಆ ಬಿಲ್ಲು ಅಷ್ಟರಲ್ಲಿಯೆ ಮುರಿದು ಎರಡಾಯಿತು.

೭೫–೭೭. ಎಲೈ ಬ್ರಾಹ್ಮಣರೆ! ಬಲಿಷ್ಠರಾದ ರಾಮಕೃಷ್ಣರು ಬಿಲ್ಲನ್ನು ಬಗ್ಗಿಸುವುದರಿಂದುಂಟಾದ ಶಬ್ದವನ್ನು ಕೇಳಿ ಓಡಿಬಂದ ಬಲಿಷ್ಠರಾದ ಚಾಪಪಾಲಕರನ್ನು ಕೊಲ್ಲಲೋಸುಗ ಆ ಬಿಲ್ಲಿನ ತುಂಡುಗಳನ್ನು ತೆಗೆದುಕೊಂಡು ಹೊಡೆದರು. ಬಳಿಕ ಬಲಿಷ್ಠರಾದ ಆ ರಾಮಕೃಷ್ಣರು ಬಾಗಿಲಿನಲ್ಲಿ ನಿಂತಿರುವ

ತಸ್ಯ ದಂತೌ ಸಮುತ್ಪಾಟ್ಯ ದಧಾನೌ ಕರಯೋರ್ದ್ವಯೋಃ ।
ಅಂಸೇ ನಿಧಾಯ ತೌ ದಂತೌ ರಂಗಂ ಪ್ರಯಯತುಃ ಕ್ಷಣಾತ್ ॥ ೭೭ ॥
ನಿಹತ್ಯ ಮಲ್ಲಂ ಚಾಣೂರಂ ಮುಷ್ಟಿಕಂ ತೋಶಲಂ ತಥಾ ।
ಅನ್ಯಾಂಶ್ಚ ಮಲ್ಲಪ್ರವರಾನ್ನಿನ್ಯತುರ್ಯಮಸಾದನಂ ॥ ೭೮ ॥
ಸಮಾರುರುಹತುಸ್ತೂರ್ಣಂ ತುಂಗಂ ಮಂಚಂ ಚ ತೌ ತದಾ ।
ತತ್ರ ತುಂಗೇ ಸಮಾಸೀನಮಾಸನೇ ಕಂಸಮೇತ್ಯ ತೌ ।
ತಸ್ಥತುಸ್ತಂ ತೃಣೀಕೃತ್ಯ ಸಿಂಹೌ ಕ್ಷುದ್ರಮೃಗಂ ಯಥಾ ॥ ೭೯ ॥
ತತಃ ಕಂಸಂ ಸಮಾಕೃಷ್ಯ ಕೃಷ್ಣೋ ಮಂಚೋಪರಿ ಸ್ಥಿತಂ ।
ಪಾದೌ ಗೃಹೀತ್ವಾ ವೇಗೇನ ಭ್ರಾಮಯಾಮಾಸ ಚಾಽಂಬರೇ ॥ ೮೦ ॥
ತತಸ್ತಂ ಪೋಥಯಾಮಾಸ ಸ ಭೂಮೌ ಗತಜೀವಿತಂ ।
ಕಂಸಭ್ರಾತೄನ್ಬಲೋಽಪ್ಯಷ್ಟೌ ನಿಜಘ್ನೇ ಮುಷ್ಟಿನಾ ದ್ವಿಜಾಃ ॥ ೮೧ ॥
ಏವಂ ನಿಹತ್ಯ ತಂ ಕಂಸಂ ಕೃಷ್ಣಃ ಪರಬಲಾರ್ದನಃ ।
ಪಿತರೌ ಮೋಚಯಾಮಾಸ ನಿಗಡಾದತಿದುಃಖಿತೌ ॥ ೮೨ ॥
ಸರ್ವಾನಾಸ್ಥಾಪಯಾಮಾಸ ಬಲೇನ ಸಹ ಮಾಧವಃ ।
ಶ್ರೀಕೃಷ್ಣೇನ ಹತಂ ಕಂಸಂ ಶ್ರುತ್ವಾ ಪ್ರಾಪುಃ ಪುರೀಂ ತದಾ ॥ ೮೩ ॥

---

ಕುವಲಯಾಪೀಡವೆಂಬ ಆನೆಯನ್ನು ಕೊಂದು ಅದರ ದಂತಗಳನ್ನು ಕೈಗಳಿಂದಲೇ ಕಿತ್ತು ಹೆಗಲಿನಲ್ಲಿಟ್ಟುಕೊಂಡು ಕೂಡಲೆ ರಂಗಮಂಟಪಕ್ಕೆ ಹೋದರು.

೭೮. ಅಲ್ಲಿ ಚಾಣೂರ, ಮುಷ್ಟಿಕ, ತೋಶಲರೆಂಬ ಜಟ್ಟಿಗಳನ್ನೂ, ಬಲಶಾಲಿಗಳಾದ ಇತರ ಜಟ್ಟಿಗಳನ್ನೂ ಯಮಪುರಿಗೆ ಕಳುಹಿಸಿದರು.

೭೯. ಕೂಡಲೆ ಉನ್ನತವಾದ ಮಂಚವನ್ನೇರಿ ಅಲ್ಲಿ ಉಚ್ಚಾಸನದಲ್ಲಿ ಕುಳಿತಿರುವ ಕಂಸನೆಡೆಗೆ ಹೋಗಿ ಅಲ್ಪಮೃಗವನ್ನು ಸಿಂಹವು ಲೆಕ್ಕಿಸದಿರುವಂತೆ ಆ ಕಂಸನನ್ನು ಹುಲ್ಲಿನಂತೆ ಭಾವಿಸಿ ದಿಟ್ಟತನದಿಂದ ನಿಂತುಕೊಂಡರು.

೮೦. ಬಳಿಕ ಕೃಷ್ಣನು ಮಂಚದಮೇಲೆ ಕುಳಿತಿರುವ ಕಂಸನನ್ನು ಎಳೆದು ಕಾಲನ್ನು ಹಿಡಿದು ಅವನನ್ನು ವೇಗವಾಗಿ ಆಕಾಶದಲ್ಲಿ ತಿರುಗಿಸಿದನು.

೮೧. ತರುವಾಯ ಅವನು ಅಲ್ಲಿಯೆ ಮಡಿದ ಕಂಸನನ್ನು ಭೂಮಿಯಲ್ಲಿ ಕೆಡವಿದನು. ಬಲರಾಮನು ಮುಷ್ಟಿಯಿಂದ ಗುದ್ದಿ ಕಂಸನ ಎಂಟು ಮಂದಿ ಸಹೋದರರನ್ನೂ ಕೊಂದನು.

೮೨–೮೪. ಶತ್ರುಸೈನ್ಯನಾಶಕನಾದ ಶ್ರೀಕೃಷ್ಣನು ಹೀಗೆ ಆ ಕಂಸನನ್ನು ಕೊಂದು ಸಂಕೋಲೆಯಿಂದ ಅತಿಯಾಗಿ ದುಃಖಗೊಂಡಿದ್ದ ತಂದೆ ತಾಯಿಗಳನ್ನು ಬಿಡಿಸಿ ಬಲರಾಮನೊಡನೆ ಎಲ್ಲರನ್ನೂ ಸಮಾಧಾನಗೊಳಿಸಿದನು. ಹಿಂದೆ ಕಂಸನಿಂದ ಪೀಡಿತರಾದ ಬಾಂಧವರು ಅವನು ಶ್ರೀಕೃಷ್ಣನಿಂದ ಹತನಾದುದನ್ನು

ಬಾಂಧವಾ ಮಧುರಾಯಾಂ ಯೇ ಪುರ್ವಂ ಕಂಸೇನ ಬಾಧಿತಾಃ ।
ಉಗ್ರಸೇನಂ ತಥಾ ರಾಜ್ಯೇ ಸ್ಥಾಪಯಾಮಾಸ ಕೇಶವಃ ॥ ೮೪ ॥
ಅಸಹಿಷ್ಣುರ್ದ್ವಿಜಾಃ ಪಿತ್ರೋರೇವಂ ಕಂಸಂ ಕೃತಾಗಸಂ ।
ಜಘಾನ ಮಾತುಲಂ ಕಂಸಂ ದೇವಬ್ರಾಹ್ಮಣಕಂಟಕಂ ॥ ೮೫ ॥
ತತಃ ಕದಾಚಿತ್ಕೃಷ್ಣೋಽಯಮಾತ್ಮಾನಂ ದ್ರಷ್ಟುಮಾಗತಾನ್ ।
ನಾರದಾದೀನ್ಮುನೀನ್ಸರ್ವಾನಿದಂ ಪಪ್ರಚ್ಛ ಸತ್ತಮಃ ॥ ೮೬ ॥

ಶ್ರೀ ಕೃಷ್ಣ ಉವಾಚ:—

ಮಯಾಽಯಂ ಮಾತುಲೋ ವಿಪ್ರಾ ಹತಃ ಕಂಸೋಽತಿಪಾಪಕೃತ್ ।
ಮಾತುಲಸ್ಯ ವಧೇ ದೋಷಃ ಪ್ರೋಚ್ಯತೇ ಶಾಸ್ತ್ರವಿತ್ತಮೈಃ ॥ ೮೭ ॥
ಪ್ರಾಯಶ್ಚಿತ್ತಮತೋ ಬ್ರೂತ ತದ್ದೋಷವಿನಿವೃತ್ತಯೇ ।
ಅವೋಚನ್ನಾರದಸ್ತತ್ರ ಕೃಷ್ಣಮದ್ಭುತವಿಕ್ರಮಂ ।
ವಾಚಾ ಮಧುರಯಾ ವಿಪ್ರಾ ಭಕ್ತಿಪ್ರಣಯಪೂರ್ವಕಂ ॥ ೮೮ ॥

ನಾರದ ಉವಾಚ:—

ನಿತ್ಯಶುದ್ಧಶ್ಚ ಮುಕ್ತಶ್ಚ ಭದ್ರಶ್ಚೈವ ಭವಾನ್ಸದಾ ॥ ೮೯ ॥
ಸಚ್ಚಿದಾನಂದರೂಪಶ್ಚ ಪರಮಾತ್ಮಾ ಸನಾತನಃ ।
ಪುಣ್ಯಂ ಪಾಪಂ ಚ ತೇ ನಾಽಸ್ತಿ ಕೃಷ್ಣ ಯಾದವನಂದನ ॥ ೯೦ ॥

---

ಕೇಳಿ ಮಧುರೆಗೆ ಮರಳಿ ಬಂದರು. ತರುವಾಯ ಶ್ರೀಕೃಷ್ಣನು ರಾಜ್ಯದಲ್ಲಿ ಉಗ್ರಸೇನನನ್ನು ಸ್ಥಾಪಿಸಿದನು.

೮೫. ವಿಪ್ರರೆ! ಇಂತು ಶ್ರೀಕೃಷ್ಣನು ತನ್ನ ತಂದೆ ತಾಯಿಗಳಿಗೆ ಕಂಸನು ಮಾಡಿದ ಅಪರಾಧವನ್ನು ಸಹಿಸದೆ ದೇವಬ್ರಾಹ್ಮಣಕಂಟಕನೂ, ಮಾವನೂ ಆದ ಆ ಕಂಸನನ್ನು ಕೊಂದನು.

೮೬. ತರುವಾಯ ಒಂದಾನೊಂದು ದಿನ ಆತನು ತನ್ನನ್ನು ನೋಡಲು ಬಂದ ನಾರದನೇ ಮೊದಲಾದ ಸಕಲ ಮುನಿಗಳನ್ನೂ ಕುರಿತು ಹೀಗೆ ಪ್ರಶ್ನಿಸಿದನು.

೮೭–೮೮. ಶ್ರೀಕೃಷ್ಣನು ಕೇಳುತ್ತಾನೆ:— "ನಾನು ಅತಿ ಪಾಪಿಯೂ, ಮಾವನೂ ಆದ ಆ ಕಂಸನನ್ನು ಕೊಂದೆನು. ಎಲೈ ಬ್ರಾಹ್ಮಣರೆ! ಶಾಸ್ತ್ರ ಕೋವಿದರು ಮಾವನ ವಧೆಯು ದೋಷವೆಂದು ಹೇಳುತ್ತಾರೆ. ಆದುದರಿಂದ ಆ ದೋಷಶಾಂತಿಗೆ ಪ್ರಾಯಶ್ಚಿತ್ತವನ್ನು ಹೇಳಿರಿ." ಆಗ ನಾರದನು ಅದ್ಭುತ ಪರಾಕ್ರಮಶಾಲಿಯಾದ ಆ ಕೃಷ್ಣನನ್ನು ಕುರಿತು ಸವಿನುಡಿಯಿಂದಲೂ, ಭಕ್ತಿ ಪ್ರೀತಿಗಳಿಂದಲೂ ಇಂತೆಂದನು.

೮೯–೯೦. ನಾರದನು ಹೇಳುತ್ತಾನೆ:—"ಯಾದವವಂಶಸಂಭೂತನಾದ ಎಲೈ ಕೃಷ್ಣನೇ! ನೀನು ಯಾವಾಗಲೂ ಶುದ್ಧನೇ! ಮುಕ್ತನೂ, ಮಂಗಳ

ತಥಾಽಪಿ ಲೋಕಶಿಕ್ಷಾರ್ಥಂ ಭವತಾ ಗರುಡಧ್ವಜ ।
ಪ್ರಾಯಶ್ಚಿತ್ತಂ ತು ಕರ್ತವ್ಯಂ ವಿಧಿನಾಽನೇನ ಮಾಧವ ॥ ೯೧ ॥
ಲೋಕಸಂಗ್ರಹಣಂ ತಾವತ್ಕರ್ತವ್ಯಂ ಭವತಾಽಧುನಾ ।
ರಾಮಸೇತೌ ಮಹಾಪುಣ್ಯೇ ಗಂಧಮಾದನಪರ್ವತೇ ॥ ೯೨ ॥
ರಾಮೇಣ ಸ್ಥಾಪಿತಂ ಲಿಂಗಂ ರಾಮನಾಥಾಽಭಿಧಂ ಪುರಾ ।
ತಸ್ಯಾಽಭಿಷೇಕತೋಯಾರ್ಥಂ ಧನುಷ್ಕೋಟ್ಯಾ ರಘೂದ್ವಹಃ ॥ ೯೩ ॥
ಗಾಂ ಭಿತ್ವೋತ್ಪಾದಯಾಮಾಸ ತೀರ್ಥಂ ಕೋಟೀತಿ ವಿಶ್ರುತಂ ।
ತವ ಪೂರ್ವಾಽವತಾರೇಣ ರಾಮೇಣಾಕ್ಲಿಷ್ಟಕರ್ಮಣಾ ॥ ೯೪ ॥
ಬ್ರಹ್ಮಹತ್ಯಾವಿಶುದ್ಧ್ಯರ್ಥಂ ನಿರ್ಮಿತಂ ಸ್ವಯಮೇವ ಯತ್ ।
ತತ್ರ ಸ್ನಾನಂ ಕುರುಷ್ವ ತ್ವಂ ಧರ್ಮ್ಯೇ ಪಾಪವಿನಾಶನೇ ॥ ೯೫ ॥
ತೇನ ತೇ ಮಾತುಲವಧಾದ್ದೋಷಃ ಶೀಘ್ರಂ ವಿನಂಕ್ಷ್ಯತಿ ।
ಕೋಟಿತೀರ್ಥೇ ಹರೇಃ ಸ್ನಾನಂ ಬ್ರಹ್ಮಹತ್ಯಾದಿಶೋಧಕಂ ॥ ೯೬ ॥
ಸ್ವರ್ಗಮೋಕ್ಷಪ್ರದಂ ಪುಂಸಾಂ ಆಯುರಾರೋಗ್ಯವರ್ಧನಂ ।
ಇತಿ ಶ್ರುತ್ವಾ ಮುನೇರ್ವಾಕ್ಯಂ ನಾರದಸ್ಯ ಸ ಮಾಧವಃ ॥ ೯೭ ॥

---

ಕರನೂ, ಆಗಿರುವೆ. ಜ್ಞಾನಾನಂದಸ್ವರೂಪನೂ, ಅನಾದಿಪುರುಷನೂ ಆಗಿರುವೆ. ಇಂತಹ ನಿನಗೆ ಪುಣ್ಯಪಾಪಗಳು ಇರುವುದಿಲ್ಲ.

೯೧. ಗರುಡಧ್ವಜನಾದ ಶ್ರೀಕೃಷ್ಣನೆ! ಹಾಗಾದಾಗ್ಯೂ ಲೋಕದ ಶಿಕ್ಷೆಗಾಗಿ ನೀನು ವಿಧಿಪೂರ್ವಕವಾಗಿ ಪ್ರಾಯಶ್ಚಿತ್ತವನ್ನಾಚರಿಸಬೇಕು.

೯೨–೯೫. ನೀನೀಗ ಲೋಕಸಂಗ್ರಹವನ್ನು ಮಾಡಬೇಕು. ಹಿಂದೆ ಪುಣ್ಯಕರವಾದ ರಾಮಸೇತುವೆಯಲ್ಲಿರುವ ಗಂಧಮಾದನಪರ್ವತದಲ್ಲಿ ರಾಮನಾಥವೆಂಬ ಶಿವಲಿಂಗವನ್ನು ಶ್ರೀರಾಮನೇ ಸ್ಥಾಪಿಸಿ ಅದಕ್ಕೆ ಅಭಿಷೇಕಮಾಡಲು ನೀರಿಗಾಗಿ ಬಿಲ್ಲಿನ ಕೊನೆಯಿಂದ ಭೂಮಿಯನ್ನು ಸೀಳಿ ಪ್ರಸಿದ್ಧವಾದ ಕೋಟಿತೀರ್ಥವನ್ನು ನಿರ್ಮಿಸಿರುವನು. ನಿನ್ನ ಹಿಂದಿನ ಅವತಾರವೂ ಸುಖಕರವಾದ ಕಾರ್ಯವುಳ್ಳವನೂ ಆದ ರಾಮನು ಬ್ರಹ್ಮಹತ್ಯೆಯ ಶುದ್ಧಿಗಾಗಿ ತಾನೇ ನಿರ್ಮಿಸಿದ ಧರ್ಮ್ಯವೂ, ಪಾಪಪರಿಹಾರಕವೂ ಆದ ಆ ತೀರ್ಥದಲ್ಲಿ ಸ್ನಾನ ಮಾಡು.

೯೬. ಅದರಿಂದ ನಿನ್ನ ಮಾವನ ವಧೆಯಿಂದುಂಟಾದ ದೋಷವು ಶೀಘ್ರವಾಗಿ ನಾಶವಾಗುವುದು. ರಾಮನಿರ್ಮಿತವಾದ ಕೋಟಿತೀರ್ಥದಲ್ಲಿ ಸ್ನಾನ ಮಾಡುವುದರಿಂದ ಬ್ರಹ್ಮಹತ್ಯೆಯು ಪರಿಹಾರವಾಗುವುದು.

೯೭–೯೮. ಆ ತೀರ್ಥದ ಸ್ನಾನವು ಮಾನವರಿಗೆಲ್ಲ ಸ್ವರ್ಗಮೋಕ್ಷಗಳನ್ನಿತ್ತು ಆಯುರಾರೋಗ್ಯವನ್ನು ಹೆಚ್ಚಿಸುವುದು.'' ನಾರದಮುನಿಯ ಈ ಮಾತನ್ನು

ವಿಸೃಜ್ಯ ತಾನೃಷೀನ್ಸರ್ವಾಂಸ್ತಸ್ಮಿನ್ನೇವ ಕ್ಷಣೇ ದ್ವಿಜಾಃ ।
ರಾಮಸೇತೌ ಯಯೌ ತೂರ್ಣಂ ಸ್ವದೋಷಪರಿಶುದ್ಧಯೇ ॥ ೯೮ ॥
ದಿನೈಃ ಕತಿಪಯೈರ್ಗತ್ವಾ ಕೋಟಿತೀರ್ಥಂ ಯದೂದ್ವಹಃ ।
ಸ್ನಾತ್ವಾ ಸಂಕಲ್ಪಪೂರ್ವಂ ಚ ದತ್ವಾ ದಾನಾನ್ಯನೇಕಶಃ ॥ ೯೯ ॥
ಸ ಮಾತುಲವಧೋತ್ಪನ್ನದೋಷೇಭ್ಯೋ ಮುಮುಚೇ ಕ್ಷಣಾತ್ ।
ನಿಷೇವ್ಯ ರಾಮನಾಥಂ ಚ ಸ್ವಪುರಂ ಮಧುರಾಂ ಯಯೌ ॥ ೧೦೦ ॥

ಶ್ರೀ ಸೂತ ಉವಾಚ :—

ಏವಂ ಪ್ರಭಾವಂ ಪುಣ್ಯಂ ಚ ಕೋಟಿತೀರ್ಥಂ ಮುನೀಶ್ವರಾಃ ।
ಬ್ರಹ್ಮಹತ್ಯಾದಿಭಿಃ ಪಾಪೈಃ ಸದ್ಯೋ ಮುಚ್ಯೇತ ಮಾನವಃ ।
ನಾಽನೇನ ಸದೃಶಂ ತೀರ್ಥಮನ್ಯದಸ್ತಿ ಮಹೀತಲೇ ॥ ೧೦೧ ॥
ಅತ್ರ ಸ್ನಾನಾತ್ತ್ರಯೋ ದೇವಾ ಬ್ರಹ್ಮವಿಷ್ಣುಶಿವಾ ದ್ವಿಜಾಃ ।
ಪ್ರೀತಾಃ ಸ್ಯುರನ್ಯೇ ದೇವಾಶ್ಚ ನಾಽತ್ರ ಕಾರ್ಯಾ ವಿಚಾರಣಾ ॥ ೧೦೨ ॥
ಏವಂ ವಃ ಕಥಿತಂ ಚಿತ್ರಂ ಕೋಟಿತೀರ್ಥಸ್ಯ ವೈಭವಂ ।
ಯಚ್ಛ್ರುತ್ವಾ ಸರ್ವ ಪಾಪೇಭ್ಯೋ ಮುಚ್ಯತೇ ಮಾನವೋ ಭುವಿ ॥೧೦೩॥

---

ಕೇಳಿ ಶ್ರೀಕೃಷ್ಣನು ಆ ಋಷಿಗಳನ್ನೆಲ್ಲ ಅದೇ ಕ್ಷಣದಲ್ಲಿಯೆ ಬೀಳ್ಕೊಟ್ಟು ತನ್ನ ಪಾಪಪರಿಹಾರಕ್ಕಾಗಿ ಶೀಘ್ರವಾಗಿ ರಾಮಸೇತುವೆಗೆ ಹೋದನು.

೯೯–೧೦೦. ಶ್ರೀಕೃಷ್ಣನು ಕೆಲವು ದಿನಗಳಲ್ಲಿಯೇ ಕೋಟಿತೀರ್ಥವನ್ನು ಸೇರಿ ಸಂಕಲ್ಪಪೂರ್ವಕವಾಗಿ ಮಿಂದು ಅನೇಕ ದಾನಗಳನ್ನು ಕೊಟ್ಟು ಕ್ಷಣ ಕಾಲದಲ್ಲಿ ಮಾವನನ್ನು ಕೊಂದ ದೋಷದಿಂದ ಮುಕ್ತನಾದನು. ತರುವಾಯ ರಾಮನಾಥನನ್ನು ಸೇವಿಸಿ ತನ್ನ ಪಟ್ಟಣವಾದ ಮಧುರೆಗೆ ತೆರಳಿದನು.

೧೦೧. ಮುನಿವರ್ಯರೆ! ಇಂತಹ ಮಾಹಾತ್ಮ್ಯವುಳ್ಳ ಪುಣ್ಯಕರವಾದ ಕೋಟಿತೀರ್ಥದಲ್ಲಿ ಮಿಂದ ಮಾನವನು ಬ್ರಹ್ಮಹತ್ಯೆಯೆ ಮೊದಲಾದ ಪಾಪಗಳಿಂದ ಕೂಡಲೆ ಮುಕ್ತನಾಗುವನು. ಭೂಮಿಯಲ್ಲಿ ಈ ತೀರ್ಥಕ್ಕೆ ಸಮಾನವಾದ ಮತ್ತೊಂದು ತೀರ್ಥವಿಲ್ಲ.

೧೦೨. ಇಲ್ಲಿ ಸ್ನಾನಮಾಡುವುದರಿಂದ ಬ್ರಹ್ಮವಿಷ್ಣು ಮಹೇಶ್ವರರೂ, ಇತರ ದೇವತೆಗಳೂ ಸಂತೋಷಗೊಳ್ಳುವರು. ಈ ವಿಷಯದಲ್ಲಿ ಚಿಂತಿಸಬೇಕಾಗಿಲ್ಲ.

೧೦೩. ಹೀಗೆ ನಿಮಗೆ ಆಶ್ಚರ್ಯಕರವಾದ ಕೋಟಿತೀರ್ಥದ ಮಾಹಾತ್ಮ್ಯವನ್ನು ಹೇಳಿರುವೆನು. ಇದನ್ನು ಕೇಳಿದ ಮಾನವನು ಸಕಲ ಪಾಪಮುಕ್ತನಾಗುವನು.

ಶ್ರುತ್ವೇಮಂ ಪುಣ್ಯಮಧ್ಯಾಯಂ ಪಠಿತ್ವಾ ಚ ಮುನೀಶ್ವರಾಃ ।
ಬ್ರಹ್ಮಹತ್ಯಾದಿಭಿಃ ಸತ್ಯಂ ಮುಚ್ಯತೇ ಪಾತಕೈರ್ನರಃ ॥ ೧೦೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಕೋಟಿತೀರ್ಥಪ್ರಶಂಸನಂ–ಕೃಷ್ಣಸ್ಯಮಾತುಲವಧದೋಷಶಾಂತಿವರ್ಣನಂ"ನಾಮ ಸಪ್ತವಿಂಶೋಽಧ್ಯಾಯಃ

---

೧೦೪. ಎಲೈ ಮುನಿವರ್ಯರೆ! ಪುಣ್ಯಕರವಾದ ಈ ಅಧ್ಯಾಯವನ್ನು ಮಾನವನು ಕೇಳಿ ಮತ್ತು ಪಠಿಸಿದರೆ ಬ್ರಹ್ಮಹತ್ಯೆಯೆ ಮೊದಲಾದ ಪಾಪಗಳಿಂದ ನಿಜವಾಗಿಯೂ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಕೋಟಿತೀರ್ಥಪ್ರಶಂಸನ–ಶ್ರೀಕೃಷ್ಣನ ಮಾತುಲವಧದೋಷಶಾಂತಿವರ್ಣನ"ವೆಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಽಷ್ಟಾವಿಂಶೋಽಧ್ಯಾಯಃ

### ಸಾಧ್ಯಾಮೃತತೀರ್ಥಪ್ರಶಂಸನಂ—ಪುರೂರವಃ ಶಾಪವಿಮೋಕ್ಷಣವರ್ಣನಂ

ಶ್ರೀ ಸೂತ ಉವಾಚ :—

ಕೋಟಿತೀರ್ಥಂ ಮಹಾಪುಣ್ಯಂ ಸೇವಿತ್ವಾ ಕೇವಲಂ ನರಃ ।
ಸ್ನಾತುಂ ಜಿತೇಂದ್ರಿಯಸ್ತೀರ್ಥಂ ತತಃ ಸಾಧ್ಯಾಽಮೃತಂ ವ್ರಜೇತ್ ॥ ೧ ॥
ಸಾಧ್ಯಾಮೃತಂ ಮಹಾತೀರ್ಥಂ ಮಹಾಪುಣ್ಯಫಲಪ್ರದಂ ।
ಮಹಾದುಃಖಪ್ರಶಮನಂ ಗಂಧಮಾದನಪರ್ವತೇ ॥ ೨ ॥
ಅಸ್ತಿ ಪಾಪಹರಂ ಪುಂಸಾಂ ಸರ್ವಾಽಭೀಷ್ಟಪ್ರದಾಯಕಂ ।
ಯತ್ರ ಸ್ನಾತ್ವಾ ನರೋ ಭಕ್ತ್ಯಾ ಸರ್ವಾನ್ಕಾಮಾನವಾಪ್ನುಯಾತ್ ॥ ೩ ॥
ತಪಸಾ ಬ್ರಹ್ಮಚರ್ಯೇಣ ಯಜ್ಞೈರ್ದಾನೇನ ವಾ ಪುನಃ ।
ಗತಿಂ ತಾಂ ನಲಭೇನ್ಮರ್ತ್ಯೋ ಯಾಂ ಸಾಧ್ಯಾಮೃತಮಜ್ಜನಾತ್ ॥ ೪ ॥
ಸ್ಪೃಷ್ಟಾನಿ ಯೇಷಾಮಂಗಾನಿ ಸಾಧ್ಯಾಮೃತಜಲೈಃ ಶುಭೈಃ ।
ತೇಷಾಂ ದೇಹಗತಂ ಪಾಪಂ ತತ್ಕ್ಷಣಾದೇವ ನಶ್ಯತಿ ॥ ೫ ॥

---

### ಕನ್ನಡದ ಅನುವಾದ

#### ಸಾಧ್ಯಾಮೃತತೀರ್ಥಪ್ರಶಂಸನ—ಪುರೂರವನ ಶಾಪವಿಮೋಕ್ಷವರ್ಣನ

೧. ಮನುಷ್ಯನು ಅತಿ ಪುಣ್ಯಕರವಾದ ಕೋಟಿತೀರ್ಥವನ್ನು ಸೇವಿಸಿ ಜಿತೇಂದ್ರಿಯನಾಗಿ ಸಾಧ್ಯಾಮೃತತೀರ್ಥದಲ್ಲಿ ಸ್ನಾನಮಾಡಲೋಸುಗ ಹೋಗಬೇಕು.

೨–೩. ಗಂಧಮಾದನಪರ್ವತದಲ್ಲಿ ಅತ್ಯಂತ ಪುಣ್ಯಫಲವನ್ನೀಯುವುದೂ, ಅತಿಶಯ ದುಃಖವನ್ನು ಶಾಂತಿಗೊಳಿಸುವುದೂ, ಪಾಪವನ್ನು ಪರಿಹರಿಸುವುದೂ, ಸಮಸ್ತ ಇಷ್ಟಾರ್ಥಗಳನ್ನು ಕೊಡುವುದೂ ಆದ ಸಾಧ್ಯಾಮೃತ ಮಹಾತೀರ್ಥವಿರುವುದು. ಇದರಲ್ಲಿ ಭಕ್ತಿಯಿಂದ ಮಿಂದ ಮಾನವನು ಸಕಲೇಷ್ಟಾರ್ಥಗಳನ್ನೂ ಹೊಂದುವನು.

೪. ಮನುಷ್ಯನು ಸಾಧ್ಯಾಮೃತತೀರ್ಥದಲ್ಲಿ ಸ್ನಾನಮಾಡುವುದರಿಂದ ಪಡೆಯುವ ಗತಿಯನ್ನು ತಪಸ್ಸು, ಬ್ರಹ್ಮಚರ್ಯೆ, ಯಜ್ಞ, ದಾನಗಳಿಂದಲೂ ಪಡೆಯಲಾರನು.

೫. ಈ ಸಾಧ್ಯಾಮೃತತೀರ್ಥದ ಜಲದಿಂದ ಅಂಗಗಳಲ್ಲಿ ಸ್ಪರ್ಶಗೊಂಡವರ ದೇಹದಲ್ಲಿರುವ ಪಾಪವೆಲ್ಲವೂ ಕೂಡಲೆ ನಾಶವಾಗುವುದು.

ಸಾಧ್ಯಾಮೃತಜಲೇ ಯಸ್ತು ಸ್ನಾಽಘಮರ್ಷಣಕೃನ್ನರಃ ।
ಸ ವಿಧೂಯೇಹ ಪಾಪಾನಿ ವಿಷ್ಣುಲೋಕೇ ಮಹೀಯತೇ ॥ ೬ ॥
ಪೂರ್ವೇ ವಯಸಿ ಪಾಪಾನಿ ಕೃತ್ವಾ ಕರ್ಮಾಣಿ ಯೋ ನರಃ ।
ಪಶ್ಚಾತ್ಸಾಧ್ಯಾಮೃತಂ ಸೇವೇತ್ಪಶ್ಚಾತ್ತಾಪ ಸಮನ್ವಿತಃ ॥ ೭ ॥
ಅಂತೇ ವಯಸಿ ಮುಕ್ತಸ್ಸ್ಯಾತ್ಸನರೋ ನಾಽತ್ರ ಸಂಶಯಃ ।
ಸಾಧ್ಯಾಮೃತೇ ನರಃ ಸ್ನಾತ್ವಾ ದೇಹಬಂಧಾದ್ವಿಮುಚ್ಯತೇ ॥ ೮ ॥
ಸಾಧ್ಯಾಮೃತಜಲೇ ಸ್ನಾತಾ ಮನುಷ್ಯಾಃ ಪಾಪಕರ್ಮಿಣಃ ।
ಅನೇಕಕ್ಲೇಶಘೋರಾಣಿ ನರಕಾಣಿ ನ ಯಾಂತಿ ಹಿ ॥ ೯ ॥
ಸಾಧ್ಯಾಮೃತಜಲೇ ಸ್ನಾನಾತ್ಪುಂಸಾಂ ಯಾ ಸ್ಯಾದ್ಗತಿರ್ದ್ವಿಜಾಃ ।
ಸ ಗತಿರ್ನಭವೇದ್ಯಜ್ಞೈರ್ನವೇದೈಃ ಪುಣ್ಯಕರ್ಮಭಿಃ ॥ ೧೦ ॥
ಯಾವದಸ್ಥಿ ಮನುಷ್ಯಾಣಾಂ ಸಾಧ್ಯಾಮೃತ ಜಲೇ ಸ್ಥಿತಂ ।
ತಾವದ್ವರ್ಷಾಣಿ ತಿಷ್ಠಂತಿ ಶಿವಲೋಕೇ ಸುಪೂಜಿತಾಃ ॥ ೧೧ ॥
ಅಪಹತ್ಯ ತಮಸ್ತೀವ್ರಂ ಯಥಾ ಭಾತ್ಯುದಯೇ ರವಿಃ ।
ತಥಾ ಸಾಧ್ಯಾಮೃತಸ್ನಾಯೀ ಭಿತ್ವಾ ಪಾಪಾನಿ ರಾಜತೇ ॥ ೧೨ ॥
ವಾಂಛಿತಾಂಲ್ಲಭತೇ ಕಾಮಾನತ್ರ ಸ್ನಾತೋ ನರಃ ಸದಾ ।
ಯತ್ರ ಸ್ನಾತ್ವಾ ಮಹಾಪುಣ್ಯೇ ಪುರಾ ರಾಜಾ ಪುರೂರವಾಃ ।
ವಿಪ್ರಯೋಗಂ ಸಹೋರ್ವಶ್ಯಾ ಜಹೌ ತುಂಬುರುಶಾಪಜಂ ॥ ೧೩ ॥

---

೬. ಈ ಸಾಧ್ಯಾಮೃತಜಲದಲ್ಲಿ ಅಘಮರ್ಷಣಸೂಕ್ತದಿಂದ ಸ್ನಾನಮಾಡಿದ ನರನು ಈ ಲೋಕದಲ್ಲಿ ಪಾಪಮುಕ್ತನಾಗಿ ವೈಕುಂಠದಲ್ಲಿ ಪೂಜ್ಯನಾಗುತ್ತಾನೆ.

೭–೯. ಬಾಲ್ಯದಲ್ಲಿ ಪಾಪಕರ್ಮಗಳನ್ನಾಚರಿಸಿದ ಮನುಷ್ಯನು ಪಶ್ಚಾತ್ತಾಪ ಗೊಂಡು ಈ ಸಾಧ್ಯಾಮೃತತೀರ್ಥದಲ್ಲಿ ಮಿಂದರೆ ಮುಪ್ಪಿನಲ್ಲಿ ನಿಶ್ಚಯವಾಗಿಯೂ ಮುಕ್ತನಾಗುವನು. ಇಲ್ಲಿ ಮಿಂದ ಮಾನವನಿಗೆ ಮರಳಿ ದೇಹಸಂಬಂಧವಿರು ವುದಿಲ್ಲ. ಈ ತೀರ್ಥದಲ್ಲಿ ಮಿಂದ ಪಾಪಿಗಳಾದ ಮಾನವರು ಅನೇಕ ದುಃಖ ಗಳಿಂದ ಕೂಡಿದ ಭಯಂಕರವಾದ ನರಕಕ್ಕೆ ಹೋಗುವುದಿಲ್ಲ.

೧೦. ಸಾಧ್ಯಾಮೃತಜಲದಲ್ಲಿ ಮಿಂದ ಮನುಷ್ಯರಿಗೆ ದೊರಕುವ ಸದ್ಗತಿಯು ಯಜ್ಞ, ವೇದ, ಪುಣ್ಯಕರ್ಮಗಳಾವುಗಳಿಂದಲೂ ದೊರಕುವುದಿಲ್ಲ.

೧೧. ಮನುಷ್ಯರ ಅಸ್ಥಿಯು ಸಾಧ್ಯಾಮೃತದಲ್ಲಿರುವವರೆಗೆ ಅವರು ಶಿವ ಲೋಕದಲ್ಲಿ ಪೂಜಿತರಾಗುವರು.

೧೨. ಸೂರ್ಯನು ಘೋರಾಂಧಕಾರವನ್ನು ಪರಿಹರಿಸಿ ಪ್ರಕಾಶಿಸುವಂತೆ ಸಾಧ್ಯಾಮೃತದಲ್ಲಿ ಮಿಂದವನು ಪಾಪಗಳನ್ನು ಭೇದಿಸಿ ವಿರಾಜಿಸುವನು.

೧೩. ಇಲ್ಲಿ ಮಿಂದ ಮನುಷ್ಯನು ಯಾವಾಗಲೂ ಇಷ್ಟಾರ್ಥವನ್ನು

ಋಷಯ ಊಚುಃ:—
ಕಥಂ ಸೂತ ಮಹಾಭಾಗ ಸಹೋರ್ವಶ್ಯಾಽಮರಸ್ತ್ರಿಯಾ ॥ ೧೪ ॥
ಪ್ರಥಮಂ ಲಬ್ಧವಾನ್ಯೋಗಂ ಮರ್ತ್ಯೋ ರಾಜಾ ಪುರೂರವಾಃ ।
ವಿಪ್ರಯೋಗಂ ಸಹೋರ್ವಶ್ಯಾ ಜಹೌ ತುಂಬುರುಶಾಪಜಂ ॥ ೧೫ ॥
ಹೇತುನಾ ಕೇನ ರಾಜಾನಂ ಶಶಾಪ ತುಂಬುರುರ್ಮುನಿಃ ।
ಏತತ್ಸರ್ವಂ ಸಮಾಚಕ್ಷ್ವ ವಿಸ್ತರಾನ್ಮುನಿಪುಂಗವ ॥ ೧೬ ॥
ಶ್ರೀ ಸೂತ ಉವಾಚ :—
ಆಸೀತ್ಪುರೂರವಾ ನಾಮ ಶಕ್ರತುಲ್ಯಪರಾಕ್ರಮಃ ।
ರಾಜರಾಜಸಮೋ ರಾಜಾ ಪುರಾಹ್ಯಮರಪೂಜಿತಃ ॥ ೧೭ ॥
ಧರ್ಮತಃ ಪಾಲಯಾಮಾಸ ಮೇದಿನೀಂ ಸ ನೃಪೋತ್ತಮಃ ।
ಈಜೇಚ ಬಹುಭಿರ್ಯಜ್ಞೈರ್ದದೌ ದಾನಾನಿ ಸರ್ವದಾ ॥ ೧೮ ॥
ಪ್ರಶಾಸತಿ ಮಹೀಂ ಸರ್ವಾಂ ರಾಜ್ಞಿ ತಸ್ಮಿನ್ಮಹಾಮತೌ ।
ಮಿತ್ರಾವರುಣಶಾಪೇನ ಭುವಂ ಪ್ರಾಪೋರ್ವಶೀ ದ್ವಿಜಾಃ ॥ ೧೯ ॥

---

ಪಡೆಯುವನು. ಹಿಂದೆ ಪುರೂರವರಾಜನು ಪುಣ್ಯಕರವಾದ ಈ ತೀರ್ಥದಲ್ಲಿ ಮಿಂದು, ತುಂಬುರು ಶಾಪದಿಂದೊದಗಿದ ಊರ್ವಶಿಯ ವಿರಹವನ್ನು ಪರಿಹರಿಸಿ ಕೊಂಡನು.

೧೪–೧೫. ಋಷಿಗಳು ಕೇಳುತ್ತಾರೆ:– "ಮಹಾ ಭಾಗ್ಯಶಾಲಿಯಾದ ಸೂತನೆ! ಮನುಷ್ಯರಾಜನಾದ ಪುರೂರವನು ಅಮರಾಂಗನೆಯಾದ ಊರ್ವಶಿ ಯೊಡನೆ. ಮೊದಲು ಸಂಬಂಧವನ್ನು ಹೊಂದಿ ಅನಂತರ ತುಂಬುರು ಶಾಪ ದಿಂದುಂಟಾದ ವಿಯೋಗವನ್ನು ಹೇಗೆ ಪರಿಹರಿಸಿಕೊಂಡನು?

೧೬. ಮುನಿವರ್ಯನೆ! ತುಂಬುರು ಮುನಿಯು ಪುರೂರವನನ್ನು ಏತಕ್ಕೆ ಶಪಿಸಿದನು? ಇದನ್ನೆಲ್ಲ ವಿಸ್ತಾರವಾಗಿ ನಮಗೆ ಹೇಳು."

೧೭. ಸೂತನು ಹೇಳುತ್ತಾನೆ:—ಹಿಂದೆ ಇಂದ್ರನಂತೆ ಪರಾಕ್ರಮವುಳ್ಳವ ನಾಗಿ ಕುಬೇರನಂತೆ ಶ್ರೀಮಂತನಾಗಿರುವ ದೇವಪೂಜ್ಯನಾದ ಪುರೂರವನೆಂಬ ದೊರೆಯಿದ್ದನು.

೧೮. ಆ ನೃಪವರ್ಯನು ಭೂಮಿಯನ್ನು ಧರ್ಮದಿಂದ ಕಾಪಾಡುತ್ತಿದ್ದನು. ಬಹುಪ್ರಕಾರವಾಗಿ ಯಜ್ಞಮಾಡಿ ಯಾವಾಗಲೂ ದಾನಮಾಡುತ್ತಿದ್ದನು.

೧೯. ಎಲೈ ದ್ವಿಜರೆ! ಪ್ರಾಜ್ಞನಾದ ಆ ದೊರೆಯು ಸಮಸ್ತ ಭೂಮಂಡಲ ವನ್ನೂ ಆಳುತ್ತಿರಲು ಊರ್ವಶಿಯು ಮಿತ್ರಾವರುಣನ ಶಾಪದಿಂದ ಭೂಮಿ ಯನ್ನು ಹೊಂದಿದಳು.

ಸಾ ಚಚಾರೋರ್ವಶೀ ತತ್ರ ರಾಜ್ಞಸ್ತಸ್ಯ ಪುರಾಂತಿಕೇ ।
ಕೋಕಿಲಾಲಾಪಮಧುರವೀಣಯೋಪವನೇ ಜಗೌ ॥ ೨೦ ॥
ಸ ರಾಜೋಪವನೇ ರಂತುಂ ಕದಾಚಿದ್ಧತಕೌತುಕಃ ।
ಆರೂಢತುರಗಃ ಪ್ರಾಯಾಲ್ಲಲನಾಶತಸಂವೃತಃ ॥ ೨೧ ॥
ತಾದೃಶೀಮುರ್ವಶೀಂ ತತ್ರ ಕರಸಮ್ಮಿತಮಧ್ಯಮಾಂ ।
ಉವಾಚ ಚೈನಾಂ ರಾಜಾಽಸೌ ಭಾರ್ಯಾ ಮಮ ಭವೇತಿ ವೈ ॥ ೨೨ ॥
ಸಾಽಪಿ ಕಾಮಾತುರಾ ತತ್ರ ರಾಜಾನಂ ಪ್ರತ್ಯಭಾಷತ ।
ಭವತ್ವೇವಂ ನರಶ್ರೇಷ್ಠ ಸಮಯಂ ಯದಿ ಮೇ ಭವಾನ್ ॥ ೨೩ ॥
ಕರಿಷ್ಯತಿ ತವಾಭ್ಯಾಶೇ ವತ್ಸ್ಯಾಮಿ ಧೃತಕೌತುಕಾ ।
ಕರಿಷ್ಯೇ ಸಮಯಂ ಸುಭ್ರು ತವಾಽಹಮಿತಿ ಸೋಽಬ್ರವೀತ್ ॥ ೨೪ ॥
ಅಥೋರ್ವಶೀ ಬಭಾಷೇ ತಂ ಪುರೂರವಸಮುತ್ಸುಕಾ ।
ಪುತ್ರಭೂತಂ ಮಮ ಯದಿ ರಕ್ಷಸ್ಯುರಣಕದ್ವಯಂ ॥ ೨೫ ॥
ನ ನಗ್ನೋ ದೃಶ್ಯಸೇ ರಾಜನ್ ಕದಾಽಪಿ ಯದಿ ವೈ ತಥಾ ।
ನೋಚ್ಛಿಷ್ಟಂ ಮಮ ದದ್ಯಾಶ್ಚೇತ್ತದಾ ವತ್ಸ್ಯೇ ತವಾಂತಿಕೇ ॥ ೨೬ ॥

---

೨೦. ಆ ಊರ್ವಶಿಯು ಪುರೂರವನ ಪಟ್ಟಣದ ಹತ್ತಿರವೇ ಸಂಚರಿಸುತ್ತ ಉದ್ಯಾನದಲ್ಲಿ ಕೋಕಿಲೆಯ ಕೂಗಿನಂತೆ ಇಂಪಾಗಿ ಧ್ವನಿಗೈಯುವ ವೀಣೆಯೊಡನೆ ಹಾಡಿ ನಲಿಯುತ್ತಿದ್ದಳು.

೨೧. ಪುರೂರವನು ಒಂದಾನೊಂದು ದಿನ ಉದ್ಯಾನದಲ್ಲಿ ವಿನೋದಪಡಲು ಕುತೂಹಲವುಳ್ಳವನಾಗಿ ಕುದುರೆಯನ್ನೇರಿ ಅನೇಕ ಮಹಿಳೆಯರೊಡನೆ ಅಲ್ಲಿಗೆ ಹೋದನು.

೨೨. ಅಲ್ಲಿ ಹಿಡಿಗೊಳಗಾಗುವ ಸಣ್ಣ ನಡುವುಳ್ಳ ಆ ಊರ್ವಶಿಯನ್ನು ನೋಡಿ ಆ ದೊರೆಯು ಅವಳನ್ನು ಕುರಿತು, "ಎಲೆ ರಮಣಿ ನೀನು ನನಗೆ ಪತ್ನಿಯಾಗು" ಎಂದನು.

೨೩–೨೪. ಕಾಮಾತುರಳಾದ ಆ ಊರ್ವಶಿಯು, "ರಾಜೇಂದ್ರ! ನೀನು ನನ್ನ ಸಂಕೇತವನ್ನು ನಡೆಸುವುದಾದರೆ ನಿನ್ನಲ್ಲಿ ಕುತೂಹಲವುಳ್ಳವಳೇ ಆಗಿರುವ ನಾನು ನಿನ್ನ ಮಡದಿಯಾಗಿ ವಾಸಿಸುವೆನು" ಎಂದಳು. ರಾಜನೂ "ಸುಂದರಿ! ನಾನು ನಿನ್ನ ಸಂಕೇತವನ್ನು ನಡೆಸುವೆನು" ಎಂದು ಒಪ್ಪಿ ಮಾತುಕೊಟ್ಟನು.

೨೫–೨೬. ತರುವಾಯ ಊರ್ವಶಿಯು ಔತ್ಸುಕ್ಯವುಳ್ಳವಳಾಗಿ ಆ ಪುರೂರವನನ್ನು ಕುರಿತು ಇಂತೆಂದಳು: "ನನ್ನ ಮಕ್ಕಳಂತಿರುವ ಈ ಎರಡು ಕುರಿಗಳನ್ನು ನೀನು ಕಾಪಾಡುವುದಾದರೆ, ನೀನು ಬತ್ತಲೆಯಾಗಿ ನನ್ನ ದೃಷ್ಟಿಗೆ ಗೋಚರನಾಗದಿದ್ದರೆ, ಎಂಜಲನ್ನು ನನಗೆ ಉಣಿಸದಿದ್ದರೆ ನಾನು ನಿನ್ನೊಡನೆ ವಾಸಮಾಡುವೆನು.

ಘೃತಮಾತ್ರಾಶನಾ ಚಾಽಹಂ ಭವಿಷ್ಯಾಮಿ ನೃಪೋತ್ತಮ ।
ಏವಮಸ್ತ್ವಿತಿ ರಾಜೋಕ್ತ್ವಾಂ ತಾಂ ನಿನಾಯ ನಿಜಂ ಗೃಹಂ ॥ ೨೭ ॥
ಅಲಕಾಯಾಂ ಸ ಭೂಪಾಲಸ್ತಥಾ ಚೈತ್ರರಥೇ ವನೇ ।
ರೇಮೇ ಸರಸ್ವತೀತೀರೇ ಪದ್ಮಖಂಡಮನೋರಮೇ ॥ ೨೮ ॥
ಏಕಷಷ್ಟಿಂ ಸ ವರ್ಷಾಣಿ ರಮಮಾಣಸ್ತಯಾಽನಯತ್ ।
ತೇನೋರ್ವಶೀ ಪ್ರತಿದಿನಂ ವರ್ಧಮಾನಾಽನುರಾಗಿಣೀ ॥ ೨೯ ॥
ಸ್ಪೃಹಾಂ ನ ದೇವಲೋಕೇಽಪಿ ಚಕಾರ ತನುಮಧ್ಯಮಾ ।
ನಾಽಭವದ್ರಮಣೀಯೋಽಸೌ ದೇವಲೋಕಸ್ತಯಾ ವಿನಾ ॥ ೩೦ ॥
ಅತಸ್ತಾಮಾನಯಿಷ್ಯಾಮಿ ದೇವಲೋಕಮಿತಿ ದ್ವಿಜಾಃ ।
ವಿಶ್ವಾವಸುರ್ವಿಚಾರ್ಯೈವಂ ಭೂರ್ಲೋಕಮಗಮತ್ಕ್ಷಣಾತ್ ॥ ೩೧ ॥
ಉರ್ವಶ್ಯಾಃ ಸಮಯಂ ರಾಜ್ಞಾ ವಿಶ್ವಾವಸುರಯಂ ಸಹ ।
ವಿದಿತ್ವಾ ಸಹ ಗಂಧರ್ವೈಃ ಸಮವೇತೋ ನಿಶಾಂತರೇ ॥ ೩೨ ॥
ಉರ್ವಶ್ಯಾಃ ಶಯನಾಭ್ಯಾಶಾಜ್ಜಗ್ರಾಹೋರಣಕಂ ಜವಾತ್ ।
ಆಕಾಶೇ ನೀಯಮಾನಸ್ಯ ತಸ್ಯ ಶ್ರುತ್ವೋರ್ವಶೀ ಪತಿಂ ॥ ೩೩ ॥
ಅಬ್ರವೀನ್ಮತ್ಸುತಃ ಕೇನ ಗೃಹ್ಯತೇ ತ್ಯಜ್ಯತಾಮಯಂ ।
ಅನಾಥಾ ಶರಣಂ ಯಾಮಿ ಕಂ ನರಂ ಗತಚೇತನಾ ॥ ೩೪ ॥

---

೨೭. ನೃಪೇಂದ್ರ! ನಾನು ತುಪ್ಪವನ್ನುಮಾತ್ರ ಭುಜಿಸುವೆನು'' ಎನ್ನಲು ದೊರೆಯು ಅದಕ್ಕೆಲ್ಲ ಒಪ್ಪಿ ಅವಳನ್ನು ತನ್ನ ಮನೆಗೆ ಕರೆದುಕೊಂಡುಹೋದನು.

೨೮. ಅವನು ಅವಳೊಡನೆ ಅಲಕಾನಗರದಲ್ಲಿಯೂ, ಚೈತ್ರರಥೋದ್ಯಾನದಲ್ಲಿಯೂ, ಪದ್ಮಗಳ ಸಮೂಹದಿಂದ ಅಲಂಕಾರಗೊಂಡ ಸರಸ್ವತೀನದಿಯ ದಡದಲ್ಲಿಯೂ ವಿನೋದಪಟ್ಟನು.

೨೯-೩೦. ಅಂತೇ ಆ ಊರ್ವಶಿಯೊಡನೆ ವಿನೋದಪಡುತ್ತ ಅರುವತ್ತೊಂದು ವರ್ಷಗಳನ್ನು ಕಳೆದನು. ಆದರಿಂದ ಊರ್ವಶಿಯು ಪ್ರತಿದಿನವೂ ಹೆಚ್ಚುತ್ತಿರುವ ಪ್ರೀತಿಯುಳ್ಳವಳಾಗಿ ದೇವಲೋಕವನ್ನೂ ಅಪೇಕ್ಷಿಸಲಿಲ್ಲ. ಅವಳಿಲ್ಲದಿದ್ದುದರಿಂದ ದೇವಲೋಕವೂ ರಮ್ಯವಾಗಲಿಲ್ಲ.

೩೧. ಆದುದರಿಂದ ವಿಶ್ವಾವಸುವು ಊರ್ವಶಿಯನ್ನು ದೇವಲೋಕಕ್ಕೆ ಕರೆತರುವೆನೆಂದು ಆಲೋಚಿಸಿ ಕೂಡಲೆ ಭೂಲೋಕಕ್ಕೆ ಬಂದನು.

೩೨-೩೪. ಅವನು ರಾಜನೊಡನೆ ಊರ್ವಶಿಯು ಮಾಡಿಕೊಂಡ ಸಂಕೇತವನ್ನರಿತು ಗಂಧರ್ವರೊಡನೆ ಮಧ್ಯರಾತ್ರಿಯಲ್ಲಿ ಆ ಊರ್ವಶಿಯ ಹಾಸಿಗೆಯ ಹತ್ತಿರವಿರುವ ಒಂದು ಕುರಿಯನ್ನು ಅಪಹರಿಸಿದನು. ಊರ್ವಶಿಯು ಕುರಿಯನ್ನು ಆಕಾಶದಲ್ಲಿ ವೇಗವಾಗಿ ತೆಗೆದುಕೊಂಡುಹೋಗುತ್ತಿರುವ ಅವನನ್ನು ನೋಡಿ ಪತಿಯನ್ನು ಕುರಿತು ಹೀಗೆಂದಳು: ''ನನ್ನ ಮಗನನ್ನು ಯಾವನೊ

ಪುರೂರವಾಃ ಸಮಾಕರ್ಣ್ಯ ವಾಕ್ಯಂ ತಸ್ಯಾ ನಿಶಾಂತರೇ ।
ಮಾಂ ನ ನಗ್ನಂ ನಿರೀಕ್ಷೇತ ದೇವೀತಿ ನ ಯಯೌ ತದಾ ॥ ೩೫ ॥
ಅಥಾಽನ್ಯಮಪ್ಯುರಣಕಂ ಗಂಧರ್ವಾಃ ಪ್ರತಿಗೃಹ್ಯತೇ ।
ಯಯುಸ್ತಸ್ಯೋರಣಸ್ಯಾಽಪಿ ಶಬ್ದಂ ಶುಶ್ರಾವ ಚೋರ್ವಶೀ ॥ ೩೬ ॥
ಅನಾಥಾಯಾ ಮಮ ಸುತೋ ಗೃಹ್ಯತೇ ತಸ್ಕರೈರಿತಿ ।
ಚುಕ್ರೋಶ ದೇವೀ ಪುರುಷಂ ಕಂ ಯಾಮಿ ಶರಣಂ ನರಂ ॥ ೩೭ ॥
ಅಮರ್ಷವಶಮಾಪನ್ನಃ ಶ್ರುತ್ವಾ ತದ್ವಚನಂ ನೃಪಃ ।
ತಿಮಿರೇಣಾವೃತಂ ಸರ್ವಮಿತಿ ಮತ್ವಾ ಸ ಖಡ್ಗಧೃಕ್ ॥ ೩೮ ॥
ದುಷ್ಟ ದುಷ್ಟ ಕುತೋ ಯಾಸೀತ್ಯಭ್ಯಧಾವದ್ವಚೋ ವದನ್ ।
ತಾವತ್ಸೌದಾಮಿನೀ ದೀಪ್ತಾ ಗಂಧರ್ವೈರ್ಜನಿತಾ ಭೃಶಂ ॥ ೩೯ ॥
ತತ್ಪ್ರಭಾಮಂಡಲೈರ್ದೇವೀ ರಾಜಾನಂ ವಿಗತಾಂಬರಂ ।
ದೃಷ್ಟ್ವಾ ನಿವೃತ್ತಸಮಯಾ ತತ್ಕ್ಷಣಾದೇವ ನಿರ್ಯಯೌ ॥ ೪೦ ॥
ತ್ಯಕ್ತ್ವಾ ಹ್ಯುರಣಕೌ ತತ್ರ ಗಂಧರ್ವಾ ಅಪಿ ನಿರ್ಯಯುಃ ।
ರಾಜಾ ಮೇಷೌ ಸಮಾದಾಯ ಹೃಷ್ಟಃ ಸ್ವಶಯನಾಂತಿಕಂ ॥ ೪೧ ॥

---

ತೆಗೆದುಕೊಂಡು ಹೋಗುತ್ತಿದ್ದಾನೆ; ಬಿಡಿಸು. ಭಯದಿಂದ ಮೂರ್ಛೆಗೊಂಡು ದಿಕ್ಕಿಲ್ಲದ ನಾನು ಯಾರನ್ನು ಮರೆಹೋಗಲಿ.''

೩೫. ಆಗ ಪುರೂರವನು ಅವಳ ಮಾತನ್ನು ಕೇಳಿ ಬತ್ತಲೆಯಾದ ತನ್ನನ್ನು ಆ ಊರ್ವಶಿಯು ನೋಡಕೂಡದೆಂದು ಕುರಿಯನ್ನು ಬಿಡಿಸಲು ಹೋಗಲಿಲ್ಲ.

೩೬. ತರುವಾಯ ಆ ಗಂಧರ್ವರು ಮತ್ತೊಂದು ಕುರಿಯನ್ನೂ ತೆಗೆದು ಕೊಂಡುಹೋದರು. ಊರ್ವಶಿಯು ಅದರ ಶಬ್ದವನ್ನೂ ಕೇಳಿದಳು.

೩೭. ಅವಳು, "ಅನಾಥಳಾದ ನನ್ನ ಮಗನನ್ನು ಕಳ್ಳರು ಅಪಹರಿಸುತ್ತಿದ್ದಾರೆ. ಯಾರನ್ನು ಮರೆಹೋಗಲಿ" ಎಂದು ಕಠಿನವಾಗಿ ಕಿರಿಚಿಕೊಂಡಳು.

೩೮–೩೯. ರಾಜನು ಆ ಮಾತನ್ನು ಕೇಳಿ ಕುಪಿತನಾಗಿ ಸುತ್ತಲೂ ಕತ್ತಲೆಯು ಆವರಿಸಿದೆಯೆಂದು ತಿಳಿದು ಖಡ್ಗವನ್ನು ಹಿಡಿದು, "ದುಷ್ಟ! ಎಲ್ಲಿಗೆ ಹೋಗುವೆ?'' ಎಂದು ಹೇಳುತ್ತ ಅಟ್ಟಿಸಿಕೊಂಡುಹೋದನು. ಅಷ್ಟರಲ್ಲಿ ಗಂಧರ್ವರು ಪ್ರಕಾಶಮಾನವಾದ ಮಿಂಚನ್ನು ಉಂಟುಮಾಡಿದರು.

೪೦. ಆ ಮಿಂಚಿನ ಪ್ರಭೆಯಿಂದ ಊರ್ವಶಿಯು ಬತ್ತಲೆಯಾದ ಪುರೂರವನನ್ನು ನೋಡಿ ಸಂಕೇತವು ಕೆಟ್ಟಿತೆಂದರಿತು ಕೂಡಲೆ ಹೊರಟುಹೋದಳು.

೪೧–೪೩. ಬಳಿಕ ಗಂಧರ್ವರು ಅಲ್ಲಿಯೇ ಕುರಿಗಳನ್ನು ಬಿಟ್ಟು ಹೊರಟು ಹೋದರು. ದೊರೆಯು ಅವುಗಳನ್ನು ತೆಗೆದುಕೊಂಡು ಸಂತೋಷದಿಂದ ತನ್ನ

ಅಗತೋ ನೋರ್ವಶೀಂ ತತ್ರ ದದರ್ಶಾಯತಲೋಚನಾಂ ।
ತಾಂಚಾಽಪಶ್ಯನ್ನಿವಸ್ತ್ರಶ್ಚ ಬಭ್ರಾಮೋ ಮತ್ತವದ್ಭುವಿ ॥ ೪೨ ॥
ಕುರುಕ್ಷೇತ್ರಂ ಗತೋ ರಾಜಾ ತಟಾಕೇ ಪದ್ಮಸಂಕುಲೇ ।
ಚತುರ್ಭಿರಪ್ಸರಸ್ತ್ರೀಭಿಃ ಕ್ರೀಡಮಾನಂ ದದರ್ಶ ತಾಂ ॥ ೪೩ ॥
ಹೇ ಜಾಯೇ ತಿಷ್ಠ ಮನಸಾ ಘೋರೇತಿ ವ್ಯಾಹರನ್ಮುಹುಃ ।
ಏವಂ ಬಹುಪ್ರಕಾರಂ ವೈ ಸ ಸೂಕ್ತಂ ಪ್ರಾಲಪನ್ನೃಪಃ ॥ ೪೪ ॥
ಅಬ್ರವೀದುರ್ವಶೀ ತಂ ಚ ಕ್ರೀಡಂತೀ ಸಾಽಪ್ಸರೋಗಣೈಃ ।
ಮಹಾರಾಜಾಲಮೇತೇನ ಚೇಷ್ಟಿತೇನ ತವಾಽನಘ ॥ ೪೫ ॥
ತ್ವತ್ತೋ ಗರ್ಭಿಣ್ಯಹಂ ಪೂರ್ವಮಬ್ದಾಂತೇ ಭವತಾಽತ್ರ ವೈ ।
ಆಗಂತವ್ಯಂ ಕುಮಾರಸ್ತೇ ಭವಿಷ್ಯತ್ಯತಿಧಾರ್ಮಿಕಃ ॥ ೪೬ ॥
ಏಕಾಂ ವಿಭಾವರೀಂ ರಾಜಂಸ್ತ್ವಯಾ ವತ್ಸ್ಯಾಮಿ ವೈ ತದಾ ।
ಇತ್ಯುಕ್ತೋ ನೃಪತಿರ್ಹೃಷ್ಟಃ ಸ್ವಪುರೀಂ ಪ್ರಾವಿಶದ್ದ್ವಿಜಾಃ ॥ ೪೭ ॥
ತಾಸಾಮಪ್ಸರಸಾಂ ಸಾತು ಕಥಯಾಮಾಸ ತಂ ನೃಪಂ ।
ಅಯಂ ಸ ಪುರುಷಶ್ರೇಷ್ಠೋ ಯೇನಾಽಹಂ ಕಾಮರೂಪಿಣಾ ॥ ೪೮ ॥
ಏತಾವಂತಂ ಮಹಾಕಾಲಮನುರಾಗವಶಾತುರಾ ।
ಉಷಿತಾಽಸ್ಮಿ ಸಹಾಽನೇನ ಸಖ್ಯೋ ನೃಪತಿನಾ ಚಿರಂ ॥ ೪೯ ॥

---

ಹಾಸಿಗೆಯ ಸಮೀಪಕ್ಕೆ ಬಂದು ವಿಶಾಲಾಕ್ಷಿಯಾದ ಆ ಊರ್ವಶಿಯನ್ನು ಕಾಣದೆ ಬತ್ತಲೆಯಾಗಿಯೇ ಹುಚ್ಚನಂತೆ ಭೂಮಿಯಲ್ಲಿ ಅಲೆದನು. ಅವನು ಕುರುಕ್ಷೇತ್ರಕ್ಕೆ ಹೋಗಿ ಅಲ್ಲಿ ತಾವರೆಗಳಿಂದ ವಿರಾಜಿಸುವ ಒಂದು ಸರಸ್ಸಿನಲ್ಲಿ ನಾಲ್ಕುಮಂದಿ ಅಪ್ಸರೆಯರೊಡನೆ ಕ್ರೀಡಿಸುತ್ತಿರುವ ಆ ಊರ್ವಶಿಯನ್ನು ಕಂಡನು.

೪೪. "ಘೋರಮನಸ್ಸುಳ್ಳ ಓ ಪ್ರಿಯಳೆ! ನಿಲ್ಲು ನಿಲ್ಲು" ಎಂದು ಬಹುವಿಧವಾಗಿ ಬೇಡಿ ಸವಿನುಡಿಯನ್ನಾಡಿದನು.

೪೫. ಅಪ್ಸರೆಯರೊಡನೆ ಆಡುತ್ತಿರುವ ಊರ್ವಶಿಯು "ಎಲೈ ನಿರ್ದುಷ್ಟನಾದ ಅರಸನೆ! ನೀನು ಈ ಚೇಷ್ಟೆಯನ್ನು ಸಾಕುಮಾಡು.

೪೬–೪೭. ನಾನು ಹಿಂದೆ ನಿನ್ನಿಂದ ಗರ್ಭಿಣಿಯಾಗಿರುವೆನು. ಒಂದು ವರ್ಷದ ಕೊನೆಯಲ್ಲಿ ನೀನು ಇಲ್ಲಿಗೆ ಬಾ; ನಿನಗೆ ಅತ್ಯಂತ ಧರ್ಮಿಷ್ಠನಾದ ಕುಮಾರನು ಜನಿಸುವನು. ಆಗ ನಾನು ನಿನ್ನೊಡನೆ ಒಂದು ರಾತ್ರಿ ವಾಸಿಸುವೆನು." ಹೀಗೆನ್ನಲು ರಾಜನು ಸಂತೋಷಗೊಂಡವನಾಗಿ ತನ್ನ ಪಟ್ಟಣಕ್ಕೆ ತೆರಳಿದನು.

೪೮–೪೯. ಊರ್ವಶಿಯು ಅಪ್ಸರೆಯರಿಗೆ ಆ ಪುರೂರವನ ವಿಷಯವನ್ನು ಹೀಗೆ ಹೇಳಿದಳು: "ನಾನು ಮನ್ಮಥನಂತಿರುವ ಈ ರಾಜನೊಡನೆ ಅನುರಾಗವುಳ್ಳವಳಾಗಿ ಎಷ್ಟೋಕಾಲ ವಾಸಮಾಡಿರುತ್ತೇನೆ."

ಏವಮುಕ್ತಾಸ್ತತಃ ಸಖ್ಯಸ್ತಾಮೂಚುಃ ಸಾಧು ಸಾಧ್ವಿತಿ ।
ಅನೇನ ಸಾಕಮಾಸ್ಯಾಮಃ ಸರ್ವಕಾಲಂ ವಯಂ ಸಖಿ ॥ ೫೦ ॥
ಇತ್ಯೂಚುರುರ್ವಶೀಂ ತತ್ರ ಸಖೀಮಪ್ಸರಸಸ್ತದಾ ।
ಅಬ್ದೇಽಥ ಪೂರ್ಣೇ ರಾಜಾಽಸಿ ತಟಾಕಾಂತಿಕಮಾಯಯೌ ॥ ೫೧ ॥
ಆಗತಂ ನೃಪತಿಂ ದೃಷ್ಟ್ವಾ ಪುರೂರವಸಮುರ್ವಶೀ ।
ಕುಮಾರಮಾಯುಷಂ ತಸ್ಮೈ ದದೌ ಸಂಪ್ರೀತಮಾನಸಾ ॥ ೫೨ ॥
ತೇನ ಸಾಕಂ ನಿಶಾಮೇಕಾಮುಷಿತಾ ಸಾಽನುರಾಗಿಣೀ ।
ಪಂಚಪುತ್ರಪ್ರದಂ ಗರ್ಭಂ ತಸ್ಮಾದಾಪಾಶು ಸೋರ್ವಶೀ ॥ ೫೩ ॥
ಉವಾಚ ಚೈನಂ ರಾಜಾನಂ ಉರ್ವಶೀ ಪರಮಾಂಗನಾ ।
ವರಂ ದಾಸ್ಯಂತಿ ಗಂಧರ್ವಾ ಮತ್ಪ್ರೀತ್ಯಾ ತವ ಭೂಪತೇ ॥ ೫೪ ॥
ಭವತಾಂ ಪ್ರಾರ್ಥ್ಯತಾ ತೇಭ್ಯೋ ವರೋ ರಾಜರ್ಷಿಸತ್ತಮ ।
ಇತ್ಯುಕ್ತಃ ಸ ತಯಾ ರಾಜಾ ಪ್ರಾಹ ಗಂಧರ್ವಸತ್ತಮಾನ್ ॥ ೫೫ ॥
ಅಹಂ ಸಂಪೂರ್ಣಕೋಶಶ್ಚ ವಿಜಿತಾಽರಾತಿಮಂಡಲಃ ।
ಸಲೋಕತಾಂ ವಿನೋರ್ವಶ್ಯಾಃ ಪ್ರಾಪ್ತವ್ಯಂ ನಾಽನ್ಯದಸ್ತಿ ಮೇ ॥ ೫೬ ॥

---

೫೦—೫೧. ಅವಳು ಹೀಗೆ ಹೇಳಲು ಆ ಸಖಿಯರು, "ಎಲೆ ಸಖಿ! ಒಳ್ಳೆಯದು. ಇವನೊಡನೆ ನಾವು ಯಾವಾಗಲೂ ಇರೋಣ" ಎಂದರು. ಒಂದು ವರ್ಷವು ಪೂರ್ಣವಾಗಲು ದೊರೆಯು ಆ ಸರಸ್ಸಿನ ಬಳಿಗೆ ಬಂದನು.

೫೨. ಆಗ ಊರ್ವಶಿಯು ಆ ಪುರೂರವನನ್ನು ನೋಡಿ ಕುಮಾರನಾದ ಆಯುವನ್ನು ಅವನಿಗೆ ಸಂತೋಷದಿಂದ ಒಪ್ಪಿಸಿದಳು.

೫೩. ಅನುರಾಗವುಳ್ಳವಳಾಗಿ ಅವನೊಡನೆ ಒಂದು ರಾತ್ರಿ ವಾಸಿಸಿ ಅವನಿಂದ ಕೂಡಲೆ ಐದು ಮಕ್ಕಳನ್ನೀಯುವ ಗರ್ಭವನ್ನು ಪಡೆದಳು.

೫೪. ಉತ್ತಮಾಂಗನೆಯಾದ ಆ ಊರ್ವಶಿಯು ರಾಜನನ್ನು ಕುರಿತು ಇಂತೆಂದಳು: "ದೊರೆಯೆ! ಗಂಧರ್ವರು ನನ್ನಲ್ಲಿರುವ ಪ್ರೀತಿಯಿಂದ ನಿನಗೆ ವರವನ್ನು ಕೊಡುವರು.

೫೫. ರಾಜೇಂದ್ರ! ನೀನು ಅವರಿಂದ ವರವನ್ನು ಬೇಡಿ ತೆಗೆದುಕೊ" ಎನ್ನಲು, ದೊರೆಯು ಗಂಧರ್ವರನ್ನು ಕುರಿತು ಹೀಗೆಂದನು:

೫೬. "ನಾನು ತುಂಬಿದ ಬೊಕ್ಕಸವುಳ್ಳವನೂ, ಶತ್ರುಗಳನ್ನು ಜಯಿಸಿದವನೂ ಆಗಿರುವೆನು. ಊರ್ವಶಿಯ ಸಹವಾಸವೊಂದನ್ನು ಬಿಟ್ಟು ನನಗೆ ಬೇರೆ ಪಡೆಯತಕ್ಕುದಾವುದೂ ಇರುವುದಿಲ್ಲ.

ಅತಸ್ತ್ವಯಾ ಸಹೋರ್ವಶ್ಯಾ ಕಾಲಂ ನೇತುಮಹಂ ವೃಣೇ ।
ಏವಮುಕ್ತೇ ನೃಪೇಣಾಽಥ ಗಂಧರ್ವಾಸ್ತುಷ್ಟಮಾನಸಾಃ ।
ಅಗ್ನಿಸ್ಥಾಲೀಂ ಪ್ರದಾಯಾಽಸ್ಮೈ ಪ್ರೋಚುಶ್ಚೈನಂ ನೃಪಂ ತದಾ ॥ ೫೭ ॥

ಗಂಧರ್ವಾ ಊಚುಃ:—

ಅಗ್ನಿಂ ವೇದಾಽನುಸಾರೀ ತ್ವಂ ತ್ರಿಧಾ ಕೃತ್ವಾ ನೃಪೋತ್ತಮ ॥ ೫೮ ॥
ಇಷ್ಟ್ವಾ ಯಜ್ಞೇನ ಚೋರ್ವಶ್ಯಾಃ ಸಾಲೋಕ್ಯಂ ಯಾಹಿ ಭೂಪತೇ ।
ಇತೀರಿತಸ್ತೈರಾದಾಯ ಸ್ಥಾಲೀಮಗ್ನೇರ್ಯಯೌ ನೃಪಃ ॥ ೫೯ ॥
ಅಹೋ ಬತಾಽತಿಮೂಢೋಽಹಂ ಇತಿ ಮಧ್ಯೇ ವನಂ ನೃಪಃ ।
ಉರ್ವಶೀ ನ ಮಯಾ ಲಬ್ಧಾ ವಹ್ನಿಸ್ಥಾಲ್ಯಾತು ಕಿಂ ಫಲಂ ॥ ೬೦ ॥
ನಿಧಾಯೈವ ವನೇ ಸ್ಥಾಲೀಂ ಸ್ವಪುರಂ ಪ್ರಯಯೌ ನೃಪಃ ।
ಅರ್ಧರಾತ್ರೇ ವ್ಯತೀತೇಽಸೌ ವಿನಿದ್ರೋಽಚಿಂತಯತ್ಸ್ವಯಂ ॥ ೬೧ ॥
ಉರ್ವಶೀಲೋಕಸಿದ್ಧ್ಯರ್ಥಂ ಮಮ ಗಂಧರ್ವಪುಂಗವೈಃ ।
ಅಗ್ನಿಸ್ಥಾಲೀ ಸಂಪ್ರದತ್ತಾ ಸಾ ಚ ತ್ಯಕ್ತಾ ಮಯಾ ವನೇ ॥ ೬೨ ॥

---

೫೭. ಆದುದರಿಂದ ನಾನು ಊರ್ವಶಿಯೊಡನೆ ಕಾಲವನ್ನು ಕಳೆಯಬಯಸುವೆನು. ಇದನ್ನು ನಿಮ್ಮಿಂದ ವರವಾಗಿ ಕೇಳಿಕೊಳ್ಳುವೆನು.'' ರಾಜನು ಹೀಗೆನ್ನಲು ಗಂಧರ್ವರು ಸಂತುಷ್ಟಚಿತ್ತರಾಗಿ ಅವನಿಗೆ ಅಗ್ನಿಯಿರುವ ಪಾತ್ರೆಯನ್ನಿತ್ತು ಹೀಗೆಂದರು:

೫೮–೫೯. ಗಂಧರ್ವರು ಹೇಳುತ್ತಾರೆ:—"ನೃಪೇಂದ್ರ! ನೀನು ವೇದವನ್ನನುಸರಿಸಿ ಅಗ್ನಿಯನ್ನು ಮೂರು ಭಾಗ ಮಾಡಿ ಯಜ್ಞಗೈದು ಊರ್ವಶಿಯ ಸಾಲೋಕ್ಯವನ್ನು ಪಡೆ.'' ಗಂಧರ್ವರು ಹೀಗೆ ಹೇಳಲು, ರಾಜನು ಅಗ್ನಿಸ್ಥಾಲಿಯನ್ನು ತೆಗೆದುಕೊಂಡು ಹೊರಟನು.

೬೦. ಅವನು ಕಾಡಿನ ಮಧ್ಯದಲ್ಲಿ ಹೋಗುತ್ತ, "ನಾನು ಅತ್ಯಂತ ಮೂಢನು; ಊರ್ವಶಿಯು ನನಗೆ ಸಿಕ್ಕಲಿಲ್ಲ. ಈ ಅಗ್ನಿಸ್ಥಾಲಿಯಿಂದ ನನಗೇನು ಪ್ರಯೋಜನ?''

೬೧. ಎಂದು ಆಲೋಚಿಸಿ ಕಾಡಿನಲ್ಲಿಯೇ ಆ ಅಗ್ನಿಸ್ಥಾಲಿಯನ್ನಿಟ್ಟು ತನ್ನ ನಗರಕ್ಕೆ ತೆರಳಿದನು. ಅರ್ಧರಾತ್ರಿಯು ಕಳೆಯಲು ಅವನು ನಿದ್ರೆಯಿಲ್ಲದವನಾಗಿ ತನ್ನಷ್ಟಕ್ಕೆ ತಾನೆ ಹೀಗೆ ಚಿಂತಿಸಿದನು.

೬೨. "ಗಂಧರ್ವೇಂದ್ರರು ಊರ್ವಶೀ ಲೋಕವನ್ನು ಪಡೆಯುವುದಕ್ಕಾಗಿ ನನಗೆ ಅಗ್ನಿಸ್ಥಾಲಿಯನ್ನಿತ್ತರು. ನಾನು ಅದನ್ನು ಕಾಡಿನಲ್ಲಿ ತ್ಯಜಿಸಿದೆನು.

ಆಹರಿಷ್ಯೇ ಪುನಃಸ್ಥಾಲೀಮಿತ್ಯುತ್ಥಾಯ ಯಯೌ ವನಂ ।
ನಾಽಗ್ನಿಸ್ಥಾಲೀಂ ದದರ್ಶಾಽಸೌ ವನೇ ತತ್ರ ಪುರೂರವಾಃ ॥ ೬೩ ॥
ಶಮೀಗರ್ಭಮಥಾಽಶ್ವತ್ಥಮಗ್ನಿಸ್ಥಾನೇ ವಿಲೋಕ್ಯ ಸಃ ।
ವ್ಯಚಿಂತಯನ್ಮಯಾ ಸ್ಥಾಲೀ ನಿಕ್ಷಿಪ್ತಾಽತ್ರ ವನೇ ಪುರಾ ॥ ೬೪ ॥
ಸಾ ಚಾಽಶ್ವತ್ಥಃ ಶಮೀಗರ್ಭಃ ಸಮಭೂದಧುನಾ ತ್ವಿಹ ।
ತಸ್ಮಾದೇನಂ ಸಮಾದಾಯ ವಹ್ನಿರೂಪಮಹಂ ಪುರಂ ॥ ೬೫ ॥
ಗತ್ವಾ ಕೃತ್ವಾಽರಣೀಂ ಸಮ್ಯಕ್ತದುತ್ಪನ್ನಾಽಗ್ನಿಮಾದರಾತ್ ।
ಉಪಾಸ್ಯಾಮೀತಿ ನಿಶ್ಚಿತ್ಯ ಸ್ವಪುರಂ ಗತವಾನ್ನೃಪಃ ॥ ೬೬ ॥
ರಮಣೀಯಾರಣೀಂ ಚಕ್ರೇ ಸ್ವಾಂಗುಲ್ಯೈಃ ಪ್ರಮಿತಾಮಸೌ ।
ನಿರ್ಮಾಣ ಸಮಯೇ ರಾಜಾ ಗಾಯತ್ರೀಮಜಪದ್ದ್ವಿಜಾಃ ॥ ೬೭ ॥
ಗಾಯತ್ರ್ಯಾಃ ಪಠ್ಯಮಾನಾಯಾ ಯಾನಿ ಸಂತ್ಯಕ್ಷರಾಣಿ ಹಿ ।
ತಾವದಂಗುಲಿಮರ್ಯಾದಾಮಕರೋದರಣೀಂ ನೃಪಃ ॥ ೬೮ ॥
ತತ್ರ ನಿರ್ಮಥನಾದಗ್ನಿತ್ರಯಮುತ್ಪಾದ್ಯ ಭೂಪತಿಃ ।
ಉರ್ವಶೀಲೋಕಸಂಪ್ರಾಪ್ತಿಫಲಮುದ್ದಿಶ್ಯ ಕಾಂಕ್ಷಿತಂ ॥ ೬೯ ॥
ವೇದಾಽನುಸಾರೀ ನೃಪತಿರ್ಜುಹಾವಾಽಗ್ನಿತ್ರಯಂ ಮುದಾ ।
ತೇನೈವ ಚಾಽಗ್ನಿವಿಧಿನಾ ಬಹೂನ್ಯಜ್ಞಾನಥಾತನೋತ್ ॥ ೭೦ ॥

---

೬೩. ಮತ್ತೆ ಆ ಸ್ಥಾಲಿಯನ್ನು ತರುವೆನು'' ಎಂದು ಎದ್ದು ಕಾಡಿಗೆ ಹೋದನು. ಆದರೆ ಅವನು ಆ ಕಾಡಿನಲ್ಲೆಲ್ಲಿಯೂ ಅಗ್ನಿಸ್ಥಾಲಿಯನ್ನು ಕಾಣಲಿಲ್ಲ.

೬೪–೬೬. ಅವನು ಅಗ್ನಿಯನ್ನಿಟ್ಟದ್ದ ಸ್ಥಳದಲ್ಲಿ ಶಮೀವೃಕ್ಷವಿರುವ ಅಶ್ವತ್ಥದಮರವನ್ನು ಕಂಡು ಹೀಗೆ ಚಿಂತಿಸಿದನು: "ನಾನು ಹಿಂದೆ ಈ ಕಾಡಿನಲ್ಲಿ ಅಗ್ನಿಸ್ಥಾಲಿಯನ್ನಿಟ್ಟದ್ದೆನು. ಈಗ ಇಲ್ಲಿ ಆ ಸ್ಥಾಲಿಯು ಶಮೀವೃಕ್ಷವಿರುವ ಅಶ್ವತ್ಥಮರವಾಗಿದೆ. ಆದ್ದರಿಂದ ನಾನು ಅಗ್ನಿರೂಪವಾದ ಈ ಅಶ್ವತ್ಥವನ್ನು ತೆಗೆದುಕೊಂಡು ಪಟ್ಟಣಕ್ಕೆ ಹೋಗಿ ಚೆನ್ನಾಗಿರುವ ಅರಣಿಯನ್ನು ರಚಿಸಿ ಅದರಿಂದುಂಟಾದ ಅಗ್ನಿಯನ್ನು ಭಕ್ತಿಯಿಂದ ಉಪಾಸಿಸುವೆನು'' ಎಂದು ನಿಶ್ಚಯಿಸಿ ತನ್ನ ನಗರಕ್ಕೆ ಹೋದನು.

೬೭. ಅವನು ತನ್ನ ಬೆರಳಿನಿಂದ ಅಳೆದು ರಮಣೀಯವಾದ ಅರಣಿಯನ್ನು ನಿರ್ಮಿಸಿದನು. ಎಲೈ ದ್ವಿಜರೆ! ಅದನ್ನು ನಿರ್ಮಿಸುವ ಸಮಯದಲ್ಲಿ ಅವನು ಗಾಯತ್ರಿಯನ್ನು ಜಪಿಸಿದನು.

೬೮. ತಾನು ಪಠಿಸುತ್ತಿದ್ದ ಗಾಯತ್ರಿಯಲ್ಲಿರುವ ಅಕ್ಷರಗಳಷ್ಟೆ ಅಂಗುಲ ಗಳುದ್ದವಾದ ಅರಣಿಯನ್ನು ನಿರ್ಮಿಸಿದನು.

೬೯–೭೦. ಅದನ್ನು ಕಡೆದು ಮೂರು ಅಗ್ನಿಗಳನ್ನು ಹುಟ್ಟಿಸಿ ತಾನು

ತೇನ ಗಂಧರ್ವಲೋಕಾಂಶ್ಚ ಸಂಪ್ರಾಪ್ಯ ಜಗತೀಪತಿಃ ।
ಸಹೋರ್ವಶ್ಯಾ ಚಿರಂ ರೇಮೇ ದೇವಲೋಕೇ ದ್ವಿಜೋತ್ತಮಾಃ ॥ ೭೧ ॥
ಅಥ ಸರ್ವಾಽಮರೋಪೇತಃ ಕದಾಚಿದ್ಬಲವೃತ್ರಹಾ ।
ನೃತ್ಯಂ ಸುರಾಂಗನಾನಾಂ ವೈ ವ್ಯಲೋಕಯತ ಸಂಸಂದಿ ॥ ೭೨ ॥
ಪುರೂರವಾ ನೃಪೋಪ್ಯಾಯಾತ್ತದಾ ದೇವೇಂದ್ರಸಂಸದಂ ।
ದ್ರಷ್ಟುಂ ಸುರಾಂಗನಾನೃತ್ಯಂ ಮನೋಹಾರಿ ದಿವೌಕಸಾಂ ॥ ೭೩ ॥
ಏಕೈಕಶಸ್ತಾಃ ಶಕ್ರಸ್ಯ ನನೃತುಃ ಪುರತೋಽಂಗನಾಃ ।
ಅಥೋರ್ವಶೀ ಸಮಾಗತ್ಯ ನನರ್ತ ಪುರತೋ ಹರೇಃ ॥ ೭೪ ॥
ನೃತ್ತಾಽಭಿನಯಸಾಮರ್ಥ್ಯಗರ್ವಯುಕ್ತಾ ತದೋರ್ವಶೀ ।
ತಂ ಪುರೂರವಸಂ ದೃಷ್ಟ್ವಾ ಜಹಾಸಾಽತಿ ಮನೋಹರಾ ॥ ೭೫ ॥
ಜಹಾಸ ತತ್ರ ರಾಜಾಽಪಿ ತಾಂ ವಿಲೋಕ್ಯ ತದೋರ್ವಶೀಂ ।
ಹಾಸ ಸಂಕುಪಿತಸ್ತತ್ರ ನಾಟ್ಯಾಚಾರ್ಯೋಽಥ ತುಂಬುರುಃ ।
ಶಶಾಪ ತಾವುಭೌ ಕೋಪಾದುರ್ವಶೀಂ ಚ ನೃಪೋತ್ತಮಂ ॥ ೭೬ ॥

---

ಅಪೇಕ್ಷಿಸಿದ ಉರ್ವಶೀಲೋಕಪ್ರಾಪ್ತಿರೂಪ ಫಲವನ್ನುದ್ದೇಶಿಸಿ ವೇದೋಕ್ತ ವಿಧಿಯಿಂದ ಮೂರು ಅಗ್ನಿಗಳಲ್ಲಿಯೂ ಹೋಮ ಮಾಡಿ ಅನೇಕ ಯಜ್ಞಗಳನ್ನೆಸಗಿದನು.

೭೧. ಅಯ್ಯಾ ದ್ವಿಜೋತ್ತಮರೆ! ದೊರೆಯು ಆ ಯಜ್ಞಗಳಿಂದ ಗಂಧರ್ವಲೋಕಗಳನ್ನು ಸೇರಿ ಉರ್ವಶಿಯೊಡನೆ ದೇವಲೋಕದಲ್ಲಿ ಬಹುಕಾಲ ವಿನೋದಪಡುತ್ತಿದ್ದನು.

೭೨. ತರುವಾಯ ಒಂದಾನೊಂದು ದಿನ ದೇವರಾಜನು ಸಕಲ ದಿವಿಜರೊಡನೆಯೂ ಸಭೆಯಲ್ಲಿ ಕುಳಿತು ದೇವತಾಸ್ತ್ರೀಯರ ನೃತ್ಯವನ್ನು ಕಂಡನು.

೭೩. ಆಗ ಪುರೂರವರಾಜನೂ ದೇವತಾಸ್ತ್ರೀಯರ ಮನೋಹರವಾದ ಆ ನೃತ್ಯವನ್ನು ನೋಡುವುದಕ್ಕಾಗಿ ದೇವೇಂದ್ರನ ಸಭೆಗೆ ಬಂದನು.

೭೪. ದೇವತಾಸ್ತ್ರೀಯರು ಒಬ್ಬೊಬ್ಬರಾಗಿ ದೇವೇಂದ್ರನ ಮುಂದೆ ನರ್ತನಮಾಡಿದರು. ಬಳಿಕ ಉರ್ವಶಿಯು ಬಂದು ಇಂದ್ರನ ಮುಂದೆ ಕುಣಿದಳು.

೭೫. ಆಗ, ನರ್ತನ ಮತ್ತು ಅಭಿನಯಗಳಲ್ಲಿ ತನಗಿರುವ ಸಾಮರ್ಥ್ಯದಿಂದ ಗರ್ವಿತಳಾದ ಉರ್ವಶಿಯು ಆ ಪುರೂರವನನ್ನು ನೋಡಿ ನಕ್ಕಳು.

೭೬. ಆಗ ಪುರೂರವನೂ ಉರ್ವಶಿಯನ್ನು ಕಂಡು ನಕ್ಕನು. ಆಗ ಅಲ್ಲಿದ್ದ ತುಂಬುರುವೆಂಬ ನಾಟ್ಯಾಚಾರ್ಯನು ಆ ನಗೆಯಿಂದ ಕೋಪಗೊಂಡು ಆ ಉರ್ವಶೀ ಪುರೂರವನನ್ನು ಶಪಿಸಿದನು.

ತುಂಬುರುರುವಾಚ :—

ಅನೇಕದೇವಸಂಪೂರ್ಣಸಭಾಯಾಮತ್ರ ಯತ್ಕೃತಂ ॥ ೭೭ ॥
ಯುವಾಭ್ಯಾಂ ಹಸಿತಂ ನೃತ್ತಮಧ್ಯೇ ನಿಷ್ಕಾರಣಂ ವೃಥಾ ।
ತಸ್ಮಾಜ್ಝಟಿತಿ ರಾಜೇಂದ್ರ ವಿಯೋಗೋ ಯುವಯೋಃ ಕ್ಷಣಾತ್ ॥ ೭೮ ॥
ಭೂಯಾದಿತಿ ಶಶಾಪೈನಂ ಸರ್ವದೈವತಸನ್ನಿಧೌ ।
ಅಥ ಶಪ್ತೋ ನೃಪಸ್ತತ್ರ ನಾಟ್ಯಾಚಾರ್ಯೇಣ ದುಃಖಿತಃ ॥ ೭೯ ॥
ಜಗಾಮ ಶರಣಂ ತತ್ರ ಪಾಹಿ ಪಾಹೀತಿ ವಜ್ರಿಣಂ ।
ಉವಾಚ ದೀನಯಾ ವಾಚಾ ಪುರುಹೂತಂ ಪುರೂರವಾಃ ॥ ೮೦ ॥
ಉರ್ವಶ್ಯಾ ಸಹ ಸಾಲೋಕ್ಯಸಿದ್ಧ್ಯರ್ಥಮಹಮಿಷ್ಟವಾನ್ ।
ಅತಸ್ತಸ್ಯಾ ವಿಯೋಗೋ ಮೇಽಸಹ್ಯಃ ಸ್ಯಾತ್ಪಾಕಶಾಸನ ॥ ೮೧ ॥
ಇತ್ಯುಕ್ತವಂತಂ ತಂ ಪ್ರಾಹ ಸಹಸ್ರಾಕ್ಷಃ ಶಚೀಪತಿಃ ।
ಶಾಪಮೋಕ್ಷಂ ಪ್ರವಕ್ಷ್ಯಾಮಿ ಮಾಭೈಷೀಸ್ತ್ವಂ ನೃಪೋತ್ತಮ ॥ ೮೨ ॥
ದಕ್ಷಿಣಾಂಭೋನಿಧೌ ಪುಣ್ಯೇ ಗಂಧಮಾದನ ಪರ್ವತೇ ।
ಸಾಧ್ಯಾಮೃತಮಿತಿ ಖ್ಯಾತಂ ತೀರ್ಥಮಸ್ತಿ ಮಹತ್ತರಂ ॥ ೮೩ ॥
ಸೇವಿತಂ ಸರ್ವದೇವೈಶ್ಚ ಸಿದ್ಧಚಾರಣಕಿನ್ನರೈಃ ।
ಸನಕಾದಿಮಹಾಯೋಗಿಮುನಿವೃಂದನಿಷೇವಿತಂ ॥ ೮೪ ॥

---

೭೭–೮೦. ತುಂಬುರುವು ಹೇಳುತ್ತಾನೆ:—"ದೊರೆಯೆ! ಅನೇಕ ದೇವತೆಗಳು ನೆರೆದಿರುವ ಈ ಸಭೆಯಲ್ಲಿ ನೃತ್ತದ ನಡುವೆ ಕಾರಣವಿಲ್ಲದೆ ನಕ್ಕಿದುದರಿಂದ ಕೂಡಲೆ ನಿಮ್ಮಿರ್ವರಿಗೂ ವಿಯೋಗವುಂಟಾಲಿ" ಎಂದು ಸಕಲ ದೇವತೆಗಳ ಸನ್ನಿಧಿಯಲ್ಲಿ ಈ ಪುರೂರವನನ್ನು ತುಂಬುರುವು ಶಪಿಸಲು, ಆ ನಾಟ್ಯಾಚಾರ್ಯನಿಂದ ಶಪ್ತನಾದ ರಾಜನು ದುಃಖಗೊಂಡವನಾಗಿ ಕಾಪಾಡೆಂದು ಇಂದ್ರನನ್ನು ಮರೆಹೊಕ್ಕು ದೀನವಾಣಿಯಿಂದ ಆತನನ್ನು ಕುರಿತು ಇಂತೆಂದನು.

೮೧. "ದೇವರಾಜ! ನಾನು ಉರ್ವಶಿಯ ಸಾಲೋಕ್ಯಸಿದ್ಧಿಗಾಗಿ ಯಾಗ ಮಾಡಿದೆನು. ಆದುದರಿಂದ ಅವಳ ವಿಯೋಗವು ನನಗೆ ಸಹಿಸಲಾಗುವುದಿಲ್ಲ."

೮೨. ರಾಜನು ಹೀಗೆ ಹೇಳಲು ದೇವೇಂದ್ರನು, ಅವನನ್ನು ಕುರಿತು "ಅರಸ! ನೀನು ಹೆದರಬೇಡ. ನಿನ್ನ ಶಾಪಪರಿಹಾರದ ಕ್ರಮವನ್ನು ಹೇಳುವೆನು.

೮೩. ದಕ್ಷಿಣಸಮುದ್ರದಲ್ಲಿರುವ ಪುಣ್ಯಕರವಾದ ಗಂಧಮಾದನಪರ್ವತದಲ್ಲಿ ಸಾಧ್ಯಾಮೃತವೆಂದು ಪ್ರಸಿದ್ಧವಾದ ಮಹಾತೀರ್ಥವಿದೆ.

೮೪–೮೫. ಅದು ಸಕಲ ದೇವತೆಗಳಿಂದಲೂ, ಸಿದ್ಧ ಚಾರಣ ಕಿನ್ನರರಿಂದಲೂ, ಸನಕಾದಿ ಮಹಾಯೋಗೀಶ್ವರರಿಂದಲೂ, ಮುನಿಗಳಿಂದಲೂ

ಭುಕ್ತಿಮುಕ್ತಿಪ್ರದಂ ಪುಂಸಾಂ ಸರ್ವಶಾಪವಿಮೋಕ್ಷದಂ ।
ಅಸ್ತಿ ತೀರ್ಥಂ ಭವಾಂಸ್ತತ್ರ ಗಚ್ಛಸ್ವ ತ್ವರಯಾ ನೃಪ ॥ ೮೫ ॥
ಸರ್ವೇಷಾಮಮೃತಂ ಸ್ನಾನಾದತ್ರ ಸಾಧ್ಯಂ ಯತಸ್ತತಃ ।
ಸಾಧ್ಯಾಮೃತಮಿತಿ ಖ್ಯಾತಂ ಸರ್ವಲೋಕೇಷು ವಿಶ್ರುತಂ ॥ ೮೬ ॥
ತತ್ರ ಸ್ನಾನಾತ್ತವೋರ್ವಶ್ಯಾಃ ಪುನರ್ಯೋಗೋ ಭವಿಷ್ಯತಿ ।
ಮಮ ಲೋಕೇ ನಿವಾಸಶ್ಚ ಭವಿಷ್ಯತಿ ನ ಸಂಶಯಃ ॥ ೮೭ ॥
ಇತಿ ಪ್ರತಿಸಮಾದಿಷ್ಟೋ ನೃಪಃ ಸಂಪ್ರೀತಮಾನಸಃ ।
ಸಾಧ್ಯಾಮೃತಂ ಮಹಾತೀರ್ಥಂ ಸಮುದ್ದಿಶ್ಯ ಯಯೌ ಕ್ಷಣಾತ್ ॥ ೮೮ ॥
ಸಸ್ನೌ ಸಾಧ್ಯಾಮೃತೇ ತತ್ರ ಮಹಾಪಾತಕನಾಶನೇ ।
ತತ್ರ ಸ್ನಾನಾನ್ನೃಪೋ ವಿಪ್ರಾಃ ಸದ್ಯಃ ಶಾಪೇನ ಮೋಚಿತಃ ॥ ೮೯ ॥
ಸ್ನಾನಾನಂತರಮೇವಾಸಾವುರ್ವಶ್ಯಾ ಸಹ ಸಂಗತಃ ।
ತಯಾ ಸಹ ವಿಮಾನಸ್ಥಃ ಪ್ರಯಯಾವಮರಾವತೀಂ ॥ ೯೦ ॥
ರೇಮೇ ಪುನಸ್ತಯಾ ಸಾರ್ಧಂ ದೇವವದ್ದೇವಮಂದಿರೇ ।
ಏವಂ ಪ್ರಭಾವಂ ತತ್ತೀರ್ಥಂ ಸಾಧ್ಯಾಮೃತಮನುತ್ತಮಂ ॥ ೯೧ ॥

---

ಸೇವಿಸಲ್ಪಟ್ಟುದೂ, ಮಾನವರಿಗೆ ಭುಕ್ತಿಮುಕ್ತಿಯನ್ನೀಯುವುದೂ, ಸಕಲ ಶಾಪಗಳನ್ನು ಪರಿಹರಿಸುವುದೂ ಆಗಿರುವುದು. ನೀನು ವೇಗವಾಗಿ ಅಲ್ಲಿಗೆ ಹೋಗು.

೮೬. ಅಲ್ಲಿ ಸ್ನಾನಮಾಡುವುದರಿಂದ ಸಮಸ್ತ ಜನರಿಗೂ ಮೋಕ್ಷವು ಲಭಿಸುವುದರಿಂದ ಅದು ಸಾಧ್ಯಾಮೃತವೆಂದು ಸಮಸ್ತ ಲೋಕಗಳಲ್ಲಿಯೂ ಪ್ರಸಿದ್ಧವಾಗಿದೆ.

೮೭. ಅಲ್ಲಿ ಸ್ನಾನಮಾಡುವುದರಿಂದ ನಿನಗೆ ಮರಳಿ ಉರ್ವಶಿಯ ಸಂಬಂಧವೂ, ನನ್ನ ಲೋಕದಲ್ಲಿ ವಾಸವೂ ಲಭಿಸುವುದು" ಎಂದನು.

೮೮. ಇಂದ್ರನು ಹೀಗೆ ಹೇಳಲು ಪುರೂರವನು ಸಂತುಷ್ಟಚಿತ್ತನಾಗಿ ಸಾಧ್ಯಾಮೃತಮಹಾತೀರ್ಥಕ್ಕೆ ಕೂಡಲೆ ತೆರಳಿದನು.

೮೯. ಎಲೈ ವಿಪ್ರರೆ! ಮಹಾಪಾತಕವನ್ನು ನಾಶಗೊಳಿಸುವ ಆ ಸಾಧ್ಯಾಮೃತತೀರ್ಥದಲ್ಲಿ ಸ್ನಾನಮಾಡಿದುದರಿಂದ ಪುರೂರವನು ಕೂಡಲೆ ಶಾಪಮುಕ್ತನಾದನು.

೯೦. ಅದರಲ್ಲಿ ಮಿಂದಕೂಡಲೆ ಅವನು ಉರ್ವಶಿಯನ್ನು ಪಡೆದು, ಅವಳೊಡನೆ ವಿಮಾನವನ್ನೇರಿ ಅಮರಾವತಿಗೆ ಹೋದನು.

೯೧. ಅಲ್ಲಿ ಅವನು ಅವಳೊಡನೆ ದೇವತೆಯಂತೆ ವಿನೋದಪಟ್ಟನು. ಆ ಸಾಧ್ಯಾಮೃತತೀರ್ಥವು ಇಂತಹ ಮಾಹಾತ್ಮ್ಯವುಳ್ಳುದು.

ಪುರೂರವಾ ಸಹೋರ್ವಶ್ಯಾ ಯತ್ರ ಸ್ನಾನೇನ ಸಂಗತಃ ।
ಅತೋಽತ್ರ ತೀರ್ಥೇ ಯಃ ಸ್ನಾಯಾನ್ಮಹಾಪಾತಕನಾಶನೇ ॥ ೯೨ ॥
ವಾಂಛಿತಾಂಲ್ಲಭತೇ ಕಾಮಾನ್ಯಾಸ್ಯತಿ ಸ್ವರ್ಗಮುತ್ತಮಂ ।
ನಿಷ್ಕಾಮಃ ಸ್ನಾತಿ ಚೇದ್ವಿಪ್ರಾ ಮೋಕ್ಷಮಾಪ್ನೋತಿ ಮಾನವಃ ॥ ೯೩ ॥
ಇಮಂ ಪವಿತ್ರಂ ಪಾಪಘ್ನಮಧ್ಯಾಯಂ ಪಠತೇ ತು ಯಃ ।
ಶೃಣುಯಾದ್ವಾ ಮನುಷ್ಯೋಽಸೌ ವೈಕುಂಠೇ ಲಭತೇ ಸ್ಥಿತಿಂ ॥ ೯೪ ॥
ಏವಂ ವಃ ಕಥಿತಂ ವಿಪ್ರಾ ವೈಭವಂ ಪಾಪನಾಶನಂ ।
ಸಾಧ್ಯಾಮೃತಸ್ಯ ತೀರ್ಥಸ್ಯ ವಿಸ್ತರಾಚ್ಛ್ರದ್ಧಯಾ ಮಯಾ ॥ ೯೫ ॥
ಯತ್ಪುರಾ ಸನಕಾದಿಭ್ಯಃ ಪ್ರೋಕ್ತವಾಂಶ್ಚತುರಾನನಃ ॥ ೯೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಸೇತುಮಾಹಾತ್ಮ್ಯೇ "ಸಾಧ್ಯಾಮೃತತೀರ್ಥಪ್ರಶಂಸನಂ–ಪುರೂರವಃ ಶಾಪವಿಮೋಕ್ಷಣವರ್ಣನಂ"ನಾಮ ಅಷ್ಟಾವಿಂಶೋಽಧ್ಯಾಯಃ

ಸೇತುಮಾಹಾತ್ಮ್ಯೇ ಪೂರ್ವಾರ್ಧಃ ಸಮಾಪ್ತಃ

---

೯೨–೯೩. ಇಲ್ಲಿ ಸ್ನಾನಮಾಡಿದ ಪುರೂರವನು ಊರ್ವಶಿಯೊಡನೆ ಸೇರಿದನು. ಮಹಾಪಾತಕಗಳನ್ನು ಪರಿಹರಿಸುವ ಈ ತೀರ್ಥದಲ್ಲಿ ಮಿಂದವನು ಇಷ್ಟಾರ್ಥವನ್ನು ಪಡೆಯುತ್ತಾನೆಯಲ್ಲದೆ ಸ್ವರ್ಗವನ್ನೂ ಸೇರುವನು. ಮಾನವನೂ ಇದರಲ್ಲಿ ನಿಷ್ಕಾಮನಾಗಿ ಮಿಂದರೆ ಮೋಕ್ಷವನ್ನೇ ಪಡೆಯುತ್ತಾನೆ.

೯೪. ಪವಿತ್ರವೂ, ಪಾಪಪರಿಹಾರಕವೂ ಆದ ಈ ಅಧ್ಯಾಯವನ್ನು ಪಠಿಸುವವನೂ ಅಥವಾ ಕೇಳುವವನೂ ವೈಕುಂಠಲೋಕವನ್ನು ಸೇರುವನು.

೯೫–೯೬. ಎಲೈ ವಿಪ್ರರೆ! ಹಿಂದೆ ಚತುರ್ಮುಖನು ಸನಕಾದಿಮುನಿಗಳಿಗೆ ಹೇಳಿದ ಈ ಸಾಧ್ಯಾಮೃತತೀರ್ಥದ ವೈಭವವನ್ನು ನಾನು ಶ್ರದ್ಧೆಯಿಂದ ನಿಮಗೆ ವಿಸ್ತಾರವಾಗಿ ಹೇಳಿರುತ್ತೇನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಸೇತುಮಾಹಾತ್ಮ್ಯದಲ್ಲಿ "ಸಾಧ್ಯಾಮೃತತೀರ್ಥಪ್ರಶಂಸನ–ಪುರೂರವನ ಶಾಪವಿಮೋಕ್ಷಣವರ್ಣನ"ವೆಂಬ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

ಸೇತುಮಾಹಾತ್ಮ್ಯದಲ್ಲಿ ಪೂರ್ವಾರ್ಧವು ಸಮಾಪ್ತವಾದುದು